ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೨೭

ಪ್ರಧಾನ ಸಂಪಾದಕ :
ಕೆ. ವಿ. ಪುಟ್ಟಪ್ಪ, ಎಂ.ಎ.

# ಭಾರತೀಯ ಸಂಸ್ಕೃತಿ

ಡಾ॥ ಎಸ್. ಶ್ರೀಕಂಠಶಾಸ್ತ್ರೀ, ಎಂ.ಎ., ಡಿ.ಲಿಟ್.




ಮೈಸೂರು :
ಮೈಸೂರು ವಿಶ್ವವಿದ್ಯಾನಿಲಯ
೧೯೫೪

# ಮುನ್ನುಡಿ

ಮಾನವನ ಊರ್ಧ್ವಗಮನದ ಸಾಹಸ ದ್ವಿಮುಖಿಯಾದದ್ದು : ನಾಗರಿಕತೆ ಮತ್ತು ಸಂಸ್ಕೃತಿ. ಒಂದು ಬಹಿರ್ಮುಖ, ಮತ್ತೊಂದು ಅಂತರ್ಮುಖ. ಆದರೆ ಅವುಗಳಿಗೆ ಪರಸ್ಪರ ವಿನಾಭಾವವೇನೂ ಇಲ್ಲ. ಒಂದರ ಪ್ರಭಾವಕ್ಕೆ ಮತ್ತೊಂದನ್ನು ರೂಪಿಸುವ ಶಕ್ತಿಯಿರುತ್ತದೆ. ಮಾನವಕುಲದ ಈ ಸಾಹಸವೇ ಋಷಿ, ಕವಿ, ಶಿಲ್ಪಿ, ಯೋಗಿ, ಪ್ರವಾದಿ, ಮಹಾತ್ಮಾ, ಆಚಾರ್ಯ, ಪರಮ ಹಂಸಾದಿ ವಿಭೂತಿಪುರುಷರನ್ನು ನಿರ್ಮಿಸಿದೆ. ಅಸಂಖ್ಯ ಮನಸ್ಸುಗಳ ಸಮಷ್ಟಿ ಯಲ್ಲಿ ಸಂಭವಿಸಿ, ಪ್ರಕಟವಾಗಿ, ಸಿದ್ಧವಾಗುವ ಒಂದು ದೇಶದ ಸಮಷ್ಟಿ ಮನಸ್ಸಿನ ಚಿತ್‌ಶಕ್ತಿಯ ರಸಗಂಗೆಯೆ ಆ ದೇಶದ ಸಂಸ್ಕೃತಿ. ಸಂಸ್ಕೃತಿ ಎಂಬ ಪದದ ಅರ್ಥವ್ಯಾಪ್ತಿ ವಿಸ್ತಾರವಾದದ್ದು. ಒಂದು ಮಾತಿನಲ್ಲಿಯೊ ಒಂದು ವಾಕ್ಯದಲ್ಲಿಯೊ ಅದರ ದಿಗ್ದರ್ಶನ ಮಾಡುವುದು ಕಷ್ಟ. ಆದರೂ ಮನುಷ್ಯಚೇತನದ ಸರ್ವತೋಮುಖವೂ ವಿಕಾಸಮಾನವೂ ಆದ ಆತ್ಮಶ್ರೀ ಯನ್ನು ಸಂಸ್ಕೃತಿ ಎಂದು ಸಂಕೇತಿಸಬಹುದು.

ಇಂದು ವಿಜ್ಞಾನ ಮತ್ತು ಚರಿತ್ರೆಗಳ ನೆರವಿನಿಂದ ಸೃಷ್ಟಿಯ ರಹಸ್ಯವನ್ನು ಅರಿಯಲೆಳಸಿದೆ ಮಾನವಮನಸ್ಸು ! ಅಂತಹ ಪ್ರಯತ್ನಗಳಲ್ಲಿ ವಿಕಾಸವಾದವೂ ಒಂದು. ಅಮೀಬದಿಂದ ಹಿಡಿದು ಮಾನವನ ವರೆಗೆ ಸೃಷ್ಟಿ ಅನೇಕ ರೀತಿಯ ಪ್ರಯೋಗಗಳನ್ನು ನಡೆಸಿರುವುದನ್ನು ನೋಡುತ್ತೇವೆ. ಕಪಿಮಾನವನು ಸಂಸ್ಕೃತನಾಗಿ ಪರಿಷ್ಕಾರಗೊಳ್ಳಲು ಎಷ್ಟೋ ಸಹಸ್ರ ವರ್ಷಗಳು ಕಳೆದು ಹೋಗಿವೆಯಂತೆ. ಆರ್ಯರು ಭರತಖಂಡದಲ್ಲಿ ನೆಲೆಸಿ ವೇದೋಪನಿಷತ್ತು ಗಳನ್ನು ಸೃಷ್ಟಿಸಿ ಭಾರತೀಯ ಸಂಸ್ಕೃತಿಯ ಉದಯಕ್ಕೆ ಕಾರಣಕರ್ತ ರಾದರು. ಹರಪ್ಪ ಸಂಸ್ಕೃತಿ ದ್ರಾವಿಡರದೆ? ಆರ್ಯರದೆ? ಹರಪ್ಪ ಮತ್ತು ಆರ್ಯಸಂಸ್ಕೃತಿಗಳಲ್ಲಿ ಯಾವುದು ಮೊದಲು?—ಎಂಬ ಸಮಸ್ಯೆಗಳನ್ನು ಸಂಶೋಧನೆಗಳಿಂದಲೆ ಬಗೆಹರಿಸಬೇಕಾಗಿದೆ. ಬಹು ಪ್ರಾಚೀನವಾದ ಈ ಸಂಸ್ಕೃತಿಗಳನ್ನು ಸಮೀಕ್ಷಿಸಲು ದೊರಕುವ ಸಾಧನಸಂಪತ್ತಿಗಳಿಗೆ ಮಿತಿ ಇರುವುದರಿಂದ ನಿರ್ದಿಷ್ಟವಾದ ಅಭಿಪ್ರಾಯಗಳನ್ನು ಸೂಚಿಸುವುದು ಸದ್ಯಕ್ಕೆ ಕಷ್ಟವೆಂದೆ ತದ್ವಿದರು ಹೇಳುತ್ತಾರೆ.

ಭಾರತೀಯ ಸಂಸ್ಕೃತಿಯ ಜೀವನಾಡಿ ವೇದೋಪನಿಷತ್ತುಗಳಲ್ಲಿ ಪ್ರಪ್ರಥಮಸ್ಪಂದಿತವಾಗಿದೆ. ಸರಸ್ವತೀಶಕ್ತಿ ಸೃಷ್ಟಿಯ ಪರಮರಹಸ್ಯಗಳನ್ನು

ಈ ಅಪೌರುಷೇಯವೆಂದೆನಿಸಿಕೊಂಡಿರುವ ಪವಿತ್ರಗ್ರಂಥಗಳಲ್ಲಿ ಮೊತ್ತಮೊದಲು ತೊದಲಿರುವುದನ್ನು ಕಾಣುತ್ತೇವೆ. ದ್ರಷ್ಟಾರರಾದ ಋಷಿಗಳು ಆಂತರಿಕವಾಗಿ ಅನುಭವಿಸಿದ ದಿವ್ಯಾನುಭವಗಳು ಈ ವೇದೋಪನಿಷತ್ತುಗಳಲ್ಲಿ ವ್ಯೈವೆತ್ತಿವೆ. ಯಾವುದು ಕೇವಲವೊ ಆ ಸತ್ಯವನ್ನೆ ಮೊದಲು ಕಂಡಿತು ಭಾರತೀಯ ಸಂಸ್ಕೃತಿ. ಹಾಗೆ ಕಂಡುಕೊಂಡುದೆ ಅದರ ಹಿರಿಮೆಗೆ ಕಾರಣವಾಯ್ತು. ಉಳಿದ ಜನಾಂಗಗಳ ಸಂಸ್ಕೃತಿ, ಸಾಮಾನ್ಯವಾಗಿ ಹೇಳುವುದಾದರೆ, ವಿಜ್ಞಾನ ಮತ್ತು ತತ್ವಶಾಸ್ತ್ರಗಳ ಮೂಲಕವೆ ಕೇವಲಸತ್ಯದತ್ತ ಸಾಗಲು ಪ್ರಯತ್ನಿಸುತ್ತಿದೆ. ಭಾರತೀಯ ಸಂಸ್ಕೃತಿಯಾದರೂ ತಾನು ಮೊದಲೇ ಸಾಕ್ಷಾತ್ಕಾರಮಾಡಿಕೊಂಡ ಆ ಸತ್ಯದ ಸ್ವರೂಪವನ್ನು ತತ್ವಶಾಸ್ತ್ರೀಯವಾದ ಬುದ್ಧಿವಿಧಾನದಿಂದಲೂ ವಿಜ್ಞಾನಶಾಸ್ತ್ರೀಯವಾದ ಪ್ರಯೋಗ ಪರೀಕ್ಷಾವಿಧಾನದಿಂದಲೂ ಅರಿಯುವ ಸಾಧನೆಯಲ್ಲಿ ಮುಂಬರಿಯುತ್ತಿದೆ.

ನಾಗರಿಕತೆಯ ದೃಷ್ಟಿಯಿಂದ ನೋಡಿದರೆ ಅತ್ಯಂತ ಪ್ರಾಚೀನಕಾಲದಲ್ಲಿಯೆ ಭಾರತೀಯರು ನಾಗರಿಕರಾಗಿದ್ದರೆಂಬುದಕ್ಕೆ ನಿದರ್ಶನಗಳು ದೊರೆತಿವೆ. ಸುಮಾರು ಕ್ರಿ.ಪೂ. ೩೦೦೦ ವರ್ಷಗಳ ಹಿಂದೆಯೆ ಹರಪ್ಪ ಸಂಸ್ಕೃತಿಯಲ್ಲಿ ಜನರಿಗೆ ತಾಮ್ರ ಕಂಚು ಚಿನ್ನ ಬೆಳ್ಳಿ ಸೀಸಗಳ ಉಪಯೋಗ ತಿಳಿದಿತ್ತು. ಮನೆಗಳಲ್ಲಿ ಅಡುಗೆಗೆ ಸ್ನಾನಕ್ಕೆ ಪೂಜೆಗೆ ಪ್ರತ್ಯೇಕ ಕಕ್ಷೆಗಳಿದ್ದುವಂತೆ! ಸಂಗೀತ ನಾಟ್ಯ ವಿದ್ಯೆಗಳಲ್ಲಿಯೂ ಅವರೇನೂ ಹಿಂದುಳಿದವರಾಗಿರಲಿಲ್ಲ ಎಂದು ಆಧುನಿಕ ಸಂಶೋಧನೆ ನಿರ್ಣಯಿಸಿದೆ.

ಋಗ್ವೇದದ ಕಾಲದಲ್ಲಿ ವರ್ಣಭೇದಗಳಿರಲಿಲ್ಲ. ಕ್ರಮೇಣ ಅವರವರ ವೃತ್ತಿಗನುಗುಣವಾಗಿ ವರ್ಣಭೇದಗಳಾಗಿ ಅನಂತರ ನೀಚೋಚ್ಚಭಾವಗಳು ವ್ಯೆದೋರಿರಬೇಕು. "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ" ಎಂಬ ಗೀತಾವಾಕ್ಯಕ್ಕೆ ಸರಿಯಾದ ಅರ್ಥಮಾಡಿಕೊಂಡರೆ ವಿವಾದಕ್ಕೆಡೆಯಿಲ್ಲ. "ಮಯಾ ಸೃಷ್ಟಂ" ಎನ್ನುವುದು ಭಗವಂತನ ಮಾತು. ಭಗವಂತನದೇ ಆದ ಸೃಷ್ಟಿಗೆ ಸಂಬಂಧಿಸಿದ್ದು. ಅಲ್ಲಿ ಹೇಳಿದ ಆ ಚತುರ್ವರ್ಣಗಳು ಮಾನವಕೃತವಾದ ಕೃತಕ ವಿಭಜನೆಯ ರೂಪಗಳಲ್ಲಿಲ್ಲ; ಅವು ಜೀವನದ ಸ್ವಭಾವ ಸ್ವಧರ್ಮನಿಷ್ಠವಾಗಿ ಗುಣಕರ್ಮರೂಪದಲ್ಲಿ ಮೂಡುವ ಸಹಜ ವಿಭಾಗ. ಈ ಮನುಜಕೃತವಲ್ಲದ ಅಕೃತಕವಾದ ವರ್ಣವ್ಯವಸ್ಥೆ ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ತನಗೆ ತಾನೆ ಇದ್ದೆ ಇರುತ್ತದೆ; ಕಡೆಗೆ ಕುಟುಂಬ ಕುಟುಂಬಗಳಲ್ಲಿ, ಮನೆ ಮನೆಗಳಲ್ಲಿ. ಆದರೆ ಈಗ ಇರುವ ಕೃತಕವಾದ ಈ ವರ್ಣವ್ಯವಸ್ಥೆ ಇಲ್ಲದಿದ್ದರೆ ನಮ್ಮ ಸಂಸ್ಕೃತಿ ಅದೃಶ್ಯವಾಗಿ

ಹೋಗುತ್ತಿತ್ತು ಅಥವಾ ಹೋಗುತ್ತದೆ ಎಂಬ ಅಭಿಪ್ರಾಯಕ್ಕೆ ಭಗವದ್ರೀತಿಯ ವರ್ಣವ್ಯವಸ್ಥೆಯ ಸ್ವರೂಪಜ್ಞಾನವಿಲ್ಲದಿರುವುದೆ ಕಾರಣವೆಂದು ಹೇಳಬೇಕಾಗುತ್ತದೆ. ಹಿಂದೆ ಈ ಕೃತಕವಾದ ವರ್ಣವ್ಯವಸ್ಥೆ ಕ್ಷಾಮಡಾಮರ ನಿರುದ್ಯೋಗ ಮೊದಲಾದ ವ್ಯವಸ್ಥೆಗಳನ್ನು ಪರಿಹರಿಸಿತು ಎಂಬ ನಿರೂಪಣೆಯೂ ಐತಿಹಾಸಿಕ ಸತ್ಯಕ್ಕೆ ದೂರವಾದದ್ದು. ಇಂದು ನಮಗೆ ಬೇಕಾದುದು ಹಿಂದಿನ ವರ್ಣವ್ಯವಸ್ಥೆಯಲ್ಲ; ವೇದ ಉಪನಿಷತ್ತು ಪುರಾಣ ಭಗವದ್ಗೀತೆ ಮೊದಲಾದ ದಿವ್ಯಗ್ರಂಥಗಳ ಆಂತರಿಕ ತತ್ತ್ವಗಳನ್ನು ಪೂರ್ಣದೃಷ್ಟಿಯಿಂದ ಗ್ರಹಿಸಿ ರಸಪುಷ್ಟಿ ಪಡೆಯುವ ಸಾಧನೆ ಮತ್ತು ಸಂಸ್ಕೃತಿ.

ಭಾರತೀಯ ಸಂಸ್ಕೃತಿಯ ಪ್ರಧಾನ ಲಕ್ಷಣವಾದ ಆಧ್ಯಾತ್ಮವನ್ನು ಸುಪ್ರಕಟಗೊಳಿಸಿ ಮಾನವರನ್ನು ಜಾಗ್ರತರನ್ನಾಗಿ ಮಾಡಲು ಮಹಾಪುರುಷರು ಭರತವರ್ಷದಲ್ಲಿ ಅವತರಿಸಿ ಪ್ರಾಚೀನವಾದ ಎಲ್ಲ ಸಿದ್ಧಾಂತಗಳನ್ನು ಒಳಗೊಳ್ಳುವ ನವ್ಯ ಸಮನ್ವಯ ಧರ್ಮವನ್ನು ಬೋಧಿಸಿದ್ದಾರೆ. ಯಾವ ಒಂದು ಸಿದ್ಧಾಂತವಾಗಲಿ ಇತರ ಸಿದ್ಧಾಂತಗಳಿಗಿಂತ ಮೇಲು ಎಂಬ ಭ್ರಾಂತಿಯ ಅಜ್ಞಾನದ ಮೂಲಕ್ಕೆ ಕೊಡಲಿ ಪೆಟ್ಟು ಬಿದ್ದಿದೆ. ಶ್ರೀ ರಾಮಕೃಷ್ಣ ಪರಮಹಂಸರಂತಹರ ಸಂದೇಶಜ್ಯೋತಿ ಆ ದಿವ್ಯದೃಷ್ಟಿಯ ಸಾಕ್ಷೀಸ್ತಂಭಕ್ಕೆ ದೀಪಕಲಶವಿಟ್ಟಿದೆ. ಸ್ವಾಮಿ ವಿವೇಕಾನಂದರು ಯೂರೋಪ್ ಅಮೆರಿಕಾಖಂಡಗಳಲ್ಲಿಯೂ ಭರತಖಂಡದಲ್ಲಿಯೂ ಪ್ರಚಾರಮಾಡಿದುದು ಕೇವಲ ಅದ್ವೈತ ತತ್ತ್ವ ಮಾತ್ರವನ್ನಲ್ಲ, ಈ ಸಮನ್ವಯ ಧರ್ಮವನ್ನೆ : ದ್ವೈತಾದ್ವೈತ ವಿಶಿಷ್ಟಾದ್ವೈತಾದಿ ಸರ್ವಸಿದ್ಧಾಂತಗ್ರಾಸಿಯಾದ ಸಮನ್ವಯ ಧರ್ಮದ ಈ ಪೂರ್ಣದೃಷ್ಟಿಯನ್ನೆ !

ಯಂತ್ರನಾಗರಿಕತೆಯ ಸುಳಿಯಲ್ಲಿ ಸಿಕ್ಕಿ, ಅನ್ನಕ್ಷೇಮ ವಸನಕ್ಷೇಮಗಳನ್ನು ಪ್ರಧಾನವಾಗಿಟ್ಟುಕೊಂಡು ಭೋಗಾಭಿಲಾಷಿಗಳಾಗಿರುವ ಮಾನವರು ತಮ್ಮ ದೃಷ್ಟಿಯನ್ನು ಪ್ರಾಚೀನ ಭಾರತೀಯ ಸಂಸ್ಕೃತಿಯತ್ತ ಹರಿಸಿ ಅಲ್ಲಿ ಹೃದ್ಗೋಚರವಾಗುವ ವಿಪುಲವಾದ ಆತ್ಮೈಶ್ವರ್ಯವನ್ನು ಕಂಡು ಆತ್ಮಶ್ರೀಗಾಗಿಯೂ ಹಾರೈಸುವ ಸುಮುಹೂರ್ತ ಸಮಯ ಪ್ರಾಪ್ತವಾಗಿದೆ ಇಂದು. ಸಮಾಜಧರ್ಮದ ಅಧಃಪತನದಿಂದ ಸಂಭವಿಸಿರುವ ವಿಷಕಿಲ್ಬಿಷಗಳನ್ನು ಶುದ್ಧಿಗೊಳಿಸಲು ಅಧ್ಯಾತ್ಮದ ಅಮೃತಸ್ಪರ್ಶ ಬೇಕಾಗಿದೆ. ಹತ್ತೊಂಬತ್ತು ಇಪ್ಪತ್ತನೆಯ ಶತಮಾನಗಳಲ್ಲಿಯೂ ಅಂತಹ ಅಮೃತಸ್ಪರ್ಶ ಮನುಜಕುಲದ ಹೃದಯಕ್ಕೆ ಒದಗಿರುವುದನ್ನೂ, ಒದಗುತ್ತಿರುವುದೂ ಕಾಣುತ್ತೇವೆ. ಶ್ರೀ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಮಹಾತ್ಮಾ ಗಾಂಧಿ,

ಶ್ರೀ ರಮಣಮಹರ್ಷಿ, ಶ್ರೀ ಅರವಿಂದರಂತಹ ಮಹಾಪುರುಷರು ಕೇವಲ ಭಾರತಕ್ಕೆ ಮಾತ್ರವಲ್ಲದೆ ಜಗತ್ತಿಗೇ ಮಂಗಳಮಯವಾದ ಬೆಳಕನ್ನೀಯುವ ಮಹೋನ್ನತ ಜ್ಯೋತಿರ್ಮಯ ಪುರುಷರಾಗಿದ್ದಾರೆ. ಮುಸಲ್ಮಾನರೂ ಕ್ರೈಸ್ತರೂ ಭಾರತಕ್ಕೆ ಧಾಳಿಯಿಟ್ಟು ತಮ್ಮ ಮತವನ್ನು ಹರಡಲುಪಕ್ರಮಿಸಿದರೂ ಭಾರತಸಂಸ್ಕೃತಿ ನಶಿಸದೆ ಮತ್ತಷ್ಟು ಪುಷ್ಟಿಗೊಂಡೆ ಚಿರನೂತನವಾಗಿದೆ. ಭಾರತೀಯರು ಯಾವ ವಿಧವಾದ ರಾಜಕೀಯ ತೃಷ್ಣೆ ಅಥವಾ ರಾಜ್ಯಾಭಿಲಾಷೆ ಇಲ್ಲದೆ ಪ್ರಪಂಚದ ಬೇರೆಬೇರೆ ದೇಶಗಳಲ್ಲಿ ತಮ್ಮ ಸಂಸ್ಕೃತಿಯ ಧ್ವಜವನ್ನು ನೆಟ್ಟಿನ್ದಾರೆ, ನೆಡುತ್ತಿದ್ದಾರೆ. ಸತ್ಯವೂ ಶಿವವೂ ಸುಂದರವೂ ಆದ ಭಾರತೀಯ ಸಂಸ್ಕೃತಿಯನ್ನು ಸ್ವತಂತ್ರ ಭಾರತದಲ್ಲಿ ಅಭ್ಯಾಸಿಸಿ ತುಷ್ಟಿ ಪುಷ್ಟಿ ಶಾಂತಿಗಳನ್ನು ಪಡೆಯುವ ಸಮಯ ಸನ್ನಿಹಿತವಾಗಿದೆ.

ಸಾವಿರಾರು ವರ್ಷಗಳಲ್ಲಿ ಒಂದು ಜನಾಂಗವೊ ದೇಶವೊ ಸಾಧಿಸಿದ ಸಂಸ್ಕೃತಿಯನ್ನು ಒಂದು ಪುಸ್ತಕದಲ್ಲಿ ನಿರೂಪಿಸುವುದೇನು ಸುಲಭದ ಕೆಲಸವಲ್ಲ. ಹಲವಾರು ಭಾಷೆಗಳಲ್ಲಿ ಪಂಡಿತರಾಗಿ ಶ್ರೇಷ್ಠ ಸಂಶೋಧಕರೆನಿಸಿಕೊಂಡಿರುವ ಡಾ|| ಎಸ್. ಶ್ರೀಕಂಠಶಾಸ್ತ್ರಿಗಳ ಈ "ಭಾರತೀಯ ಸಂಸ್ಕೃತಿ" ಎಂಬ ಹೊತ್ತಗೆ ಸಿರಿಗನ್ನಡಕ್ಕೂ ಸಿರಿಯ ಕಾಣಿಕೆಯಾಗಿದೆ. ವಿದ್ಯೆಯ ವಿಶ್ವರೂಪದರ್ಶನ ಮಾಡಿಸುವ ಸಾಧನೆಯಲ್ಲಿಯೆ ತೊಡಗಿರುವ ವಿಶ್ವವಿದ್ಯಾನಿಲಯಕ್ಕೂ ಇದೊಂದು ಸೇವಾಸಹಾಯವಾಗುವುದರಲ್ಲಿ ಸಂದೇಹವಿಲ್ಲ.

೧-೧-೧೯೫೪ }
ಮೈಸೂರು }

ಕೆ. ವಿ. ಪುಟ್ಟಪ್ಪ,
ಪ್ರಧಾನ ಸಂಪಾದಕ.

# ಅರಿಕೆ

ಇಪ್ಪತ್ತನೆಯ ಶತಾಬ್ದದ ಆರಂಭದಲ್ಲಿ ವಿಜ್ಞಾನ ಮತ್ತು ದಣ್ಡನೀತಿ ಪ್ರಧಾನವಾದ ಪಾಶ್ಚಾತ್ಯ ಸಂಸ್ಕೃತಿಯು ವಿಶ್ವವ್ಯಾಪ್ತಿಯನ್ನು ಹೊಂದಿ ಎಲ್ಲೆಲ್ಲಿಯೂ ಮಾನವನ ಚರಿತ್ರೆಯಲ್ಲಿ ನೂತನ ಯುಗವಾರಂಭವಾಗಿದೆಯೆಂಬ ಹುರುಪನ್ನುಂಟುಮಾಡಿತು. ಅಜ್ಞಾನ, ಬಡತನ, ದಾಸ್ಯ, ಶ್ರಮಜೀವನಗಳು ಸದ್ಯದಲ್ಲಿಯೇ ಪ್ರಪಂಚದಿಂದ ಅದೃಶ್ಯವಾಗಿ ವಿಜ್ಞಾನ, ಐಶ್ವರ್ಯ, ಸ್ವಾತಂತ್ರ್ಯ, ಯಂತ್ರಸಹಾಯದಿಂದ ವಿರಾಮಗಳುಂಟಾಗಿ ಪ್ರತಿವ್ಯಕ್ತಿಯೂ ತನ್ನ ಉಚ್ಚಧ್ಯೇಯಗಳನ್ನು ಸಾಧಿಸುವದಕ್ಕೆ ಅವಕಾಶವು ಸಿಕ್ಕುವದೆಂಬ ಭಾವವು ಸಾಮಾನ್ಯವಾಗಿದ್ದಿತು. ಆದರೆ ನೈತಿಕ, ಆರ್ಥಿಕ ಮತ್ತು ರಾಜಕೀಯ ಅವ್ಯವಸ್ಥೆಗಳ ಪರಿಣಾಮಗಳಿಗೆ ಎರಡು ಘೋರಯುದ್ಧಗಳು ನಿದರ್ಶನಗಳಾಗಿ ಮನುಷ್ಯಜಾತಿಯಲ್ಲೇ ನಿರಾಶೆಯನ್ನುಂಟುಮಾಡಿತು. ಕೆಲವರು ಈ ನಿರಾಶೆಗೆ ವಿಜ್ಞಾನದ ಪ್ರಗತಿಯೇ ಕಾರಣವೆಂದೂ, ಇತರರು ಸಾಮ್ರಾಜ್ಯತತ್ತ್ವವೇ ಮೂಲವೆಂದೂ, ಮತ್ತೆ ಕೆಲವರು ಜಾತಿವೈಷಮ್ಯ, ಬಂಡವಾಳಶಾಹಿ, ಮತಗಳ ದೌರ್ಬಲ್ಯ, ವಿದ್ಯಾಭ್ಯಾಸದಲ್ಲಿ ದುಷ್ಪದ್ಧತಿ, ರಾಷ್ಟ್ರೀಯತೆ, ಸಮಾಜದಲ್ಲಿ ಒಡಕು, ಇತ್ಯಾದಿಗಳೇ ಸಂಸ್ಕೃತಿಯ ನಾಶಕ್ಕೆ ಕಾರಣಗಳೆಂದು ಹೇಳುವರು. ಒಟ್ಟಿನಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ಕೊನೆಗಾಲವು ಸಮೀಪಿಸಿದೆಯೆಂದೂ ನೂತನ ವಿಶ್ವವ್ಯವಸ್ಥೆಯನ್ನೂ ವಿಶ್ವಸಂಸ್ಕೃತಿಯನ್ನೂ ಶಾಶ್ವತ ತತ್ತ್ವಗಳ ಆಧಾರದ ಮೇಲೆ ನಿಲ್ಲಿಸದಿದ್ದರೆ ಮಾನವವರ್ಗಕ್ಕೇ ಉಳಿಗಾಲವಿಲ್ಲವೆಂದೂ ವಿವೇಚನಾಪರರೆಲ್ಲರೂ ಅಭಿಪ್ರಾಯಪಡುತ್ತಿರುವರು.

ಈ ಸಮಸ್ಯೆಯನ್ನು ಮೂರು ವಿಧವಾಗಿ ವಿಂಗಡಿಸಬಹುದು. ರಾಜಕೀಯ ದೃಷ್ಟಿಯಿಂದ ಸಾಮ್ರಾಜ್ಯತತ್ತ್ವ ಮತ್ತು ನಿರಂಕುಶಪ್ರಭುತ್ವಗಳಿಗೂ ಪ್ರಜಾಪ್ರಭುತ್ವಗಳಿಗೂ ನಡೆಯುತ್ತಿರುವ ಸ್ಪರ್ಧೆ ಮೊದಲನೆಯದು. ಆರ್ಥಿಕಸ್ಥಿತಿಯಲ್ಲಿ ಐಶ್ವರ್ಯವಂತರಿಗೂ ಬಡವರಿಗೂ ಇರುವ ಅಂತರ. ನೈತಿಕದೃಷ್ಟಿಯಿಂದ ರಾಷ್ಟ್ರಗಳ ಪರಸ್ಪರ ಸಂಬಂಧಗಳಲ್ಲಿ ಅನ್ಯಾಯ ಮೋಸಗಳೂ, ವ್ಯಕ್ತಿಜೀವನದಲ್ಲಿ ಧರ್ಮ ಮತ್ತು ಸ್ವಾತಂತ್ರ್ಯಗಳಿಗೆ ಲೋಪ. ಇವುಗಳೆಲ್ಲಕ್ಕು ಪಶುಧರ್ಮಗಳಾದ ಆಹಾರ, ಭಯ, ಆಲಸ್ಯ, ಕಾಮಗಳೇ ಪ್ರೇರಕಗಳೆಂದು ಹೇಳಬಹುದು. ವ್ಯಕ್ತಿ, ಕುಟುಂಬ, ಸಮಾಜ, ರಾಷ್ಟ್ರ, ಅಂತರರಾಷ್ಟ್ರೀಯ ಜೀವನೆಯು ಉತ್ತರೋತ್ತರ ಸುವ್ಯವಸ್ಥೆಯಾಗಬೇಕಾದರೆ ಈ ಸಮಸ್ಯೆಯ ಮೂರು ಅಂಶಗಳಿಗೂ ಸಮರ್ಪಕವಾದ ಉತ್ತರವನ್ನು ಹುಡುಕಬೇಕು.

ಭಾರತೀಯ ಸಂಸ್ಕೃತಿಯ ಚರಿತ್ರೆಯಲ್ಲಿ ಇಂತಹ ಉತ್ತರವನ್ನು ನಾವು ಕಾಣಬಹುದೆಂಬುದನ್ನು ಸೂಚಿಸುವದೇ ಈ ಗ್ರಂಥದ ಉದ್ದೇಶ. ರಾಜಕೀಯ ದೃಷ್ಟಿಯಿಂದ ನಮ್ಮ ದೇಶದ ಚರಿತ್ರೆಯಲ್ಲಿ ಎಷ್ಟು ತತ್ವಗಳು ಹೊರಟವು, ಎಂತಹ ವ್ಯವಸ್ಥೆಗಳಿದ್ದವು, ಹೇಗೆ ವ್ಯಕ್ತಿಸ್ವಾತಂತ್ರ್ಯಕ್ಕೂ ಸಮಾಜದ ಬಿಗಿಗೂ ಸಮನ್ವಯವುಂಟಾಗಿದ್ದಿತು, ಯಾವ ರೀತಿಯಲ್ಲಿ ರಾಷ್ಟ್ರೀಯತೆಯು ವಿಶ್ವದೃಷ್ಟಿಯೊಡನೆ ಮಿಳಿತವಾಗಿದ್ದಿತು—ಇತ್ಯಾದಿ ಪ್ರಶ್ನೆಗಳಿಗೆ ಸೂಕ್ತವಾದ ಪರಿಹಾರವು ಕಂಡುಬರುವದು. ರಾಷ್ಟ್ರೀಯ ಭಾವನೆಯು ಐಶ್ವರ್ಯವನ್ನಾಗಲಿ ಸ್ವಾತಂತ್ರ್ಯವನ್ನಾಗಲಿ ಬೆಳೆಸಲಾರದು; ಇವೆರಡನ್ನು ರಾಜಕೀಯ ಅವಶ್ಯಕತೆಗೆ ಅಧೀನಮಾಡಿ ನೀತಿಯನ್ನೇ ನಾಶಮಾಡುವದೆಂದು ಕೆಲವರು ಹೇಳುವರು.[1] ಜಡರೂ, ದುರ್ಬಲರೂ, ರಾಜಕೀಯ ದೃಷ್ಟಿಯಿಂದ ದುರದೃಷ್ಟವಂತರೂ ಆದವರಲ್ಲಿಯೇ ಇಂತಹ ಕೇವಲ ಭಾವನಾಮೂಲವಾದ, ಹೇಡಿಗಳ ಅಂತ್ಯಾಶ್ರಯವಾದ ದೇಶಭಕ್ತಿ, ರಾಷ್ಟ್ರೀಯ ಭಾವನೆಗಳು ಹುಟ್ಟುತ್ತವೆಯೆಂದು ಇತರರು ಹೇಳುವರು[2]. ಆದರೆ ರಾಷ್ಟ್ರೀಯ ಭಾವನೆಯು ಪ್ರಪಂಚದಿಂದ ಅದೃಶ್ಯವಾಗುತ್ತಿದೆ ಎಂಬುದಕ್ಕೆ ಯಾವ ನಿದರ್ಶನಗಳನ್ನೂ ತೋರಿಸಿಲ್ಲ. ಅಷ್ಟೇ ಅಲ್ಲದೆ ಈ ಭಾವನೆಯು ಇನ್ನೂ ಹೆಚ್ಚುತ್ತಲೇ ಇದೆಯೆಂಬುದಕ್ಕೆ ರಷ್ಯದೇಶವು ಕೂಡ ಅಂತರರಾಷ್ಟ್ರೀಯ ಸಮತಾವಾದವನ್ನು ನಿರಾಕರಿಸಿರುವದೇ ಉದಾಹರಣೆ. ಈಗ ಕೊನೆಗೊಂಡಿರುವ ಪ್ರಪಂಚಯುದ್ಧದನಂತರ ಸಮಸ್ತ ರಾಷ್ಟ್ರಗಳೂ ಸಮಾನಸ್ಕಂಧರಾಗಿರುವರೆಂಬ ಭರವಸೆಯೂ ಇಲ್ಲ.

ರಾಷ್ಟ್ರೀಯತೆಯು ದೇಶ, ಮತ, ಭಾಷೆ, ಸಂಸ್ಕೃತಿಗಳನ್ನನುಸರಿಸಿ ವಿವಿಧ ರೂಪಗಳನ್ನು ಪಡೆಯಬಹುದು. ರಾಷ್ಟ್ರೀಯ ಭಾವನೆಯಿಂದ ಪ್ರೇರಿತರಾದ ಚರಿತ್ರಕಾರರು ತಮ್ಮ ಪೂರ್ವಚರಿತ್ರೆಯನ್ನೆಲ್ಲ ಆಧುನಿಕವಾದ ರಾಷ್ಟ್ರೀಯ ಭಾವಕ್ಕೆ ನಿದರ್ಶನವೆಂದು ತೋರಿಸಲು ಯತ್ನಿಸುವರು. ದೇಶದ ವಿವಿಧ ಭಾಗಗಳೆಲ್ಲ ರಾಜಕೀಯ ದೃಷ್ಟಿಯಿಂದ ಒಂದಾದ ಮಾತ್ರಕ್ಕೆ ರಾಷ್ಟ್ರೀಯ ಐಕಮತ್ಯವು ಉಂಟಾಯಿತೆಂದು ಹೇಳುವದಕ್ಕೆ ವಿಮರ್ಶಾಪೂರ್ವಕವಾದ

---

[1] Nationality does not aim at either liberty or prosperity, both of which it sacrifices to the imperative necessity of making the nation the mould and the measure of the state. Its course will be marked with material as well as moral ruin.—Acton.

[2] It need hardly be said that only among apathetic and feeble peoples was nationalism allowed to develop and only so long as it confined itself to archæological and linguistic disputes. In Milan and Poland, where nationalism was not confined to grammar, a tight rein was kept upon it.—Herzen.

ಪ್ರಪಂಚದ ಚರಿತ್ರೆಯಿಂದ ನಿದರ್ಶನ ಸಿಕ್ಕುವದಿಲ್ಲ. ರಾಜಕೀಯ ರಾಷ್ಟ್ರೀಯತೆಯು ಫ್ರಾನ್ಸಿನ ಮಹಾಕ್ರಾನ್ತಿಯ ನಂತರ ಹುಟ್ಟಿ ೧೯ ನೆಯ ಶತಾಬ್ದದಲ್ಲಿ ವ್ಯಾಪಿಸಿಕೊಂಡಿತು. ಮತಸಂಬಂಧವಾದ ರಾಷ್ಟ್ರೀಯ ಭಾವವು ಪ್ರಯಾಣವೇಗಸೌಕರ್ಯಗಳೂ ವಿಜ್ಞಾನವೂ ಹೆಚ್ಚಾದಂತೆ ಕ್ಷೀಣವಾಗುತ್ತ ಬಂದಿದೆ. ಜಾತಿಗೂ ರಾಷ್ಟ್ರೀಯತೆಗೂ ಕಲ್ಪಿಸಿದ್ದ ಸಂಬಂಧವೂ ಕೃತ್ರಿಮವೆಂದು ನಿರ್ಧರಿಸಲ್ಪಟ್ಟಿದೆ. ಭಾಷಾಸಂಬಂಧವಾದ ರಾಷ್ಟ್ರೀಯ ಭಾವವು ಕೂಡ ಕಾಕತಾಳೀಯ ನ್ಯಾಯದಂತೆ ಪಾಶ್ಚಾತ್ಯರೀತಿಯಾದ ಸಂಸ್ಕೃತಿಗೂ ರಾಷ್ಟ್ರೀಯತೆಗೂ ಕೇವಲ ಪುರುಷತಂತ್ರವಾದ ತರ್ಕಸಹಾಯದಿಂದ ಒಂದು ಸಂಬಂಧವನ್ನು ಕಲ್ಪಿಸಿದೆ. ಇದರಿಂದ ರಾಜಕೀಯ ತಾಟಸ್ಥ್ಯ, ನಿಜ ಸಂಸ್ಕೃತಿಯ ಕ್ಷಯಗಳೇ ಉಂಟಾದವು. ಎಲ್ಲಕ್ಕೂ ಮೂಲವಾದ ವ್ಯಕ್ತಿಸ್ವಾತಂತ್ರ್ಯಕ್ಕೆ ಸ್ಥಾನವೇನೆಂಬುದೇ ಮರೆತಂತಿದೆ. ರಾಷ್ಟ್ರೀಯ ಭಾವನೆಯು ಅಜ್ಞಾನಮೂಲವೆಂದು ಹೇಳಿದರೂ, ಕೇವಲ ಭಾವನಾಪೂರ್ವಕವೆಂದರೂ, ಪ್ರಕೃತ ವೈಜ್ಞಾನಿಕ ಯುಗದಲ್ಲಿ ಕಾಲಾತ್ಯಯಾಪದಿಷ್ಟವೆಂದರೂ, ವಿಶ್ವಸೌಹಾರ್ದಕ್ಕೆ ಅಡಚಣೆಯೆಂದರೂ, ಈಗಿನ ಪ್ರಪಂಚಸ್ಥಿತಿಯಲ್ಲಿ ರಾಷ್ಟ್ರೀಯ ಭಾವನೆಯು ಪ್ರಬಲವಾಗಿದೆಯೆಂಬುದನ್ನು ಅಂಗೀಕರಿಸಬೇಕಾಗಿದೆ.

ಆರ್ಥಿಕದೃಷ್ಟಿಯಿಂದ ಪರಿಶ್ರಮವಿಧಾನಗಳಲ್ಲಿ ಉಂಟಾಗಿರುವ ಕ್ರಾಂತಿಯಿಂದಲೂ, ಬಂಡವಾಳಶಾಹಿಯಿಂದಲೂ, ಕೆಲವು ದೇಶಗಳ ಬಲ ಐಶ್ವರ್ಯಗಳು ಅತ್ಯಧಿಕವಾಗಿ ಐಶ್ವರ್ಯದ ಹಂಚಿಕೆಯಲ್ಲಿ ಇತರ ದೇಶಗಳಲ್ಲಿಯೇ ಅಲ್ಲದೆ ಸ್ವದೇಶದ ಜನರಲ್ಲಿಯೇ ಅನ್ಯಾಯವು ಉಂಟಾಗಿದೆ. ಪರದೇಶಗಳಿಗೆ ಸಾಮ್ರಾಜ್ಯತತ್ವವೂ ಸ್ವದೇಶದ ಶ್ರಮಜೀವಿಗಳಿಗೆ ಅಲ್ಪವೇತನೆಯ ತತ್ವವೂ ಅನ್ವಯವಾಗುತ್ತಿವೆ. ಅಲ್ಲದೆ ಕೃಷಿಗೂ ಕೈಗಾರಿಕೆಗಳಿಗೂ ವೈಷಮ್ಯವೇರ್ಪಟ್ಟಿದೆ. ಇದರಿಂದ ಸ್ಪರ್ಧೆ, ಅಸೂಯೆ, ಅಹಂಕಾರ, ತಿರಸ್ಕಾರಭಾವಗಳು ಬೇರೂರಿ ಜೀವನದಲ್ಲಿ ಶಾಂತಿಯು ಅದೃಶ್ಯವಾಗಿದೆ. ಸಾಮಾನ್ಯಜನರಿಗೆ ಸಹಜವಾದ ಆಲಸ್ಯ, ಔದಾಸೀನ್ಯ ಮತ್ತು ಹಿಂದಿನಕಾಲದಿಂದ ಬಂದ ಕೆಲವು ನಂಬಿಕೆಗಳಿಲ್ಲದಿದ್ದಪಕ್ಷದಲ್ಲಿ ಇನ್ನೂ ಘೋರವಾದ ವಿಪ್ಲವವು ಉಂಟಾಗುತಿದ್ದಿತು. ಕ್ರಾಂತಿಕಾರರ ಸಂಖ್ಯೆಯು ಯಾವಾಗಲೂ ಅಲ್ಪ. ಬಲಾತ್ಕಾರದಿಂದಲೋ ಶಾಂತರೀತಿಯಿಂದಲೋ ಕ್ರಾಂತಿಯನ್ನುಂಟುಮಾಡುವ ಯೋಗ್ಯತೆಯನ್ನು ಪಡೆದವರು ತಮ್ಮ ಸ್ವಂತ ಜೀವನ, ಭಾವನೆ, ಅನುಕೂಲ ಸಮಯನಿರೀಕ್ಷಣೆಗಳಿಂದ ದೇಶದ ಬಹುಸಂಖ್ಯಾತರನ್ನು ತಮ್ಮ ಕಡೆಗೆ ತಿರುಗಿಸಿಕೊಂಡು ಕೆಲಸಮಾಡುವರು. ಆದುದರಿಂದ ಮುಖಂಡರು ಜನರ

ಸ್ವಭಾವ, ಶಕ್ತಿಗಳನ್ನು ಗಣಿಸಬೇಕು. ಒಂದು ಹೆಜ್ಜೆ ಮುಂದೆ ಹೋಗುವಂತೆ ಪ್ರೇರಿಸಲೂ ಶಕ್ತರಾಗಬೇಕು. ಮನುಷ್ಯರ ತಿಳುವಳಿಕೆಗೂ ವಿಜ್ಞಾನದ ಮುಂದೋಟಕ್ಕೂ ಉಂಟಾಗುವ ಕಾಲವ್ಯತ್ಯಾಸವನ್ನು ನೆನಪಿನಲ್ಲಿಟ್ಟು ಶಾಂತ ರೀತಿಯಲ್ಲಿ ಪ್ರಗತಿಯನ್ನು ಸಾಧಿಸುವದೆ ಉತ್ತಮ ಸಂಸ್ಕೃತಿಯ ಲಕ್ಷಣ.

ಆಧ್ಯಾತ್ಮಿಕ ಮತ್ತು ನೈತಿಕ ದೃಷ್ಟಿಯಿಂದ ಪ್ರಕೃತ ಪ್ರಪಂಚದಲ್ಲಿ ನಿಜವಾದ ಸಂಸ್ಕೃತಿಯನ್ನು ಸ್ಥಾಪಿಸಬೇಕಾದರೆ ಹೊಸದಾಗಿ ಮಾನವನಲ್ಲಿ ಧರ್ಮಭಾವನೆಯನ್ನು ಸೃಷ್ಟಿಸಬೇಕಾಗಿದೆ. ಈ ಕಾರ್ಯದಲ್ಲಿ ವಿಜ್ಞಾನವೂ ಮುಖ್ಯವಾದ ಸಾಧನ. ಆದರೆ ವಿಜ್ಞಾನದ ಸರಹದ್ದೇನು, ಉಪಯೋಗವೇನು, ವಿಜ್ಞಾನವು ವ್ಯಕ್ತಿಜೀವನದ ಸರ್ವಸಮಸ್ಯೆಗಳಿಗೂ ಸಮರ್ಪಕವಾದ ಉತ್ತರ ಕೊಡಲು ಈಗ ಸಿದ್ಧವಾಗಿದೆಯೇ, ಮುಂದೆಯಾದರೂ ಸಮಸ್ಯಾಪರಿಹಾರ ಗಳನ್ನು ಮಾಡಬಲ್ಲದೆ ಎಂಬುದನ್ನು ನಿರ್ಧರಿಸಿಕೊಳ್ಳುವದು ಅವಶ್ಯಕ. ಪ್ರಯೋಜನೆಯೆಂಬ ಉದ್ದೇಶವಿಲ್ಲದೆ ಎಂತಹ ಮಂದನೂ ಪ್ರವರ್ತಿಸುವದಿಲ್ಲ. ವಿಜ್ಞಾನವೂ ಇತರ ವಿಷಯಗಳಲ್ಲಿ ಸ್ವಾತಂತ್ರ್ಯವನ್ನು ಕಲ್ಪಿಸಿದರೂ ಆತ್ಮ ವಿಷಯದಲ್ಲಿ ಮಾತ್ರ "ಇದಮಿತ್ಥಂ" ಎಂದು ಖಂಡಿತವಾಗಿ ಹೇಳಲು ಎಂದಿಗೂ ಶಕ್ತಿಪಡೆಯಲಾರದು. ಐಕ್ಯಜ್ಞಾನದಿಂದಲ್ಲದೆ ವಿಜ್ಞಾನದಿಂದ ಸರ್ವಜ್ಞತ್ವವು ಸಿದ್ಧಿಸಲಾರದು. ವಿಜ್ಞಾನವು ಇಂದ್ರಿಯಜನ್ಯವಾದುದು. ಬಾಹ್ಯವಿಷಯಕವಾದುದು. ಇನ್ದ್ರಿಯಾರ್ಥ ಸನ್ನಿಕರ್ಷೆಯ ರೂಪವಾದ ಪ್ರಮಾಣಜ್ಯೇಷ್ಠವಾದ ಪ್ರತ್ಯಕ್ಷವೇ ವಿಜ್ಞಾನಕ್ಕೆ ಮೂಲಾಧಾರ. ವಿಜ್ಞಾನದ ತರ್ಕರೀತಿಯು ಕೂಡ ಪ್ರತ್ಯಕ್ಷವನ್ನು ಅವಲಂಬಿಸಿರುವದು.[8] ಆದರೆ ತರ್ಕಕ್ಕೆ ಪ್ರತಿಷ್ಠಾನವಿಲ್ಲವೆಂಬುದು ನಿರ್ವಿವಾದಾಸ್ಪದವಾದುದು. ಆದುದ ರಿಂದಲೇ ವೈಜ್ಞಾನಿಕರು ಅಣುಭೂತಗಳು, ಶಕ್ತಿ, ಆಕಾಶ ಇತ್ಯಾದಿ ವಿಷಯ ಗಳಲ್ಲಿ ಪರಸ್ಪರ ವಿರುದ್ಧಾಭಿಪ್ರಾಯಗಳನ್ನು ಪ್ರತಿಪಾದಿಸಿರುವರು. ವಿಜ್ಞಾನವು ಭೂತವಸ್ತು ವಿಷಯಕವೆಂದು ಹೇಳಬಹುದಾದರೂ ವಿವೇಚನೆಯಲ್ಲಿ ಅಧ್ಯಾಸದ

---

8 ನಹಿ ಇನ್ದ್ರಿಯಾಣ್ಯನುಪಾದಾಯ ಪ್ರತ್ಯಕ್ಷಾದಿ ವ್ಯವಹಾರಸ್ಸಂಭವತಿ |
ನಚಾಧಿಷ್ಠಾನಮಂತರೇಣ ಇನ್ದ್ರಿಯಾಣಾಂವ್ಯಾಪಾರಸ್ಸಂಭವತಿ |
ನಚಾನಧ್ಯಸ್ತಾತ್ಮಭಾವೇನ ದೇಹೇನ ಕಶ್ಚಿದ್ವ್ಯಾಪ್ರಿಯತೇ |
ನಚೈತಸ್ಮಿನ್‌ಸರ್ವಸ್ಮಿನ್ನಸತಿ ಅಸಂಗಸ್ಯಾತ್ಮನಃ ಪ್ರಮಾತೃತ್ವಮುಪಪದ್ಯತೇ |
ನಚ ಪ್ರಮಾತೃತ್ವಮನ್ತರೇಣ ಪ್ರಮಾಣಪ್ರವೃತ್ತಿರಸ್ತಿ |
ತಸ್ಮಾದವಿದ್ಯಾವದ್ವಿಷಯಾಣ್ಯೇವಪ್ರತ್ಯಕ್ಷಾದೀನಿ ಪ್ರಮಾಣಾನಿ ಶಾಸ್ತ್ರಾಣಿ ಚ ಇತಿ ||
—ಶಾಂಕರಬ್ರಹ್ಮಸೂತ್ರಭಾಷ್ಯಂ

ಪ್ರಾಬಲ್ಯವೇ ಕಂಡುಬರುವುದು. ಆದುದರಿಂದ ವಿಜ್ಞಾನದಿಂದ ಸಂಸ್ಕೃತಿಯ ಮುಖ್ಯ ಚಿಹ್ನೆಗಳಾದ ನಿತ್ಯಾನಿತ್ಯವಸ್ತುವಿವೇಕ, ಇಹಾಮುತ್ರಾರ್ಥ ಫಲ ಭೋಗವಿರಾಗ, ಶಮದಮಾದಿ ಸಾಧನಸಂಪತ್ತು, ಮುಮುಕ್ಷುತ್ವಗಳ ಸಾಧನೆಯು ಉಂಟಾಗಲಾರದು.

ರಾಷ್ಟ್ರೀಯತೆಯಂತೆ ವಿಜ್ಞಾನವು ಒಂದು ಉಪಕರಣವೆಂಬುದನ್ನು ಮರೆಯಲಾಗದು. ಇವೆರಡನ್ನು ಜಗತ್ತಿನ ಕಲ್ಯಾಣಕ್ಕಾಗಲೀ ಪ್ರಳಯ ಕ್ಕಾಗಲೀ ಉಪಯೋಗಿಸಬಹುದು. ಆದುದರಿಂದ ಸಂಸ್ಕೃತಿಯನ್ನು ಕಾಪಾಡಿ ಕೊಳ್ಳಬೇಕಾದರೆ ಇವುಗಳನ್ನು ಹತೋಟಿಯಲ್ಲಿಡಬೇಕು. ಈ ರೀತಿಯಲ್ಲಿ ಕರ್ತೃ, ಕರಣ, ಕರ್ಮಗಳಿಗಿರಬೇಕಾದ ಸಂಬಂಧವನ್ನು ನಿಶ್ಚಯಿಸಿ "ನಾನ್ಯಃಪನ್ಥಾ ವಿದ್ಯತೇಽಯನಾಯ" ಎಂದು ಸಂಶಯಕ್ಕಾಸ್ಪದವಿಲ್ಲದ ಸಂದೇಶವನ್ನು ಭಾರತೀಯ ಸಂಸ್ಕೃತಿ ಚರಿತ್ರೆ ಒಂದೇ ಪ್ರಪಂಚಕ್ಕೆಲ್ಲ ಸಾರಿದೆಯೆಂಬುದನ್ನು ತೋರಿಸುವುದಕ್ಕಾಗಿ ಪ್ರಕೃತಗ್ರಂಥದಲ್ಲಿ ಮುಖ್ಯ ವಿಷಯಗಳನ್ನೆಲ್ಲ ಕ್ರೋಡೀ ಕರಿಸಲು ಯತ್ನಿಸಿರುವೆವು. ಸರ್ವಜ್ಞರೂ ಸರ್ವತನ್ತ್ರಸ್ವತಂತ್ರರೂ ಆದವರಿಗೆ ಮಾತ್ರ ಭಾರತೀಯ ಸಂಸ್ಕೃತಿಯ ವಿವಿಧರೂಪಗಳಾದ ಭೌತಿಕಸ್ಥಿತಿಯ ಫಲ, ವೈದಿಕಮತದ ಸಂದೇಶ, ಆರ್ಥಿಕಸ್ಥಿತಿ, ಸಾಮಾಜಿಕವ್ಯವಸ್ಥೆ, ರಾಜಕೀಯ ಪದ್ಧತಿಗಳು, ಭಾಷೆ, ಸಾಹಿತ್ಯ, ವಿಜ್ಞಾನ, ಕಲೆ, ಸಂಸ್ಕೃತಿಯ ವಿಕಾಸ ವಿಸ್ತರಣೆಗಳೇ ಮುಂತಾದುವಕ್ಕೆ ಉಚಿತಬೆಲೆಯನ್ನು ಕಟ್ಟಲು ಸಾಧ್ಯ. ಆದರೂ ಗ್ರಂಥಪ್ರಮಾಣವನ್ನೂ ವಿಷಯಪ್ರಾಧಾನ್ಯವನ್ನೂ ಮನಸ್ಸಿನಲ್ಲಿಟ್ಟುಕೊಂಡು ಯಥಾಶಕ್ತಿ ಈ ಪ್ರಯತ್ನವನ್ನು ಮಾಡಿರುವೆವು. ಅನೇಕಾಂಶಗಳಲ್ಲಿ ಭಿನ್ನಾಭಿ ಪ್ರಾಯಗಳಿಗೆ ಅವಕಾಶವುಂಟೆಂಬುದನ್ನು ಅರಿತಿರುವೆವು. ನಮ್ಮ ಪೂರ್ವಾ ಚಾರ್ಯರ ಕೃತಿಗಳು ಗಂಗಾಪ್ರವಾಹವು ರಥ್ಯೋದಕವನ್ನೂ ಪಾವನಮಾಡು ವಂತೆ ನಮ್ಮ ಕೆಲಸವನ್ನೂ ಪವಿತ್ರಮಾಡಲಿ ಎಂಬುದೇ ನಮ್ಮ ಪ್ರಾರ್ಥನೆ.

ಆಚಾರ್ಯಕೃತಿನಿವೇಶನಮಪ್ಯವಧೂತಂ ವಚೋಽಸ್ಮದಾದೀನಾಮ್ |
ರಥ್ಯೋದಕಮಿವ ಗಂಗಾಪ್ರವಾಹಪಾತಃ ಪವಿತ್ರಯತಿ ||

(ಭಾಮತೀ)

ವಿದ್ವಾಂಸೋಽನುಗೃಹ್ಣನ್ತು ಚಿತ್ತಶ್ರೋತ್ರೈಃಪ್ರಸಾದಿಭಿಃ |
ಸನ್ತಃಪ್ರಣಯಿವಾಕ್ಯಾನಿ ಗೃಹ್ಣನ್ತ್ಯನಸೂಯವಃ ||

ನಚಾತ್ರಾತೀವ ಕರ್ತವ್ಯಂ ದೋಷದೃಷ್ಟಿಪರಂಮನಃ |
ದೋಷಾಹ್ಯವಿದ್ಯಮಾನೋಽಪಿ ತಚ್ಚಿತ್ತಾನಾಂಪ್ರಕಾಶತೇ ||

**ಕುತೋವಾ ಗೃಹ್ಣತೇದೋಷಂ ಸೂರಯೋಮದ್ವಿಧೋಕ್ತಿಷು |**
**ನೇಷ್ಯತೇಯಃ ಪರಸ್ಯೋಽಪಿ ಸಸ್ವಯಂಗೃಹ್ಯತೇಕಥಮ್ ? ||**

**ನಿರ್ದೋಷತ್ವೈಕವಾಕ್ಯತ್ವಂ ಕ್ವವಾ ಲೋಕಸ್ಯದೃಶ್ಯತೇ ? |**
**ಸಾಪವಾದಾಃಯತಃಕೇಚಿನ್ಮೋಕ್ಷಸ್ವರ್ಗಾವಪಿ ಪ್ರತಿ ||**

(ತನ್ತ್ರವಾರ್ತಿಕಾ)

*          *          *

ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯ ಪ್ರಧಾನ ಸಂಪಾದಕರಿಗೂ ಸಮಿತಿಯವರಿಗೂ, ನಿವೃತ್ತ ಪ್ರಾಧ್ಯಾಪಕರಾದ ಶ್ರೀ ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ., ಅವರಿಗೂ "ಭಾರತೀಯ ಸಂಸ್ಕೃತಿ"ಯ ವಿಷಯವಾಗಿ ಈ ಗ್ರಂಥವನ್ನು ರಚಿಸಲು ಅವಕಾಶವನ್ನೂ ಅಮೂಲ್ಯ ಸಲಹೆಗಳನ್ನೂ ಕೊಟ್ಟುದಕ್ಕಾಗಿ ನಾನು ಕೃತಜ್ಞನಾಗಿದ್ದೇನೆ.

೨೦-೪-೧೯೪೪ }
೧-೩-೧೯೫೪ }

ಎಸ್. ಶ್ರೀಕಂಠಶಾಸ್ತ್ರೀ

# ವಿಷಯ ಸೂಚಿಕೆ

# ಚಿತ್ರಗಳು

# ಕಾಲಸೂಚೀ

ಕ್ರಿ.ಪೂ.

| | | |
|---|---|---|
| | ಉಪಶಿಲಾಯುಗ | |
| | ಪುರಾತನಶಿಲಾಯುಗ | |
| | ಕ್ಷುದ್ರಶಿಲಾಯುಗ | |
| ೧೦೦೦೦ | ನವಶಿಲಾಯುಗ | —ವೈದಿಕ ಸಂಸ್ಕೃತಿಯ ಆರಂಭ. |
| ೬೦೦೦–೨೮೦೦ | ತಾಮ್ರಶಿಲಾಯುಗ | —ಹರಪ್ಪ ಸಂಸ್ಕೃತಿ, ಮಹಾಭಾರತ, ಕಲಿಯುಗಾರಂಭ, ಸಂಹಿತಾ ವಿಭಾಗ. |
| ೨೫೦೦ | | —ಝುಕಾರ್ ಸಂಸ್ಕೃತಿ, ಬ್ರಾಹ್ಮಣಗಳು, ಆರಣ್ಯಕಗಳು. |
| ೧೭೦೦–೧೪೦೦ | | —ಝೂಂಗಾರ್ ಸಂಸ್ಕೃತಿ, ಬೊಘಾಸ್‌ಕಾಯ ಶಾಸನ, ಟೆಲ್ ಅಲ್ ಅಮಾರ್ನ ಲೇಖನಗಳು, ವೇದಾಂಗಜ್ಯೋತಿಷ, ಉಪನಿಷತ್ತುಗಳು. |
| ೬೦೦ | | —ರಾಮಾಯಣ, ಧರ್ಮಶಾಸ್ತ್ರಗಳು, ಸೂತ್ರಗಳು, ಯಾಸ್ಕ, ಪಾಣಿನಿ. |
| ೫೦೦ | | —ಬೌದ್ಧ, ಜೈನ, ಆಜೀವಿಕ ಮತಗಳು : ಬುದ್ಧ, ಮಹಾವೀರ, ಶೈಶುನಾಗ ವಂಶ. |
| ೩೨೨–೧೮೦ | | —ಅಲೆಕ್ಸಾಂಡರ್, ಮೌರ್ಯವಂಶ, ಚಂದ್ರಗುಪ್ತ, ಕೌಟಿಲ್ಯ, ಅಶೋಕ |
| ೧೮೦–೮೦ | | —ಪತಂಜಲಿ, ಶುಂಗ-ಕಾಣ್ವ, ಆನ್ಧ್ರರಾಜ್ಯಗಳು. |
| ೫೮ | | —ವಿಕ್ರಮಶಕಾರಂಭ. |

ಕ್ರಿ. ಶ.

| | | |
|---|---|---|
| ೭೮ | | —ಶಾಲಿವಾಹನಶಕ, ಆನ್ಧ್ರ, ಶಕ, ಕುಷಾಣ ರಾಜ್ಯಗಳು, ಅಶ್ವಘೋಷ, ನಾಗಾರ್ಜುನ, ಅಸಂಗ. |

೧೨೦—೧೫೦ —ಗೌತಮೀಪುತ್ರ ಶಾತಕರ್ಣಿ, ಕನಿಷ್ಕ, ರುದ್ರದಾಮ, ಸಂಘಸಾಹಿತ್ಯ, ಮಹಾಯಾನ ಬೌದ್ಧಮತ, ಗಾಂಧಾರಶಿಲ್ಪ, ಅಮರಾವತಿ; ಅಜಂತ ಚಿತ್ರಕಲೆಯ ಆರಂಭ, ನಾಗ-ಭಾರಶಿವ, ಬೃಹದ್ಭಾರತದ ಆರಂಭ, ಭರತ.

೩೨೦—೫೬೦ —ಗುಪ್ತಸಾಮ್ರಾಜ್ಯ, ಕದಂಬ, ವಾಕಾಟಕ, ತಳಕಾಡುಗಂಗ, ಪಲ್ಲವ, ಚೇರ, ಚೋಳ, ಪಾಂಡ್ಯವಂಶಗಳು, ಕಾಲಿದಾಸ, ವಿಶಾಖದತ್ತ, ದಿಙ್ನಾಗ, ಪುರಾಣಗಳು.

೫೬೦—೬೪೦ —ಶಂಕರಾಚಾರ್ಯರು, ಹರ್ಷ, ಪುಲಕೇಶಿನ್, ಪಲ್ಲವರು, ಆಳ್ವಾರರು, ನಾಯನಾರರು, ಬಾಣ, ಮಯೂರ, ಸುಬನ್ಧು, ಧರ್ಮಕೀರ್ತಿ, ವರಾಹಮಿಹಿರ.

೬೫೦—೧೦೦೦ —ರಾಷ್ಟ್ರಕೂಟರು, ರಾಜಪುತ್ರವಂಶಗಳು, ಪಾಲರು. ದೇಶಭಾಷೆಗಳ ಸಾಹಿತ್ಯ.

೧೦೦೦—೧೩೩೬ —ಚೋಳ, ಚಾಳುಕ್ಯ, ಹೊಯ್ಸಳ, ಯಾದವ, ಕಾಕತೀಯ ರಾಜ್ಯಗಳು. ಡಿಲ್ಲಿ ಸುಲ್ತಾನರು, ರಾಜಪುತ್ರರು.

೧೩೩೬—೧೬೬೦ —ವಿಜಯನಗರ ಸಾಮ್ರಾಜ್ಯ, ವಿದ್ಯಾರಣ್ಯರು, ಬಹಮನಿ ರಾಜ್ಯಗಳು, ಮೊಘಲ್ ಸಾಮ್ರಾಜ್ಯ, ಪಾಶ್ಚಾತ್ಯರ ಆಗಮನ.

೧೬೬೦—೧೮೦೦ —ಮರಾಟ ಸಾಮ್ರಾಜ್ಯ, ಮೊಘಲರ ಅವನತಿ, ಬ್ರಿಟಿಷರ ಏಳಿಗೆ.

೧೮೦೦—೧೮೫೭ —ಈಸ್ಟ್ ಇಂಡಿಯ ಕಂಪೆನಿಯ ಆಡಳಿತ, ಸಿಪಾಯಿದಂಗೆ, ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಆರಂಭ, ಶ್ರೀರಾಮಕೃಷ್ಣ ಪರಮಹಂಸ—ವಿವೇಕಾನಂದರು.

೧೮೫೭—೧೯೪೭ —ಬ್ರಿಟಿಷ್ ಚಕ್ರವರ್ತಿಗಳ ಆಡಳಿತ, ಆರ್ಯ ಸಮಾಜ, ಪ್ರಾರ್ಥನಾ ಸಮಾಜ, ಬ್ರಹ್ಮೋ ಸಮಾಜ, ಬ್ರಹ್ಮಜ್ಞಾನಸಮಾಜ, ಇತರ ಚಲುವಳಿಗಳು.

೧೯೪೭ —ಸ್ವತಂತ್ರಭಾರತ.

# ಭಾರತೀಯ ಸಂಸ್ಕೃತಿ



## ೧. ಸಂಸ್ಕೃತಿ ಮತ್ತು ನಾಗರಿಕತೆ

ಗಾಯನ್ತಿ ದೇವಾಃ ಕಿಲ ಗೀತಕಾನಿ ಧನ್ಯಾಸ್ತು ಯೇ ಭಾರತಭೂಮಿಭಾಗೇ |
ಸ್ವರ್ಗಾಪವರ್ಗಾಸ್ಪದ ಮಾರ್ಗಭೂತೇ ಭವನ್ತಿ ಭೂಯಃ ಪುರುಷಾಃ ಸುರತ್ವಾತ್ ||
(ಶ್ರೀವಿಷ್ಣುಪುರಾಣ)

**ಸಂಸ್ಕೃತಿ ಮತ್ತು ನಾಗರಿಕತೆ:** ಪ್ರಪಂಚದ ಚರಿತ್ರೆಯಿಂದ ಮಾನವನು ತನ್ನ ಆಧ್ಯಾತ್ಮಿಕಾದಿಭೌತಿಕಾಧಿದೈವಿಕ ಭಾವಗಳನ್ನು ಕಾಲದೇಶಸನ್ನಿವೇಶಗಳಿಗನುಸಾರವಾಗಿ ಸ್ಥಿರ, ಪುಷ್ಟಿಮಾಡಿಕೊಂಡು ಪಶ್ವಾದಿಗಳಿಂದ ಅವಿಶೇಷವಾದ ಆಹಾರ ನಿದ್ರಾಭಯ ಕಾಮಗಳೆಂಬ ಪ್ರಾಕೃತಪ್ರವೃತ್ತಿಗಳನ್ನು ತನ್ನ ವಿವೇಚನಾಶಕ್ತಿಯಿಂದ ಆತ್ಮಸಿದ್ಧಿಗಾಗಿ ಉಪಯೋಗಿಸಿಕೊಂಡನೆಂಬುದು ವಿಶದವಾಗುತ್ತದೆ. ಆದುದರಿಂದ ಸಂಸ್ಕೃತಿಯು ಮುಖ್ಯಾರ್ಥದಲ್ಲಿ ಆಧ್ಯಾತ್ಮಿಕ ಮತ್ತು ವ್ಯಕ್ತಿಪರವಾದುದು. ಗೌಣವಾಗಿ ಆಯಾ ದೇಶ, ಕಾಲ, ಆರ್ಥಿಕಸ್ಥಿತಿ ಮುಂತಾದುವನ್ನನುಸರಿಸಿ ಸಂಸ್ಕೃತಿಯ ಭೇದಗಳಿರುವವೆಂದು ಹೇಳಬಹುದು. ಈ ಗೌಣಾರ್ಥದಲ್ಲಿ ಸೂಚಿಸಿದ ಸಂಸ್ಕೃತಿಯನ್ನು ಒಂದು ದೃಷ್ಟಿಯಿಂದ ನಾಗರಿಕತೆ ಎಂದು ಕರೆಯಬಹುದು. ಮಾನವನ ಪ್ರಗತಿಯಲ್ಲಿ ಸಂಸ್ಕೃತಿಯು ಜೀವಸ್ವರೂಪ. ಇಚ್ಛಾ, ಜ್ಞಾನ ಮತ್ತು ಕ್ರಿಯಾಶಕ್ತಿಗಳ ತಾದಾತ್ಮ್ಯವು ಸಂಸ್ಕೃತಿಯಲ್ಲಿ ಕಂಡುಬರುವದು. ನಾಗರಿಕತಾವಸ್ಥೆಯಲ್ಲಿ ಬೆಳವಣಿಗೆಯು ನಿಂತು ಜಡಭಾವವು ಕಂಡುಬಂದು ಜನಾಂಗವು ಲಯೋನ್ಮುಖವಾಗುವದು. ಧರ್ಮದ ಸ್ವರೂಪ ಪ್ರವೃತ್ತಿ ಪ್ರಮಾಣಗಳು ಸಂಕುಚಿತವಾಗುವವು. ಸ್ಪೆಂಗ್ಲರ್[1] (Spengler) ಮುಂತಾದವರು ಸಂಸ್ಕೃತಿಯು ಚಿಷ್ಣುಯಾದ ಉತ್ಪಾದನ ಮತ್ತು ಸರ್ಜನಶಕ್ತಿಯು ನಾಗರಿಕತೆಯಲ್ಲಿ ಸ್ಥಿತಿ ಮತ್ತು ಲಯ ರೂಪಗಳನ್ನು ಪಡೆದು ಕೊನೆಗೆ ಲವಲೇಶವೂ ಇಲ್ಲದಂತೆ ನಾಶವಾಗುವದೆಂದು ಅಭಿಪ್ರಾಯಪಡುವರು. ಈ ಗತಿಯನ್ನು ವಸಂತ ಮುಂತಾದ

[1] Oswald Spengler, *The Decline of the West*, Vol. I.

ಋತುಗಳಿಗೆ ಹೋಲಿಸಬಹುದು. ಪ್ರಾಚೀನ ಮತ್ತು ಅರ್ವಾಚೀನ ಸಂಸ್ಕೃತಿಗಳಾದ ಸುಮೇರು, ಅಸ್ಸಿರಿಯಾ, ಬ್ಯಾಬಿಲೋನಿಯ, ಈಜಿಪ್ಟ್, ಗ್ರೀಸ್, ರೋಮ್, ಇಂಡಿಯ, ಚೀಣ ಮತ್ತು ಈಗಿನ ಯೂರೋಪಿನ ಸಂಸ್ಕೃತಿ ಚರಿತ್ರೆಗಳೆಲ್ಲವೂ ಇದೇ ಸಾಮಾನ್ಯ ಧರ್ಮಗಳನ್ನು ಹೊಂದಿರುವವು.

ಸಂಸ್ಕೃತಿ (Culture) ಎಂಬ ಶಬ್ದವು ಕೃಷಿ ಎಂಬ ಭೂವಾಚಕ ಶಬ್ದ ಸಂಬಂಧದಿಂದ ವ್ಯವಸಾಯವನ್ನೂ ನಾಗರಿಕತೆ (Civilization) ಎಂಬುದು ನಗರಜೀವನವನ್ನೂ ಸೂಚಿಸುವವು. ಸಂಸ್ಕೃತಿಗೆ ಉಪಷ್ಟಂಭಕವಾದುದು ದರಿಂದ ನಾಗರಿಕತೆಯು ಸಂಸ್ಕೃತಿಗಿಂತಲೂ ಮುಖ್ಯವಲ್ಲ. ನಾಗರಿಕತೆಯು ಸಾಮಾಜಿಕವ್ಯವಸ್ಥೆ; ಸಂಸ್ಕೃತಿಯು ಆಧ್ಯಾತ್ಮಿಕಪ್ರಗತಿ. ಮನುಷ್ಯರಲ್ಲಿ ನೈಸರ್ಗಿಕವಾಗಿ ಆಹಾರ, ನಿದ್ರಾ, ಭಯ, ಕಾಮಸಾಧನೆಗಳಿಗಾಗಿ ಉಂಟಾಗುವ ಸ್ಪರ್ಧೆಯಲ್ಲಿ ನಿಯತವಾದ ಧರ್ಮವನ್ನು ಏರ್ಪಡಿಸುವದೇ ನಾಗರಿಕತೆಯ ಮುಖ್ಯೋದ್ದೇಶ. ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಯು ಏರ್ಪಟ್ಟಮೇಲೆ ಸಮಾಜಕ್ಕೆ ಹೇಗೋ ಹಾಗೆಯೇ ವ್ಯಕ್ತಿಗೂ ಸ್ವಾತಂತ್ರ್ಯ ಲಾಭವಾಗಬೇಕು. ಸ್ವಾತಂತ್ರ್ಯವಿಲ್ಲದೆ ಸಂಸ್ಕೃತಿಯೂ ನಾಗರಿಕತೆಯೂ ಬೆಳೆಯಲಾರವು. ಆದುದರಿಂದ ಕ್ರೋಚೆ (Croce) ಮುಂತಾದ ತತ್ತ್ವವೇತ್ತರು[2] ಪ್ರಪಂಚದ ಚರಿತ್ರೆ ಎಂದರೆ ಸ್ವಾತಂತ್ರ್ಯದ ಚರಿತ್ರೆ ಎಂದು ನಿಶ್ಚಯಿಸಿರುವರು. ಆಧಿಭೌತಿಕ ವಿಷಯಗಳಲ್ಲಿ ಮನುಷ್ಯನಿಗೆ ಸಂಪೂರ್ಣ ಸ್ವಾತಂತ್ರ್ಯವು ಸಾಧ್ಯವಲ್ಲದಿದ್ದರೂ ಪ್ರಕೃತಿಯ ಅಧ್ಯಕ್ಷನಾದ ಆತ್ಮವು ತನ್ನ ಸಂಸ್ಕಾರದಲ್ಲಿ ಸ್ವಾತಂತ್ರ್ಯವನ್ನು ಪಡೆಯಲು ಸಾಧ್ಯವು ಮತ್ತು ಅವಶ್ಯಕವು. ಇದು ಸಂಸ್ಕೃತಿಯ ವೈಶಿಷ್ಟ್ಯ.

ಸಮಾಜಸುಧಾರಣೆಯಲ್ಲಿ ನಾಗರಿಕತೆಗೆ ಮುಖ್ಯ ಸಹಕಾರಗಳು ನಾಲ್ಕು: ಆರ್ಥಿಕಸ್ಥಿತಿ, ರಾಜಕೀಯವ್ಯವಸ್ಥೆ, ಧಾರ್ಮಿಕವ್ಯವಹಾರ ಮತ್ತು ಜ್ಞಾನ-ವಿಜ್ಞಾನಾನ್ವೇಷಣ. ಮನುಷ್ಯನ ಭಯ ನಿರ್ಮೂಲವಾಗಿ ವ್ಯಕ್ತಿಯ ಸ್ವಭಾವ ಸಿದ್ಧವಾದ ಸ್ವಾತಂತ್ರ್ಯವು ಅಭಿವ್ಯಕ್ತವಾಗುತ್ತ ಬರುವದಕ್ಕೆ ಪ್ರಕೃತಿಯು ಕೆಲವು ಪ್ರತಿಬಂಧಕಗಳನ್ನೂ ಉತ್ತೇಜನಗಳನ್ನೂ ಉಂಟುಮಾಡಿದೆ. ಭೂಮಿಯ ನಾನಾಭಾಗಗಳ ವಾತಾವರಣ, ಮೇಲ್ಮೈಲಕ್ಷಣ, ಸಸ್ಯ, ಪ್ರಾಣಿ, ಖನಿಜಸಂಪತ್ತು ಮುಂತಾದವು ನಾಗರಿಕತೆಯ ಮೇಲೆ ತಮ್ಮ ಪ್ರಭಾವವನ್ನು ತೋರಿಸುವವು[3]. ಪ್ರಪಂಚದ ಪ್ರಾಚೀನ ಸಂಸ್ಕೃತಿಗಳೆಲ್ಲವೂ ಸಮಶೀತೋಷ್ಣ

---

[2] Croce, *History as the Story of Liberty.*

[3] Will Durant, *History of Civilization*, Vol. I.

ಪ್ರದೇಶಗಳಲ್ಲಿ, ಗಂಗಾ-ಸಿಂಧು, ಯುಫ್ರೆಟೀಸ್-ಟೈಗ್ರಿಸ್, ನೈಲ್, ಯಾಂಗ್ಟಿಸಿಕಿಯಾಂಗ್-ಹೊಯಾಂಗ್‌ಹೋ ಮುಂತಾದ ನದಿಗಳ ಅಂತ ರ್ವೇದಿಗಳಲ್ಲಿ ಹುಟ್ಟಿ ಬೆಳೆದವು. ಇಂತಹ ಭೌತಿಕ ಸನ್ನಿವೇಶದಲ್ಲಿ ವ್ಯವಸಾಯ, ವ್ಯಾಪಾರ, ವಾಣಿಜ್ಯ, ಕೈಗಾರಿಕೆಗಳು ಪ್ರಬಲವಾಗಿ ಆಹಾರಸಮಸ್ಯೆಯನ್ನು ಪರಿಹರಿಸಿ ಆರ್ಥಿಕಭಯವನ್ನು ಬಹಳಮಟ್ಟಿಗೆ ನಿರ್ಮೂಲಮಾಡಿದುವು. ಅನಂತರ ಸ್ವಾರ್ಥತೆಯು ಹೆಚ್ಚುತ್ತ ಬಂದುದರಿಂದ ಆಸ್ತಿಯ ಸಂರಕ್ಷಣೆಗಾಗಿ ಕುಟುಂಬ, ಜಾತಿ, ಗ್ರಾಮಪದ್ಧತಿ, ನಗರಸ್ಥಾಪನೆ, ರಾಜಕೀಯ ವ್ಯವಸ್ಥೆಗಳು ಕ್ರಮಕ್ರಮವಾಗಿ ಬೆಳೆಯುತ್ತ ಬಂದು ರಾಜ್ಯ, ಮಹಾರಾಜ್ಯ ಸಾಮ್ರಾಜ್ಯ, ಭೌಜ್ಯ, ವೈರಾಜ್ಯ, ಸ್ವಾರಾಜ್ಯ, ಸ್ವದೇಶಾಭಿಮಾನಗಳುಂಟಾಗಿ ಆಧುನಿಕ ಕಾಲದಲ್ಲಿ ವಿಶ್ವದೃಷ್ಟಿ (*Weltanschauung*) ಪ್ರಚಾರಕ್ಕೆ ಬಂದಿದೆ. ಈ ರಾಜಕೀಯದೃಷ್ಟಿಗೆ ಸಹಕಾರಿಯಾಗಿ ನ್ಯಾಯ ವ್ಯವಹಾರವೂ ಬೆಳೆಯಿತು. ಪಶುಸ್ವಭಾವವಾದ ಸ್ವಾರ್ಥಭಾವನೆಯು ಮನುಷ್ಯನಲ್ಲಿ ಕ್ರಮವಾಗಿ ಕಡಿಮೆ ಯಾಗುತ್ತ ಬರುವದಕ್ಕೆ ನ್ಯಾಯಧರ್ಮಗಳ ಸ್ವರೂಪವಾದ ಮತವು ಕೂಡ ಕಾರಣವಾಯಿತು. ಪ್ರಪಂಚದ ಮತಗಳು ಯಾವ ಯಾವ ದೇಶ ಕಾಲ ಸನ್ನಿ ವೇಶಗಳಲ್ಲಿ ಹುಟ್ಟಿದ್ದರೂ ಈಶ್ವರ, ಜೀವ ಮತ್ತು ಪ್ರಪಂಚಗಳ ವಿಷಯವಾಗಿ ಎಷ್ಟು ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದರೂ ಎಲ್ಲಾ ಮತಗಳಲ್ಲಿಯೂ ಆತ್ಮಸಂಯಮನ, ಸ್ವಾರ್ಥತ್ಯಾಗ ಭೂತದಯಾ ಮುಂತಾದ ಸಾಮಾನ್ಯ ಗುಣಗಳು ಕಂಡುಬರುವವು. ಆದರೂ ಕೆಲವು ಮತಗಳು ವ್ಯಕ್ತಿಸ್ವಾತಂತ್ರ್ಯಕ್ಕೆ ಸಹಕಾರಿಯಾಗದೆ ಆರ್ಥಿಕಪ್ರಪಂಚದಲ್ಲಿ ನಿತ್ಯವಾದ ತಾರತಮ್ಯ, ಸಾಮಾಜಿಕ ಸ್ಥಿತಿಯಲ್ಲಿ ಉಚ್ಚ ನೀಚಭಾವ, ರಾಜಕೀಯ ವಿಷಯಗಳಲ್ಲಿ ನಿರಂಕುಶ ಪ್ರಭುತ್ವ ಮುಂತಾದ ಪ್ರಗತಿವಿರೋಧಭಾವಗಳಿಗೆ ಅವಕಾಶವನ್ನು ಕೊಟ್ಟವು. ಮೋಕ್ಷವಿಷಯಕವಾದ ಜ್ಞಾನ, ಶಿಲ್ಪಶಾಸ್ತ್ರಾದಿ ವಿಷಯಕವಾದ ವಿಜ್ಞಾನ ಗಳು ನಾಗರಿಕತೆಯ ನಾಲ್ಕನೆಯ ಗುರುತು. ಜ್ಞಾನವು ಸಂಸ್ಕೃತಿಯ ಲಕ್ಷಣ, ವಿಜ್ಞಾನವು ನಾಗರಿಕತೆಯನ್ನು ಸೂಚಿಸುತ್ತದೆ. ನಾಗರಿಕತೆಯಲ್ಲಿ ಜನ ಸಮ್ಮರ್ದ, ಪರದೇಶ ಸಂಪರ್ಕ, ವ್ಯಾಪಾರಗಳಿಂದ ಪ್ರತಿಭೆಗೆ ಉತ್ತೇಜನ ಉಂಟಾದರೂ, ಈ ನೂತನ ವಿಷಯಗಳ ಗುಣಾವಗುಣ ಪರಿಶೀಲನೆಯು ಸಂಸ್ಕಾರದಿಂದಾಗಬೇಕು. ಆದುದರಿಂದ ನಾಗರಿಕತೆಯು ಜಾತಿವಿಶಿಷ್ಟವಲ್ಲ, ಪ್ರಪಂಚದ ಅನೇಕ ಜನಾಂಗಗಳಲ್ಲಿ ವಿವಿಧವಾದ ನಾಗರಿಕತೆಗಳು ಹುಟ್ಟಿವೆ. ಒಂದು ಜನಾಂಗವು ಮತ್ತೊಂದು ಜನಾಂಗದ ನಾಗರಿಕತೆಯನ್ನು ಅನುಕರಿಸಲು ಸಾಧ್ಯ. ಆದರೆ ಸಂಸ್ಕೃತಿಯನ್ನು ಮಾತ್ರ ಅನುಕರಿಸಲಾಗದು. ಆದುದರಿಂದ

ನಾಗರಿಕತೆಯಲ್ಲಿ ಒಂದು ಸಮಷ್ಟಿರೂಪವಿದೆಯೆಂದು ಹೇಳಿದರೂ ಒಂದೊಂದು ಸಂಸ್ಕೃತಿಯಲ್ಲಿಯೂ ವೈಶಿಷ್ಟ್ಯವಿದೆ. ಚೀಣ ಸಂಸ್ಕೃತಿಯಲ್ಲಿ ನೀತಿ, ಭಾರತೀಯ ಸಂಸ್ಕೃತಿಯಲ್ಲಿ ಆಧ್ಯಾತ್ಮಿಕ ವಿವೇಚನೆ, ಮೆಸೊಪೊಟೇಮಿಯ ಸಂಸ್ಕೃತಿಗಳಲ್ಲಿ ಕೈಗಾರಿಕೆ ಮತ್ತು ವ್ಯಾಪಾರಗಳು, ಈಜಿಪ್ಟಿನಲ್ಲಿ ಸಾಮ್ರಾಜ್ಯ ತತ್ವ, ಗ್ರೀಕರಲ್ಲಿ ಕಲಾ ಮತ್ತು ಸ್ವಾತಂತ್ರ್ಯಾಕಾಂಕ್ಷೆ, ರೋಮನ್ ಸಂಸ್ಕೃತಿಯಲ್ಲಿ ಕಟ್ಟಳೆ, ಕಾನೂನು, ಅರಬ್ ಸಂಸ್ಕೃತಿಯಲ್ಲಿ ಮತಾಭಿಮಾನ, ಮಧ್ಯಯುಗದ ಯೂರೋಪ್ ಸಂಸ್ಕೃತಿಯಲ್ಲಿ ಸಾಮಾಜಿಕ ಮತ್ತು ನೈತಿಕ ವ್ಯವಸ್ಥೆ, ಆಧುನಿಕ ಯೂರೋಪ್ ಸಂಸ್ಕೃತಿಯಲ್ಲಿ ಅರ್ಥಿಕಾಭಿಲಾಷೆ—ಇವು ಪ್ರಧಾನಾಂಶಗಳು. ಈ ಒಂದೊಂದು ಸಂಸ್ಕೃತಿಯಲ್ಲೂ ಒಂದಂಶವೇ ಮುಖ್ಯವಾದುದಕ್ಕೆ ದೇಶ, ಕಾಲ, ಚಾರಿತ್ರಿಕ ಸನ್ನಿವೇಶಗಳೇ ಅಲ್ಲದೆ ಆತ್ಮಗುಣಗಳೂ ಕಾರಣವೆನ್ನಬಹುದು. ಪ್ರಪಂಚದ ನಾಗರಿಕತೆಗಳನ್ನೆಲ್ಲಾ ಸಿಂಹಾವಲೋಕನ ಮಾಡಿದರೆ ನಾಗರಿಕತೆಯ ಅಂಶಗಳಲ್ಲಿ ಒಂದೊಂದು ದೇಶವೂ, ಜನಾಂಗವೂ ತನ್ನ ಉಪಕಾರಮಾಡಿದೆ. ಈಜಿಪ್ಟ್ ಮತ್ತು ಏಷ್ಯಾಖಂಡಗಳಲ್ಲಿ ಭೂವ್ಯವಸಾಯ, ನೀರಾವರಿ ಕೆಲಸ, ಕೈಗಾರಿಕೆ, ರಸ್ತೆಗಳು ಮತ್ತು ಸಂಚಾರಸಾಧನಗಳು, ಗೃಹನಿರ್ಮಾಣಕ್ಕೆ ಇಟ್ಟಿಗೆ ಮುಂತಾದವು, ಕುಲಾಲನ ಚಕ್ರ, ಗಾಜು, ರೇಷ್ಮೆ, ಉಣ್ಣೆ, ಹತ್ತಿ, ಮದ್ದು, ನಾಣ್ಯಗಳ ಚಲಾವಣೆ, ಉತ್ತರಮುಖಿ ಮುಂತಾದ ಯಂತ್ರಗಳು ಕಂಡುಹಿಡಿಯಲ್ಪಟ್ಟವು. ರಾಜಕೀಯ ವ್ಯವಸ್ಥೆಯಲ್ಲಿ ಕುಟುಂಬ, ಕುಲ, ಗೋತ್ರ, ಜಾತಿ, ವರ್ಣಾಶ್ರಮ ವ್ಯವಸ್ಥೆ, ಗ್ರಾಮನಿರ್ಮಾಣ, ನಗರಗಳು, ನ್ಯಾಯವ್ಯವಸ್ಥೆ, ಅಂಚೆ, ಸೈನಿಕ ಪದ್ಧತಿ, ಜನಗಣನೆ ಮುಂತಾದುವು ಈಜಿಪ್ಟ್ ಮತ್ತು ಏಷ್ಯಾಖಂಡಗಳಲ್ಲಿ ಹುಟ್ಟಿದವು. ನೈತಿಕವಿಷಯದಲ್ಲೂ ಧರ್ಮಾಧರ್ಮನಿರ್ಣಯ, ನಡತೆ, ವಿವಾಹನಿಯಮ, ಭೂತದಯಾ, ದಾನ, ಸರ್ವಮಾನವಸೋದರಭಾವ ಇವು ಏಷ್ಯಾಖಂಡದಲ್ಲಿಯೇ ಮೊದಲು ಕಂಡುಬರುವುವು. ಆಧ್ಯಾತ್ಮಿಕ ವಿಷಯಗಳಲ್ಲಿ ಈಶ್ವರನಲ್ಲಿ ನಂಬಿಕೆ, ಭಕ್ತಿ; ವಿಹಿತಕರ್ಮಾವಶ್ಯಕತೆ, ಪುನರ್ಜನ್ಮ ಮುಂತಾದುವು ಏಷ್ಯಾಖಂಡದಲ್ಲಿಯೇ ಜನಿಸಿದವು. ವಿಜ್ಞಾನದಲ್ಲಿ ಪ್ರಮಾಣ ಪೂರ್ವಕ ಪರೀಕ್ಷೆ, ಸಂಖ್ಯಾಶಾಸ್ತ್ರ, ಜ್ಯಾಮಿತಿ, ವೈದ್ಯ, ಜ್ಯೋತಿಷ ಮುಂತಾದವು ಏಷ್ಯಾಖಂಡದಲ್ಲಿಯೇ ಹುಟ್ಟಿದವು. ಸೌಂದರ್ಯ, ಸತ್ಯ, ಆನಂದ, ಕರ್ಮ, ಸ್ವಾತಂತ್ರ್ಯಾಸ್ವಾತಂತ್ರ್ಯ, ತರ್ಕ, ತತ್ವನಿರ್ಣಯ, ಪಾರಲೌಕಿಕ ಮತ್ತು ಮಾನಸಿಕ ಸ್ವರೂಪವಿವೇಚನೆ ಈ ವಿಷಯಗಳಿಗೂ ಏಷ್ಯಾಖಂಡವೇ ತೌರುಮನೆ. ಭಾಷೆ, ವಿದ್ಯಾಭ್ಯಾಸ, ಲೇಖನ, ಲಿಪಿ, ಕಾವ್ಯನಾಟಕಾಲಂಕಾರ,

ಚರಿತ್ರೆ, ಮುದ್ರಣ, ವ್ಯಾಕರಣ, ನಿಘಂಟುರಚನೆ, ವಿಶ್ವವಿದ್ಯಾನಿಲಯಗಳು, ಪ್ರಾಚೀನಾವಶೇಷ ಸಂಶೋಧನೆ, ಕತೆ, ಕಾದಂಬರಿ ಇವುಗಳೆಲ್ಲಕ್ಕೂ ಏಷ್ಯಾಖಂಡವೇ ಮೂಲ. ಹೀಗೆಯೇ ಕಲೆಯಲ್ಲಿಯೂ, ರೂಪ, ವಿನ್ಯಾಸಗಳು, ಅಲಂಕರಣ ಸಾಮಗ್ರಿಗಳು, ವಾಸ್ತುಶಿಲ್ಪದ ಕಮಾನು, ಗೋಪುರ, ಶಿಖರ, ಸಂಗೀತ, ಕೆತ್ತನೆಕೆಲಸ, ಇತ್ಯಾದಿಗಳೆಲ್ಲವೂ ಏಷ್ಯಾಖಂಡದಲ್ಲಿಯೇ ಹುಟ್ಟಿದವು. ಈ ಏಷ್ಯಾಖಂಡದ ಸಂಸ್ಕೃತಿಯು ಕ್ರೀಟ್ ಮಾರ್ಗವಾಗಿ ಗ್ರೀಸ್ ದೇಶಕ್ಕೆ ಹೋಗಿ ಬೆಳೆದು ಅನಂತರ ರೋಮನ್ ಸಾಮ್ರಾಜ್ಯದಲ್ಲಿ ಹರಡಿ ಆಧುನಿಕ ಯೂರೋಪ್ ಸಂಸ್ಕೃತಿಗೆ ಕಾರಣವಾಯಿತು.

**ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯ:** ಭಾರತೀಯ ಸಂಸ್ಕೃತಿಯು ಭರತಖಂಡದಂತೆಯೇ ಅಖಂಡ ಮತ್ತು ಅನಾದಿ. ಕಾಶ್ಮೀರದಿಂದ ಕನ್ಯಾಕುಮಾರಿ ವರೆಗೂ, ವಿಶ್ವೇಶ್ವರನಿಂದ ರಾಮೇಶ್ವರನ ವರೆಗೂ, ಬಿಂದುಮಾಧವನಿಂದ ಸೇತುಮಾಧವನ ವರೆಗೂ ಹೇಗೆ ಭರತಖಂಡವು ಅಪರಿಚ್ಛಿನ್ನವೋ ಹಾಗೆಯೇ ವೇದಋಷಿಗಳಿಂದ ರಾಮಕೃಷ್ಣ ಪರಮಹಂಸ, ಮಹಾತ್ಮಾ ಗಾಂಧಿಗಳ ವರೆಗೂ ಅಖಂಡ. ವಿದೇಶೀಯ ಜನಾಂಗಗಳೂ ಸಂಸ್ಕೃತಿಗಳೂ ಭರತಖಂಡದಲ್ಲಿ ಕೆಲವು ಪ್ರಾಂತಗಳಲ್ಲಿ ತಮ್ಮ ಪ್ರಭಾವವನ್ನು ತೋರಿಸಿದ್ದರೂ ಪ್ರಾಚೀನ ಸಂಸ್ಕೃತಿಯು ಅವುಗಳನ್ನು ಜೀರ್ಣಮಾಡಿಕೊಂಡು, ತನ್ನ ರೂಪವನ್ನಿತ್ತು, ತನ್ನ ಅಂಗವಾಗಿ ಮಾಡಿಕೊಂಡಿದೆ. ಇದಕ್ಕೆ ಮುಖ್ಯ ಕಾರಣ ಭಾರತೀಯರ ಆಧ್ಯಾತ್ಮಿಕದೃಷ್ಟಿ. ಇದು ಕೇವಲ ಪರಮತಸಹಿಷ್ಣುತೆಯಲ್ಲ, ಕೇವಲ ಸಹಿಷ್ಣುತೆಯು ಔದಾಸೀನ್ಯದಲ್ಲಿ ಪರಿಣಮಿಸಬಹುದು. ಆದುದರಿಂದ ಸಹನೆಯೊಡನೆ ಸಹಕಾರವೂ ಅವಶ್ಯಕ. ಈ ಸಹಕಾರವು ಉಪಾದಾನ ನಿಮಿತ್ತಗಳನ್ನಾಶ್ರಯಿಸಿರುವದರಿಂದ ಗುಣಾವಗುಣ ವಿಮರ್ಶೆ ಮತ್ತು ಗ್ರಹಣಕ್ರಮದಲ್ಲಿ ಒಂದು ನಿಯತವಾದ ಧರ್ಮವಿರುವದೇ ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯ. ಅರ್ಥ-ಅನರ್ಥ ವಿವೇಚನೆಗೆ ಮೂಲವು ಅತೀಂದ್ರಿಯ ವಿಷಯ ನಿರ್ಣಾಯಕವಾದ ವೇದಜನ್ಯಜ್ಞಾನ. ಚಾರಿತ್ರಿಕ ದೃಷ್ಟಿಯಿಂದ ವೇದಬಾಹ್ಯಗಳೆಂದು ವ್ಯವಹರಿಸುವ ಬೌದ್ಧ ಜೈನ ಮುಂತಾದ ಮತಗಳೂ ಭಾರತೀಯ ಸಂಸ್ಕೃತಿಯ ಸೂಚಕಗಳೇ ಆದರೂ ಅವುಗಳಲ್ಲಿಯೂ ಮುಖ್ಯ ತತ್ತ್ವಗಳಾದ ಕರ್ಮ, ಜ್ಞಾನ, ಭಕ್ತಿ, ಪುನರ್ಜನ್ಮ ಮುಂತಾದವು ವೇದ ಜ್ಞಾನಸಜನ್ಯವೆಂದೇ ನಿರ್ಧರಿಸಿದೆ.

ಭಾರತೀಯ ಸಂಸ್ಕೃತಿಯಲ್ಲಿ ವ್ಯಕ್ತಿಯ ಸ್ವಾತಂತ್ರ್ಯಕ್ಕೆ ಪ್ರಾಧಾನ್ಯವಿದೆ. ವ್ಯಕ್ತಿಗೂ ಈಶ್ವರ ಮತ್ತು ಜಡಪ್ರಪಂಚಗಳಿಗೂ ಇರತಕ್ಕ ಸಂಬಂಧ

ವಿಷಯಕವಾಗಿ ಭಾರತೀಯ ದರ್ಶನಗಳಲ್ಲಿ ಭಿನ್ನಾಭಿಪ್ರಾಯಗಳು ಕಂಡು ಬಂದರೂ ಪ್ರತಿ ವ್ಯಕ್ತಿಯೂ ತನ್ನ ನೈಜವಾದ ಸ್ವಭಾವಾನುಸಾರ ಯಥಾ ಯೋಗ್ಯವಾಗಿ ಸ್ವತಂತ್ರವೆಂದು ಸರ್ವರಿಂದಲೂ ಅಂಗೀಕರಿಸಲ್ಪಟ್ಟಿರುವದ ರಿಂದ ಸಮಾಜದ ನಿರಂಕುಶಾಧಿಕಾರಕ್ಕೆ ಭಾರತೀಯ ಸಂಸ್ಕೃತಿಯಲ್ಲಿ ಅವಕಾಶವಿಲ್ಲ. ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಲ್ಲಿ ಅಧಿಕಾರ, ಉಪಾಸನಾ, ಗುಣ, ಫಲಗಳಿಗನುಸಾರವಾಗಿ ವ್ಯಕ್ತಿಗೆ ಕರ್ಮವನ್ನು ಮಾಡಲೂ ಬಿಡಲೂ ಅನ್ಯಥಾ ಮಾಡಲೂ ಸ್ವಾತಂತ್ರ್ಯ ವಿದೆ. ಇದೇ ಕರ್ಮ ಮತ್ತು ಪುನರ್ಜನ್ಮಗಳ ರಹಸ್ಯತತ್ತ್ವ.

ಭಾರತೀಯ ಸಂಸ್ಕೃತಿಯಲ್ಲಿ ಆಧ್ಯಾತ್ಮಿಕ ವಿವೇಚನೆಗೆ ಅಧಿಕ ಪ್ರಾಶಸ್ತ್ಯ ವಿದ್ದರೂ ಧರ್ಮಾವಿರುದ್ಧವಾದ ಕಾಮ, ಕರ್ಮಾಚರಣೆ, ಅರ್ಥಸಂಪಾದನೆ, ಪ್ರಾಪಂಚಿಕಸುಖ ಇವುಗಳೂ ಕೂಡ ವ್ಯಕ್ತಿಯ ಸಂಪೂರ್ಣ ವಿಕಾಸಕ್ಕೆ ಅವಶ್ಯಕವೆಂದು ನಿರ್ಣಯಿಸಿರುವದರಿಂದ ಭಾರತೀಯರು ಕೇವಲ ಆಮುಷ್ಮಿಕ ದೃಷ್ಟಿಯುಳ್ಳವರೆಂಬ ಆಪಾದನೆಯು ನಿರಾಧಾರವಾದುದು. ಭರತಖಂಡದಲ್ಲಿ ಆಧ್ಯಾತ್ಮಿಕ ಶಾಸ್ತ್ರಗಳೆಷ್ಟು ಬೆಳೆದಿವೆಯೋ ಲೋಕಸಂಗ್ರಹಕ್ಕಾಗಿ ಅಷ್ಟೇ ಐಹಿಕವಿಷಯಕವಾದ ಶಾಸ್ತ್ರಗಳೂ ಇರುವದರಿಂದ ಭಾರತೀಯ ಸಂಸ್ಕೃತಿಯು ಇತರ ಸಂಸ್ಕೃತಿಗಳಂತೆ ಅಪೂರ್ಣವಾಗಿಲ್ಲದೆ ಸರ್ವಾಂಗಸುಂದರವಾಗಿದೆ.

ಇತರ ಪ್ರಾಚೀನ ಸಂಸ್ಕೃತಿಗಳಲ್ಲಿ ಒಂದೊಂದು ಅಂಶವೇ ಅಧಿಕವಾಗಿ ಬೆಳೆದುದರಿಂದ ಅವು ಸಮತುಲನೆ ಇಲ್ಲದೆ ಕಾಲಕ್ರಮದಲ್ಲಿ ನಾಶವಾದವು; ಇಲ್ಲವೇ ಮುಂದಿನ ಬೆಳವಣಿಗೆಗೆ ಅವಕಾಶವಿಲ್ಲದಂತೆ ನಿರ್ಜೀವವಾದುವು. ಭಾರತೀಯ ಸಂಸ್ಕೃತಿಯು ಮಾತ್ರ ಇಂದಿಗೂ ಸಜೀವವಾಗಿ ವಿಶ್ವವ್ಯಾಪ್ತಿ ಯನ್ನು ಪಡೆಯುತ್ತಿರುವದಕ್ಕೆ ಮುಖ್ಯವಾಗಿ ಆಧ್ಯಾತ್ಮಿಕದೃಷ್ಟಿಯೇ ಕಾರಣ. ಭಾರತೀಯರ ಆಹಾರ, ವ್ಯವಹಾರ, ತತ್ತ್ವವಿವೇಚನೆ, ಸತ್ಯಸೌಂದರ್ಯ ಸೌಗುಣ್ಯಗಳ ಅನ್ವೇಷಣೆ, ಕಲೆ ಇತ್ಯಾದಿ ಅಂಶಗಳೆಲ್ಲೆಲ್ಲದರಲ್ಲಿಯೂ ಈ ದೃಷ್ಟಿಯು ಅನುಸ್ಯೂತವಾಗಿರುವದರಿಂದ ಭಾರತೀಯ ಸಂಸ್ಕೃತಿಯ ಪ್ರತಿ ಒಂದು ಅಂಶಕ್ಕೂ ಒಂದು ವೈಶಿಷ್ಟ್ಯವು ಬಂದಿದೆ. ಹೀಗೆ ವ್ಯಷ್ಟಿ-ಸಮಷ್ಟಿ ದೃಷ್ಟಿಯಿಂದ ಈ ಸಂಸ್ಕೃತಿಯಲ್ಲಿ ವಿಶ್ವಸಾಮಾನ್ಯ ಧರ್ಮಗಳೇ ಅಲ್ಲದೆ ವಿಶಿಷ್ಟ ಧರ್ಮಗಳೂ ಸೇರಿರುವದರಿಂದ ಭಾರತೀಯ ಸಂಸ್ಕೃತಿಯು ಆತ್ಮ ವಸ್ತುವಿನಂತೆ ಅನಾದಿ ಮತ್ತು ಅನಂತ.

ಎಲ್ಲಕ್ಕಿಂತಲೂ ಮಿಗಿಲಾದುದು ಭಾರತೀಯ ಸಂಸ್ಕೃತಿಯಲ್ಲಿ ಕಂಡು ಬರುವ ಅದ್ವೈತಭಾವ. ಭೇದಭಾವದಿಂದ ಭಯವು ಉತ್ಪನ್ನವಾಗುವದು,

ಭಯದಿಂದ ಸ್ವ-ಸ್ವಾಮಿಭಾವ, ತಾರತಮ್ಯಭಾವನೆ, ನೈಚ್ಯಾನುಸಂಧಾನಗಳು ಹುಟ್ಟುವವು. ಇತರ ಮತಗಳೂ ಸಂಸ್ಕೃತಿಗಳೂ ಭೇದವು ನಿತ್ಯವೆಂದೂ, ಸ್ವಭಾವಸಿದ್ಧವೆಂದೂ, ಈಗಿರುವ ಸ್ಥಿತಿಯನ್ನು ಮನುಷ್ಯಪ್ರಯತ್ನದಿಂದ ಬದಲಾಯಿಸಲು ಸಾಧ್ಯವಲ್ಲವೆಂದೂ ಪ್ರತಿಪಾದಿಸುವುದರಿಂದ ಆಧ್ಯಾತ್ಮಿಕ ವಿಷಯದಲ್ಲಿ ಸ್ವಾತಂತ್ರ್ಯವಿಲ್ಲ, ರಾಜಕೀಯ ವ್ಯವಹಾರದಲ್ಲಿ ಪಾರತಂತ್ರ್ಯವೇ ಗತಿ, ಸಮಾಜದಲ್ಲಿ ಉಚ್ಚನೀಚ ವ್ಯವಸ್ಥೆಯು ಶಾಶ್ವತವಾದುದರಿಂದ ಸಮಾಜ ಸುಧಾರಣೆಯು ಭ್ರಾಂತಿ ಮತ್ತು ದುಸ್ಸಾಧ್ಯ, ಆರ್ಥಿಕ ಪ್ರಪಂಚದಲ್ಲಿ ಸಮತಾವಾದವು ಸಾಧ್ಯವಲ್ಲ—ಎಂದು ನಿಶ್ಚಯಿಸಿ, ಇದ್ದಷ್ಟರಲ್ಲಿಯೇ ತೃಪ್ತರಾಗಿರಬೇಕೆಂದು ಬೋಧಿಸುವವು. ಈ ತತ್ವಗಳು ಮನುಷ್ಯನ ಪ್ರಗತಿಗೆ ಪ್ರತಿಬಂಧಕಗಳೆಂದೆಣಿಸಿ ಇವನ್ನು ಪ್ರತಿಭಟಿಸಿ ಆಧುನಿಕ ಪ್ರಪಂಚದಲ್ಲಿ ಕೆಲವರು ಕೇವಲ ಆರ್ಥಿಕ ದೃಷ್ಟಿಯಿಂದಲೇ ಸಮತಾವಾದವನ್ನು ಹೂಡಿ ಮಾನವನ ಚರಿತ್ರೆಯೆಲ್ಲವೂ ವರ್ಗವೈಷಮ್ಯವನ್ನೇ (Class Conflict) ಸೂಚಿಸುವದೆಂದು ನಿರ್ಣಯಿಸಿ ಪ್ರಪಂಚದಲ್ಲಿ ಯುದ್ಧ ಕ್ಷಾಮ ಮುಂತಾದ ಅನರ್ಥಗಳಿಗೆ ಕಾರಣರಾದರು. ಮತ, ಸಂಸ್ಕೃತಿ ಮುಂತಾದುವು ಈ ದೃಷ್ಟಿಯಿಂದ ಮೋಹಕಶಾಸ್ತ್ರಗಳು. ಈ ಉಭಯಸಂಕಟದಿಂದ ತಪ್ಪಿಸಿಕೊಳ್ಳಲು ಯಾವ ತಾರತಮ್ಯಬೋಧಕವಾದ ಶಾಸ್ತ್ರವೂ ಸಹಾಯವಾಗಲಾರದು. ಆಧುನಿಕ ಪ್ರಪಂಚದಲ್ಲಿ ವೈಜ್ಞಾನಿಕದೃಷ್ಟಿಯು ಪ್ರಬಲವಾಗುತ್ತಿರುವದರಿಂದ ವಿಚಾರಣೆಗೆ ನಿಲ್ಲದ ಯಾವ ವಿಧವಾದ ದ್ವೈತಮತವೂ ಶಾಂತಿಸುಖಗಳನ್ನುಂಟು ಮಾಡಲಾರದು. ಕೆಲವು ಮತಗಳಲ್ಲಿ ಈಶ್ವರನ ಪಿತೃತ್ವ ಮಾನವರ ಸಹೋದರತ್ವ ಭಾವಗಳು ಕಂಡುಬಂದರೂ ಈ ಸಹೋದರಭಾವವು ಆಯಾ ಮಾತಾನುಯಾಯಿಗಳಿಗೆ ಮಾತ್ರ ಅನ್ವಯಿಸುವದೆಂದೂ, ಅವರಿಗೆ ಮಾತ್ರ ಮುಕ್ತಿ ಎಂದೂ, ಇತರರು ನಿತ್ಯಸಂಸಾರಿಗಳು ನಿತ್ಯನಾರಕಿಗಳೆಂದು ನಿಶ್ಚಯಿಸಿರುವದರಿಂದ ಯಾವ ವಿಧವಾದ ದ್ವೈತಮತವೂ ವಿಶ್ವವ್ಯಾಪ್ತಿಯಾಗಲಾರದು. ಹೀಗೆಯೇ ಕೇವಲ ನೈರಾತ್ಮ್ಯವನ್ನು ಬೋಧಿಸುವ ಮತವಾಗಲೀ, ವಿಜ್ಞಾನವಾಗಲೀ, ವಿಶ್ವಶಾಂತಿಯನ್ನುಂಟುಮಾಡಲಾರದು. ಆದುದರಿಂದ ಭಯಜನ್ಯವಾದ ಭೇದದ ನಿವಾರಣೆಗಾಗಿ ಆತ್ಮಾದ್ವೈತಭಾವವೇ ದಿವ್ಯಸಾಧನೆ ಎಂಬುದು ತರ್ಕ, ಅನುಭವ ಮತ್ತು ಶಾಸ್ತ್ರಸಮ್ಮತವು. ಇಂತು ಲೌಕಿಕರ ಚಕ್ಷುಗಳನ್ನು ಜ್ಞಾನಾಂಜನಶಲಾಕೆಯಿಂದ ಉನ್ಮೀಲಿಸಿ ಅದ್ವೈತದೃಷ್ಟಿಯನ್ನು ಪ್ರಸಾದಿಸಿ ಮಹದುಪಕಾರಮಾಡಿರುವದೇ ಭಾರತೀಯ ಸಂಸ್ಕೃತಿಯ ವಿಶೇಷ ಲಕ್ಷಣ.

# ೨. ಭರತಖಂಡ—ಭೌತಿಕಲಕ್ಷಣ

ಮಯ್ಯಾಧ್ಯಕ್ಷೇಣಪ್ರಕೃತಿಃಸೂಯತೇ ಸಚರಾಚರಮ್ ||—ಗೀತಾ.

ಸಂಸ್ಕೃತಿಯ ವಿಕಾಸಕ್ಕೆ ಆರ್ಥಿಕಸ್ಥಿತಿಯು ಒಂದು ಮುಖ್ಯಸಾಧನ. ಆರ್ಥಿಕಸ್ಥಿತಿಯು ಭೌತಿಕಸ್ವರೂಪವನ್ನ ನುಸರಿಸಿರುವದರಿಂದಲೂ ಮತ್ತು ಭೂಗುಣಗಳು ಮಾನವನ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಸಂಸ್ಥೆಗಳ ಮೇಲೆ ತಮ್ಮ ಪ್ರಭಾವವನ್ನು ತೋರಿಸುವುದರಿಂದಲೂ ಭರತ ಖಂಡದ ಭೌತಿಕರೂಪವನ್ನು ವಿಮರ್ಶಿಸಿದ ಹೊರತು ಸಂಸ್ಕೃತಿಯ ಲಕ್ಷಣ ವನ್ನೂ ಚರಿತ್ರೆಯನ್ನೂ ತಿಳಿಯಲಾಗುವದಿಲ್ಲ.

**ಜಂಬೂದ್ವೀಪ, ಭರತವರ್ಷ, ಭರತಖಂಡ:** ಪುರಾಣಗಳಲ್ಲಿ ಭೂಮಂಡಲವರ್ಣನೆ ಮಾಡುವಾಗ ಜಂಬೂದ್ವೀಪವನ್ನು ಸಾಗರವು ಸುತ್ತು ಗಟ್ಟಿದೆಯೆಂದೂ, ಗಂಗಾಮೂಲದಿಂದ ಕುಮಾರಿ ವರೆಗೂ ವಿಸ್ತರಿಸಿದೆ ಎಂದೂ ಹೇಳಿದೆ.[1] ಅಶೋಕನು ತನ್ನ ಧರ್ಮವನ್ನು ಜಂಬೂದ್ವೀಪದಲ್ಲೆಲ್ಲ ಪ್ರಚಾರ ಮಾಡಿದನೆಂದು ತನ್ನ ಶಾಸನಗಳಲ್ಲಿ ಹೇಳಿಕೊಂಡಿರುವದರಿಂದ ಕೇವಲ ಭರತ ಖಂಡವೇ ಅಲ್ಲದೆ ಈಜಿಪ್ಟ್, ಕೈರಿನೆ, ಮೆಸೊಪೊಟೇಮಿಯ, ಸಿರಿಯ, ಕಾರಿಂತ್ ದೇಶಗಳ ವರೆಗೂ ಜಂಬೂದ್ವೀಪವು ವಿಸ್ತರಿಸಿದ್ದಿತೆಂದು, ಸ್ಥೂಲವಾಗಿ ಈಗ "ದಕ್ಷಿಣ ಏಷ್ಯಾ" ಎಂಬುದಾಗಿ ವ್ಯವಹರಿಸಲ್ಪಡುವ ಭೂಭಾಗಕ್ಕೆ ಜಂಬೂ

---

[1] ಮಹಾಭಾರತ—ಭೀ.ಪ. ೫-೯; ಭಾಗವತ V, ೧೬-೨೦; ಬೃಹನ್ನಾರದೀಯ III; ಪಾದ್ಮ I, ೩-೯; ವಾಯು ೩೪-೫೦; ವಿಷ್ಣು II, ೨-೭; ಮತ್ಸ್ಯ ೧೨೧: ಕೂರ್ಮ I, ೪೪-೪೯; ಮಾರ್ಕಣ್ಡೇಯ ೪೯-೫೭; ವರಾಹ ೭೪-೮೯; ಬ್ರಾಹ್ಮ ೧೮-೨೭; ದೇ.ಭಾ. VIII, ४-೧३; ಲಿಂಗ ४೬-೫३; ಗರುಡ ೫४-೫೭; ಶಿವ. ಉಮಾ ೧೭-೧೮.

ಅಯಂತುನವಮಸ್ತೇಷಾಂ ದ್ವೀಪಸ್ಸಾಗರ ಸಂವೃತಃ |
ಯೋಜನಾನಾಂಸಹಸ್ರಂತು ದ್ವೀಪೋಽಯಂ ದಕ್ಷಿಣೋತ್ತರಃ ||
ಆಯತಸ್ತು ಕುಮಾರೀತಃ ಗಂಗಾಯಾಃ ಪ್ರವಹಾವಧಿಃ |
ತಿರ್ಯಗೂರ್ಧ್ವಂತು ವಿಸ್ತೀರ್ಣಃಸಹಸ್ರಾಣಿ ದಶೈವತು |
ದ್ವೀಪೋಹ್ಯುಪನಿವಿಷ್ಟೋಽಯಂಮ್ಲೇಚ್ಛೈರಂತೇ ತುಸರ್ವತಃ ||

ಮತ್ಸ್ಯ, ೧೧೪.

ದ್ವೀಪವೆಂಬ ಹೆಸರಿದ್ದಿತೆಂದೂ ನಿರ್ಧರಿಸಬಹುದು. ಇದರಲ್ಲಿ ಭರತವರ್ಷ ಅಥವಾ ಅಜನಾಭವರ್ಷವು ಆಕ್ಸಸ್ ನದಿ ಮತ್ತು ಪಾಮಿರ್-ಹಿಂದೂಕುಷ್ ಪರ್ವತಗಳಿಂದ ಕನ್ಯಾಕುಮಾರಿ ವರೆಗೂ ವಿಸ್ತರಿಸಿದ್ದಿತು. ಮಹಾವಿಷ್ಣುವಿನ ಅವತಾರ



ಜಂಬೂ ದ್ವೀಪ - ಭರತ ವರ್ಷ - ಭರತ ಖಂಡ

ವಾದ ಋಷಭನಿಗೂ ಜಯನ್ತಿಗೂ ಹುಟ್ಟಿದ ಭರತನು ಅಜನಾಭವರ್ಷವನ್ನು ಆಳಿ ಭರತವರ್ಷ ಎಂಬ ಹೆಸರನ್ನು ಕೊಟ್ಟನು. ದುಷ್ಯನ್ತ-ಶಕುನ್ತಲಾ ಪುತ್ರನಾದ ಭರತನು ಸರ್ವದಮನನೆಂಬ ಬಿರುದನ್ನು ಹೊಂದಿ ಆಳಿದುದರಿಂದಲೂ ಭರತ ಖಂಡವೆಂಬ ಹೆಸರಾಯಿತು. ದಶರಥಪುತ್ರನಾದ ಭರತನೂ, ಭರತಋಷಿಯೂ ಪ್ರಸಿದ್ಧರು. ವೇದಯುಗದಲ್ಲಿ " ಭರತ " ಎಂಬ ಜನಾಂಗವೂ ಪರುಷ್ಣಿ (Ravi) ವಿಪಾಶಾ (Beas) ಪ್ರಾಂತ್ಯದಲ್ಲಿದ್ದಿತೆಂದು ತಿಳಿದುಬರುವದು. ಜೈನಪುರಾಣಗಳಲ್ಲಿ ಋಷಭತೀರ್ಥಂಕರನ ಮಗನಾದ ಭರತನು ಆಳಿದ ದೇಶಕ್ಕೆ ಭರತಖಂಡವೆಂಬ ಹೆಸರು ಬಂದಿತೆಂದು ಹೇಳಿದೆ. ಖಾರವೇಲನ ಹಾತಿಗುಂಫಾ ಶಾಸನದಲ್ಲಿ " ಭರಥವಸ "ದ ಉಲ್ಲೇಖವಿದೆ. ಹಿಂದೆ ಪ್ರಿಯವ್ರತನ ಮೊಮ್ಮಗನೂ

ಅಗ್ನೀಧ್ರನ ಮಗನೂ ಆದ ಅಜನಾಭನು ಆಳಿದುದರಿಂದ ಅಜನಾಭವರ್ಷವೆಂಬ ಹೆಸರಾಯಿತೆಂದು ಪುರಾಣಗಳು ಹೇಳುವವು.[2]

ಕೌಟಿಲ್ಯನು[3] ಹಿಮವತ್ಪರ್ವತದಿಂದ ಕುಮಾರಿ ವರೆಗೂ ಇರುವ ದೇಶವನ್ನು "ಚಕ್ರವರ್ತಿ ಕ್ಷೇತ್ರ"ವೆಂದು ಹೇಳುವನು. ಪುರಾಣಗಳೂ ಕೂಡ ಕಾಶ್ಮೀರ ಕೈಲಾಸಗಳಿಂದ ಕನ್ಯಾಕುಮಾರಿ ವರೆಗೂ ವ್ಯಾಪಿಸಿರುವ ಅಖಂಡವಾದ ಭೂಭಾಗವನ್ನು ಭರತಖಂಡವೆಂದು ಹೇಳುವವು.[4] ಇದು ಪವಿತ್ರಭೂಮಿ ಎಂದೂ ಇಲ್ಲಿನ ಧರ್ಮ, ಭಾಷೆ ಮತ್ತು ಸಂಸ್ಕೃತಿಯೂ ಅಖಂಡವೆಂದೇ ಪ್ರಾಚೀನರ ಸಿದ್ಧಾಂತ.[5] ಇಂತಹ ಪವಿತ್ರ ಭೂಮಿಯಲ್ಲಿ ಜನ್ಮವೆತ್ತಬೇಕಾದರೆ ಪುರಾಕೃತ ಪುಣ್ಯವಿರಬೇಕೆಂದು ಹೇಳಿದೆ. ಹೀಗೆ "ಭರತ" ಎಂಬ ಅರ್ಥ ಭರಿತವಾದ ನಾಮಧೇಯದಿಂದ ಭಾರತೀದೇವಿಯ ವೇದವಿದ್ಯೆಯೂ, ಭರತ ಮುನಿಯ ಲಲಿತಕಲೆಯೂ, ಜಡಭರತಋಷಿಯ ಆಧ್ಯಾತ್ಮಿಕ ತತ್ವವೂ, ಭರತ ದೌಷ್ಯಂತಿಯ ಸರ್ವದಮನ ಶಕ್ತಿಯೂ ಸ್ವಾರಾಜ್ಯಪದವಿಯೂ, ಧನಧಾನ್ಯ ಭರಿತವಾದ ಸ್ಥಿತಿಯೂ, ಭರಣಶಕ್ತಿಯೂ ಸೂಚಿಸಲ್ಪಡುವವು. ಈ ಅಖಂಡ ಸ್ವರೂಪವನ್ನು ಭಾರತೀಯರಿಗೆ ಕ್ಷಣಕ್ಷಣಕ್ಕೂ ಜ್ಞಾಪಿಸುವದಕ್ಕಾಗಿ ನಮ್ಮ ಸಂಸ್ಕೃತಿಯಲ್ಲಿ ಭರತಖಂಡದ ಭೌತಿಕರೂಪಕ್ಕೂ ಆಧ್ಯಾತ್ಮಾರ್ಥವನ್ನು ಕೊಟ್ಟಿದೆ. ನಿತ್ಯಕರ್ಮ ಸಂಕಲ್ಪಗಳಲ್ಲಿ ದೇಶಕಾಲ ಸಂಕೀರ್ತನ ಮಾಡು ವಾಗಲೂ, ತೀರ್ಥಕ್ಷೇತ್ರಯಾತ್ರಾದಿಗಳನ್ನು ಮಾಡುವದರಿಂದಲೂ, ಭರತ ಖಂಡದ ಸಮಷ್ಟಿರೂಪವು ಸಾಕ್ಷಾತ್ಕಾರವಾಗುತ್ತದೆ. ತಾಂತ್ರಿಕ ವಿದ್ಯೆಯಲ್ಲಿ ದೇಹವೇ ದೇಶವೆಂದು ಭಾವಿಸಿ ಶಾಸ್ತ್ರಕ್ರಮದಿಂದ ಯೋಗಾಚರಣೆ ಮಾಡು

---

[2] ಲಿಂಗ ೪೭; ಮತ್ಸ್ಯ. ೧೦೦-೧೧೨; ಭಾರತ—ಭೀ.ಪ. ೬; ವಿಷ್ಣು II, ೩. ಭಾಗವತ I, ೧೭; ೫-೫, ಭಾರತ ಆದಿ. ಪ. ೯೫-೧೦೦; ದ್ರೋಣ ೬೮; ಶಾಂತಿ ೨೮; ಭಾಗವತ IX, ೨೦.

[3] ಅರ್ಥಶಾಸ್ತ್ರ I, ೨.

[4] ಮಾರ್ಕಂಡೇಯ ೫೭-೫೯; ವಿಷ್ಣು II, ೩, ೧; ವಾಯು ೪೫-೭೫; ೭೬, ೮೧; ಮತ್ಸ್ಯ ೧೧೪-೧೦ ಭಾಗವತ V, ೧೮-೧೧.

[5] ಪ್ರಸಿದ್ಧಶ್ಚ ಸ್ಥಾಲ್ಯಾಂ ಚರುಶಬ್ದ ಆಹಿಮವತ ಆಚ ಕುಮಾರೀಭ್ಯಃ|

ಶಾಬರಭಾಷ್ಯ X, ೧-೩೫.

ಆಹಿಮವತ ಆಚಕುಮಾರ್ಯಾಃ ಸಿನ್ಧುರ್ವೈತರಣೀ ನದೀ ಸೂರ್ಯಸ್ಯೋದಯನಂಪುರಃ|
ಯಾವದ್ವಾ ಕೃಷ್ಣಮೃಗೋ ವಿಚರತಿ ತತ್ರ ಧರ್ಮಶ್ಚತುಷ್ಪಾದೋ ಭವತಿ||

ಪೈಠೀನಸೀ ಧರ್ಮಸೂತ್ರ,

| ಯುಗ | ಸಂಸ್ಕೃತಿ | ಯೂರೋಪ್ | ಭರತಖಂಡ | ಕಾಲ |
|---|---|---|---|---|
| ಆಧುನಿಕ ಯುಗ | ಕಬ್ಬಿಣ | ಲ-ತೇನೆ<br>ಹಾಲ್ಸಾಟ್ | ಕಬ್ಬಿಣ | |
| | ಕಾಂಸ್ಯ | | ಕಾಂಸ್ಯ | ಕ್ರಿ.ಪೂ. ೨೫೦೦ |
| | ತಾಮ್ರ-ಶಿಲಾ | | ತಾಮ್ರ-ಶಿಲಾ | ಕ್ರಿ.ಪೂ. ೬೦೦೦ |
| | ನವಶಿಲಾ<br><br><br><br>ಕ್ಷುದ್ರ ಶಿಲಾ | ಕಾರ್ನೇಸಿಯನ್<br>ರೋಬೆನ್ ಹೌಸಿಯನ್<br>ಕಾಂಪಿನಿಯನ್<br>ಮಾಗ್ಲಿಪೋಸಿಯನ್<br>ಅಸಿಲಿಯನ್-ಟಾರ್ಡಿ-<br>ನಾಯ್ಸಿಯನ್ | ನವಶಿಲ<br><br><br><br><br>ಕ್ಷುದ್ರಶಿಲಾ | |
| ಚತುರ್ಥ ಯುಗ<br>(ಪ್ಲೀಸ್ಟೋಸೀನ್)<br><br><br><br><br><br><br><br>ಪ್ಲಯೋಸೀನ್ | ಮಹಾ ಶಿಲಾ<br><br>ಪುರಾತನಶಿಲಾ<br><br>ಪ್ರಾಕ್ ಶಿಲಾ | ಮಾಗ್ಡಲೀನಿಯನ್<br>ಸೊಲುಟ್ರಿಯನ್<br>ಅರಿಗ್ನೇಷಿಯನ್<br>ಮೌಸ್ಟೀರಿಯನ್<br>ಅಷೂಲಿಯನ್<br>ಷೆಲಿಯನ್ | ಪುರಾತನ ಶಿಲಾ<br>ಯುಗ ಗ್ಲೇಷಿಯಲ್ IV<br>ಸೋಯನ್ ಅಂತರಗ್ಲೇಷಿಯಲ್ III<br>ಪ್ರಿಸೋ ಅನ್ ಗ್ಲೇಷಿಯಲ್ III<br>ಸಂಸ್ಕೃತಿ ಅಂತರಗ್ಲೇಷಿಯಲ್ II<br>(ಅಬಿವಿಲಿಯೋ ಗ್ಲೇಷಿಯಲ್ II<br>ಅಷೂಲಿಯನ್ ಕರೇವ<br>ಕೈಗೊಡ್ಡಲಿ) ಅಂತರಗ್ಲೇಷಿಯಲ್ I<br>ಇರವಾಡಿ- ಗ್ಲೇಷಿಯಲ್ I<br>ಶಿವಾಲಿಕ್ | <br><br>ಕ್ರಿ.ಪೂ. ೮೦೦೦<br>ಕ್ರಿ.ಪೂ. ೨೦,೦೦೦<br><br><br><br><br><br>ಕ್ರಿ.ಪೂ. ೬೦,೦೦೦ |
| ತೃತೀಯ ಯುಗ<br>(ಟರ್ಷಿಯರಿ)<br>ಕೆನೊಸೋಯಿಕ್ | ಉಷಃಶಿಲಾ<br>ಮೆಯೋಸೀನ್<br>ಆಲಿಗೊಸೀನ್<br>ಇಯೋಸೀನ್ | | ಮರ್ರಿ-ಪೆಗು<br>ದ್ವಾರಕಾ ತೀರ<br>ರಾಣಿಕೋಟ್ ಹಿಮಾಲಯ ಉತ್ಪತ್ತಿ<br>ಡೆಕ್ಕನ್‌ಟ್ರಾಪ್ | |
| ದ್ವಿತೀಯ ಯುಗ<br>(ಮೆಸೊ<br>ಸೋಯಿಕ್) | ಕ್ರಿಟೇಷಿಯಸ್<br>ಜುರಾಸಿಕ್<br>ಟ್ರಿಯಾಸಿಕ್ | | ದಕ್ಷಿಣ ಭಾರತ<br>ನರ್ಮದ ಕಣಿವೆ<br>(ಹಿಮಾಲಯ)<br>ಗೊಂಡವಾನ<br>(ಆರ್ಯ) | |
| ಪ್ರಥಮ ಯುಗ<br>(ಪೆಲಿಯೊ<br>ಸೋಯಿಕ್) | ಪರ್ಮಿಯನ್<br>ಕಾರ್ಬೊನಿಫೆರಸ್<br>ಡಿವೋನಿಯನ್<br>ಸೈಲೂರಿಯನ್<br>ಆರ್ಡೊವಿಕಿಯನ್<br>ಕೇಂಬ್ರಿಯನ್ | | (ದ್ರಾವಿಡ)<br><br>ಕಡಪ-ವಿಂಧ್ಯ<br>(ಪುರಾಣ) (ಹೈಮನ್ತ) | ೪,೮೦೦,೦,೦೦,೦೦೦ ವರ್ಷ |
| ನಿರ್ಜೀವ ಯುಗ<br>(ಆರ್ಕಿಯನ್) | | | ಧಾರ್ವಾಡ-ಆರಾವಳಿ<br>(ವೈಕೃತ) | |

ವಾಗಲೂ ಇದು ವಿದಿತವಾಗುವದು. ಮಂತ್ರಯೋಗದಿಂದ ಪರಾಶಕ್ತಿ ಪೂಜೆಮಾಡುವಾಗ ಭರತಖಂಡದಲ್ಲಿರುವ ಯೋಗಿನೀಪೀಠಗಳನ್ನು ಆಯಾ ಬೀಜಾಕ್ಷರಗಳೊಂದಿಗೆ ಸ್ಮರಣಮಾಡಬೇಕು. ಮೂಲಾಧಾರವಾದ ಕುಂಡಲಿನೀ ಶಕ್ತಿಯು ಕನ್ಯಾಕುಮಾರೀ ರೂಪದಲ್ಲಿ ಆವಿರ್ಭವಿಸಿ ಕಾವೇರಿ ಪ್ರಾಂತ್ಯವೆಂಬ ಬ್ರಹ್ಮಗ್ರಂಥಿಯನ್ನೂ, ಕಾವೇರಿಯಿಂದ ವಿಂಧ್ಯಪರ್ವತ ಪ್ರಾಂತ್ಯರೂಪವಾದ ವಿಷ್ಣುಗ್ರಂಥಿಯನ್ನೂ, ಕೊನೆಗೆ ವಿಂಧ್ಯೆಯಿಂದ ಹಿಮಾಲಯ ಪ್ರಾಂತ್ಯರೂಪವಾದ ರುದ್ರಗಂಥಿಯನ್ನೂ ಭೇದಿಸಿಕೊಂಡು, ಕೈಲಾಸಸ್ಥಾನದಲ್ಲಿ ಮಾನಸಸರೋವರ ಪ್ರಾಂತ್ಯದಲ್ಲಿರುವ ಸಹಸ್ರಾರು ಕಮಲಸ್ಥಿತನಾದ ಸದಾಶಿವನನ್ನು ಜಗಜ್ಜನನಿಯು ಸೇರುವಳು. ಆದುದರಿಂದ ಜಗಜ್ಜನನಿಗೂ ಜನ್ಮಭೂಮಿಗೂ ವ್ಯತ್ಯಾಸವಿಲ್ಲವೆಂದೂ ಇವೆರಡೂ ಸ್ವರ್ಗಕ್ಕಿಂತಲೂ ಗರೀಯವೆಂದು ಶ್ರೀ ಶಂಕರಾಚಾರ್ಯರು ಹೇಳಿರುವದು ಸೂಕ್ತವಾಗಿಯೇ ಇದೆ. ಭರತಖಂಡದ ಪ್ರತಿಯೊಂದು ತೀರ್ಥ, ಕ್ಷೇತ್ರ, ಯೋಗಿನೀ ಪೀಠವೂ ಕೂಡ ಈ ಪರಾಶಕ್ತಿಯಿಂದ ಜಾಗೃತವಾಗಿದೆ. ಆದುದರಿಂದಲೇ ಭರತಖಂಡವು ಭುಕ್ತಿ ಮುಕ್ತಿ ಸಾಧನೆಗಾಗಿ ನಿರ್ಮಾಣವಾಗಿರುವ ಶಕ್ತಿಸಹಿತವಾದ ಶರೀರವೆಂದರೆ ಉತ್ಪ್ರೇಕ್ಷೆಯಲ್ಲ.

ಕೇವಲ ಭೌತಿಕದೃಷ್ಟಿಯಿಂದ ಭರತಖಂಡವನ್ನು ದ್ವೀಪಕಲ್ಪ, ಪರ್ವತಕಲ್ಪ, ಮತ್ತು ಉತ್ತರನದೀಪ್ರಾಂತವೆಂದು ಮೂರು ವಿಧವಾಗಿ ವಿಭಾಗಿಸಬಹುದು. ಭರತಖಂಡದ ಪುರಾಣಯುಗ (Proterozoic) ದಲ್ಲಿ ಜೀವಾವಶೇಷಗಳು ಸಿಗುವದಿಲ್ಲ. ದಕ್ಷಿಣಾಪಥದಲ್ಲಿ ಅಗ್ನಿಪರ್ವತಜನ್ಯವಾದ ಕಡಪಶಿಲಶ್ರೇಣಿ, ಅನಂತರ ಏರ್ಪಟ್ಟ ವಿಂಧ್ಯಶ್ರೇಣಿಗಳು ಈ ಪುರಾಣಯುಗಕ್ಕೆ ಸೇರಿವೆ. ಅತಿ ಪ್ರಾಚೀನ (Azoic) ಯುಗದಲ್ಲಿ ಅಗ್ನಿಶಿಲೆಗಳು ಸಿಗುತ್ತವೆ. ಇಲ್ಲಿಯೂ ಜೀವಾವಶೇಷಗಳು ಕಂಡುಬರುವದಿಲ್ಲ. "ಅತಿ ಪ್ರಾಚೀನ" ಮತ್ತು "ಪುರಾಣ" ಯುಗಗಳು ಕಳೆದನಂತರ (ಸುಮಾರು ೪೮೦೦ ಲಕ್ಷ ವರ್ಷ) "ದ್ರಾವಿಡಯುಗ" (Palaeozoic) ಆರಂಭವಾಗಿ ಜೀವಾವಶೇಷಗಳು ಕ್ರಮೇಣ ವ್ಯಕ್ತವಾದುವು. ಈ ಯುಗದಲ್ಲಿ "ಬ್ರಾಕಿಯೊಪೊಡ," "ಟ್ರೈಲೊಬೈಟ್," "ಗ್ಯಾಸ್ಟ್ರೊಪಾಡ್" ಎಂಬ ಜಂತುಗಳೂ ಹವಳಗಳು, ಎತಿನೊಡೆರ್ಮೇಟಿ, ಸೆಫಾಲೊಪಾಡ್, ಕಪ್ಪೆಚಿಪ್ಪುಗಳು, ಕೆಲವು ಸಸ್ಯಗಳೂ ಕಂಡುಬಂದವು. ಅನಂತರ ಭೂಕಂಪಗಳುಂಟಾಗಿ ಮಧ್ಯಸಮುದ್ರವು ಉಂಟಾಯಿತು. ದಕ್ಷಿಣದಲ್ಲಿ ಗೊಂಡವಾನ ಭೂಖಂಡವು ದಕ್ಷಿಣ ಆಫ್ರಿಕ, ದಕ್ಷಿಣ ಅಮೆರಿಕ, ಆಸ್ಟ್ರೇಲಿಯ ವರೆಗೆ ವ್ಯಾಪಿಸಿದ್ದಿತು. ವಾತಾವರಣದ ವ್ಯತ್ಯಾಸದಿಂದ

ನೂತನ ಜೀವರೂಪಗಳುಂಟಾದುವು. ಅನಂತರ "ಆರ್ಯ" ಯುಗದ ಪ್ರಥಮ ಭಾಗವಾದ ಕ್ರಿಟೇಷಿಯಸ್ ಕಾಲದಲ್ಲಿ ಇಕ್ಥಿಯೋಸಾರಸ್, ಮೆಗಾಲೊಸಾರಸ್, ಟೈಟಾನೊಸಾರಸ್ ಮುಂತಾದ ಪೆಡಂಭೂತಗಳು ಕಾಣಿಸಿಕೊಂಡವು. ಪುನಃ ಆಧುನಿಕ ಯುಗದ ಆರಂಭದಲ್ಲಿ ಭೂಕಂಪಗಳುಂಟಾಗಿ ಇಯೋಸೀನ್, ಮೈಯೋಸೀನ್ ಮತ್ತು ಪ್ಲಿಯೋಸೀನ್ ಕಾಲಗಳಲ್ಲಿ ಹಿಮಾಲಯ ಪರ್ವತಶ್ರೇಣಿಯು ಹುಟ್ಟಿತು. ಜೀವಲೋಕದಲ್ಲಿ ಸಸ್ತನಪ್ರಾಣಿಗಳು, ಶಂಖ ಮುಂತಾದ ಜಠರಪಾದಗಳು, ಚಿಪ್ಪುಗಳು, ಗೂಢಬೀಜವುಳ್ಳ ಸಸ್ಯಗಳು ಉಂಟಾದವು. ಮಧ್ಯ ಉಷಃಕಾಲ (Middle Eocene)ದಲ್ಲಿ ದ್ವಿಪತ್ರರೋಹಿಗಳೂ, ಹವಳ, ಕಪಾಲಪಾದ ಮುಂತಾದ ಪ್ರಾಣಿಗಳೂ, ಅನಂತರ ಶಿವಾಲಿಕ್ ಕಾಲದಲ್ಲಿ ಆನೆ, ಪುರಾತನ ಅಶ್ವ, ಹುಲಿ, ಚಿರತೆ, ಕರಡಿ, ಗಂಡಮೃಗ, ಶಿವಾಥೀರಿಯಂ, ಆಮೆಗಳು, ಮೊಸಳೆ ಮುಂತಾದ ಜಂತುಗಳೂ, ಶಿವಪಿಥಿಕಸ್, ಡ್ರೈಯೊಪಿಥಿಕಸ್ ವರ್ಗದ ವಾನರಗಳೂ ಇದ್ದುವು.

**ಭರತಖಂಡದಲ್ಲಿ ಆಧುನಿಕ ಮಾನವನು**: ಮಾನವ ಜೀವಕಲ್ಪವು ಆರಂಭವಾದಾಗ ಭರತಖಂಡವು ಈಗಿನ ಸ್ವರೂಪವನ್ನು ಪಡೆಯಿತು. ಪ್ಲೀಸ್ಟೊಸಿನ್ ಕಾಲದಲ್ಲಿ ಅತ್ಯಂತ ಶೀತ ಉಂಟಾಗಿ ಉತ್ತರದಲ್ಲಿ ಮಂಜುಗಡ್ಡೆಯ ಘನಪ್ರವಾಹಗಳುಂಟಾದವು. ಇಂಡೋಬ್ರಾಹ್ಮ ಎಂಬ ಒಂದು ಅಖಂಡವಾದ ನದಿಯು ಈಗಿನ ಸಿಂಧೂ-ಗಂಗಾ-ಬ್ರಹ್ಮಪುತ್ರಾ ನದಿಗಳನ್ನೊಳಗೊಂಡಿದ್ದಿತೆಂದು ಕೆಲವರು ಅಭಿಪ್ರಾಯಪಡುವರು. ಸರಸ್ವತೀ ನದಿಯು ಪಂಜಾಬ್ ರಾಜಪುಟಾಣಗಳಲ್ಲಿ ಪ್ರವಹಿಸಿ ಶತುದ್ರು ನದಿಯನ್ನು ಸೇರಿ ಅರೇಬಿಯನ್ ಸಮುದ್ರವನ್ನು ಹೊಗುತ್ತಿದ್ದಿತು. ಅನಂತರ ಯಮುನಾ ನದಿಯ ಪಾತ್ರವು ಅಗಲವಾಗಿ ಸರಸ್ವತಿಯ ನೀರನ್ನು ಆಕರ್ಷಿಸಿತು. ದಕ್ಷಿಣಾಪಥದಲ್ಲಿ ಹೆಚ್ಚು ವ್ಯತ್ಯಾಸಗಳಾಗದೆ ಉಷ್ಣ ವಾತಾವರಣವಿದ್ದುದರಿಂದ ಪ್ಲಿಯಸ್ಟೋಸೀನ್ ಯುಗದಲ್ಲಿ ಯಾವುದೋ ಒಂದು ಪ್ರದೇಶದಲ್ಲಿ ಆಧುನಿಕ ಮಾನವಜಾತಿಯು ಕಂಡುಬಂದಿತು. ನರನು ವಾನರಪ್ರಭೇದವೆಂಬು ಜೀವಶಾಸ್ತ್ರ (Biology) ಮಾನವಶಾಸ್ತ್ರಗಳು (Anthropology) ಹೇಳುವಂತೆ ಭಾರತೀಯಗ್ರಂಥಗಳೂ ಹೇಳಿರುವವೆಂದು ಕೆಲವರಭಿಪ್ರಾಯಪಡುವರು. ಪ್ರಾಣಿಗಳು ಮೊದಲು ಜಲಾಶ್ರಯಿಗಳಾಗಿದ್ದು ಅನಂತರ ಭೂಜಲಾಶ್ರಯಿಗಳಾಗಿ ಕೊನೆಗೆ ಪಶು, ಪಕ್ಷಿ, ನರವಾನರಗಳು ಭೂಮಿಯನ್ನೇ ಆಶ್ರಯಿಸಿ

ದವು[6]. ಜೀವಗಳ ಪ್ರಗತಿಯ ಈ ತತ್ತ್ವವನ್ನೇ ದಶಾವತಾರಗಳು ಸೂಚಿಸುವವು. ಮತ್ಸ್ಯವು ಜಲಚರ, ಕೂರ್ಮವು ಭೂಜಲಚರ; ವರಾಹ ನಾರಸಿಂಹಗಳು ಅರ್ಧಪಶು ಅರ್ಧನರ; ವಾಮನಾವತಾರವು (Pigmy) ಮಾನವನ ಒಂದು ಅವಸ್ಥಾಸೂಚಕವು. ದುಷ್ಟನಿಗ್ರಹ ಶಿಷ್ಟಾನುಗ್ರಹಕ್ಕಾಗಿ ಯುದ್ಧವೂ ಅವಶ್ಯಕ ವಾದುದರಿಂದ ರಾಮಕೃಷ್ಣಾವತಾರಗಳು ಕ್ಷಾತ್ರವರ್ಚಸ್ಸಿನಿಂದ ಕೂಡಿದವು. ಅಹಿಂಸಾ, ಜ್ಞಾನ, ಧರ್ಮಗಳೇ ಮಾನವನ ಅಂತಿಮ ಧ್ಯೇಯವೆಂದು ಬೌದ್ಧಾವತಾರವು ಸೂಚಿಸುತ್ತದೆ.

ಆಧುನಿಕ ಮಾನವನ ಮೂಲನಿವಾಸವಾವುದೆಂಬ ವಿಷಯದಲ್ಲಿ ಕೆಲವರು "ಪಿಥಿಕಾನ್ಥ್ರೊಪಸ್ ಎರೆಕ್ಟಸ್" ಎಂಬ ನರ-ವಾನರದ ಅವಶೇಷಗಳು ಜಾವ ದ್ವೀಪದಲ್ಲಿ ಸಿಕ್ಕಿರುವದರಿಂದ ಈ ಮಾನವರ ಮೂಲಪುರುಷನು ಗೊಂಡವಾನ ಖಂಡವು ನಾಶವಾಗುತ್ತಿದ್ದಾಗ ಬಹುಶಃ ದಕ್ಷಿಣಹಿಂದೂಸ್ಥಾನ ಪ್ರಾಂತ್ಯ ದಿಂದ ಪೂರ್ವದ್ವೀಪಗಳಿಗೆ ಬಂದಿರಬಹುದೆಂದು ಊಹಿಸಿರುವರು. ಹಿಮಾಲಯ ಪರ್ವತಗಳ ಉತ್ತರ ಮತ್ತು ಈಶಾನ್ಯಭಾಗಗಳಲ್ಲಿ "ಪೀಕಿನ್" ಮನುಷ್ಯನ ಅವಶೇಷಗಳು ಸಿಕ್ಕಿರುವದರಿಂದ ಮಧ್ಯಏಷ್ಯಾಖಂಡವು ಮಾನವನ ಮೂಲ ನಿವಾಸವಾಗಿದ್ದಿತೆಂದೂ, ಅಲ್ಲಿಂದ ಮೂರು ಮುಖ್ಯವಾದ ಮಾನವವರ್ಗಗಳೂ ಮೂರು ಜಾತಿಯ ಭಾಷೆಗಳೂ (Monosyllabic, Agglutinative and Inflexional) ಮೊದಲು ಏಕರೂಪವಾಗಿದ್ದು ಅನಂತರ ಭಿನ್ನವಾದುವೆಂದೂ ಮತ್ತೆ ಕೆಲವರು ಅಭಿಪ್ರಾಯಪಡುವರು. ಪ್ರಾಯಃ ವಿಜ್ಞಾನಿಗಳು ಮಾನವನ ಮೂಲಜಾತಿಯು ಒಂದೇ ಎಂದು (Monogenesis) ನಿರ್ಧರಿಸಿರುವರು. ಭರತಖಂಡದ ದಕ್ಷಿಣಭಾಗವೇ ಮಾನವನ ಮೂಲನಿವಾಸವಾಗಿದ್ದಿರಬಹು ದೆಂಬ ಊಹೆಗೆ ಆಧಾರಗಳು ಸಿಕ್ಕಿಲ್ಲ, ಈಗ ಸಿಕ್ಕಿರುವ "ಸುಮಾಲ್ಕೋಟ್" ಮತ್ತು "ಬಯಾನಾ" ಕಪಾಲಗಳು ಸಂಪೂರ್ಣ "ಆರ್ಯ" ಅಥವಾ "ಆರ್ಯ-ದ್ರಾವಿಡ" ಮಿಶ್ರಜಾತಿಯ ಲಕ್ಷಣಗಳನ್ನು ಹೊಂದಿವೆ ಎಂದು ಹೇಳಲಾಗಿದೆ[7].

---

[6] ಸ್ಥಾವರಂವಿಂಶತೇರ್ಲಕ್ಷಂ ಜಲಜಂನವಲಕ್ಷಕಮ್ |
ಕೂರ್ಮಾಶ್ಚನವಲಕ್ಷಂಚ ದಶಲಕ್ಷಂಚ ಪಕ್ಷಿಣಃ ||
ತ್ರಿಂಶಲ್ಲಕ್ಷಂಪಶೂನಾಂಚ ಚತುರ್ಲಕ್ಷಂಚವಾನರಾಃ |
ತತೋಮನುಷ್ಯತಾಂ ಪ್ರಾಪ್ಯ ತತಃಕರ್ಮಾಣಿಸಾಧಯೇತ್ ||

—ಬೃಹದ್ವಿಷ್ಣುಪುರಾಣ

[7] *J. Anth, Soc.* Bombay, 1920, p. 63.

**ಭರತಖಂಡದ ಮಾನವವರ್ಗಗಳು:** ಮಾನವಶಾಸ್ತ್ರಜ್ಞರು ಮನುಷ್ಯರನ್ನು ಕೂದಲಿನ ರಚನೆ ಮತ್ತು ಬಣ್ಣ, ಚರ್ಮವರ್ಣ, ಕಣ್ಣಿನ ಆಕಾರ ಮತ್ತು ಬಣ್ಣ, ದೇಹದ ವಿನ್ಯಾಸ, ಕಪಾಲದರೂಪ, ನಾಸಾರೂಪ, ರಕ್ತಭೇದ, ಮತ್ತು ದೈಹಿಕ ಮಾನಸಿಕ ವ್ಯಾಪಾರಗಳ ಆಧಾರದ ಮೇಲೆ ಬೇರೆ ಬೇರೆ ವರ್ಗಗಳಾಗಿ ವಿಂಗಡಿಸಿರುವರು. ಇವುಗಳಲ್ಲಿ ಮುಖ್ಯವಾದುದು ಕಪಾಲರಚನೆ. ಕಪಾಲದ ಪರಿಮಾಣ ಮತ್ತು ಆಕಾರಗಳೂ ಕೂಡ ಆಹಾರ, ವಾತಾವರಣ, ಜಾತಿಪದ್ಧತಿಗಳನ್ನನುಸರಿಸಿ ಸ್ವಲ್ಪ ವ್ಯತ್ಯಾಸವಾದರೂ ಸ್ಥೂಲವಾಗಿ ಮಾನವ ವರ್ಗನಿರ್ಧಾರಣೆಗೆ ಕಪಾಲರಚನೆಯೇ ಉಪಯುಕ್ತವಾದುದು. ಭಾಷೆಗೂ ವರ್ಗಕ್ಕೂ ನೈಸರ್ಗಿಕವಾದ ಯಾವ ಸಂಬಂಧವೂ ಇಲ್ಲ. ಆದುದರಿಂದ "ಆರ್ಯಜಾತಿ", "ದ್ರಾವಿಡಜಾತಿ" ಇತ್ಯಾದಿಯಾಗಿ ವ್ಯವಹರಿಸುವದು ಅಶಾಸ್ತ್ರೀಯ. ಸ್ಥೂಲದೃಷ್ಟಿಯಿಂದ ಮಾನವರಲ್ಲಿ ಮೂರು ವರ್ಗಗಳಿವೆ ಎಂದು ಹೇಳಬಹುದು. (೧) ಕೃಷ್ಣವರ್ಣದ ಚರ್ಮ, ಊರ್ಣಕೇಶ, ವಿಶಾಲ ನಾಸ, ದೀರ್ಘಕಪಾಲ (Dolichocephalic)ಉಳ್ಳ ವರ್ಗದವರು ವಿಶೇಷವಾಗಿ ಆಫ್ರಿಕ, ಓಷೀನಿಯಪ್ರಾಂತ್ಯದಲ್ಲಿರುವವರು. (೨) ಶ್ವೇತಚರ್ಮ, ದೀರ್ಘನಾಸ, ಮಧ್ಯಪ್ರಮಾಣದ (Mesocephalic) ಕಪಾಲಗಳುಳ್ಳ ಜನರು ಮಧ್ಯಧರಾ ಸಮುದ್ರ (Mediterranean) ವರ್ಗದವರು. ಇದೇ ಮೂಲವರ್ಗಕ್ಕೆ ಸೇರಿದ ನಾರ್ಡಿಕ್, ಯೂರ್ ಏಷಿಯಾಟಿಕ್ ಜನರು ಏಷ್ಯಾ ಯೂರೋಪ್ ಖಂಡ ಗಳಲ್ಲಿರುವರು. ಇವರಲ್ಲಿ ಆಲ್ಪೈನ್, ಪಾಮಿರ್-ಇರಾನಿಯನ್, ಆರ್ಮಿ ನಾಯ್ಡ್-ಅನಟೋಲಿಯನ್, ಡಿನಾರಿಕ್-ಇಲ್ಲಿರಿಯನ್ ಎಂಬ ಪ್ರಭೇದಗಳಿರು ವವು. (೩) ಪೀತವರ್ಣ, ವಿಶಾಲಕಪಾಲ (Brachycephalic), ವಿಶಾಲನಾಸಿಕ ಉಳ್ಳ ಮಂಗೊಲಾಯ್ಡ್ ಜನರು ಪೂರ್ವ ಏಷ್ಯಾಖಂಡದಲ್ಲಿರುವರು.

**ಭರತಖಂಡದ ಜನಾಂಗಗಳು**[8]**:** ರಿಸ್ಲೆ ಎಂಬಾತನು ಹಿಂದೂದೇಶದ ಜನರನ್ನು ಈ ಪ್ರಕಾರ ವಿಂಗಡಿಸಿರುವನು.

೧. ಆರ್ಯವರ್ಗ—ದೀರ್ಘಕಾಯ, ಶ್ವೇತ-ರಕ್ತವರ್ಣ, ದೀರ್ಘನಾಸ, ದೀರ್ಘಕಪಾಲ ಉಳ್ಳ ಜನರು ಪಂಜಾಬ್, ರಾಜಪುಟಾಣ, ಕಾಶ್ಮೀರ ಮತ್ತು ವಾಯುವ್ಯ ಪ್ರಾಂತ್ಯಗಳಲ್ಲಿರುವರು.

೨. ಆರ್ಯ-ದ್ರಾವಿಡ ವರ್ಗ—ಸ್ವಲ್ಪ ಕಡಿಮೆಯಾದ ದೀರ್ಘಕಪಾಲ ಉಳ್ಳವರು ಸಂಯುಕ್ತಪ್ರಾಂತ್ಯ, ಬಿಹಾರ್ ಭಾಗಗಳಲ್ಲಿರುವರು.

[8] B. N. Datta, *Studies in Indian Social Polity.*

೩. ಆಲ್ಪೈನ್ ವರ್ಗ—ಬೆಲೂಚಿಸ್ಥಾನದಿಂದ ದಕ್ಷಿಣದಲ್ಲಿ ಮೈಸೂರಿನ ವರೆಗೂ, ಪೂರ್ವದಲ್ಲಿ ವಂಗದೇಶದ ವರೆಗೂ ವ್ಯಾಪಿಸಿರುವರು. ವಂಗ ದೇಶದ ಜನರು ಮಂಗೋಲಾಯ್ಡ್-ದ್ರಾವಿಡ ಜಾತಿಗೆ ಸೇರಿದವರು.

೪. ಮಂಗೋಲಾಯ್ಡ್ ವರ್ಗ—ವಿಶಾಲಕಪಾಲ, ಬಾದಾಮಿ ಆಕಾರದ ಕಣ್ಣುಳ್ಳ ಪೀತವರ್ಣದವರು ಹಿಂದೂದೇಶದ ಈಶಾನ್ಯಭಾಗ ದಲ್ಲಿಯೂ ಹಿಮಾಲಯಶ್ರೇಣಿಯ ತಪ್ಪಲಿನಲ್ಲಿಯೂ ಇರುವರು.

೫. ಪೂರ್ವದ್ರಾವಿಡ ಮುಂಡ-ಮಾನ್ ಖ್ಮೇರ್ ವರ್ಗ—ಮಧ್ಯಪ್ರಾಂತಗಳಲ್ಲಿ.

೬. ದ್ರಾವಿಡರು—ವಿಂಧ್ಯಪರ್ವತದ ದಕ್ಷಿಣದಲ್ಲಿದ್ದು ಪಡುವಣ ಕರಾವಳಿಯ ಆಲ್ಪೈನ್ ಮತ್ತು ಸಿಥಿಯನ್ ಜನಾಂಗಗಳೊಡನೆ ಸಮ್ಮಿಳಿತವಾಗಿರುವರು.

೭. ಪ್ರಾಗ್ದ್ರಾವಿಡರು—ದಕ್ಷಿಣಾಪಥದ ಅರಣ್ಯಪ್ರಾಂತ್ಯಗಳಲ್ಲಿರುವರು.

ಬ್ರಾಹುಇ ಎಂಬ ಬೆಲೂಚಿಸ್ಥಾನದ ಒಂದು ಪಂಗಡದವರು ದ್ರಾವಿಡ ಭಾಷೆಯನ್ನು ಬಳಸುತ್ತಿದ್ದರೂ ಇವರು ದೀರ್ಘದೇಹಿಗಳು, ದೀರ್ಘನಾಸರು, ಆಲ್ಪೈನ್ ಜನಾಂಗಕ್ಕೆ ಸೇರಿದವರೆಂದೂ ಇವರ ದ್ರಾವಿಡ ಭಾಷೆಯು ದಾಕ್ಷಿಣಾತ್ಯರ ಸಂಪರ್ಕದಿಂದ ಬಂದಿರಬಹುದೆಂದೂ ಊಹಿಸಲಾಗಿದೆ.

ಪುರಾಣಗಳ ಆಧಾರದ ಮೇಲೆ ಪಾರ್ಜಿತರ್ ಎಂಬಾತನು ಹಿಂದೂದೇಶದಲ್ಲಿ ಮೂರು ಮುಖ್ಯ ಜಾತಿಗಳಿವೆ ಎಂದು ನಿರ್ಧರಿಸಿರುವನು. (೧) ಚಂದ್ರವಂಶದ ಪುರೂರವ ಮಾನವರು ಶುದ್ಧ ಆರ್ಯರು. (೨) ಸೌದ್ಯುಮ್ನರು ಮುಂಡ-ಮಾನ್ ಖ್ಮೇರ್ ಗುಂಪಿನವರು. (೩) ಸೂರ್ಯವಂಶಕ್ಕೆ ಸೇರಿದ ಮನುವಂಶ ದವರು ದ್ರಾವಿಡರು.

ಡಾ|| ಐಕ್ಸ್ಟೆಡ್ ಎಂಬಾತನು ಈ ವಿಭಜನೆಗಳನ್ನೊಪ್ಪದೆ ಭರತಖಂಡದ ಜನರನ್ನು ಈರೀತಿಯಾಗಿ ವಿಂಗಡಿಸಿರುವನು.[9]

೧. ಅರಣ್ಯಪ್ರಾಂತ್ಯದ ಅನಾಗರಿಕ ಜನರು ಪ್ರಾಚೀನ ಭಾರತೀಯರು ಅಥವಾ "ವೆಡ್ಡಿಡ್" ಜನರು. ಇವರಲ್ಲಿ ಎರಡು ಪಂಗಡಗಳಿವೆ. ಧೂಮ್ರ ವರ್ಣದ ಊರ್ಣಕೇಶವುಳ್ಳ ತಾಯಿ ಆಡಳಿತದ "ಗಾಂಡಿಡ್" ಜನರು. ಮತ್ತು ನೀಲಕೇಶವುಳ್ಳ "ಮ್ಯಾಲಿಡ್" ಜನರು.

೨. "ಮೆಲಾನಿಡ್" ಎಂಬ ಸಮ್ಮಿಳಿತಜಾತಿಯಲ್ಲಿ ದಕ್ಷಿಣ ಮೆಲಾನಿಡ್ ಮತ್ತು ಕೋಲಿಡ್ ಪಂಗಡಗಳಿರುವವು. ಇವರೂ "ತಾಯಿ ಆಡಳಿತ" ಉಳ್ಳವರು. ದಕ್ಷಿಣಾಪಥದ ಉತ್ತರಭಾಗದಲ್ಲಿರುವರು.

[9] *Mysors Castes and Tribes*, Vol. I.

೩. ಮೈದಾನಭಾಗದಲ್ಲಿರುವ "ಇಂಡಿಡ್" ಜಾತಿಯಲ್ಲಿ "ಗ್ರ್ಯಾಸೈಲ್ ಇಂಡಿಡ್" ಪಂಗಡದವರು "ತಂದೆ ಆಡಳಿತ"ವುಳ್ಳವರು. "ಉತ್ತರ ಇಂಡಿಡ್" ಜನರು ಧೂಮ್ರವರ್ಣದ ಕೂದಲುಳ್ಳವರು.

ಭೂಗುಣಕ್ಕನುಸಾರವಾಗಿ ಮೈದಾನಸೀಮೆಯಲ್ಲಿ ವ್ಯವಸಾಯದಿಂದ ಜೀವಿಸುವ ಉತ್ತರಭಾಗದ ಶ್ವೇತಜನರೂ ದಕ್ಷಿಣದಲ್ಲಿ ಶ್ಯಾಮಲವರ್ಣದ ಜನರೂ, ಅರಣ್ಯಭಾಗದಲ್ಲಿ ಬೇಟೆಯಿಂದಲೂ ಗೆಡ್ಡೆಗೆಣಸುಗಳ ಸಂಗ್ರಹದಿಂದಲೂ ಜೀವನಮಾಡುವವರೂ, ಮೈಗಾವಲು, ಕುರುಚುಗಿಡಗಳುಳ್ಳ ಪ್ರಾಂತ್ಯದಲ್ಲಿ ಬೇಟೆ ವ್ಯವಸಾಯಗಳೆರಡರಿಂದಲೂ ಜೀವಿಸುವ ಮಿಶ್ರಜನರೂ ಇರುವರು. ಹಿಂದೂದೇಶದ ವಾಯವ್ಯದ ಖೈಬರ್‌ಮಾರ್ಗವಾಗಿ ವಿದೇಶೀಯರು ಬಂದು ಹಿಮಾಲಯ ತಪ್ಪಲು, ಗಂಗಾಪಾತ್ರವನ್ನನುಸರಿಸಿ ವಂಗದೇಶದವರೆಗೂ, ಬೋಲಾನ್ ಕಣಿವೆ ಮಾರ್ಗವಾಗಿ ಸಿಂಧೂನದಿಯ ಪಾತ್ರವನ್ನನುಸರಿಸಿ ಗುಜರಾತ್, ಬೊಂಬಾಯಿ, ಮೈಸೂರು ಪ್ರಾಂತ್ಯಗಳಿಗೂ, ಅನಂತರ ದಕ್ಷಿಣಾಪಥದ ಕಾವೇರಿ ಮುಂತಾದ ನದಿಗಳನ್ನನುಸರಿಸಿ ಪೂರ್ವಭಾಗಗಳಿಗೂ ಹರಡಿಕೊಂಡರು. ದಕ್ಷಿಣಾಪಥದ ಮಧ್ಯಭಾಗದಲ್ಲಿರುವ ಉನ್ನತಭೂಮಿಯು ವ್ಯವಸಾಯಕ್ಕೆ ಅನುಕೂಲವಲ್ಲವಾದುದರಿಂದ ಪಶುಪಾಲನೆಯೇ ಮುಖ್ಯವೃತ್ತಿಯಾಗಿ ಕಾಲಕ್ರಮೇಣ ವರ್ಣಗಳೂ ಒಳಪಂಗಡಗಳೂ ಉಂಟಾದವು. ನೀಲಗಿರಿಯ ತೋದವರು ಇಂತಹವರು.

ಪ್ರಾಚೀನ ನೀಗ್ರಿಡ್ ವರ್ಗಕ್ಕೆ ಸೇರಿದ ಮೆಲಾನಿಡ್ ಮತ್ತು ವ್ಯಾಲಿಡ್ ಜನರಿಗೂ ಆಫ್ರಿಕಾದೇಶದ ಪಶ್ಚಿಮ ನೀಗ್ರಿಡ್ ಮತ್ತು ಮೆಲನೀಷಿಯ ಪೂರ್ವ ನೀಗ್ರಿಡ್ ಜನರಿಗೂ ನಿಕಟಸಂಬಂಧವಿದೆ. ಇವರನಂತರ ಉತ್ತರದಿಂದ ಬಂದ ವೆಡ್ಡಿಡ್ ಜನರು ಶಾಂತಿಪ್ರಿಯರಾಗಿದ್ದು "ಪ್ರಾಚೀನ ಸಂಸ್ಕೃತಿ" ("Alt-Kultur")ಗೆ ಕಾರಣರಾಗಿ ಭರತಖಂಡವನ್ನೆಲ್ಲಾ ಆಕ್ರಮಿಸಿಕೊಂಡರು. ಇವರಲ್ಲಿ "ಪ್ರೋಟೊ-ಗಾಂಡಿಡ್" ಜನರು "ಟೋಟೆಮ್" ಸಂಸ್ಕೃತಿವುಳ್ಳವರು. ಬೇಟೆಯಿಂದ ಜೀವಿಸುತ್ತಿದ್ದರು. ಅನಂತರ ವ್ಯವಸಾಯವನ್ನು ಕಂಡುಹಿಡಿದ ಮೇಲೆ ಮೊಹೆಂಜೊದಾರೊ ಸಂಸ್ಕೃತಿಗೆ ಕಾರಣರಾದರು. ಈ ಸಂಸ್ಕೃತಿಯು ನಾಶವಾದ ಮೇಲೆ ದಕ್ಷಿಣದೇಶದಲ್ಲಿ ಹರಡಿ ಅಲ್ಲಿದ್ದ ಕೋಲಿಡ್, ಮೆಲಾನಿಡ್, ನೀಗ್ರಿಡ್, ಗಾಂಡಿಡ್ ಜನರ ಪ್ರದೇಶಗಳನ್ನು ಆಕ್ರಮಿಸಿದರು. ಇವರನಂತರ ಪಶುಪಾಲನೆ ಮತ್ತು ಯುದ್ಧಪ್ರಿಯರಾದ "ಉತ್ತರ ಇಂಡಿಡ್" ಅಥವಾ "ಆರ್ಯ" ಜನರು "ತಾಯಿ ಆಡಳಿತ" ಹೊಂದಿದ್ದ ಜನಾಂಗಗಳನ್ನೂ ಅವರ ಸಂಸ್ಕೃತಿಯನ್ನೂ ನಾಶಮಾಡಿದರು.

ನಾಗರು "ನಾಲ್" ಸಂಸ್ಕೃತಿಗೆ ಕಾರಣರಾದರು. ಗಂಗಾಪ್ರಾಂತ್ಯದಲ್ಲಿ ಮೆಲಾನಿಡ್, ವೆಡ್ಡಿಡ್, ಇಂಡಿಡ್, ಮತ್ತು ಉತ್ತರ ಇಂಡಿಡ್ ಪಂಗಡಗಳು ಕಂಡುಬರುವವು. ದಕ್ಷಿಣದಲ್ಲಿ ಪಶುಪಾಲಕರಿಂದ ಉತ್ತರ ಇಂಡಿಡ್ ಪಂಗಡಕ್ಕೆ ಸೇರಿದ ತೊದವರು ನೀಲಗಿರಿ ಪರ್ವತವನ್ನಾಶ್ರಯಿಸಿ ತಮ್ಮ ಸಂಸ್ಕೃತಿಯನ್ನು ರಕ್ಷಿಸಿಕೊಂಡಿರುವರು. ಮೈಸೂರು ಪ್ರಾಂತದಲ್ಲಿ ವ್ಯಾಲಿಡ್-ಮೆಲಾನಿಡ್ ಸಮ್ಮೇಳನವುಳ್ಳ ಇಂಡೋನೀಗ್ರಿಡ್ ಜನರೇ ಅತ್ಯಂತ ಪ್ರಾಚೀನರು. ಕುರುಂಬ ಮುಂತಾದ ವ್ಯಾಲಿಡ್ ಜನರೇ ಮೂಲ ನಿವಾಸಿಗಳೆಂದು ಹೇಳಬಹುದು. ಅನಂತರ ಬಂದ ಮೆಲಾನಿಡ್ ಜನರು ವ್ಯವಸಾಯವನ್ನನುಸರಿಸಿದರು. ಇಂಡಿಡ್ ಜನರು ಪೆನ್ನಾರ್ ನದಿಯನ್ನನುಸರಿಸಿ ಹೋಗಿ ಮಲಬಾರ್ ದೇಶವನ್ನು ಪ್ರವೇಶಿಸಿ ಕೇರಳಿಡ್ ಜನರಾದರು. ಮೈದಾನ ಪ್ರದೇಶದಲ್ಲಿ ವೆಡ್ಡಿಡ್-ವ್ಯಾಲಿಡ್ ಜನರಿಲ್ಲ. ವ್ಯವಸಾಯವನ್ನವಲಂಬಿಸಿದ ಒಕ್ಕಲಿಗರು ಒಂದು ಸ್ಥಾನಿಕ ಪಂಗಡ (Gau Typus) ವಾದರು. ಇವರಲ್ಲದೆ ಮೈಸೂರಿನ ವಾಯುವ್ಯ ಭಾಗದಲ್ಲಿ ಉತ್ತರ ಇಂಡಿಡ್, ತುರನಾಯ್ಡ್, ಪಶ್ಚಿಮ ಬ್ರಾಕಿಡ್ (ಕೊಂಕಣ) ಮತ್ತು ಅಲ್ಪಾಂಶವಾಗಿ ಪೆಲಿಮಂಗೋಲಿಡ್ ಪಂಗಡದವರೂ ಇರುವರು.

ಚಾರಿತ್ರಕ ಕಾಲದಲ್ಲಿ ಮೈಸೂರಿನ ಚರಿತ್ರೆಗೆ ಈ ವರ್ಗಗಳೇ ಕಾರಣರೆಂದ ಐಕ್‌ಸ್ಟೆಡ್ ಅಭಿಪ್ರಾಯಪಡುವನು. ಕುರುಂಬರು ಕದಂಬರಾದರು. ಗಂಗರು ಉತ್ತರ ಇಂಡಿಡ್ ಜನರು. ಪಲ್ಲವರೂ ಚೋಳರೂ ಮೆಲಾನಿಡ್ ಜನರು. ಪ್ರಾಚೀನ ವ್ಯಾಲಿಡ್ ಸಂಪರ್ಕದಿಂದ ಮೈಸೂರು ಪ್ರಾಂತ್ಯದಲ್ಲಿ ಹಸಳರು, ಮಲೇರು ಹೊಯ್ಸಳರಾದರು. ಜೀವನವೃತ್ತಿಗಳನ್ನನುಸರಿಸಿ ಕಾಡುಕುರುಂಬ ಇರುಳಿಗ ಸೋಲಿಗ ಜೇನುಕುರುಂಬರು ಅರಣ್ಯವಾಸಿಗಳಾದರು. ಬೆಸ್ತರು ವ್ಯಾಲಿಡ್ ಗುಂಪಿಗೆ ಸೇರಿದವರು. ಬೇಡರು ಕೊಟ್ಟೆ ಒಕ್ಕಲು ಅಗಸ ಇತ್ಯಾದಿಗಳು ಗಾಂಡಿಡ್ ಜನರು ರಾಜಪುಟಾಣದ ಭಟ್ ಜಾತಿಯಂತೆ ಓರಿಯಂಟಲಿಡ್ ಸಂಪರ್ಕಹೊಂದಿರುವವರು. ವಡ್ಡ ಉಪ್ಪಾರ ಬಂಜಾರ ಜನರು ನಾಗಪಂಗಡದಿಂದ ಹುಟ್ಟಿದ ಇಂಡಿಡ್ ಜನರೊಡನೆ ಮೆಲಾನಿಡ್ ಗುಂಪಿನವರು ಸೇರಿ ಹೊಲೆಯ ಮಾದಿಗ ಗುಂಪುಗಳಾದವು. ಕುರುಬರು ಪಶುಪಾಲಕರಾದುದರಿಂದ ಕಾಡುಕುರುಂಬರಿಂದ ಭಿನ್ನರು. ಮೈಸೂರಿನ ಇಂಡಿಡ್ ಜನರಾದ ಒಕ್ಕಲಿಗ, ಗಂಗಡಿಕಾರ, ಕುಂಚಟಿಗ ಇತ್ಯಾದಿಗಳಲ್ಲಿಯೂ ಮೆಲಾನಿಡ್ ಸಂಪರ್ಕ ಕಂಡುಬರುವದು. ಅಲ್ಲದೆ ಮೈಸೂರು ಪ್ರಾಂತ್ಯಕ್ಕೆ ತೆಲಗು ಸೀಮೆಯಿಂದ ಹಂದಿಜೋಗಿ, ರೆಡ್ಡಿ ಮುಂತಾದವರೂ ಮಹಾರಾಷ್ಟ್ರದಿಂದ ಕಹಾರ್, ಮರಾಟ,

ನಾಮಗೌಡ, ಆರೇರೂ, ತಮಿಳುದೇಶದಿಂದ ಬೇರಿ ಮೊದಲಿಯಾರ್ ಮುಂತಾದವರೂ, ಉತ್ತರ ಇಂಡಿಡ್ ಸಂಬಂಧವುಳ್ಳ ಊರುಗೊಲ್ಲ, ಗೌಳಿಗ ಇತ್ಯಾದಿ ಜನರೂ ಬಂದಿರುವರು.

ಆದರೆ ದಕ್ಷಿಣಾಪಥದಲ್ಲಿರುವ ಜಾತಿಗಳ ವಿಷಯವಾಗಿ ಮೇಲೆ ಹೇಳಿದ ಅಭಿಪ್ರಾಯಗಳನ್ನು ಸರ್ವರೂ ಅಂಗೀಕರಿಸಿಲ್ಲ. ದಕ್ಷಿಣದಲ್ಲಿ ಮೂರು ಮುಖ್ಯವಾದ ಗುಂಪುಗಳಿವೆಯೆಂದು ನಿರ್ಧರಿಸಬಹುದು.

೧. ಮುಂಡ ಅಥವಾ ಕೋಲ್ ಜನರು ಖೇರ್ವಾರಿ ಅಥವಾ ಆಸ್ಟ್ರೋ-ಏಷಿಯಾಟಿಕ್ ಗುಂಪಿಗೆ ಸೇರಿದವರು. ಪುರಾತನ ಶಿಲಾಯುಗದಲ್ಲಿ ಮಲಯ, ಇಂಡೋ-ಚೀಣ, ಓಷೀನಿಯ ಭಾಗಗಳಿಂದ ಭರತಖಂಡಕ್ಕೆ ಬಂದರೆಂದು ಗ್ರೈಟ್ ಅಭಿಪ್ರಾಯಪಡುವನು. ಇತರರು ಈ ಗುಂಪಿನವರು ಮೊದಲು ಪೂರ್ವದಿಂದ ಅಸ್ಸಾಮಿಗೆ ಬಂದು ಅನಂತರ ಸಮುದ್ರಮಾರ್ಗವಾಗಿ ಓಢ್ರದೇಶದ ಮೂಲಕ ಮಧ್ಯ ಹಿಂದೂಸ್ಥಾನವನ್ನು ಪ್ರವೇಶಿಸಿದುದರಿಂದ ಮುಂಡಭಾಷೆಗಳು ದಕ್ಷಿಣಾಪಥದಲ್ಲಿ ಕಂಡುಬರುವದಿಲ್ಲವೆಂದು ಹೇಳುವರು. ಷ್ಮಿತ್ತಿನ "ಆಸ್ಟ್ರಿಕ್ ಭಾಷೆ" ಎಂಬ ತತ್ತ್ವವು ನಿರಾಧಾರವಾದುದೆಂದು ಈಗ ನಿರ್ಧರಿಸಲ್ಪಟ್ಟಿದೆ. ಈ ಮುಂಡಮಾನ್-ಖ್ಮೇರ್ ವರ್ಗದಲ್ಲಿ ಮುಂಡ, ಕೋಲ್, ಸಂತಾಲ, ಮುಂಡಾರಿ, ಭೂಮ್ಜ್, ಬ್ರಿಹೋರ್, ಅಸುರ, ಕೊರ್ಡ್ವ, ಹೋ, ಕೊಡ, ಖಾರಿಯ, ಜುರಿ, ಕುರ್ಕು ಇತ್ಯಾದಿ ಪಂಗಡಗಳಿವೆ. ಇವರಲ್ಲಿ ಕೋಲರು, ಕೋಲಾರ ಕೊಲ್ಲೇರು ಮುಂತಾದ ಸ್ಥಳಗಳಿಗೆ ತಮ್ಮ ಹೆಸರನ್ನು ಕೊಟ್ಟರು. ಕೋಲರ ಒಂದು ಒಳಪಂಗಡವಾದ ಅಸುರರು ಖಾಸಿಪುರಪ್ರಾಂತ್ಯದಲ್ಲಿರುವರು. ಇವರೇ ವೇದಗಳಲ್ಲಿ ಉಕ್ತರಾದ ಅಸುರರೆಂದೂ ಅಸ್ಸೀರಿಯನ್ ಜನರೆಂದೂ ವಿವಿಧಾಭಿಪ್ರಾಯಗಳಿವೆ. ಮತ್ತೊಂದು ಪಂಗಡದವರಾದ ಸವರ-ಶಬರರು ಶಂಭಲ್‌ಪುರ, ಸಂಬರ್‌ಗರ್ಹ್, ಕಂಕೇರ್, ಬಸ್ತಾರ್ ಪ್ರಾಂತ್ಯಗಳಲ್ಲಿರುವರು. ವೇದದಲ್ಲಿ ಅಸುರನೆಂದು ಹೇಳಿದ ಶಂಬರ ಎಂಬವನ ಹೆಸರು ಇವರ ಒಂದು ಗುಂಪಿನ ಹೆಸರಾಗಿದೆ. ಶಬರೀ ಎಂಬ ಭಾಷಾಪ್ರಭೇದವು ದ್ರಾವಿಡಭಾಷಾವರ್ಗಕ್ಕೆ ಸೇರಿದ ಹಲ್ಬಿ ಅಥವಾ ಗೋಂಡಿಯನ್ನು ಹೋಲುವದು. ಕೋಲ್ ಜಾತಿಗೆ ಸೇರಿದ ಭಿಲ್ಲರ ಹೆಸರು ಬಿಲ್ (ಧನುಸ್)ನಿಂದ ಬಂದಿರಬಹುದು.

೨. ದ್ರಾವಿಡರು ಮಧ್ಯಧರಾಸಮುದ್ರ ಜನಾಂಗ (Mediterranean Race)ಕ್ಕೆ ಸೇರಿದವರೆಂದು ಕೆಲವರು ಊಹಿಸುವರು. ಭಾಷೆಯಲ್ಲಿ ಮುಂಡ ಮಾನ್-ಖ್ಮೇರ್ ಜನರಿಗಿಂತ ಭಿನ್ನರು. ದ್ರಾವಿಡರೆನಿಸಿದ ಗಾಂಡ್, ಖಾಂಡ್ ಒರವಸ್ ಮುಂತಾದವರು ಮುಂಡಜನರನ್ನು ಪುರೋಹಿತರನ್ನಾಗಿ ಇಟ್ಟು

ಕೊಂಡಿರುವರು. ದ್ರಾವಿಡಭಾಷೆಗಳ ಪುರಾತನ ರೂಪವು ಗಾಂಡಿ, ಕುರಖ್ ಖಾಂಡ್ ಇವುಗಳಲ್ಲಿ ಕಂಡುಬರುವದೆಂದು ಕೆಲವರ ಅಭಿಪ್ರಾಯ. ಗಾಂಡರು, ಒರವನ್ ಜನರೂ ತಮ್ಮದು "ರಾವಣ್‌ವಂಶಿ" (ರಾವಣವಂಶ) ಎಂದು ಹೇಳಿಕೊಳ್ಳುವರು. ಭೂಯಿಯ ಜನರು "ಪರ್ವತಪುತ್" ಎಂದೂ ಹನುಮಂತನ ಸಂತಾನವೆಂದೂ, ಬಿರಾರಿನ ರಾಮೋಸಿ ಜನರು "ರಾಮವಂಶ" ದವರೆಂದೂ ಹೇಳಿಕೊಳ್ಳುವರು. ದ್ರಾವಿಡರು ತಮ್ಮ ಮೂಲಸ್ಥಾನವಾದ ಮಧ್ಯಏಷ್ಯಾಪ್ರಾಂತ್ಯದಿಂದ ಹೊರಟು ಕ್ರಿ.ಪೂ. ೨೦೦೦ ದಲ್ಲಿ ದಕ್ಷಿಣ ಇಂಡಿಯ ದೇಶಕ್ಕೆ ಬಂದರೆಂದೂ, ಕ್ರಿ.ಪೂ. ೧೦೦೦ ದಲ್ಲಿ ತಮಿಳರು ಬೇರೆಯಾದರೆಂದು ಕಾಲ್ಡ್ವೆಲ್ ಅಭಿಪ್ರಾಯ. ಉತ್ತರ ಭಾರತದಲ್ಲಿರುವ ಮಾಲ್, ಸೌರಿ, ಪಹಾರಿ, ಭೂಯಿಯ, ಕಂಧ್, ಗಾಂಡ್ ಮುಂತಾದ ಜನರು ಈಗಲೂ ಇರುವದರಿಂದ ದ್ರಾವಿಡರು ಉತ್ತರ ಭಾರತದಲ್ಲಿಯೂ ವ್ಯಾಪಿಸಿದ್ದರೆಂದೂ ಆರ್ಯರ ಆಕ್ರಮಣಕ್ಕೆ ಮುಂಚೆ ಇವರ ಸಂಸ್ಕೃತಿಯೇ ಸಿಂಧೂ ಸಂಸ್ಕೃತಿಗೆ ಕಾರಣವೆಂದೂ, ವೇದಗಳಲ್ಲಿ ಅನಾಸ, ದಸ್ಯು, ಶಿಶ್ನದೇವ, ಮೃಧ್ರವಾಚಿ, ಅಸುರ ಎಂಬುದಾಗಿ ನಿರ್ದೇಶಿಸಿರುವ ಆರ್ಯರ ಪ್ರತಿಕಕ್ಷಿಗಳು ದ್ರಾವಿಡರೆಂದೂ ವಿಚಿತ್ರ ಊಹೆಗಳು ಹೊರಟಿವೆ. ಕರ್ಣಾಟಕದಲ್ಲಿರುವ ತೊದವ, ಹಳೇಪೈಕ, ಕುರುಬ, ಕುರುಂಬ, ಕಾಡರ್, ಮಲೆವೇಡರ್, ಓಡಗ, ಇರುಳಿಗ, ಸೋಲಿಗರು ದ್ರಾವಿಡರೆಂದೂ, ಆದರೆ ಅದೇ ಹೆಸರುಳ್ಳ ತಮಿಳು ದೇಶದವರು ಪ್ರಾಗ್ದ್ರಾವಿಡರೆಂದೂ, ಪಾಲಿನೀಷಿಯನ್ ಜನರೆಂದೂ ಕೆಲವರು ಹೇಳುವರು. ನಾಗರು ಪ್ರಾಗ್ದ್ರಾವಿಡರೆಂದೂ ನಾಗಭಾಷೆಗೂ ದ್ರಾವಿಡ ಭಾಷೆಗೂ ವ್ಯತ್ಯಾಸವಿದೆಯೆಂದೂ ಕೆಲವರ ಅಭಿಪ್ರಾಯ. ಆದರೆ ಡಾ|| ಪಾರ್ಕರ್ ಮುಂತಾದವರು ನಾಗರು ನಾಯರ್ ಜನರಾದುದರಿಂದ ದ್ರಾವಿಡರೆಂದು ಹೇಳುವರು. ದಕ್ಷಿಣದೇಶದ ವಿಲ್ಲವರ್, ಮೀನವರ್, (ರಾಜಪುಟಾಣದ ಮೀನರು, ಭಿಲ್ಲರು) ಪುಳುವ, ಓವಿಯ, ಪರದವರ್ ಇವರು ದ್ರಾವಿಡರಲ್ಲವೆಂದೂ ನಾಗವಂಶದವರೆಂದೂ ಕನಕಸಭೈಪಿಳ್ಳೆಯವರು ಅಭಿಪ್ರಾಯಪಡುವರು.

೩. ಆರ್ಯರು. ಹಿಂದೆ ಸೂಚಿಸಿದಂತೆ ಭಾಷಾಪರವಾದ "ಆರ್ಯ" "ದ್ರಾವಿಡ" ಎಂಬ ಪದಗಳು ಒಂದು ಪ್ರತ್ಯೇಕ ಜನಾಂಗಕ್ಕೆ ಅನ್ವಯಿಸುವದಿಲ್ಲ. ಮೊದಲು ಪಾಶ್ಚಾತ್ಯರು ಆರ್ಯಭಾಷೆಗಳ ಸಾಮ್ಯಗಳ ಮೇಲೆ ಆರ್ಯ ಜನಾಂಗವೆಂಬುದು ಇದ್ದಿರಬೇಕೆಂದು ನಿಶ್ಚಯಿಸಿದ್ದರು. ಆದರೆ ಈಚೆಗೆ ನಡೆದಿರುವ ಸಂಶೋಧನೆಯಿಂದ ಈ ಊಹೆಯು ನಿರಾಧಾರವೆಂದು ನಿಶ್ಚಯಿಸಲಾಗಿದೆ. ಗ್ರೀಕ್, ರೋಮನ್, ಟ್ಯುಟಾನಿಕ್, ಸ್ಲಾವ್, ಇರಾನಿಯನ್,

ಹಿಟ್ಟೈಟ್ ಮುಂತಾದ ಭಾಷೆಗಳಿಗೆ ಒಂದು ಮೂಲಭಾಷೆ ಇದ್ದಿರಬೇಕೆಂದೂ ಅದನ್ನು ಉಪಯೋಗಿಸುತ್ತಿದ್ದವರು ಆರ್ಯರೆಂದೂ, ಇವರ ಮೂಲಸ್ಥಾನವು ಮಧ್ಯಏಷ್ಯಾ, ಆಸ್ಟ್ರಿಯ-ಹಂಗೆರಿ, ಬಾಲ್ಟಿಕ್ ಪ್ರಾಂತ್ಯ, ದಕ್ಷಿಣ ರಷ್ಯಾ ಇವುಗಳಲ್ಲಿ ಯಾವುದೋ ಒಂದು ಪ್ರದೇಶವಾಗಿದ್ದಿತೆಂದೂ, ಸುಮಾರು ಕ್ರಿ.ಪೂ. ೨೩೦೦ ರಲ್ಲಿ ಪಶುಪಾಲನೆಯಿಂದ ಜೀವಿಸುತ್ತಿದ್ದ, ಯುದ್ಧಪ್ರಿಯರಾದ, ದೀರ್ಘಕಾಯ, ಶ್ವೇತವರ್ಣ, ದೀರ್ಘಕಪಾಲ, ಸ್ವರ್ಣವರ್ಣದ ಕೂದಲು, ವೃತ್ತಾಕಾರದ ನೀಲ ಅಥವ ಬೂದುಬಣ್ಣದ ಕಣ್ಣುಳ್ಳ ಈ ಜನರು ತಮ್ಮ ಮೂಲನಿವಾಸವಾದ ಉಕ್ರೈನ್—ದಕ್ಷಿಣ ರಷ್ಯಾಭಾಗದಿಂದ ಹೊರಟು ಟ್ರೋಜನ್ ಸಂಸ್ಕೃತಿಯನ್ನು ನಾಶಮಾಡಿ ಪಶ್ಚಿಮದಲ್ಲಿ ಡಾನ್ಯೂಬ್ ಮಾರ್ಗವಾಗಿ ಹೋಗಿ ಯೂರೋಪಿನ ಪ್ರಾಚೀನ ಜನರನ್ನು ಗೆದ್ದು ಥೆಸಲಿ, ಮ್ಯಾಸಿಡೋನಿಯ ಮೂಲಕ ಗ್ರೀಸ್ ದೇಶವನ್ನಾಕ್ರಮಿಸಿ ಮಿನೋವನ್-ಮೈಕೆನಿಯನ್ ಸಂಸ್ಕೃತಿಯನ್ನು ಹಾಳುಮಾಡಿದರೆಂದೂ, ಪೂರ್ವದಲ್ಲಿ ಆನಟೋಲಿಯ, ಸಿರಿಯ, ಇರಾನ್ ಮಾರ್ಗವಾಗಿ ಬಂದು ಪಾಮಿರ್ ಹಿಂದೂಕುಷ್ ಶ್ರೇಣಿಗಳನ್ನು ದಾಟಿ ಎರಡು ಅಲೆಗಳಂತೆ ಪಂಜಾಬ್—ಸಿಂಧು ಪ್ರಾಂತ್ಯವನ್ನು ಸುಮಾರು ಕ್ರಿ.ಪೂ. ೧೫೦೦ ರಲ್ಲಿ ಪ್ರವೇಶಿಸಿ, ಸಿಂಧೂ ಸಂಸ್ಕೃತಿಯನ್ನು ನಾಶಮಾಡಿ, ದ್ರಾವಿಡರನ್ನು ದಕ್ಷಿಣಕ್ಕೆ ಓಡಿಸಿ, ಸಾಮ್ರಾಜ್ಯಗಳನ್ನು ಸ್ಥಾಪಿಸಿದರೆಂದೂ ಸಾಮಾನ್ಯವಾಗಿ ಪಾಶ್ಚಾತ್ಯವಿದ್ವಾಂಸರು ನಿರ್ಧರಿಸಿರುವರು. ಈ ಜನರಿಗೆ ಇಂಡೋ-ಇರಾನಿಯನ್, ಇಂಡೋ-ಯುರೋಪಿಯನ್, ಇಂಡೊ-ಜರ್ಮಾನಿಕ್, ಇಂಡೊ-ಆರ್ಯನ್, ವೈರೋಸ್ ಇತ್ಯಾದಿಯಾಗಿ ತಮ್ಮ ತಮ್ಮ ಇಷ್ಟಾನುಸಾರ ನಾಮಕರಣ ಮಾಡಿರುವರು. ಈ "ಆರ್ಯವಾದ" ವನ್ನು ಪ್ರತಿಭಟಿಸಲು ಇತರರು ಕೆಲ್ಟಿಕ್ ಮೆಡಿಟರೇನಿಯನ್ ಮುಂತಾದ ಜನಗಳ ಪ್ರಶಂಸೆಯನ್ನಧಿಕವಾಗಿ ಮಾಡಿ, ಈ ನಾರ್ಡಿಕ್-ಆರ್ಯರು ನಿರಂತರವೂ ಯುದ್ಧಪ್ರಿಯರು. ಸಂಸ್ಕೃತಿಗಳನ್ನು ನಾಶಮಾಡುವದರಲ್ಲೇ ನಿಪುಣರು, ಇವರಿಂದ ಪ್ರಪಂಚದ ನಾಗರಿಕತೆಗೆ ಸ್ವಲ್ಪವೂ ಉಪಕಾರವಾಗಲಿಲ್ಲವೆಂದೂ, ಪ್ರಾಚೀನ ಸಂಸ್ಕೃತಿಗಳಾದ ಕ್ರೀಟನ್, ಈಜಿಪ್ಷಿಯನ್ ಸುಮೇರಿಯನ್, ಅಸ್ಸಿರಿಯನ್, ಬ್ಯಾಬಿಲೋನಿಯನ್, ಐಬೀರಿಯನ್ ಇತ್ಯಾದಿಗಳೆಲ್ಲವೂ ಮಧ್ಯಧರಾಸಮುದ್ರ ಜನಾಂಗದವರದೆಂದೂ ಸ್ಥಾಪಿಸಲು ಯತ್ನಿಸುತ್ತಿರುವರು. ಇಂತಹ ವಾದಗಳು ಕೇವಲ ಜಾತಿವೈಷಮ್ಯಜನ್ಯವಾದುದರಿಂದ ಅನಾದರಣೀಯ.

ಆರ್ಯ ಎಂಬ ಹೆಸರು ವೇದಪ್ರವರ್ತಕರಾದ ಜನರಿಗೂ, ಅವೆಸ್ಟ

ಗ್ರಂಥವನ್ನು ರಚಿಸಿ ತಮ್ಮನ್ನು "ಐರಿಯು", "ಅರಿಯ" ಎಂದು ಕರೆದು ಕೊಂಡಿರುವ ಪ್ರಾಚೀನ ಇರಾನ್ ಜನರಿಗೂ ಮಾತ್ರವೇ ಅನ್ವಯಿಸುತ್ತದೆ. ಆದರೆ ಇವರಿಬ್ಬರೂ ಒಂದೇ ವರ್ಗಕ್ಕೆ ಸೇರಿದವರೆಂದು ಹೇಳಲು ಸಾಧ್ಯವಿಲ್ಲ. ಭಾಷಾದೃಷ್ಟಿಯಿಂದಲೂ ಮಾನವವರ್ಗದೃಷ್ಟಿಯಿಂದಲೂ ಹಿಂದೂಕುಷ್ ಪರ್ವತಶ್ರೇಣಿಯು ವಿಭಾಗರೇಖೆಯಾಗಿದೆ. ಇದಕ್ಕೆ ಉತ್ತರದಲ್ಲಿ ವಿಶಾಲ ಕಪಾಲಗಳುಳ್ಳ ಜನರು ಇರಾನಿಕ್ ಭಾಷೆಗಳನ್ನಾಡುವರು. ದಕ್ಷಿಣದಲ್ಲಿ ದೀರ್ಘಕಪಾಲಗಳುಳ್ಳವರು ಸಂಸ್ಕೃತ ಸಂಬಂಧವಾದ ಪೈಶಾಚಿ ಪ್ರಾಕೃತ ಭಾಷೆಗಳನ್ನು ಹೊಂದಿರುವರು. ಭಾಷೆಯು ಮೂಲತಃ ಒಂದೇ ಆದರೂ ಉತ್ತರದವರು ಆಲ್ಪೈನ್-ಅರ್ಮಿನಾಯ್ಡ್ ಜನರೆಂದೂ ದಕ್ಷಿಣದವರು ಇಂಡೊ-ಆರ್ಯರೆಂದು ಸಿಶ್ಚಯಿಸಿದೆ. ಯೂರೋಪ್‌ಖಂಡದಲ್ಲಿ "ಮೆಸೊಲಿಥಿಕ್" (ಮಧ್ಯಶಿಲಾಯುಗ) ಕಾಲದಲ್ಲಿ ಯೋಧಸಂಸ್ಕೃತಿಯು (Warrior Culture), ಏಕಸಮಾಧಿ (Single Grave), ಗಂಡು ಕೊಡಲಿ (Battle Axe), ದಾರದ ಚಿಹ್ನೆಗಳುಳ್ಳ ಕುಂಭ (Cord Ware)ಗಳಿಂದ ತಿಳಿದುಬರುವದು. ಈ ಜನರ "ಇಂಡೋ-ಯೂರೋಪಿಯನ್" ಭಾಷೆಗಳನ್ನು ಪರಿಶೀಲಿಸಿದರೆ ಇವರ ಮೂಲದೇಶವು ಬಾಲ್ಟಿಕ್ ಸಮುದ್ರ, ಉತ್ತರ ಸಮುದ್ರದಿಂದ ಹಿಡಿದು ದಕ್ಷಿಣದಲ್ಲಿ ಕಪ್ಪುಸಮುದ್ರ, ಕಾಕಸಸ್ ಅಥವಾ ಕ್ಯಾಸ್ಪಿಯನ್ ವರೆಗೂ ಹರಡಿದ್ದಿತೆಂದು ಊಹಿಸಬಹುದು. ಇವರ ಭಾಷೆಗೂ ಉತ್ತರದಲ್ಲಿ ಫಿನ್ನೋ ಉಗ್ರಿಯನ್, ಪೂರ್ವದಲ್ಲಿ ಯೂರಲಿಕ್, ದಕ್ಷಿಣದಲ್ಲಿ ಸಮೀಪ ಪ್ರಾಚ್ಯ ದೇಶದ ಭಾಷೆಗಳಿಗೂ ಸಂಬಂಧವಿದ್ದಿತು. ಆರ್ಯರ ಭಾಷೆಯಲ್ಲಿ ತಾಮ್ರ ಮತ್ತು ಪರಶುಗಳಿಗೆ ಸುಮೇರಿಯನ್ ಭಾಷೆಯ ಹೆಸರುಗಳೇ ಇವೆ. ಆದುದರಿಂದ ಆರ್ಯರ ಸಂಸ್ಕೃತಿಯಲ್ಲಿಯೂ ಭಾಷೆಯಲ್ಲಿಯೂ ಉತ್ತರದ ಯೂರ್-ಏಷಿಯಾಟಿಕ್ ಮತ್ತು ದಕ್ಷಿಣದ ಸಮೀಪ ಪ್ರಾಚ್ಯಸಂಸ್ಕೃತಿಗಳ ಪ್ರಭಾವವನ್ನು ನೋಡಬಹುದು. ಆದುದರಿಂದ ಆರ್ಯರ ಮೂಲನಿವಾಸವು ಉತ್ತರ ಯೂರೋಪ್ ಎಂದು ಕೆಲವರು, ದಕ್ಷಿಣ ರಷ್ಯಾ ಅಥವಾ ಕಾಕಸಸ್ ಪ್ರಾಂತ್ಯವೆಂದು ಕೆಲವರೂ ಹೇಳುವರು. ಆದರೆ ಮೂಲನಿವಾಸವನ್ನು ಖಂಡಿತವಾಗಿ ನಿರ್ಣಯಿಸುವದು ಅಸಾಧ್ಯ. ಡ್ಯಾನ್ಯುಬ್ ಪ್ರಾಂತ್ಯದ ವ್ಯವಸಾಯಗಾರರೇ ಆರ್ಯರೆಂದೂ, ಈಶಾನ್ಯದ ಬಾಚಣಿಗೆ ಗುರುತಿನ ಘಟದ (Comb Ware) ಜನರೇ ಆರ್ಯರೆಂದೂ ಭಿನ್ನಾಭಿಪ್ರಾಯಗಳಿವೆ. ಆದರೆ "ಇಂಡೋ-ಯೂರೋಪಿಯನ್" ಭಾಷೆಯು ಯೋಧಸಂಸ್ಕೃತಿಯ ಜನರಿಗೆ ಮಾತ್ರ ಸೇರಿದ್ದಿತೆಂದು ಹೇಳಲಾಗದು. ಇವರೂ ಈ ಭಾಷೆಯನ್ನಾಡು

ತ್ತಿದ್ದರೂ ಮಿಕ್ಕವರಿಗೂ ಇದೇ ಭಾಷೆ ಇದ್ದಿರಬಹುದು. ಆದರೂ ಈ ಭಾಷೆಯು ಪುರುಷಪ್ರಧಾನವಾದ ಯುದ್ಧಪ್ರಿಯವಾದ ಸಂಸ್ಕೃತಿಯೊಡನೆ ಯೂರೋಪ್ ಖಂಡದಲ್ಲಿ ಕ್ರಿಸ್ತಪೂರ್ವ ಮೂರನೆಯ ಸಹಸ್ರಾಬ್ದದಲ್ಲಿ ವ್ಯಾಪಿಸಿತೆಂದು ಡಾ|| ಹಾಕ್ ಅಭಿಪ್ರಾಯಪಡುವರು.[10]

ಕ್ಷತ್ರಿಯರೇ ಆರ್ಯರೆಂದೂ ಬ್ರಾಹ್ಮಣರು "ಮೆಡಿಟರೇನಿಯನ್" ಜನಾಂಗದವರೆಂದೂ, ಮೊದಲು ಕ್ಷತ್ರಿಯರೇ ಉತ್ತಮವರ್ಣದವರಾಗಿದ್ದು ಅಶ್ವಪತಿಕೇಕಯ ಜನಕರಂತಹ ಕ್ಷತ್ರಿಯರು ಜ್ಞಾನಮಾರ್ಗವನ್ನು ಬ್ರಾಹ್ಮಣರಿಗೆ ಬೋಧಿಸಿದರೆಂದು, ಕೇವಲ ಕರ್ಮಮಾರ್ಗವನ್ನು ಖಂಡಿಸಿದ ಬುದ್ಧ ಮಹಾವೀರ ಮುಂತಾದವರು ಕ್ಷತ್ರಿಯರಾಗಿದ್ದುದರಿಂದ ಕ್ಷತ್ರಿಯರು ಬ್ರಾಹ್ಮಣರಿಗಿಂತ ಭಿನ್ನರೆಂದೂ ಕೆಲವರು ಊಹಿಸುವರು[11]. ಮತ್ತೆ ಕೆಲವರು ಆರ್ಯರಲ್ಲಿಯೇ ವೈದಿಕ ಆರ್ಯರು ಅವೈದಿಕ ಆರ್ಯರೆಂಬ ಎರಡು ಪಂಗಡಗಳಿದ್ದವೆಂದೂ, ಇವರಲ್ಲಿ ವಿಶಾಲಕಪಾಲವುಳ್ಳ ಪಾಮಿರ್-ಆಲ್ಪೈನ್ ಜನರೇ ದ್ರಾವಿಡರೆಂದೆನಿಸಿ ಸಿಂಧೂ ಸಂಸ್ಕೃತಿಗೆ ಕಾರಣರಾದರೆಂದೂ, ಹೊರಗಣ ಇಂಡೋ-ಆರ್ಯನ್ ಭಾಷಾಪ್ರಭೇದಗಳಿಗೆ ಇವರೇ ಕಾರಣರೆಂದೂ ಹೇಳುವರು. ಈ ದ್ರಾವಿಡರೆಂದೆನಿಸಿದ ಅವೈದಿಕ ಆರ್ಯರು ಭರತಖಂಡದಲ್ಲಿ ನೆಲಸಿದ ನಂತರ ಸುಮಾರು ಕ್ರಿ.ಪೂ. ೧೫೦೦ ರಲ್ಲಿ ವೈದಿಕ ಆರ್ಯರು ಬಂದರೆಂದೂ ಹೇಳುವರು.

ಭಾರತೀಯರ ಸಾಂಪ್ರದಾಯಿಕ ದೃಷ್ಟಿಯಿಂದಲೂ ಇತರ ನಿದರ್ಶನಗಳಿಂದಲೂ ಮೇಲೆ ಹೇಳಿದ ಅಭಿಪ್ರಾಯಗಳೆಲ್ಲವೂ ಕೇವಲ ಪ್ರಮಾಣರಹಿತವಾದುವೆಂದು ನಿಶ್ಚಯಿಸಬಹುದು. ಅಪಾರವಾದ ಭಾರತೀಯ ವಾಙ್ಮಯದಲ್ಲಿ ಎಲ್ಲಿಯೂ ಆರ್ಯರು ಕೇವಲ ಯುದ್ಧಪ್ರಿಯರೆಂದಾಗಲೀ, ಪಶುಪಾಲನೆ ಮಾತ್ರದಿಂದ ಜೀವಿಸುವವರೆಂದಾಗಲೀ, ಪರದೇಶದಿಂದ ಬಂದು ನೆಲಸಿದವರೆಂದಾಗಲೀ ಹೇಳಿಲ್ಲ. ಆರ್ಯಾವರ್ತವು ವಿಂಧ್ಯ-ಹಿಮಾಚಲ ಮಧ್ಯಭಾಗ. ಇದರಲ್ಲಿ ಅತ್ಯಂತ ಪವಿತ್ರವೆನಿಸಿದ ಬ್ರಹ್ಮಾವರ್ತ ಬ್ರಹ್ಮರ್ಷಿ ದೇಶಗಳು ಗಂಗಾ-ಯಮುನಾ ಪ್ರಾಂತ್ಯದಲ್ಲಿದ್ದವು. ಕೀತ್, ಮಾಕ್ಡೋನೆಲ್ ಮುಂತಾದವರು ಕೂಡ "ಈಚೆಗೆ ಹಾಪ್ಕಿನ್ಸ್, ಗೆಲ್ಡ್ನರ್, ಪಿಷೆಲ್ ಇತ್ಯಾದಿ ಸಂಶೋಧಕರು ಕಂಡುಹಿಡಿದಿರುವ ಅಂಶಗಳಿಂದ ಋಗ್ವೇದದ ಮೂಲಸ್ಥಾನವು ಪಂಜಾಬ್ ಪ್ರಾಂತವಲ್ಲವೆಂದೂ, ಇದಕ್ಕೆ ಪೂರ್ವದಲ್ಲಿರುವ ಮಧ್ಯದೇಶದಲ್ಲಿ ಸಂಹಿತೆಯು ರಚಿತವಾಯಿತೆಂದೂ ತಿಳಿದುಬರುವದು" ಎಂಬುದಾಗಿ ಅಭಿಪ್ರಾಯಪಡು

---

[10] Hawke, *Foundation of Europe*.

[11] Pargiter, *Indian Historical Tradition*.

ವರು[12]. ಋಗ್ವೇದದ ದಶಮಮಂಡಲದಲ್ಲಿರುವ "ನದೀಸ್ತುತಿ"ಯಲ್ಲಿ ಗಂಗಾ, ಯಮುನಾ, ಸರಸ್ವತೀ, ಶುತುದ್ರಿ, ಪರುಷ್ಣೀ, ಅಸಿಕ್ನಿ, ಮರುದ್ವೃಧಾ, ವಿತಸ್ತಾ, ಆರ್ಜೀಕೀಯ, ಸುಷೋಮಾ ಎಂಬುದಾಗಿ ಪೂರ್ವದಿಂದ ಪಶ್ಚಿಮಕ್ಕೆ ನದಿಗಳ ಹೆಸರುಗಳನ್ನು ಹೇಳಿರುವದರಿಂದ ಆರ್ಯರು ತಮ್ಮ ಮೂಲಸ್ಥಾನವಾದ ಗಂಗಾ-ಯಮುನಾ ಅಂತರ್ವೇದಿಯಿಂದ ಪಶ್ಚಿಮದೇಶ ಗಳಿಗೆ ಪ್ರವಾಸಮಾಡಿದರೆಂದು ನಿಶ್ಚಯಿಸಬಹುದು. ವೇದವಾಙ್ಮಯದಲ್ಲಿ ಕಂಡುಬರುವ ಕುವಹಾ (ಕುಭಾ=ಕೊಫೆನ್, ಕಾಬೂಲ್‌ನದಿ), ಕ್ರುಮು (ಕುರ್‍ರಂ), ಗೋಮತೀ (ಗೋಮಾಲ್), ರಸಾ (ಅರಾಸೀಸ್ ಅಥವಾ ಪ್ಷಕ್ಸಾರ್ಟೀಸ್) ಮುಂತಾದ ನದಿಗಳೂ ಹಿಂದೂಕುಷ್ ವರೆಗೆ ಮಾತ್ರ ಆರ್ಯದೇಶವನ್ನು ಸೂಚಿಸುವವು. ಆದುದರಿಂದ ಆರ್ಯಸಂಸ್ಕೃತಿಯು "ಮೆಸೊಲಿಥಿಕ್" ಮತ್ತು ನವಶಿಲಾಯುಗದಲ್ಲಿ (ಕ್ರಿ.ಪೂ. ೧೦,೦೦೦) ಯೇ ಪಾಶ್ಚಾತ್ಯ ದೇಶಗಳಿಗೆ ವ್ಯಾಪಿಸಿ, ಇರಾನ್, ಹಿಟ್ಟೈಟ್, ಮಿಟಾನ್ನೈ, ಹುರ್ರಿ, ಸಂಸ್ಕೃತಿಗಳಿಗೆ ಕಾರಣವಾಗಿ, ಹೆಲ್ಲಿಸ್‌ಪಾಂಟ್ ಕೊಲ್ಲಿಯನ್ನು ದಾಟಿ, ಉಕ್ರೈನ್-ಡಾನ್ಯೂಬ್ ಪ್ರಾಂತಗಳಲ್ಲಿ ಕ್ರಿ.ಪೂ. ೩೦೦೦ ದಲ್ಲಿ ಸ್ಥಾಪಿತ ವಾಯಿತೆಂದು ನಿಶ್ಚಯಿಸಿದೆ. ಇದರಿಂದ ಆರ್ಯರ ಮೂಲಸ್ಥಾನವು ಪೂರ್ವ ಪಂಚನದ, ಕುರುಪಾಂಚಾಲ ಗಂಗಾ-ಯಮುನಾ ಪ್ರಾಂತ್ಯವಾಗಿದ್ದಿತೆಂದು ನಿರ್ಧರಿಸಬಹುದು. "ಆರ್ಯಸಂಸ್ಕೃತಿ'ಯನ್ನು ಯೋಧಸಂಸ್ಕೃತಿ (**Warrior Culture**) ಎಂದು ಕರೆಯುವದು ಯೂರೋಪಿನ ಆರ್ಯ ಸಂಸ್ಕೃತಿಯ ಆಭಾಸರೂಪಕ್ಕೆ ಮಾತ್ರ ಅನ್ವಯಿಸುವದು. ವೈದಿಕ ಆರ್ಯರಿಗೆ ಸಲ್ಲದು. "ಆರ್ಯ" ಎಂಬ ಪದವು ರಿ-ಅರ್=ಉಳು ಎಂಬ ಧಾತುವಿನಿಂದ ಉತ್ಪನ್ನವಾಗಿರುವದರಿಂದಲೂ, ಲ್ಯಾಟಿನ್ ಪದಗಳಾದ "ಅರಟ್ರುಂ" (***Aratrum*—a plough**) "ಏರಿಯ" (ಕೃಷಿಕ್ಷೇತ್ರ, ಮೈದಾನ) ಇತ್ಯಾದಿ ಗಳಿಗೆ ಸಂಬಂಧಪಟ್ಟಿರುವದರಿಂದಲೂ ಆರ್ಯರು ನೆಲೆಯಿಲ್ಲದ ಪಶುಪಾಲಕ ರೆಂದಾಗಲೀ ಯಾವಾಗಲೂ, ಯುದ್ಧಾಸಕ್ತರೆಂದಾಗಲೀ ಹೇಳುವದು ವೇದ ವಾಙ್ಮಯಕ್ಕೂ ಇತರ ಆಧಾರಗಳಿಗೂ ವಿರುದ್ಧವಾದುದು. ಯೂರೋಪಿನ "ಇಂಡೋ-ಯೂರೋಪಿಯನ್" ಜನರಿಗೂ ಭಾರತೀಯ ಆರ್ಯರಿಗೂ ಅತ್ಯಂತ ಭೇದವಿದೆ. ಮತ್ತು "ದ್ರಾವಿಡ" ಜನಾಂಗ, ಸಂಸ್ಕೃತಿ, ಭಾಷೆಗಳಿಗೆ ಪೃಥಕ್ಕಾದ ಒಂದು ಸ್ವರೂಪವಿದೆ ಎಂಬ ವಾದವೂ ನಿರಾಧಾರವಾದುದು.

[12] Macdonnell and Keith, *Vedic Index*, p. 468. The Vedic Age. (**Bharatiya Vidya Bhavan, Vol. I**).

ಸಿಂಧೂ ಸಂಸ್ಕೃತಿಯು ದ್ರಾವಿಡ ಅಥವಾ ಅನಾರ್ಯರದೆಂಬ ವಾದವು ಸತ್ಯ ದೂರವೆಂದು ಮುಂದೆ ಸೂಚಿಸುತ್ತೇವೆ.

**ಭಾಷೆಗಳು :** ಮಾನವನ ಮೂಲಭಾಷೆಯು ಪಶುಪಕ್ಷಿ ಸಾಮಾನ್ಯವಾದ ಕೆಲವು ಧ್ವನಿಗಳ ಅನುಕರಣೆಯಿಂದಲೂ ಮತ್ತು ಹಸಿವು, ಭಯ, ಆಶ್ಚರ್ಯ, ಸಂತೋಷಸೂಚಕವಾದ ಕೆಲವು ಅಂಗವಿಕ್ಷೇಪ ಸಂಕೇತಗಳಿಂದಲೂ ಜನ್ಯ ವಾಯಿತೆಂದು ಊಹಿಸಲಾಗಿದೆ. ಈ ಸ್ಥಿತಿಯಲ್ಲಿ ಭಾಷೆಯು ಏಕಾಕ್ಷರಾತ್ಮಕ (Monosyllabic) ವಾಗಿದ್ದು ಪದಗಳು ಕೇವಲ ವ್ಯಕ್ತಿಸೂಚಕವಾಗಿದ್ದವು. ಬಹಳ ಕಾಲಾನಂತರ ಜಾತಿಸೂಚಕಗಳಾದ ಪದಗಳು ಮನುಷ್ಯನ ತಾಲ ಓಷ್ಠ್ಯ ದಂತಾದಿಗಳ ಬೆಳವಣಿಗೆಯನ್ನೂ ಮಿದುಳಿನ ಮುಂಭಾಗದ (Neopallium) ಬೆಳವಣಿಗೆಯನ್ನು ಅನುಸರಿಸಿ ಪ್ರಚಾರಕ್ಕೆ ಬಂದವು. ಈಗಲೂ ಕೂಡ ಅನೇಕ ಅನಾಗರಿಕ ಜನರಲ್ಲಿ ಜಾತಿಸೂಚಕಗಳಾದ ಪದಗಳಿಲ್ಲ. ಕೆಂಪುಹಸು, ಕರಿಹಸು.



ಬಿಳಿಯಹಸು ಎಂಬ ಪದಗಳಿವೆಯೇ ವಿನಾ "ಹಸು" ಎಂಬ ಜಾತಿಸೂಚಕವಾದ ಪ್ರತ್ಯೇಕಪದವಿಲ್ಲ. ಮಾನವನು ಬೇಟೆ ಮತ್ತು ಪಶುಪಾಲನೆಯಿಂದ ಜೀವಿಸುತ್ತಿದ್ದ ಕಾಲದಲ್ಲಿ ಹೊಸ ಅನುಭವಗಳನ್ನು ಸೂಚಿಸುವದಕ್ಕಾಗಿ ಹೊಸ ಪದಗಳು ಅವಶ್ಯಕವಾದವು. ವ್ಯವಸಾಯ, ವ್ಯಾಪಾರ, ಕೈಗಾರಿಕೆಗಳು ಬೆಳೆದ ಹಾಗೆಲ್ಲ ಇತರ ಜನಾಂಗಗಳೊಡನೆ ಸಂಪರ್ಕವುಂಟಾಗಿ ಭಾಷೆಯು ಅಂಟು ಭಾಷೆ (Agglutinative) ಆಯಿತೆಂದೂ, ಕೊನೆಗೆ ಸಂಸ್ಕೃತ, ಗ್ರೀಕ್, ಲ್ಯಾಟಿನ್ ಭಾಷೆಗಳಂತೆ (Inflexional) ಆಯಿತೆಂದೂ ಕೆಲವರು ಊಹಿಸುವರು. ಪ್ರಪಂಚದಲ್ಲಿರುವ ಭಾಷೆಗಳೆಲ್ಲವೂ ಒಂದೇ ಕಡೆಯಲ್ಲಿ ಒಂದೇ ಜನಾಂಗದಲ್ಲಿ ಹುಟ್ಟಿ ಕಾಲಕ್ರಮೇಣ ಇತರ ದೇಶಗಳಿಗೆ ಹರಡಿದವೇ ಅಥವಾ ಪ್ರಪಂಚದ ವಿವಿಧ ಭಾಗದವರು ತಮ್ಮ ಭಾಷೆಯನ್ನು ಸ್ವತಂತ್ರವಾಗಿ ಕಂಡುಹಿಡಿದರೇ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ.

ಭರತಖಂಡದಲ್ಲಿ ಮುಖ್ಯವಾದ ಭಾಷೆಗಳು ಆರ್ಯ ಅಥವಾ ದ್ರಾವಿಡ ಭಾಷಾವರ್ಗಗಳಿಗೆ ಸೇರಿವೆ. ಸುಮಾರು ೩೦೦ ಸ್ಥಾನಿಕ ಭಾಷಾಪ್ರಭೇದಗಳಿವೆಯೆಂದು ಲೆಕ್ಕಿಸಿದೆ. ಆದರೆ ಇವುಗಳಲ್ಲಿ ಮುಂಡ-ನಾಗ-ಅಸ್ಸಾಮೀಸ್, ತಮಿಳು, ತೆಲುಗು, ಕನ್ನಡ, ಮರಾಠಿ, ಬೆಂಗಾಲಿ, ಪೂರ್ವಹಿಂದಿ, ಪಶ್ಚಿಮಹಿಂದಿ (ಉರ್ದು), ಉರಿಯ, ಮತ್ತು ಗುಜರಾತಿ ಎಂಬ ಹತ್ತು ಭಾಷೆಗಳೇ ಮುಖ್ಯವಾದುವು.[18]

[18] ಮುಖ್ಯಭಾಷೆಗಳು (೧೯೩೧ ನೆಯ ಜನಗಣನೆಯಂತೆ).

| | ಭಾಷೆ | ಪುರುಷರು | ಸ್ತ್ರೀಯರು |
|---|---|---|---|
| ೧. | ಮುಂಡ-ನಾಗ-ಅಸ್ಸಾಮಿ | ೧,೦೪೨,೦೦೦ | ೯೫೭,೦೦೦ |
| ೨. | ತಮಿಳು | ೧೦,೦೭೩,೦೦೦ | ೧೦,೩೩೯,೦೦೦ |
| ೩. | ತೆಲುಗು | ೧೩,೭೯೧,೦೦೦ | ೧೩,೦೮೩,೦೦೦ |
| ೪. | ಕನ್ನಡ | ೫,೬೯೦,೦೦೦ | ೫,೫೧೬,೦೦೦ |
| ೫. | ಮರಾಠಿ | ೧೦,೫೭೩,೦೦೦ | ೧೦,೩೧೭,೦೦೦ |
| ೬. | ಬಂಗಾಳಿ | ೨೭,೫೧೭,೦೦೦ | ೨೫,೯೫೭,೦೦೦ |
| ೭. | ಪೂರ್ವ ಹಿಂದಿ | ೪,೭೧೦,೦೦೦ | ೨,೬೫೭,೦೦೦ |
| ೮. | ಪಶ್ಚಿಮ ಹಿಂದಿ | ೩೭,೭೪೩,೦೦೦ | ೩೩,೮೦೪,೦೦೦ |
| ೯. | ಉರಿಯ | ೫,೪೮೫,೦೦೦ | ೫,೭೦೯,೦೦೦ |
| ೧೦. | ಗುಜರಾತಿ | ೪,೬೧೦,೦೦೦ | ೫,೭೪೬,೦೦೦ |

**ಆರ್ಯಭಾಷಾವರ್ಗ:** "ಇಂಡೋ-ಯೂರೋಪಿಯನ್," "ಇಂಡೋ-ಜರ್ಮಾನಿಕ್," "ಉರ್-ಆರ್ಯನ್" ಇತ್ಯಾದಿಯಾಗಿ ಪಾಶ್ಚಾತ್ಯರಿಂದ ಕರೆಯಲ್ಪಟ್ಟ ಭಾಷಾವರ್ಗದಲ್ಲಿ "ಆರ್ಯ" ಎಂಬ ಪ್ರಭೇದವು ಇರಾನಿಯನ್, ದಾರದ, ಇಂಡಿಕ್ ಎಂಬ ಮೂರು ಭಾಷೆಗಳಿಗೆ ಮೂಲವೆಂದು ಡಾ|| ಗ್ರಿಯರ್‌ಸನ್ ಅಭಿಪ್ರಾಯಪಡುವನು. ಇರಾನಿಯನ್ ಭಾಷೆಯಿಂದ ಪಾರಸಿಕ, ಅವೆಸ್ಟಿಕ್, ಸಿಥಿಕ್, ಪೂರ್ವ ಇರಾನಿಯನ್ ಭಾಷಾಪ್ರಭೇದಗಳು ಹುಟ್ಟಿದವು. ಪಾರಸಿಕದಿಂದ ಕುರ್ದು, ಪ್ರಾಚೀನ ಪರ್ಷಿಯನ್, ಬುಗ್ಗಿಸ್ತಾ ಎಂಬವೂ ಪ್ರಾಚೀನ ಪರ್ಷಿಯನ್ನಿಂದ ಪೆಹ್ಲವಿಯೂ ಜನ್ಯವಾದವು. ಇಂಡಿಕ್ ವರ್ಗಕ್ಕೆ ವೈದಿಕ, ಸಂಸ್ಕೃತ, ಪ್ರಾಚೀನ ಪ್ರಾಕೃತ, ಪಾಲಿ, ಅಪಭ್ರಂಶ, ಆಧುನಿಕ ಆರ್ಯಭಾಷೆಗಳು, ಎಲು (ಪ್ರಾಚೀನ ಸಿಂಹಳ), ಜಿಪ್ಸಿಭಾಷೆಗಳು ಸೇರಿವೆ. ದಾರದ ಅಥವಾ ಪೈಶಾಚೀ ವರ್ಗಕ್ಕೆ ಕಾಫಿರ್-ಬಷ್ಕಲೀ, ವೈ-ಅಲಾ, ಖೋ-ವರಾ, ಷಿನಾ, ಕೋಹಿಸ್ತಾನಿ ಇತ್ಯಾದಿಗಳು ಸೇರಿವೆ. ಅನೇಕ ವೈದಿಕ ಶಬ್ದಗಳು ಈ ಪೈಶಾಚಿ ಭಾಷೆಗಳಲ್ಲಿ ಈಗಲೂ ಕಂಡುಬರುವವು. ಈ ಪೈಶಾಚಿ ಭಾಷೆಗಳಿಂದಲೆ ಪಾಲಿ ಮುಂತಾದ ಪ್ರಾಕೃತಗಳೂ ದ್ರಾವಿಡ ಭಾಷೆಗಳೂ ಹುಟ್ಟಿದವೆಂದು ಕೆಲವರು ಅಭಿಪ್ರಾಯಪಡುವರು.

ಈಚೆಗೆ ಚಿತ್ರಲಿಪಿಯ ಹಟ್ಟಿಲಿ (Pictographic Hittite or Hattili) ಭಾಷೆಯನ್ನು ಹ್ರಾಸ್ನಿ, ಸ್ಟರ್ಟಿವಾಂಟ್, ಫ್ರಾಯರ್ ಮುಂತಾದ ಪಂಡಿತರು ವಿಮರ್ಶಿಸಿ "ಇಂಡೋ-ಯೂರೋಪಿಯನ್" ಎಂದು ಕರೆಯಲ್ಪಡುತ್ತಿದ್ದ ಭಾಷೆಯ ವಿಷಯವಾಗಿ ನೂತನ ಅಭಿಪ್ರಾಯಗಳನ್ನು ಹೊರಡಿಸಿರುವದರಿಂದ ಹಿಂದಣ ಅಭಿಪ್ರಾಯಗಳನ್ನು ವಿಸ್ತಾರವಾಗಿ ವಿಮರ್ಶಿಸುವದು ಅನವಶ್ಯಕ. ಕೋಣಲಿಪಿ (Cuneiform)ಯಲ್ಲಿರುವ "ಕ್ಲಾಸಿಕಲ್ ಹಿಟ್ಟೈಟ್" ಭಾಷೆಯಲ್ಲಿ ಅನೇಕ ಅನಾರ್ಯಪದಗಳಿರುವದರಿಂದ ಇದು ಆಧುನಿಕವು. (ಕ್ರಿ.ಪೂ. ೨೦೦೦). ಇದಕ್ಕಿಂತಲೂ ಪ್ರಾಚೀನವಾದ ಚಿತ್ರಲಿಪಿಯ ಹಟ್ಟಿಲಿ ಅಥವಾ ನೆಸಲಿ—ನೆಸುಮ್ಲಿಲಿ ಎಂಬ ಭಾಷೆಯೇ ಆರ್ಯತರವೆಂದು ಅನೇಕರು ಅಂಗೀಕರಿಸಿರುವರು. ಆದುದರಿಂದ ಇಂಡೋ-ಹಟ್ಟಿ ಎಂಬುದೇ ಮೂಲವೆಂದೂ ಇದರಿಂದ ಇಂಡೋ-ಯೂರೋಪಿಯನ್ ಭಾಷೆಯು ಹುಟ್ಟಿತೆಂದೂ ನಿರ್ಧರಿಸಿದೆ.




"ಸೆಂಟಂ" ಮತ್ತು ಸೇಟಮ್" ಎಂಬ ತತ್ತ್ವವನ್ನನುಸರಿಸಿ ಈ ವರ್ಗದ ಭಿನ್ನಭಾಷಾ ಸಂಬಂಧವನ್ನು ಈ ವೃತ್ತಗಳಿಂದ (isoglosses) ಸೂಚಿಸಬಹುದು.

| | | |
|---|---|---|
| ೧೧. ಜರ್ಮನ್ | ೧. ಹಿಟ್ಟೈಟ್ | ೪. ಬಾಲ್ಟೊ-ಸ್ಲೊವಾನಿಕ್ |
| ೧೦. ಕೆಲ್ಟಿಕ್<br>೯. ಇಟಾಲಿಯನ್ | ೨. ತೊಖಾರಿ | ೫. ಆಲ್ಬೇನಿಯನ್<br>೬. ಇಂಡೋ-ಇರಾನಿಯನ್ |
| ೮. ಗ್ರೀಕ್ | ೩. ಥ್ರೇಕೋ-ಫ್ರಿಜಿಯನ್ | ೭. ಅರ್ಮೀನಿಯನ್ |

ಮೊದಲಿನ ಮೂರು ಭಾಷೆಗಳು ಮಧ್ಯ ಇಂಡೋ-ಯೂರೋಪಿಯನ್ ಪಂಗಡಕ್ಕೂ, ೪, ೫, ೬, ೭ ಸೇಟಂಪಂಗಡಕ್ಕೂ, ೮, ೯, ೧೦, ೧೧ ಸೆಂಟಮ್ ಪಂಗಡಕ್ಕೂ ಸೇರಿವೆ. ಹಟ್ಟಿ ಎಂಬ ಮೂಲಜನಾಂಗವು ಪೂರ್ವ ಏಷ್ಯಾಮೈನರ್ ದೇಶದಲ್ಲಿದ್ದಿತೆಂದೂ ಅನಂತರ ಆ ದೇಶಕ್ಕೆ ಬಂದ ಬೇರೆ ಜನಾಂಗವು ಹಿಂದಣವರ ಹೆಸರನ್ನೇ ತಾವೂ ಸ್ವೀಕರಿಸಿ ಹಿಟ್ಟೈಟ್ ಸಾಮ್ರಾಜ್ಯವನ್ನು ಕ್ರಿ.ಪೂ. ೨೦೦೦ದಲ್ಲಿ ಸ್ಥಾಪಿಸಿದರೆಂದು ಡಾ॥ ಹ್ರಾಸ್ನಿಯ ಅಭಿಪ್ರಾಯ. ಕೋಣಲಿಪಿಯ ಶಾಸನಗಳಲ್ಲಿ "ಹಟ್ಟಿಲಿ ಕಿಸನ್

ಮತ್ತಿ, ಹಟ್ಟಿಲಿ ಮೆಮ ಇ" (ಹಟ್ಟಿಲಿ ಭಾಷೆಯಲ್ಲಿ ಹೀಗೆ ಹೇಳುವನು) ಎಂಬುದಾಗಿ ಪ್ರಾಚೀನ ಭಾಷೆಯ ವಾಕ್ಯಗಳಿರುವದರಿಂದ ಹಟ್ಟಿಲಿ ಭಾಷೆ "ಕ್ಲಾಸಿಕಲ್ ಹಿಟ್ಟೈಟ್" ಭಾಷೆಗಿಂತ ಭಿನ್ನವಾಗಿದ್ದಿತು. ಈ ಪ್ರಾಚೀನ ಚಿತ್ರಲಿಪಿಯು ಹಟ್ಟಿಲಿ ಭಾಷೆಯಲ್ಲಿ ಕಂಡುಬಂದಿರುವ ದೇವತೆಗಳ ರಾಜರ ಮತ್ತು ಇತರ ವಸ್ತುಗಳ ಹೆಸರುಗಳು ಸಂಸ್ಕೃತಸಂಬಂಧವನ್ನು ಸೂಚಿಸುವವು[14]. ವ್ಯಾಕರಣಾಂಶಗಳಲ್ಲಿ ಇಂಡೋ-ಹಿಟ್ಟೈಟ್ ಭಾಷೆಗೂ ಇಂಡೋ-ಯೂರೋಪಿಯನ್ ಭಾಷೆಗೂ ಕೆಲವು ವ್ಯತ್ಯಾಸಗಳಿವೆ[15]. ಡಾ|| ಸ್ಟರ್ಟಿವಾಂಟ್ ಹಿಟ್ಟೈಟ್ ಭಾಷೆಯು ಇಂಡೋ-ಯೂರೋಪಿಯನ್ ಭಾಷೆಗಿಂತಲೂ ಪ್ರತ್ಯೇಕವಾದರೂ ಹಿಟ್ಟೈಟ್ ಭಾಷೆಯ ಕೆಲವು ಅಂಶಗಳು ಇಂಡೋ-ಯೂರೋಪಿಯನ್ ಭಾಷೆಯ ವಿಕಾಸಕ್ರಮವನ್ನು ಸೂಚಿಸುತ್ತವೆ ಎಂದು ಹೇಳುವನು. ಡಾ|| ಪೀಡರ್‌ಸನ್[16] ತೊಖಾರಿ ಭಾಷೆಗೂ ಹಿಟ್ಟೈಟ್

---

14

| ಹಟ್ಟಲಿ—ಸಂಸ್ಕೃತ | ಹಿಟ್ಟೈಟ್—ಸಂಸ್ಕೃತ | ಹಿಟ್ಟೈಟ್—ಸಂಸ್ಕೃತ |
|---|---|---|
| ಅಸ್ತುವತುಮಜಿಸ್—ಅಸಮಂಜಸ್ | ಅಪ—ಅಪ | ಸ್ತರ್—ತಾರ |
| ಲುಹಸ್—ಲೌಹಿ, ರೋಹಿತ | ಅಪ್, ಏಪ್—ಆಪ್ | —ತೆ—ತೇ |
| | ಹರ್ಷ—ಅರ್ಪಯ | ನತ—ನ |
| ಕತುವಸ್—ಕ್ರತು | ಲಿಪ್—ಲೇಪ | ಏತ್ } —ಅದ್ |
| ಅರಿಯಸ್—ಆರ್ಯ | ಪಪರ್ಸ್—ಪೃಷತ್ | ಆತ್ } —ಅದ್ |
| ಅಇಅಸ್—ಆಯು | ಸ್ತಪ್—ಸ್ಥಾಪಯ | ತೇ—ದದಾತಿ } |
| ಸಗರಿಸ್—ಸಗರ | ಅಪಸ್—ಅಭಿ | ತೇ—ದಧಾತಿ } |
| ತುವರ್‌ಸಸ್—ತುರ್ವಸು | ನೆಪಸ್—ನಭಸ್ | ಹುಕ್ } —ವಾಕ್ |
| ದುರ್‌ಪತ—ದ್ರುಪದ | ಪೆತರ್—ಪತ್ರ | ಹ್ವೆಕ್ } —ವಾಕ್ |

15 ಇಂಡೋ-ಹಿಟ್ಟೈಟಿನ ಹ. ಇಂ. ಯೂ. ನಲ್ಲಿ ಕಂಡುಬರುವದಿಲ್ಲ. ಅರ್ಹ=ಆರೇ, ಆರಾತ್=ದೂರ. ಇಂ. ಹಿ. ಹ. ಪೂರ್ವದಲ್ಲಿರುವ ಹ್ರಸ್ವಸ್ವರವು ವ್ಯಂಜನದೊಡನೆ ಕೂಡುವದು. ಇಂ. ಯೂ. ನಲ್ಲಿ ದೀರ್ಘವಾಗುವದು—ಮೆಹ್ರ್ತೀಮ್=ಮಾತ್ರಂ ; ಇ. ಹಿ.—ಕ, ಖ, ಗ, ಘ ಇಂ. ಯೂ. ನಲ್ಲಿ ಮೃದುವಾಗುವುದು, ಕ್ಲಾಸಿಕಲ್ ಹಿಟ್ಟೈಟಿನಲ್ಲಿ ಕಂಡುಬರುವದಿಲ್ಲ—ಕೇತ=ಶೇತೇ. ಇಂ. ಹಿ. ಕ್ವ್, ಖ್ವ್, ಗು, ಘು, ಇಂ. ಯೂ. ನಲ್ಲಿ ಅದೃಶ್ಯವಾಗುವವು : ಕಿಸ್—ಕ್ರೂರ :, ಹೆಟ್ಟೈಟ್ ಕುರುರ್<ಇಂ. ಹಿ. ಕುರೂರ್, ಇಂ. ಹಿ. ತ್ಸತ್ ದ್ಸದ್>ಇಂ. ಯೂ. ಸ್ತ್, ಸ್ಧ್. ಇಂ. ಹಿ. ಅಂತ್ಯತ್ಸ್>ಇಂ, ಯೂ. ಸ್ ಆಗುವದು. ಹಿಟ್ಟೈಟಿನ ಕೆಲವು ಪ್ರಾಚೀನಾಂಶಗಳು (Archaisms) ಇಂಡೋ-ಯೂರೋಪಿಯನ್ ಭಾಷಾಪದ್ಧತಿಗಿಂತ ವ್ಯತ್ಯಾಸವಾಗಿವೆ. ಆದರೂ ಹಿಟ್ಟೈಟ್ ಭಾಷೆಗೂ ಸಂಸ್ಕೃತಕ್ಕೂ ಸಾಮ್ಯಗಳನೇಕವಾಗಿವೆ.

16 *Language*, IX.

ಭಾಷೆಗೂ ನಿಕಟಸಂಬಂಧವನ್ನು ತೋರಿಸಿರುವನು. ಪೈಶಾಚಿ ಪ್ರಾಕೃತ ಭಾಷೆಗಳಲ್ಲಿ ವ್ಯಂಜನಗಳು ವ್ಯತ್ಯಾಸವಾಗುವಂತೆಯೇ ಇಂಡೋ-ಯೂರೋಪಿಯನ್ ಭಾಷೆಗಳಲ್ಲಿ ಸ್ಫುಟಾಕ್ಷರಗಳು (Explosives) ಹೆಚ್ಚಾಗಿ ವಿವಿಧ ದೇಶಗಳಲ್ಲಿ ವ್ಯಾಪಿಸಿ "ಕ್ಲಾಸಿಕಲ್ ಹಿಟ್ಟೈಟ್", ತೊಖಾರಿಯನ್, ಥ್ರೇಸಿಯನ್, ಫ್ರಿಜಿಯನ್, ಎಟ್ರುಸ್ಕನ್, ಲಿಡಿಯನ್, ಫಿನ್ನೋ-ಉಗ್ರಿಯನ್, ಸ್ಲಾವ್, ಬಾಲ್ಟಿಕ್, ಹೈಜರ್ಮನ್ ಎಂಬ ಪ್ರಭೇದಗಳುಂಟಾದವು.

ಡಾ|| ಕೀತ್[17] ಇಂಡೋ-ಯೂರೋಪಿಯನ್ ಜನರ ಮೂಲನಿವಾಸವು ಕಿರ್ಘಿಸ್ ಹುಲ್ಲುಗಾವಲು ಸೀಪರ್-ಯೂರಲ್ ಮಧ್ಯಪ್ರಾಂತ್ಯವೆಂದು ಅಭಿಪ್ರಾಯಪಡುವನು. ಆದರೆ ಪ್ರಾಚ್ಯಸಂಶೋಧನೆಯಿಂದ ಈಚೆಗೆ ಕಂಡು ಬಂದಿರುವ ಆಧಾರಗಳ ಮೇಲೆ ಇಂಡೋ-ಯೂರೋಪಿಯನ್ ಎಂದು ಕರೆಯಲ್ಪಟ್ಟ ಆರ್ಯಜನರ ಮೂಲನಿವಾಸವು ಭರತಖಂಡವಾಗಿದ್ದು ಕ್ರಿಸ್ತಪೂರ್ವ ಸುಮಾರು ನಾಲ್ಕನೆಯ ಸಹಸ್ರಾಬ್ದದ ಆದಿಭಾಗದಲ್ಲಿ ಈ ಭಾರತೀಯರು ಪಶ್ಚಿಮಾಭಿಮುಖವಾಗಿ ಹೊರಟು ಪ್ರಾಚೀನ ಹಿಟ್ಟೈಟ್ ಮುಂತಾದ ಸಂಸ್ಕೃತಿಗಳಿಗೆ ಕಾರಣರಾದರೆಂದು ನಿರ್ಧರಿಸಬಹುದು. ಕೋಣಲಿಪಿಯ ಹಿಟ್ಟೈಟ್ ಭಾಷೆಗೂ ಇಂಡೋ-ಯೂರೋಪಿಯನ್ ಭಾಷೆಗೂ ಎಂತಹ ಸಂಬಂಧವಿದ್ದರೂ, ಇಂಡೋ-ಹಿಟ್ಟೈಟ್ ಎಂಬುದೇ ಮೂಲಭಾಷೆಯೆಂದು ಈಗ ನಿರ್ಧರಿಸಿರುವದರಿಂದ ಇದುವರೆಗೂ ಪಾಶ್ಚಾತ್ಯ ಭಾಷಾಶಾಸ್ತ್ರಜ್ಞರಿಂದ ಪ್ರತಿಪಾದಿತವಾದ ಭಾಷಾತತ್ತ್ವಗಳನ್ನು ನಿರಾಕರಿಸಬೇಕಾಗುವದು.

ಇದರ ಮಥಿತಾರ್ಥವೇನೆಂದರೆ—ಆರ್ಯಭಾಷೆಯಾದ ವೈದಿಕ ಸಂಸ್ಕೃತವು ಬೊಘಾಸ್ಕ್‌ಕಾಯ ಶಾಸನಗಳು, ಟೆಲ್ ಅಲ್ ಅಮಾರ್ನ ಪತ್ರ(ಕ್ರಿ ಪೂ.೧೪೦೦) ಗಳಿಗಿಂತ ಮುಂಚೆಯೇ ಆನಟೋಲಿಯ, ಸಿರಿಯ ಮುಂತಾದ ಪ್ರಾಂತ್ಯಗಳಲ್ಲಿ ಹರಡಿ ಅನೇಕ ರೂಪಗಳನ್ನು ಹೊಂದಿ ಕ್ರಿ.ಪೂ. ೮೦೦ ಕ್ಕೆ ಅವೆಸ್ಟನ್ ಭಾಷೆಯಾಗಿ ಪರಿಣಮಿಸಿತು. ಹೀಗೆ ಪಶ್ಚಿಮದ ಕಡೆಗೆ ಪ್ರವಹಿಸುವಾಗ ವಾಯವ್ಯ ಪ್ರಾಂತದಲ್ಲಿ ಪೈಶಾಚಿ ಪ್ರಾಕೃತಗಳು ದಕ್ಷಿಣಕ್ಕೆ ಬಂದಾಗ ಮೂಲದ್ರಾವಿಡ ಭಾಷೆಗಳೂ ಉಂಟಾದವು. ಲ್ಯಾಟಿನ್ ಭಾಷೆಯು ರೋಮನ್ ಸಾಮ್ರಾಜ್ಯ ಕಾಲದನಂತರ ಇಟಾಲಿಯನ್ನಾಗಿ ಪರಿಣಮಿಸಿದಂತೆಯೇ ಸಂಸ್ಕೃತದಿಂದ ಪ್ರಾಕೃತಗಳು ಹುಟ್ಟಿದವು. ವೈಯಾಕರಣರು ಕೂಡ ಪ್ರಾಕೃತವು ಸಂಸ್ಕೃತಭವವೆಂದು ಅಂಗೀಕರಿಸಿರುವರು. ಗ್ರಿಯರ್ಸನ್ನನು ಪೈಶಾಚಿ ಪ್ರಾಕೃತಗಳನ್ನು ಇಂಡೋ-ಯೂರೋಪಿಯನ್ ಭಾಷಾವರ್ಗದ "ಖೋ" (ಪರ್ವತ) ಭೇದ

---

[17] *I. H. Q.* XIV. p. 221; XIII. p. 1-30.

ವೆಂದು ಹೇಳುವನು. ಆದರೆ ಬ್ಲಾಕ್, ಮಾರ್ಗೆನ್‌ಸ್ಟೀರ್ನ ಮುಂತಾದವರು ಗ್ರೀಯರ್‌ಸನ್ನಿನ ವಾದವನ್ನು ನಿರಾಕರಿಸಿ ಈ ಪ್ರಾಕೃತಗಳು ಅವೆಸ್ಟ ಮತ್ತು ಸಂಸ್ಕೃತಗಳಿಗಿಂತ ಭಿನ್ನವಾದ ಮೂರನೆ ಪಂಗಡಕ್ಕೆ ಸೇರದವಲ್ಲವೆಂದೂ ಸಂಸ್ಕೃತಕ್ಕೇ ಸಂಬಂಧಿಸಿದವೆಂದೂ ಹೇಳುವರು.[18] ಮತ್ತೆ ಕೆಲವರು ಪಿಶಾಚ ಭಾಷೆಯೆಂದರೆ ಅವ್ಯವಸ್ಥಿತ (Confused) ಭಾಷೆಯೆಂದೂ ಪ್ರತ್ಯೇಕವಾದ ಪೈಶಾಚಿ ಭಾಷಾವರ್ಗವೆಂಬುದಿಲ್ಲವೆಂದೂ ಊಹಿಸುವರು.[19] ಆದರೆ ಪ್ರಾಕೃತಗಳೆಂದೆನಿಸಿದ ಮಾಗಧೀ ಅರ್ಧಮಾಗಧೀ, ಪಾಲಿ, ಶೌರಸೇನಿ ಮಹಾರಾಷ್ಟ್ರೀ ಮುಂತಾದವು ವೈದಿಕ ಭಾಷೆಯ ಅಪಭ್ರಂಶಗಳೇ ಆಗಿವೆ. ಇವುಗಳಿಗೆ ಮಧ್ಯ ಇಂಡೊ-ಆರ್ಯನ್ ಎಂಬ ಹೆಸರಿದೆ.[20] ವೈಯಾಕರಣರು ಪ್ರಾಕೃತಭಾಷೆಯನ್ನು ಪ್ರಾಚ್ಯ ಅಥವಾ ಚೂಳಿಕಾ ಪೈಶಾಚಿ ಮತ್ತು ಪ್ರತೀಚ್ಯ ಎಂದು ಎರಡು ವಿಧವಾಗಿ ಭಾಗಿಸಿರುವರು. ಪಾಲಿ ಎಂಬ ಹೆಸರು ಮಾಗಧೀ ಅಥವಾ ಅರ್ಧಮಾಗಧೀ ಭಾಷೆಗೆ ಕ್ರಿಸ್ತಶಕ ಎಂಟನೆಯ ಶತಮಾನದಲ್ಲಿ ಸಿಂಹಳದ ಬೌದ್ಧ ಭಿಕ್ಷುಗಳು ಕೊಟ್ಟ ಹೆಸರು. ಕೆಲವರು ಪಾಲಿಭಾಷೆಯ ತೌರುವನೆ ಉಜ್ಜಯನಿ ಅಥವಾ ತಕ್ಷಶಿಲೆ ಎಂದೂ ವಿಂಧ್ಯಪ್ರಾಂತವೋ ವಾಯವ್ಯ ಪ್ರಾಂತವೋ ಪ್ರಚಾರಭೂಮಿಯೆಂದೂ ಹೇಳುವರು.[21] ದಾರದ ಅಥವಾ ಪಿಶಾಚ ಜನಾಂಗವು ವೇದಯುಗಕ್ಕೆ ಮುಂಚೆಯೇ ಕೇಕಯ, ಕುರುಪಾಂಚಾಳ, ಮಗಧ, ಗೌಡ, ನೇಪಾಲದ ವರೆಗೆ ಪೂರ್ವದಲ್ಲಿಯೂ, ದಕ್ಷಿಣದಲ್ಲಿ ಸಿಂಧು, ವಿಂಧ್ಯ, ಮಹಾರಾಷ್ಟ್ರ, ಆಂಧ್ರ, ಕರ್ಣಾಟ, ದ್ರಾವಿಡದೇಶಕ್ಕೂ ಎರಡು ಅಲೆಗಳಂತೆ ಹರಡಿ ಗೌಡ ಮತ್ತು ದ್ರಾವಿಡಗಳೆಂಬ ಭಾಷಾಪ್ರಭೇದಗಳಿಗೆ ಕಾರಣರಾದರೆಂದೂ ಕೆಲವರು ಅಭಿಪ್ರಾಯಪಡುವರು. ಈ ಮಧ್ಯ ಇಂಡೋ-ಆರ್ಯನ್ ಭಾಷೆಗಳಿಂದ ಈಗ ಉತ್ತರದಲ್ಲಿ ಪ್ರಚಾರದಲ್ಲಿರುವ ಆಧುನಿಕ ಇಂಡೋ-ಆರ್ಯನ್ ಭಾಷೆಗಳೆಂದೆನಿಸಿದ ಹಿಂದಿ, ಬಂಗಾಲಿ, ಮರಾಠಿ, ಗುಜರಾತಿ, ಔಡ್ರೀ, ನೇಪಾಳಿ, ಕಾಶ್ಮೀರಿ, ಬ್ರಜಭಾಷಾ, ಭೋಜಪುರಿಯ, ಪಂಜಾಬಿ, ಲಹನ್ದಿ, ರಾಜಸ್ಥಾನಿ, ಅಸ್ಸಾಮಿ ಇತ್ಯಾದಿ ಭಾಷಾಪ್ರಭೇದಗಳು ಹುಟ್ಟಿದವು.

**ಮುಂಡ-ಮಾನ್‌ಖ್ಮೇರ್ ಭಾಷೆಗಳು:** ಇವು ಭರತಖಂಡದ ಮಧ್ಯ

---

[18] Bloch, *Lefarmation de langue Masathi ;* Morgenstierne, ***Reports of Linguistic Missions to Afghanistan and North-Western India,*** 1926-32. Oslo.

[19] Masters, *J. R. A. S.* 1943.

[20] Bloch, *L'Inde-Aryan du Veda aux Temps. Modernes.* 1934.

[21] B. C. Law, *History of Pali Literature,* Vol. I.

ಮತ್ತು ಪೂರ್ವಭಾಗಗಳಲ್ಲಿವೆ. ಇವುಗಳು ಆಸ್ಟ್ರೋ ಏಷಿಯಾಟಿಕ್ ಮತ್ತು ಆಸ್ಟ್ರೋ ನೀಷಿಯನ್ ಎಂಬ ಪ್ರಭೇದಗಳುಳ್ಳ ಆಸ್ಟ್ರಿಕ್ ಭಾಷಾವರ್ಗಕ್ಕೆ ಸೇರಿದವೆಂದು ಷ್ಮಿತ್ ಮುಂತಾದವರು ಅಭಿಪ್ರಾಯಪಟ್ಟಿದ್ದರು. ಆದರೆ ಡಿ. ಹೆವೆಸಿ ಈ ಕೋಲ್ (ಮುಂಡ) ಭಾಷೆಗಳಿಗೂ ಫಿನ್ನೋ-ಉಗ್ರಿಯನ್ ಭಾಷೆಗೂ ಹತ್ತಿರ ಸಂಬಂಧವಿರುವದರಿಂದ "ಆಸ್ಟ್ರಿಕ್" ಎಂಬ ಪ್ರತ್ಯೇಕ ವರ್ಗವೇ ಇಲ್ಲವೆಂದು ಹೇಳುವನು. ಈ ಮುಂಡ-ಮಾನ್‌ಖ್ಮೇರ್ ಭಾಷೆಗಳು ಪಾಲಿನೀಷಿಯ ವರೆಗೂ ಹರಡಿದ್ದವು. ಪಾಲಿನೀಷಿಯ (ಮೆಯೊರಿ) ಭಾಷೆಯಲ್ಲಿ "ಮತರಿಕಿ" (ಕೃತ್ತಿಕಾ ನಕ್ಷತ್ರಗಳು, ಮಾತೃಕೆಯರು), "ರಾಕಾ" (ಸಂಸ್ಕೃತ ರಾಕಾ—ಪೂರ್ಣಿಮಾ), "ಕುಹೂ" (ಸಂಸ್ಕೃತ ಕುಹೂ—ಅಮಾವಾಸ್ಯಾ) ಇತ್ಯಾದಿ ಶಬ್ದಗಳಿರುವದರಿಂದಲೂ, ಮೆಯೋರಿ ಜನರು ತಾವು ಗಂಗಾಪ್ರಾಂತದಿಂದ ಬಂದೆವೆಂದು ಹೇಳಿಕೊಂಡಿರುವದರಿಂದಲೂ, ಇವರ ಭಾಷೆಯು ಸಂಸ್ಕೃತ ಸಂಬಂಧವಾದುದೆಂದು ಹೇಳಬೇಕು. ಆದರೆ ಡಾ|| ಸಿಲ್ವೈನ್‌ಲೆವಿ ಇದನ್ನು ವಿಪರೀತಮಾಡಿ ವೇದಕಾಲದ ಇಂಡೋ-ಆರ್ಯನ್ ಭಾಷೆಗೆ "ಆಸ್ಟ್ರಿಕ್" ಭಾಷೆಯೇ ತಳಹದಿ ಎಂದು ಊಹಿಸುವರು.[22]

**ದ್ರಾವಿಡ ಭಾಷೆಗಳು**: ದಕ್ಷಿಣಾಪಥದಲ್ಲಿ ಪ್ರಚಾರದಲ್ಲಿರುವ "ದ್ರಾವಿಡ" ಭಾಷೆಗಳು ಪ್ರತ್ಯೇಕ ಭಾಷಾವರ್ಗಕ್ಕೆ ಸೇರಿದವೆಂದು ಕಾಲ್ಡ್ವೆಲ್ ಮುಂತಾದವರು ವಾದವನ್ನು ಆರಂಭಿಸಿದರು. ಇವರಿಗೆ ಮುಖ್ಯ ಆಧಾರವು ವ್ಯಾಕರಣ. "ದ್ರಾವಿಡ ಭಾಷೆಗಳಲ್ಲಿ ಅರ್ಥಾನುಸಾರವಾಗಿ ಲಿಂಗನಿರ್ಣಯ ಮತ್ತು ಸಂಧಿಕ್ರಮ ಬೇರೆಯಾಗಿವೆ. ನಾಮಪದಗಳಲ್ಲಿ ಏಕವಚನ ಬಹುವಚನಗಳೆರಡರಲ್ಲಿಯೂ ಒಂದೇ ವಿಧವಾದ ವಿಭಕ್ತಿಪ್ರತ್ಯಯಗಳು ಸೇರಿರುವವು. ಗುಣವಾಚಕಗಳಿಗೆ ತರತಮಭಾವವಿಲ್ಲ. ಸಂಬಂಧಾರ್ಥಕ ಸರ್ವನಾಮವಿಲ್ಲ. ಕರ್ಮಣಿಪ್ರಯೋಗವು ವಿಶೇಷವಾಗಿಲ್ಲ. ಕ್ರಿಯೆಗಳಿಗೆ ನಿಷೇಧರೂಪವಿದೆ. ಕೃತ್ತದ್ಧಿತ ಪ್ರತ್ಯಯಗಳು ಬೇರೆಯಾಗಿವೆ. ಉತ್ತಮಪುರುಷದ ಸರ್ವನಾಮಕ್ಕೆ ಇದಿರಲ್ಲಿರುವವರನ್ನು ಸೇರಿಸಿಕೊಳ್ಳುವ ಎರಡು ಬಗೆಯ ವಚನಗಳಿವೆ." ಪ್ರಾಗ್ದ್ರಾವಿಡವೆಂಬ ಒಂದು ಪ್ರತ್ಯೇಕ ಭಾಷೆ ಇದ್ದಿತೆಂದೂ ಬಹುಶಃ ಇದು ಗೋಂದಿ, ಕುಇ, ಕುರಖ್, ಮಾಲ್ತೊ, ಬ್ರಾಹು-ಇ ಭಾಷೆಗಳಂತಿದ್ದು ಕಾಲಕ್ರಮೇಣ ತಮಿಳು, ತೆಲುಗು, ತುಳು, ಕನ್ನಡ, ಮಲಯಾಳ, ತುದ, ಕೊಡಗ, ಬಡಗ, ಕೋತ ರೂಪಗಳನ್ನು ಹೊಂದಿತೆಂದೂ ಊಹಿಸಲಾಗಿದೆ. ಆದರೆ ಸಂಸ್ಕೃತ ವೈಯಾಕರಣರು ದ್ರಾವಿಡಭಾಷೆಗಳು ಸಂಸ್ಕೃತಜನ್ಯವಾದ

---

22 S. K. Chatterji, *Proceedings VIII O.R. Conference*, Mysore, 1935.

ಪ್ರಾಕೃತ ಭಾಷಾವರ್ಗಕ್ಕೆ ಸೇರಿದವೆಂದು ಕೆಲವು ಉಪಪತ್ತಿಗಳನ್ನು ತೋರಿಸುವರು. ಭರತಖಂಡದಲ್ಲಿ ದ್ರಾವಿಡರಿಗೂ ಇತರರಿಗೂ ಜಾತಿಭೇದವಾಗಲಿ ಸಂಸ್ಕೃತಿಭೇದವಾಗಲಿ ಯಾವಾಗಲೂ ಇರಲಿಲ್ಲವಾದುದರಿಂದಲೂ ದ್ರಾವಿಡ ಭಾಷಾವರ್ಗವನ್ನು ಪರದೇಶದ ಯಾವ ಭಾಷಾವರ್ಗಕ್ಕೂ ಹೋಲಿಸಲು ಸಾಧ್ಯವಿಲ್ಲವಾದುದರಿಂದಲೂ, ದ್ರಾವಿಡರೆಂಬ ಒಂದು ವಿಶಿಷ್ಟ ಜನಾಂಗವು ವಿದೇಶದಿಂದ ಬಂದು ಇಲ್ಲಿ ನೆಲಸಿತೆಂಬುದಕ್ಕೆ ಆಧಾರಗಳಿಲ್ಲವಾದುದರಿಂದಲೂ, ಸಂಸ್ಕೃತಜನ್ಯವಾದ ಪೈಶಾಚಿ ಪ್ರಾಕೃತಗಳಿಂದಲೇ ಮುಖ್ಯವಾದ "ದ್ರಾವಿಡ" ಭಾಷೆಗಳು ಹುಟ್ಟಿ, ಅನಾಗರಿಕರಾದ ಕಾಡು ಜನರ ನೆಗ್ರಿಟೋಭಾಷೆಯಿಂದ ಕೆಲವು ಅಂಶಗಳನ್ನು ಗ್ರಹಿಸಿ, ಈಗಿನ ರೂಪಗಳನ್ನು ಹೊಂದಿದವೆಂದು ನಿರ್ಧರಿಸಬೇಕಾಗಿದೆ. ಚಾರಿತ್ರಕ ನಿದರ್ಶನಗಳನ್ನು ಪರಿಶೀಲಿಸಿದರೆ ಕ್ರಿಸ್ತಪೂರ್ವ ಮೂರನೆಯ ಶತಾಬ್ದದಲ್ಲಿ ಮೈಸೂರಿನ ಉತ್ತರ ಸರಹದ್ದಿನ ವರೆಗೂ ಪಾಲಿಭಾಷೆಯಲ್ಲಿಯೇ ಸಾಮಾನ್ಯ ಜನರಿಗೂ ಅರ್ಥವಾಗುವಂತೆ ಶಾಸನಗಳನ್ನು ಹಾಕಿಸಿರುವದಲ್ಲದೆ ಈ ದಕ್ಷಿಣದೇಶದ ಶಾಸನಗಳಲ್ಲಿ ದ್ರಾವಿಡಭಾಷೆಯ ಪದಗಳೇ ಕಂಡುಬರುವದಿಲ್ಲವಾದುದರಿಂದ ಅಫ್ ಘನಿಸ್ತಾನದಿಂದ ಮೈಸೂರಿನ ವರೆಗೂ ಮೌರ್ಯಸಾಮ್ರಾಜ್ಯದಲ್ಲೆಲ್ಲ ಪಾಲಿ-ಪ್ರಾಕೃತ ಭಾಷೆಯೇ ಕೇವಲ ರಾಜಕೀಯ ಭಾಷೆಯಾಗಿರದೆ, ಸಾಮಾನ್ಯ ಪಾಮರ ಜನರ ಭಾಷೆಯೂ ಆಗಿದ್ದಿತೆಂದು ನಿರ್ಧರಿಸಬಹುದು, ಮತ್ತು ಅಶೋಕನು ರಾಯಭಾರಿಗಳನ್ನೂ ಬೌದ್ಧ ಭಿಕ್ಷುಗಳನ್ನು ಪಾಂಡ್ಯ, ಕೇರಳ, ಚೋಳ, ಸತ್ಯಪುತ್ರ, ತಾಮ್ರಪರ್ಣಿ (ಸಿಂಹಳ) ದೇಶಗಳಿಗೂ ಕಳುಹಿಸಿದ್ದನು. ಇಲ್ಲಾದರೂ ದ್ರಾವಿಡ ಭಾಷೆಗಳು ಪ್ರಚಾರದಲ್ಲಿದ್ದವೇ ಎಂಬುದಕ್ಕೂ ಆಧಾರಗಳಿಲ್ಲ. ಈಚೆಗೆ ತಿರುಚಿನಾಪಲ್ಲಿ, ಆನೆಮಲೆ ಮುಂತಾದ ಸ್ಥಳಗಳಲ್ಲಿ ಸಿಕ್ಕಿರುವ ಕ್ರಿಸ್ತಪೂರ್ವ ಎರಡನೆಯ ಶತಾಬ್ದದ ಬ್ರಾಹ್ಮೀಲಿಪಿಯ ಶಾಸನಗಳು ಪಾಲಿಭಾಷೆಯಲ್ಲಿದ್ದು ದ್ರಾವಿಡಭಾಷಾಸಂಪರ್ಕವನ್ನು ತೋರಿಸುವದಿಲ್ಲ. ಆದುದರಿಂದ ಕ್ರಿಸ್ತಶಕದ ಒಂದನೆಯ ಶತಾಬ್ದಕ್ಕೆ ಹಿಂದೆ ದ್ರಾವಿಡ ಭಾಷೆಯು ಹೇಗಿದ್ದಿತೆಂದು ನಿರ್ಧರಿಸಲು ಆಧಾರಗಳೇ ಸಿಕ್ಕಿರುವದಿಲ್ಲ. ಕೆಲವರು ಸಿಂಧೂ ಸಂಸ್ಕೃತಿಯ ಮುದ್ರೆಗಳ ಮೇಲೆ ದ್ರಾವಿಡಭಾಷೆಯು ಕಂಡುಬರುವದೆಂದು ಹೇಳಿರುವದನ್ನು ಅಂಗೀಕರಿಸಲು ಸಾಧ್ಯವಿಲ್ಲ. ವೇದವಾಙ್ಮಯದಲ್ಲಿ ಮಟಚೀ (ಮಿಡಿತೆ) ಮುಂತಾದ ಪದಗಳು ದ್ರಾವಿಡ ಭಾಷಾಪ್ರಭಾವವನ್ನು ಸೂಚಿಸುವವೆಂಬ ವಾದವೂ ನಿರ್ಣಾಯಕವಲ್ಲ. ತಮಿಳಿನ ಸಂಘಂ ಸಾಹಿತ್ಯವು ಕ್ರಿಸ್ತಶಕ ಎರಡನೆಯ ಶತಾಬ್ದದ ಅನಂತರ ಹುಟ್ಟಿತು. ಇದಕ್ಕೆ ಹಿಂದೆ ಒಂದು

ವಿಧವಾದ ಭಾಷೆ ಇದ್ದಿರಬೇಕೆಂದು ಒಪ್ಪಿಕೊಳ್ಳಬಹುದು. ಆದರೆ ದ್ರಾವಿಡ "ಜಾತಿ," "ಭಾಷೆ," "ಸಂಸ್ಕೃತಿ"ಗಳು ಆರ್ಯಜಾತಿ, ಭಾಷಾ, ಸಂಸ್ಕೃತಿಗಳಿಗಿಂತ ಭಿನ್ನವು, ಪ್ರಾಚೀನವು, ಉತ್ತಮವಾದುವೆಂದು ಕೆಲವರು ದ್ರಾವಿಡ ಭಾಷಾಭಿಮಾನಿಗಳು ವಾದಿಸಿರುವದು ಕೇವಲ ಉತ್ಸಾಹಪೂರ್ವಕವೆಂದು ಹೇಳಬೇಕಾಗಿದೆ.[28]

ಭರತಖಂಡದಲ್ಲಿ ಆರ್ಯ, ದ್ರಾವಿಡ, ಮುಂಡ-ಮಾನ್‌ಖ್ಮೇರ್ ಭಾಷಾವರ್ಗಗಳಿಲ್ಲದೆ ಈಶಾನ್ಯಭಾಗದಲ್ಲಿ ತಿಬೆಟೋ-ಚೈನೀಸ್ ಭಾಷೆಗಳೂ ಪ್ರಚಾರದಲ್ಲಿವೆ.

[28] "Attempts have been made recently to show that Finnish and Hungarian are linked by a 'common language' with the Dravidian Languages of Southern India and similarly. Korean and Japanese with Turkish and even Hungarian; but judged by the canons of what is called Indo-European comparative philology, they can be dismissed as the result of enthusiastic workers allowing themselves, to be governed by their own sentiments 'whence proceed' as Bacon said, 'sciences as one would'". J. R. Firth, *The Tongues of Men*, p. 95, 1937.

# ೩. ಪ್ರಾಗ್ಭಾರತೀಯ ಸಂಸ್ಕೃತಿ

ಭರತಖಂಡದ ಪ್ರಾಕ್ಚಾರಿತ್ರಿಕ ಕಾಲವನ್ನು ಶಿಲಾಯುಗ (Stone Age), ತಾಮ್ರ ಶಿಲಾಯುಗ (Chalco-lithic) ಎಂದು ಎರಡು ಭಾಗಮಾಡಬಹುದು. ಯೂರೋಪ್ ಖಂಡದಲ್ಲಿ ಶಿಲಾಯುಗವನ್ನು ಉಷಶ್ಶಿಲಾಯುಗ (Eolithic), ಪುರಾತನ ಶಿಲಾಯುಗ (Palaeolithic) ಕ್ಷುದ್ರ ಶಿಲಾಯುಗ (Microlithic), ಮತ್ತು ನವಶಿಲಾಯುಗ (Neolithic) ಎಂಬುದಾಗಿ ವಿಭಾಗಿಸಲು ಆಧಾರಗಳಿವೆ. ಭರತಖಂಡದಲ್ಲಿ ಹೀಗೆ ಕಾಲನಿರ್ಣಯಮಾಡಲು ತಕ್ಕಷ್ಟು ಸಲಕರಣೆಗಳು ಸಿಕ್ಕಿಲ್ಲ. ಈಗಲೂ ಕೂಡ ಅನಾಗರಿಕ ಜನರನೇಕರು ಶಿಲಾಯುಗದ ಸಂಸ್ಕೃತಿಯಲ್ಲೇ ಇರುವರು. ಆದರೂ ಭರತಖಂಡದ ಸಂಸ್ಕೃತಿ ಚರಿತ್ರೆಯಲ್ಲಿ ಶಿಲಾಯುಗದ ಮುಖ್ಯ ಘಟ್ಟಗಳನ್ನು ಸ್ಥೂಲವಾಗಿ ನಿರ್ದೇಶಿಸಬಹುದು.

**ಉಷಶ್ಶಿಲಾಯುಗ :** ಉಷಶ್ಶಿಲೆಗಳು ಟರ್ಷಿಯರಿ ಕಾಲದಲ್ಲಿ ಹುಟ್ಟಿದವೆಂದೂ ಆಗಲೇ ಮಾನವನು ಉಪಕರಣಗಳನ್ನು ಮಾಡಿಕೊಂಡಿದ್ದನೆಂದು ಕೆಲವರು ಊಹಿಸುವರು. ಬರ್ಮದೇಶದ ಐರಾವತೀ ನದಿಯ ಪಾತ್ರದಲ್ಲಿ ಮೈಯೋಸೀನ್ ಕಾಲದ ಜೀವಾವಶೇಷಗಳೊಡನೆ ಇಂತಹ ಶಿಲೆಗಳು ಸಿಕ್ಕಿವೆ. ವಿಂಧ್ಯಾಮರಳುಕಲ್ಲಿನಿಂದ ಮಾಡಿದ ಆಯುಧಗಳೂ, ಈಗ ಅದೃಶ್ಯವಾಗಿರುವ ಗಂಡಮೃಗ, ಎತ್ತು ಇತ್ಯಾದಿ ಪ್ರಾಣಿಜಾತಿಗಳ ಅವಶೇಷಗಳೂ ನರ್ಮದಾ ಪಾತ್ರದಲ್ಲಿ ಭುತ್ರ ಎಂಬ ಸ್ಥಳದಲ್ಲಿ ಸಿಕ್ಕಿವೆ. ಗೋದಾವರೀ ಪಾತ್ರದಲ್ಲಿ "ಎಲಿಫಾಸ್ ನೊಮಾಡಿಕಸ್" ಎಂಬ ಆನೆಯ ಅವಶೇಷಗಳೊಡನೆ ಕೆಲವು ಶಿಲಾಶಕಲಗಳು ಸಿಕ್ಕಿವೆ. ಆದರೆ ಇವು ಆಯುಧಗಳೇ ? ಮನುಷ್ಯರು ಮಾಡಿದುವೇ ? ಎಂಬುದನ್ನು ನಿರ್ಧರಿಸಲು ಸಾಧ್ಯವಿಲ್ಲ. ಭರತಖಂಡದಲ್ಲಿ ಸ್ಪಷ್ಟವಾಗಿ ಸಂಸ್ಕೃತಿಯನ್ನು ಸೂಚಿಸುವದು "ಕೈಗೊಡ್ಡಲಿ" (Handaxe, Coup-de-poing) ಎಂದು ಹೇಳಬಹುದು. ಇದು ಬಹುಶಃ ನಿಯಾಂಡರ್‌ಥಾಲ್ ಮನುಷ್ಯನ ಕೆಲಸ. ಅನಂತರ ಭರತಖಂಡದಲ್ಲಿ ಮಾನವನು ಪ್ರಾಚೀನ ಶಿಲಾಯುಗವನ್ನಾರಂಭಿಸಿದನು. ಉಷಶ್ಶಿಲಾಯುಗದ ಕೈ-ಗೊಡ್ಡಲಿಗಳನ್ನು ಪೂರ್ವತೀರದ "ಲಾಟರೈಟ್" ಶಿಲೆಯಿಂದ ಮಾಡಿದೆ.[1]

---

[1] *Mysore Castes and Tribes*. Vol. I. Panchanan Mitra, *Pre-historic India*. P. T. Srinivasa Iyengar, *The Stone Age in India*.

**ಪುರಾತನಶಿಲಾಯುಗ:** ಯೂರೋಪ್‌ಖಂಡದಲ್ಲಿ ಈ ಯುಗವನ್ನು ಷೆಲ್ಲಿಯನ್, ಅಷೂಲಿಯನ್, ಮೌಸ್ಟೀರಿಯನ್, ಅರಿಗ್ನೇಷಿಯನ್, ಸೊಲುಟ್ರಿಯನ್, ಮಾಡಲೀನಿಯನ್ ಎಂಬುದಾಗಿ ವಿಭಾಗಿಸಿದೆ. ಭರತಖಂಡದಲ್ಲಿ ಹೀಗೆ ವಿಭಜನೆ ಮಾಡಿ ಕಾಲವನ್ನು ನಿರ್ಧರಿಸಲು ಆಧಾರಗಳು ಸಾಲದು. ಬಹುಶಃ ಇಂಡೋ-ನೀಗ್ರಿಡ್ ಜನರು "ಕ್ವಾರ್‌ಟ್ಸೈಟ್" ಕಲ್ಲುಗಳಿಂದ ಕೊಡಲಿ, ಬಾಣದ ಮೊನೆ, ಭರ್ಜಿ, ಕವಣೆಕಲ್ಲು, ಚಾಕು, ಕುಟ್ಟಣೆಕಲ್ಲು, ಚಕಮುಕಿಕಲ್ಲು ಇತ್ಯಾದಿಗಳನ್ನೂ ಮರದಿಂದ ಬಾಚಣಿಗೆಯನ್ನು ಮಾಡುತ್ತಿದ್ದರು. ಇವು ದಕ್ಷಿಣದೇಶದಲ್ಲಿ ಗುಂತಕಲ್, ಕಡೂರು, ನ್ಯಾಮ್ತಿ, ತಲ್ಯ, ಸೇಲಂ, ಬಳ್ಳಾರಿ, ಕಡಪ, ಕರ್ನೂಲು, ಪಲ್ಲವರಂ, ಗೋದಾವರೀ ಮತ್ತು ಮಲಪ್ರಭಾತೀರದ ಕೆಲವು ಸ್ಥಳಗಳಲ್ಲಿ ಸಿಕ್ಕಿವೆ. ಕರ್ನೂಲ್ ಬಳಿಯಿರುವ ಬಿಲ್ಲಿಸರ್ಗಂಗುಹೆಗಳಲ್ಲಿ ಮ್ಯಾಡಲೀನಿಯನ್ ಕಾಲದ ಶಿಲೆಗಳೂ ಅನೇಕ ವಿಧವಾದ ಕಪಿ, ಕಿರುಬ, ಕುದುರೆ, ಗಂಡಮೃಗ (*cyno-cephalus*, *Hyena Crocuta*, *Equus*, *Manis Gigantaea*. *hystrix*, *Viverra*, *rhinoceros*) ಇತ್ಯಾದಿ ಪ್ರಾಣಿಗಳ ಅವಶೇಷಗಳೂ ಸಿಕ್ಕಿವೆ.

**ಕ್ಷುದ್ರಶಿಲಾಯುಗ:** ವೆಡ್ಡಿಡ್ ಜನರು ಇಂಡೋ-ನೀಗ್ರಿಡ್ ಜನರನ್ನು ಓಡಿಸಿ ಅವರ ಸ್ಥಳಗಳನ್ನಾಕ್ರಮಿಸಿ ಕ್ಷುದ್ರಶಿಲಾಯುಗ ಸಂಸ್ಕೃತಿಯನ್ನು ಸ್ಥಾಪಿಸಿದರೆಂದು ಡಾ|| ಐಕ್ಸ್ಟೆಡ್ ಅಭಿಪ್ರಾಯಪಡುವನು. ಮೈಸೂರು ದೇಶದಲ್ಲಿ ಬ್ರಹ್ಮಗಿರಿ, ಚಂದ್ರವಳ್ಳಿ ಮುಂತಾದ ಸ್ಥಳಗಳಲ್ಲಿಯೂ ಈ ಸಂಸ್ಕೃತಿಯು ಇದ್ದಿತೆಂದು ಕೆಲವರು ಅಭಿಪ್ರಾಯಪಡುವರು[2]. ಈ ಜನರು ಶಿಲೆಗಳನ್ನು ಬಹಳ ನಯವಾಗಿ ಕೆತ್ತಿ ಅನೇಕ ವಿಧವಾದ ಆಕಾರದಲ್ಲಿ ಸಣ್ಣದಾದ ಸಲಕರಣೆಗಳನ್ನು ಮಾಡಿಕೊಂಡರು. ಮತ್ತು ಕೋಣಾಕಾರದ ಮರದ ತುಂಡುಗಳನ್ನು ಮಡಕೆಗಳ ಮೇಲೆ ಒತ್ತಿ ಅಲಂಕಾರಮಾಡಿ ಒರಟಾದ ಕುಂಭಗಳನ್ನೂ ಮಾಡಿಕೊಂಡಿದ್ದರು.

**ನವಶಿಲಾಯುಗ:** ಇಂಡಿಡ್ ಜನರು ವ್ಯವಸಾಯ, ತಾಯಿಯ ಅಧಿಕಾರ, ಗ್ರಾಮರಚನೆ, ಮುಂತಾದುವುಗಳನ್ನು ತಂದು ನವಶಿಲಾಯುಗದ ಸಂಸ್ಕೃತಿಯನ್ನು ಆರಂಭಿಸಿದರು. ಈ ಸಂಸ್ಕೃತಿಯ ಚಿಹ್ನೆಗಳು ತಿನ್ನವೆಲ್ಲಿ, ಮಧುರೆ, ಸೇಲಂ, ಮಲಬಾರ್, ಮೈಸೂರು ದೇಶದ ಬ್ರಹ್ಮಗಿರಿ, ಚಂದ್ರವಳ್ಳಿ ಮಾಗಡಿ, ಆನೆಕಲ್, ಹರಳಕೋಟೆ, ಉತ್ತರಕರ್ಣಾಟಕದಲ್ಲಿ ಬಳ್ಳಾರಿ, ಅನಂತ

---

[2] *M.A.R.*, 1942.



ಪುರ, ರಾಯ್ಚೂರು, ಮಾಸ್ಕಿ, ಸಿಂಗನಪುರ, ಬಿಜಾಪುರ ಮುಂತಾದ ಅನೇಕ ಸ್ಥಳಗಳಲ್ಲಿ ಕಂಡುಬರುವವು. ಬಳ್ಳಾರಿ ಬಳಿಯಲ್ಲಿರುವ ಗುಡ್ಡಗಳಲ್ಲಿ ಕಬ್ಬಿಣ ಕೈಗಾರಿಕೆಯ ಗುರುತುಗಳಿವೆ. ಕುಪ್ಪಗಲ್ಲಿನಲ್ಲಿ ನವಶಿಲಾಯುಗದ ಒಂದು ದೊಡ್ಡ ಕಾರ್ಖಾನೆಯಿದ್ದಿತು. ಈ ಗುಹೆಗಳಲ್ಲಿ ನವಶಿಲಾಯುಗದ ಚಿತ್ರಕಲೆಯೂ

ಕಂಡುಬರುವದು. ಒಂದು ಚಿತ್ರದಲ್ಲಿ ಇಬ್ಬರು ಮನುಷ್ಯರು ಒಂದು ಗೂಳಿಯನ್ನು ಪಾಶದಿಂದ ಹಿಡಿಯುತ್ತಿರುವರು ಹುಲಿ, ಆರುಕಿರಣಗಳುಳ್ಳ ನಕ್ಷತ್ರ, ಮರದ ಒಳಿ ನಿಂತಿರುವ ಮನುಷ್ಯ, ಮುಖವಾಡಹಾಕಿಕೊಂಡು ನೃತ್ಯಮಾಡು



ತ್ತಿರುವ ಮನುಷ್ಯರು, ಯುದ್ಧಕ್ಕೆ ಹೋಗುತ್ತಿರುವ ಮನುಷ್ಯರ ಸಾಲು ಚಿತ್ರಿಸಿವೆ. ಸಿಂಗನಪುರ, ಮಾಸ್ಕಿ, ಕರ್ನೂಲು ಗುಹೆಗಳ ಚಿತ್ರಗಳಿಂದ ಈ ಜನರ ಜೀವನ ಕ್ರಮ, ಪರಲೋಕಭಾವನೆಗಳನ್ನು ತಿಳಿಯಬಹುದು. ಈ ಚಿತ್ರಗಳು ಜೀವಕಳೆಯಿಂದ ತುಂಬಿ ಆ ಜನರ ಕಲಾಕೌಶಲ್ಯಕ್ಕೆ ನಿದರ್ಶನಗಳಾಗಿವೆ. ಇವಲ್ಲದೆ ಚಕ್ರಸಹಾಯದಿಂದ ಮಾಡಿದ ಕುಂಭಗಳು ಬೆಂಗಳೂರು, ಆದಿಚ್ಚನಲ್ಲೂರು, ಪೆರಂಬೂರು, ಅರಿಕ್ಕಮೇಡು ಇತ್ಯಾದಿ ಸ್ಥಳಗಳಲ್ಲಿ ಕಂಡುಬಂದಿವೆ. ಇವು ಬ್ಯಾಬಿಲೋನಿಯ ಸಂಸ್ಕೃತಿಯ ಸಮಾಧಿಕುಂಭಗಳನ್ನು ಹೋಲುವವು. ಶಿವರಾಯ್ ಬೆಟ್ಟದ ಬಳಿಯಲ್ಲಿ "ನೀಸ್" ಶಿಲೆಯಿಂದ ಮಾಡಿದ ಲಿಂಗವು ಸಿಕ್ಕಿದೆ. ಕೆಲವರು ಜಲಪ್ರದೇಶಗಳಲ್ಲಿ ಅಟ್ಟದ ಮೇಲೆ ಮನೆಗಳನ್ನು ಕಟ್ಟಿ ಸರೋವರಗೃಹಗಳನ್ನು (Lake Dwellings) ಮಾಡಿಕೊಂಡಿದ್ದರು. ಇತರರು ಗುಡ್ಡಗಳ ಗವಿಗಳಲ್ಲಿಯೂ ಹೊರಗಡೆ ತಡಕೆ (Wind-brakes) ಕಟ್ಟಿ ಜೀವಿಸುತ್ತಿದ್ದರು. ಫಲವತ್ತಾದ ಮೈದಾನಪ್ರದೇಶಗಳಲ್ಲಿ ಸಣ್ಣಸಣ್ಣ ಗ್ರಾಮಗಳನ್ನು

ಮಾಡಿಕೊಂಡು ವ್ಯವಸಾಯದಿಂದ ಜೀವಿಸುತ್ತಿದ್ದರು. ನದೀ ಮತ್ತು ಸಮುದ್ರ ತೀರಗಳಲ್ಲಿ "ಕಟ್ಟುಮರ" (Catamaran), ಮರದ ದೋಣಿ (Canoe) ಸಹಾಯದಿಂದ ಮೀನುಹಿಡಿದು, ಅರಣ್ಯಪ್ರಾಂತ್ಯದಲ್ಲಿ ಅರಣ್ಯವ್ಯವಸಾಯ (Forest Cultivation) ಬೇಟೆಯಿಂದಲೂ ಬದುಕುತ್ತಿದ್ದರು. ತಕಳಿಯಿಂದ ದಾರವನ್ನೂ, ಒರಟಾದ ಬಟ್ಟೆಯನ್ನೂ ಮಾಡಲು ತಿಳಿದಿದ್ದರು. ಇವರ ಮಹಾ ಶಿಲೆಗಳ ಕಟ್ಟಡ, (Megaliths) ಪಾಂಡುಕುಳಿ, ವೃತ್ತಾಕಾರವಾಗಿ ಕಲ್ಲುಗಳನ್ನು ಹೂಡುವದು, ಸಾವುಮನೆ ಮುಂತಾದುವನ್ನು ಐರ್ಲೆಂಡಿನಿಂದ ಹಿಡಿದು ಅಮೆರಿಕಾ ದೇಶದ ವರೆಗೆ ಇರುವಂತೆಯೇ ರಚಿಸುತ್ತಿದ್ದರು. ನೀಸ್, ಕ್ವಾರ್ಟ್ಸೈಟ್, ಷೆರ್ಟ ಮುಂತಾದ ಕಲ್ಲುಗಳಿಂದ ಒರಳುಕಲ್ಲು, ಚಾಕು, ಬಾಣದಮೊನೆ, ಕವಣೆ ಕಲ್ಲು ಮುಂತಾದವನ್ನು ಮಾಡುತ್ತಿದ್ದರು. ಲೋಹಗಳಲ್ಲಿ ಕಬ್ಬಿಣವು ಮೊದಲು ದಕ್ಷಿಣದೇಶದಲ್ಲಿಯೇ ಕಂಡುಹಿಡಿಯಲ್ಪಟ್ಟಿತೆಂದು ಕೆಲವರು ಊಹಿಸುವರು. ತಾಮ್ರ ಮತ್ತು ಚಿನ್ನ ಇವೂ ಬಳಿಕೆಯಲ್ಲಿದ್ದವು. ವ್ಯವಸಾಯದಲ್ಲಿ ಬತ್ತವನ್ನು ಮಟ್ಟಮಟ್ಟ ಬೆಳೆಯುವ ರೀತಿಯನ್ನು (Terrace-cultivation) ಕಂಡುಹಿಡಿದಿದ್ದರು. ಅಂತ್ಯಸಂಸ್ಕಾರ ವಿಧಾನಗಳಲ್ಲಿ ಹೂಳುವದು, ಸುಡುವದು, ಕಾಡಿನಲ್ಲಿ ಬಿಸಾಡುವದು, ಮರಗಳ ಪೊಟ್ಟರೆಗಳಲ್ಲಿ ಮುಚ್ಚಿಡುವದು, ನೀರಿನಲ್ಲಿ ಬಿಡುವದು, ಕಲ್ಲುಗಳಿಂದ ಮುಚ್ಚುವದು ಇತ್ಯಾದಿ ಪದ್ಧತಿಗಳಿದ್ದವು. ಈ ಜನರಿಗೆ ಮಂತ್ರ ಮಾಟಗಳಲ್ಲಿ ಅಧಿಕ ನಂಬಿಕೆಯಿದ್ದಿತೆಂದು ಇವರು ಬರೆದ ಚಿತ್ರಗಳಿಂದ ಊಹಿಸಬಹುದು. ಬಹುಶಃ ಮಾತೃ ಅಧಿಕಾರವು ಮಾತೃದೇವತಾ ಪೂಜೆಗೆ ಕಾರಣವಾಗಿದ್ದಿರಬಹುದು. ಪುರುಷರೂ ಸ್ತ್ರೀಯರೂ ಮೈಗೆ ಬಣ್ಣಗಳನ್ನು ಹಾಕಿಕೊಂಡು, ಮಣ್ಣು, ಕಲ್ಲು, ಬಿದಿರು, ಲೋಹಗಳಿಂದ ಮಾಡಿದ ಅಂದಿಗೆ, ಹಾರ, ಮೂಗುತಿ, ಕಿವಿ ಓಲೆ, ಬಳೆ ಮುಂತಾದ ಆಭರಣಗಳಿಂದ ಅಲಂಕಾರ ಮಾಡಿಕೊಳ್ಳುತ್ತಿದ್ದರು. ಮುಖ್ಯವಾಗಿ ಮನೆಗೆಲಸ, ವ್ಯವಸಾಯ ಮತ್ತು ಕುಂಭಗಳನ್ನು ಮಾಡುವದು ಹೆಂಗಸರ ಪಾಲಿನ ಕೆಲಸ. ಪುರುಷರು ಬೇಟೆಗಾರರೂ ಬೆಸ್ತರೂ ಆಗಿದ್ದು ಸ್ತ್ರೀಯರ ಅಧಿಕಾರಕ್ಕೆ ಒಳಗಾಗಿದ್ದರೆಂದು ಊಹಿಸಲಾಗಿದೆ. ಈ ಯುಗದಲ್ಲಿ ಪಾಲಿನೀಷಿಯ ಪ್ರಾಂತ್ಯದಿಂದ ತೆಂಗಿನ ಕಾಯಿ, ಮರದ ದಿಮ್ಮಿ ದೋಣಿ (Canoe) ವೀಳೆಯದೆಲೆ, "ಬೂಮ್‌ರಾಂಗ್" ಎಂಬ ಆಯುಧ ಭರತಖಂಡಕ್ಕೆ ಬಂದವೆಂದು ಕೆಲವರು ಅಭಿಪ್ರಾಯಪಡುವರು.

**ತಾಮ್ರ-ಶಿಲಾಯುಗ:** ಸಿಂಧೂನದಿಯ ಪಾತ್ರದಲ್ಲಿ ೧೯೨೨ ರಲ್ಲಿ ಹೊರಗೆಡಹಿದ ನಾಗರಿಕತೆಗೆ "ಇಂಡೋ-ಸುಮೇರಿಯನ್", "ಚಾಲ್ಕೊಲಿಥಿಕ್" ಅಥವಾ "ಇಂಡಸ್" ನಾಗರಿಕತೆಯೆಂದು ಮೊದಲು ನಾಮ

| ಕಾಲ | ಯೂರೋಪ್ | | | | | | ಈಜಿಪ್ಟ್ | ಮೆಸೊಪೊಟೇಮಿಯ | | | | | | | | | ಅನಟೋಲಿಯ | | | | ಪರ್ಷಿಯ | | ಇಂಡಿಯ | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | ಥೆಸಲಿ | ಡಾನ್ಯೂಬ್ | ಕ್ಯೂಕುಟೆನಿ | ಒಸಾರ್ಲಿಕ್ | ಕ್ರೀಟ್ | ಸೈಪ್ರಸ್ | | ಅಲ್ ಉಬೈದ್ | ಊರ್ | ವಾರ್ಕ | ಕಿಶ್ | ಖಫಜೆ | ನಿನೆವೆ | ಅರ್ಪಚಿಯ | ಟೆಪೆಗವ್ರ | ಸೂಸ | ರಾಸ್ ಷಾಮ್ರ | ಮರಿ | ಟೆಲ್ ಹಲಾಫ್ | ಆನೋ | ಕಾರ್ಕೆಮಿಷ್ | ಹಿಸ್ಸಾರ್ | ಹರಪ್ಪ | ಮೊ.ದಾರೊ | ಚಾನ್ಹು ದಾರೊ |
| ಕ್ರಿ.ಪೂ 1,500 | | | | | ಮಿನೋವ V | | ವಂಶ 12, 13, 14, 15, 16, 17, 18 | | ಕ್ಯಾಸ್ಸೈಟ್<br>ಬ್ಯಾಬಿಲಾನ್<br>I ವಂಶ | | | | | | | ಲೂರಿಸ್ತಾನ 3<br>ಲೂರಿಸ್ತಾನ 2 | | | | ಅಸ್ತಿರಿಯ<br>ನದ್-ಇ-ಅಲಿ<br>(ಸೈಸ್ತಾನ್) | ಗಿಯಾನ್ I-II | ಅಸ್ತಿರಿಯ<br>ಸಿಯಾಲ್ಕ್<br>ಸಮಾಧಿ A | ಜೀವನ<br>[illegible] | [ಮೊಘಲ್ ಘುಂಡೈ<br>ಸಮಾಧಿ] | (ಚಾನ್ಹು ದಾರೊ III)<br>ಝೂಂಗಾರ್<br>ರಾಣಾಘುಂಡೈ V |
| 2,000 | | ಡಾನ್ಯೂಬ್ II | | ಒಸಾರ್ಲಿಕ್ II | ಮಿನೋವ IV<br>ಮಿನೋವ III | ಸೈಪ್ರಸ್ II | ವಂಶ XI, XII<br>ವಂಶ X, IX | | ಇಸಿನ್-ಲಾರ್ಸ | | | | | | | ಲೂರಿಸ್ತಾನ 1 | ಪದರ 2 | ಊರ್ 3 | ಮೈಕೋಪ್<br>ತ್ಸಾರ್ಸ್ಕಾಯ | ಆನೋ II | ಆಧುನಿಕ<br>ಹಿಟ್ಟೈಟ್<br>ಗಿಯಾನ್ III-IV | [illegible] | [illegible] | ಮೊ. ದಾರೊ X | ರಾಣಾಘುಂಡೈ IV |
| 2,500 | ಥೆಸಲಿ II | ಎರೋಸ್ | ಕ್ಯೂಕುಟೆನಿ B | | ಮಿನೋವ II (b)<br>ಮಿನೋವ II (a) | ಸೈಪ್ರಸ್ I | ವಂಶ VII, VIII<br>ವಂಶ VI, V<br>ವಂಶ IV | | ಊರ್ II, III<br>ಸಮಾಧಿಗಳು | | | ಅಬು ದೇವಾಲಯ<br>ಸಿನ್<br>ದೇವಾಲಯ II | | | | ಸೂಸ D | | ದೇವಾಲಯ I | | | ಪ್ರಾಚೀನ<br>ಹಿಟ್ಟೈಟ್ | ಹಿಸ್ಸಾರ್ III | ಕುಲ್ | IX<br>VIII | ಝುಕಾರ್<br>(ಚಾನ್ಹು ದಾರೊ II) |
| 3,000 | ಥೆಸಲಿ I | ಡಾನ್ಯೂಬ್ I | ಕ್ಯೂಕುಟೆನಿ A | ಒಸಾರ್ಲಿಕ್ I | ಮಿನೋವ I (b)<br>ಮಿನೋವ I (a) | ಎರಿಸಿ | ವಂಶ III<br>ವಂಶ II<br>ವಂಶ I | (ಮೆಸನಿಪದ<br>(ಅಆನಿಪದ | ಪ್ಲೇನೂಕಾ<br>ಸ್ಟ್ರೆಕ್ ಇಟ್ಟಿಗೆ<br>ರಿಸರ್ವ್ ಸ್ಲಿಪ್<br>ಕುಂಭ | | ಪ್ರಳಯ | ಸಿನ್<br>ದೇವಾಲಯ I<br>ರಿಸರ್ವ್ ಸ್ಲಿಪ್<br>ಕುಂಭ | ಬಹುವರ್ಣ<br>ಘಟಗಳು | ಬಹುವರ್ಣ<br>ಘಟಗಳು | ವರ್ಣ ಕುಂಭ | ಸೂಸ್ II<br>ಸೂಸ C<br>ಸೂಸ B | ಪದರ 3<br>ಊರ್ ವಾರ್ಕ<br>ಸಂಸ್ಕೃತಿ<br>ಪದರ 4 | ದೇವಾಲಯ II | | | ಗಿಯಾನ್ V | ಹಿಸ್ಸಾರ್ II<br>ಸಿಯಾಲ್ಕ್ IV | | ಮೊ. ದಾರೊ VII | (ಚಾನ್ಹು ದಾರೊ I) |
| 3,500 | | | | | ಎಪಿಪೆಲಿಯೋಲಿಥ್.<br>ನಿಯೋಲಿಥ್ | ಅವಾಂತರ<br>ಯುಗ | ಪ್ರಾಗ್ವಂಶೀಯ | ಸಮಾಧಿಗಳು | ಜೆಮ್ಡೆತ್ ನಸರ್<br>ಕುಂಭ | ಪ್ಲೇನೊ<br>ಕಾನ್ವೆಕ್ಸ್<br>ಇಟ್ಟಿಗೆ | ಸಮಾಧಿ A<br>ಸಮಾಧಿಗಳು<br>ಜೆಮ್ಡೆತ್<br>ನಸರ್ ಕುಂಭ | | ರಿಸರ್ವ್ ಸ್ಲಿಪ್<br>ಕುಂಭ | ರಿಸರ್ವ್ ಸ್ಲಿಪ್<br>ಕುಂಭ | ಚತುಷ್ಕೋಣ<br>ಇಟ್ಟಿಗೆ | | | ದೇವಾಲಯ<br>III<br>ದೇವಾಲಯ<br>IV | | ಆನೋ II | | ಹಿಸ್ಸಾರ್ I<br>ಸಿಯಾಲ್ಕ್ III | ಹರಪ್ಪ II | VI | (ಕ್ವೆಟ್ಟ)<br>ಹರಪ್ಪ II<br>R. 37 ಸಮಾಧಿ |
| 4,000 | | | | | | ಶಿಲಾಯುಗ | ಮೆರಿಂಡೆ<br>ಟಾಸಿಯ<br>ಬದರಿ | ಸಮಾಧಿಗಳು | ಕೆಂಪು ಬೂದು<br>ಘಟ | ಪ್ರಳಯ | | ಜೆಮ್ಡೆತ್ ನಸರ್<br>ಕುಂಭ<br>ಉರುಕ್ ಕುಂಭ | ಮುದ್ರೆಗಳು | ಮುದ್ರೆಗಳು | | | ಪದರ 5 | ಪ್ರಾಚೀನ<br>ವಿಗ್ರಹಗಳು | ಟೆಲ್ ಹಲಾಫ್ | ಆನೋ I | ಕಾರ್ಕೆಮಿಷ್ I | [illegible] II | | V<br>IV | |
| 4,500 | | | | | | | ಶಿಲಾಯುಗ | ಅಲ್ ಉಬೈದ್<br>ಕುಂಭಗಳು | ಪ್ರಳಯ<br>ಅಲ್ ಉಬೈದ್<br>ಕುಂಭಗಳು | ಸಮಾಧಿ<br>ಬಹುವರ್ಣ<br>ಕುಂಭ | | | ಬೂದು, ಕಪ್ಪು<br>ಬಣ್ಣದ<br>ಘಟಗಳು<br>ಪ್ರಳಯ | ಬೂದು, ಕಪ್ಪು<br>ಬಣ್ಣದ ಘಟ<br>ಪ್ರಳಯ | | | ಬೂದುಬಣ್ಣ<br>ಗಡಿಗೆ | | [ಸಾಕೆ ಗ್ಯುಜಿ] | | | | | III<br>II<br>I | ಹರಪ್ಪ I<br>ರಾಣಾಘುಂಡೈ III<br>c<br>b<br>a |
| 5,000 | | | | | | | | ಶಿಲಾಯುಗ | | ಕೆಂಪು ದೇವಾಲಯ<br>ಚತುಷ್ಕೋಣ<br>ಇಟ್ಟಿಗೆ<br>ಬಿಳಿ ದೇವಾಲಯ<br>ಅಲ್ ಉಬೈದ್<br>ಕುಂಭ [ಹಲಾಫ್] | | | ಬಹುವರ್ಣ<br>ಕುಂಭಗಳು<br>ಸಾಮಾನ್ಯ<br>ಕುಂಭ | ಬಹುವರ್ಣ<br>ಕುಂಭ<br>ಸಾಮಾನ್ಯ<br>ಕುಂಭ | | ಸೂಸ I. A | | | [ಸಮರ್ರ]<br>[ಹಸುನ] | | | ಸಿಯಾಲ್ಕ್ I | ಹರಪ್ಪ I (b)<br>ಹರಪ್ಪ I (a) | | ರಾಣಾಘುಂಡೈ II |
| 7,000 | | | | | | | | | | | | | | | | | | | | | | | ನಾಲ್ ನಂದಾರ<br>ಆಮ್ರಿ | | ರಾಣಾಘುಂಡೈ I |
| 10,000 | | | | | | | | | | | | | | | | | | | | | | | ಋಗ್ವೇದಯುಗ<br>ನವಶಿಲಾಯುಗ | | |

[ಕೆಳಗಿನಿಂದ ಮೇಲಕ್ಕೆ ಓದಿ]

ಕರಣವಾಗಿದ್ದಿತು[3]. ಈ ಹೆಸರುಗಳಾವುವೂ ಸಮರ್ಪಕವಾಗಿಲ್ಲವಾದುದರಿಂದ "ಪ್ರಾಗ್ಭಾರತೀಯ" (Proto-Indic) ಅಥವಾ ಮೊದಲು ಕಂಡುಬಂದ ಸ್ಥಳದ ಹೆಸರನ್ನನುಸರಿಸಿ "ಹರಪ್ಪ" ಸಂಸ್ಕೃತಿಯೆಂದು ಈಗ ವ್ಯವಹಾರದಲ್ಲಿದೆ. ಕ್ರಿ.ಶ. ೧೮೮೦ ರಲ್ಲಿಯೇ ಕನಿಂಗ್‌ಹ್ಯಾಮನು ಹರಪ್ಪ ಬಳಿಯಲ್ಲಿ ಈ ನಾಗರಿಕತೆಯ ಕೆಲವು ಮುದ್ರೆಗಳನ್ನು ಸಂಗ್ರಹಿಸಿದನು. ಅನಂತರ ಆರ್. ಡಿ. ಬ್ಯಾನರ್ಜಿ ೧೯೨೨ರಲ್ಲಿ ಹರಪ್ಪ ಸಂಸ್ಕೃತಿಯ ಮಹತ್ವವನ್ನು ಮೊದಲು ಪ್ರಪಂಚಕ್ಕೆ ತೋರಿಸಿದನು. ಆಗಿನಿಂದ ವತ್ಸ, ಸಾಹಿಣಿ, ಮಜುಂದಾರ್, ಮ್ಯಾಕೆ ಮುಂತಾದವರು ಹೆಚ್ಚು ಸಂಶೋಧನೆಮಾಡಿ ಈ ಸಂಸ್ಕೃತಿಯ ಪ್ರಾಚೀನತೆಯನ್ನು ಸ್ಥಾಪಿಸಿರುವರು.

ಈ ಸಂಸ್ಕೃತಿಯ ಕುರುಹುಗಳು ಸಿಂಧೂಪಾತ್ರದಲ್ಲೇ ಅಲ್ಲದೆ ಉತ್ತರ ಹಿಂದೂಸ್ಥಾನದಲ್ಲೆಲ್ಲಾ ಸಿಕ್ಕಿವೆ. ಹಿಂದೂಕುಷ್‌ಶ್ರೇಣಿಯಿಂದ ಅಸ್ಸಾಮ್ ವರೆಗೂ ಹಿಮಾಲಯ ತಪ್ಪಲಿನಿಂದ ನರ್ಮದಾ ಪಾತ್ರದ ವರೆಗೂ ಮಾಕ್ರಾನ್ ಮರುಭೂಮಿ, ಜಬ್ರಿ, ರಾಣಗುಂಡ, ಸೂರ್ಜಂಗಲ್, ರೂಪಾರ್, ಗುಮಾಲ್, ಕೋಟ್ಲ-ನಿಹಾಂಗ್, ಖೈರ್‌ಪುರ್, ಅಲೀಮುರಾದ್, ಘಾಸಿಷಾಹ್, ಕುಲ್ಲಿ, ಮೆಹಿ, ಷಾಹಿಡುಂಬ್, ಘಾಸಿಪುರ್, ಲಿಂಬ್ಡಿ ಸಂಸ್ಥಾನ, ಲೊಹುಂಜೋದಾರೊ, ಮರುಂಜೋದಾರೊ, ಚಾನ್ಹುದಾರೊ, ಮೊಹೆಂಜೊದಾರೊ ಇತ್ಯಾದಿ ಸ್ಥಳಗಳಲ್ಲಿ ಈ ಸಂಸ್ಕೃತಿಯ ಅವಶೇಷಗಳು ಸಿಕ್ಕಿವೆ. ಈ ಸಂಸ್ಕೃತಿಗೆ ಸಂಬಂಧಿಸಿದ ಆಮ್ರಿ ಸಂಸ್ಕೃತಿಯು ಹರಪ್ಪ ಸಂಸ್ಕೃತಿಗಿಂತಲೂ ಪ್ರಾಚೀನವೆಂತಲೂ, ನಾಲ್, ಝುಕಾರ್, ಝೂಂಗಾರ್ ಸಂಸ್ಕೃತಿಗಳು ಆಧುನಿಕವೆಂತಲೂ ನಿರ್ಧರಿಸಿರುವರು. ದಕ್ಷಿಣದೇಶದಲ್ಲಿ ಈ ಸಂಸ್ಕೃತಿಯು ಎಲ್ಲಿಯೂ ಇದುವರೆಗೆ ಕಂಡುಬಂದಿಲ್ಲ.

ಈ ಸಂಸ್ಕೃತಿಯ ಕಾಲನಿರ್ಣಯದಲ್ಲಿ ವಿವಿಧಾಭಿಪ್ರಾಯಗಳಿವೆ. ಮಾರ್ಷಲ್ ಕ್ರಿಸ್ತಪೂರ್ವ ೩೦೦೦ ಎಂದು ಅಭಿಪ್ರಾಯಪಟ್ಟಿದ್ದನು. ಡಾ|| ಫ್ರಾಂಕ್‌ಫರ್ಟ್ ಮೆಸೊಪೊಟೋಮಿಯ ದೇಶದಲ್ಲಿ ಖಫಜೆ, ಟೆಲ್ ಅಗ್ರಾಬ್ ಮುಂತಾದ ಸ್ಥಳಗಳಲ್ಲಿ ಸಂಶೋಧನೆ ನಡಿಸಿ ಅಲ್ಲಿ ಹರಪ್ಪ ಸಂಸ್ಕೃತಿಯ ಮುದ್ರೆಗಳೂ ಇತರ ವಸ್ತುಗಳೂ ಸಿಕ್ಕಿರುವದರಿಂದ ಕ್ರಿ.ಶ. ೨೭೦೦ ಎಂದು ನಿಶ್ಚಯಿಸಿದನು. ಆದರೆ ಪಂಡಿತವತ್ಸ ಅವರು ಈಚೆಗೆ ನಡಿಸಿರುವ ಶೋಧನೆಯಿಂದ ಹರಪ್ಪ ಸಂಸ್ಕೃತಿಯ ಕಾಲವನ್ನು ಹೀಗೆ ಸಿರ್ಧರಿಸಿರುವರು[4].

---

[3] Marshall, *Mohenjo Daro and the Indus Civilisation.* Mackay, *The Indus civilisation.*

[4] M. S. Vats, *Excavations at Harappa*, Vol. I

ಹರಪ್ಪ F. ದಿನ್ನೆ—(*a*) ಆಧುನಿಕ ಮೂರು ಪದರಗಳು. ಕ್ರಿ.ಪೂ. ೩೦೫೦ ರಿಂದ ೨೭೫೦ ವರೆಗೆ.

(*b*) ಮಧ್ಯಕಾಲೀನ: ನಾಲ್ಕು ಪದರ. ಕ್ರಿ.ಪೂ. ೩೫೦೦ ರಿಂದ ೩೦೫೦ ವರೆಗೆ. ಮಾಹೆಂಜೋದಾರೋ ಪಟ್ಟಣಕ್ಕಿಂತ ಪ್ರಾಚೀನ.

(*c*) ಅತ್ಯಂತ ಪುರಾತನ: ಎಂಟನೆಯ ಪದರ. ಕ್ರಿ.ಪೂ. ನಾಲ್ಕನೆಯ ಸಹಸ್ರಾಬ್ದ,

J. ನಿವೇಶ—(*a*) ಆಧುನಿಕ: ಎರಡು ಪದರಗಳು. ಕ್ರಿ.ಪೂ. ೨೮೫೦ ರಿಂದ ೩೦೫೦.

(*b*) ಮಧ್ಯಕಾಲೀನ: ಎರಡು ಪದರ. ಕ್ರಿ.ಪೂ. ೩೦೫೦ ಕ್ಕೆ ಹಿಂದೆ.

G. ನಿವೇಶ—(*a*) ಆಧುನಿಕ: ಎರಡು ಪದರ ಕ್ರಿ.ಪೂ. ೨೮೦೦ ರಿಂದ ೨೭೦೦ ವರೆಗೆ.

(*b*) ಮಧ್ಯಕಾಲೀನ. ಮೂರನೆಯ ಪದರ. ಕ್ರಿ.ಪೂ. ೩೨೫೦. ಮೂರನೆಯ ಪದರಕ್ಕೂ ಮೇಲಣ ಎರಡು ಪದರಗಳಿಗೂ ಬಹಳ ಅಂತರವಿದೆ.

H. ಶ್ಮಶಾನ ಆಧುನಿಕ:—ಎರಡು ಪದರಗಳು. ಕ್ರಿ.ಪೂ. ೨೫೦೦ ರಿಂದ ೨೦೦೦ ವರೆಗೆ.

ಡಾ|| ಮ್ಯಾಕೆ ಚಾನ್ಹುದಾರೋ ಮತ್ತು ಮಾಹೆಂಜೋದಾರೋ ಶೋಧನೆಯಿಂದ ಹರಪ್ಪ ಸಂಸ್ಕೃತಿಯನಂತರ ಬೇರೆ ವಿಧವಾದ ಬಹುವರ್ಣ ಕುಂಭಗಳುಳ್ಳ ಝುಕಾರ್ ಸಂಸ್ಕೃತಿಯು ಕ್ರಿ.ಪೂ. ೨೦೦೦ ದಲ್ಲಿದ್ದಿತೆಂದೂ ಇದರ ಅನಂತರ ಬೂದುಬಣ್ಣದ ಕುಂಭಗಳುಳ್ಳ ಝಾಂಗಾರ್ ಸಂಸ್ಕೃತಿಯು ಕ್ರಿ.ಪೂ. ೧೭೦೦ ರಲ್ಲಿದ್ದಿತೆಂದೂ, ಸುಮಾರು ಕ್ರಿ.ಪೂ. ೧೫೦೦ ರಲ್ಲಿ ಆರ್ಯರು ಪ್ರವೇಶಿಸಿದರೆಂದೂ ಊಹಿಸುವರು. ಹರಪ್ಪ ಸಂಸ್ಕೃತಿಯು ಕ್ರಿ.ಪೂ. ೪೦೦೦ ದಿಂದ ೨೨೦೦ ವರೆಗೂ ಇದ್ದಿತೆಂದೂ, ಇದಕ್ಕೂ ಪೂರ್ವದಲ್ಲಿ "ಆಮ್ರಿ" ಸಂಸ್ಕೃತಿಯು ಕ್ರಿ.ಪೂ. ಐದನೆಯ ಸಹಸ್ರಾಬ್ದದಲ್ಲಿದ್ದಿತೆಂದೂ ನಿರ್ಧರಿಸಿದೆ.

ಹರಪ್ಪ ಸಂಸ್ಕೃತಿಯ ಅವಶೇಷಗಳಲ್ಲಿ ದೀರ್ಘಕಪಾಲ, ಹ್ರಸ್ವದೇಹಗಳುಳ್ಳ "ಪ್ರೋಟೋ-ಆಸ್ಟ್ರೊಲಾಯ್ಡ್;" ಕಿಷ್, ಅಲ್‌ಉಬೈದ್ ಆನೋ ಮುಂತಾದ

ಮೆಸೊಪೊಟೇಮಿಯ ಸ್ಥಳಗಳಲ್ಲಿ ಸಿಕ್ಕಿರುವ ಕಪಾಲಗಳನ್ನು ಹೋಲುವ ದೀರ್ಘಕಪಾಲದ "ಮೆಡಿಟರೇನಿಯನ್;" "ಮಂಗೋಲೊ-ಆಲ್ಪೈನ್;" ಆಲ್ಪೈನ್-ಆರ್ಮಿನಾಯ್ಡ್" ಜನಾಂಗಗಳ ದೇಹಭಾಗಗಳು ಸಿಕ್ಕಿವೆ. ಆದುದರಿಂದ



ಟೆಲ್ ಅಸ್ಮಾರ್, ಟೆಲ್ ಅಗ್ರಾಬ್, ಖಫಜೆ. ಚಿತ್ರ ೧. ಚಾನ್ಹುದಾರೊ, ಹರಪ್ಪಾ, ಮೊಹೆಂಜೊದಾರೊ.

ಈ ಸಂಸ್ಕೃತಿಯು ಕೇವಲ "ದ್ರಾವಿಡ" ಸಂಸ್ಕೃತಿಯೆಂದು ಹೇಳುವದಕ್ಕೆ ಆಧಾರವಿಲ್ಲ.

ಮಾರ್ಷಲ್ ಮುಂತಾದ ಕೆಲವು ಶೋಧಕರು ಸಿಂಧುಸಂಸ್ಕೃತಿಯು ಅನಾರ್ಯ ಅಥವಾ ದ್ರಾವಿಡರದೆಂಬುದಾಗಿ ಊಹಿಸುವದಕ್ಕೆ ಕೆಲವು ಕಾರಣಗಳನ್ನು ತೋರಿಸುವರು. ಆರ್ಯರು ಹಳ್ಳಿಜನರು, ಸಿಂಧೂಸಂಸ್ಕೃತಿಯುವರು ಪಟ್ಟಣ ನಿವಾಸಿಗಳು. ಆರ್ಯರು ಕಬ್ಬಿಣದ ಉಪಯೋಗವನ್ನರಿತಿದ್ದರು, ಸೈಂಧವರು ತಾಮ್ರ, ಕಂಚು, ಬಂಗಾರ, ಬೆಳ್ಳಿ, ಸೀಸಮಾತ್ರ ಉಪಯೋಗಿಸುತ್ತಿದ್ದರು. ಆರ್ಯರು ಯುದ್ಧಪ್ರಿಯರು, ಇವರು ಶಾಂತಿಪ್ರಿಯರು. ಆರ್ಯರಿಗೆ

ಸಮುದ್ರ ಮತ್ತು ವ್ಯಾಪಾರಪದ್ಧತಿ ತಿಳಿಯದು, ಆದರೆ ಸೈಂಧವರು ಸಮುದ್ರ ಯಾನಮಾಡಿ ವಿದೇಶೀಯ ವ್ಯಾಪಾರಮಾಡುತ್ತಿದ್ದರು. ಆರ್ಯರು ಕುದುರೆಗಳನ್ನು ಉಪಯೋಗಿಸುತ್ತಿದ್ದರು, ಆದರೆ ಈ ಸಂಸ್ಕೃತಿಯಲ್ಲಿ




ಚಿತ್ರ ೧

ಚಿತ್ರ ೨.

ಕುದುರೆಯ ಚಿಹ್ನೆಯಿಲ್ಲ. ಆರ್ಯರು ಹಸುವನ್ನು ಪವಿತ್ರವೆಂದು ಭಾವಿಸಿದ್ದರು, ಆದರೆ ಸೈಂಧವರು ಗೂಳಿಗಳನ್ನು ಪೂಜಿಸುತ್ತಿದ್ದರು. ಆರ್ಯರಿಗೆ ಆನೆ ಮತ್ತು ಹುಲಿ ಹೊಸದಾಗಿ ಕಂಡುಬರುತ್ತಿದ್ದವು, ಈ ಸಂಸ್ಕೃತಿಯಲ್ಲಿ ಇವುಗಳ ಪೂಜೆಯು ಸಾಮಾನ್ಯವಾಗಿದ್ದವು. ಆರ್ಯರಿಗೆ ಅಗ್ನಿ ಮತ್ತು ಪ್ರಕೃತಿಯ ಶಕ್ತಿಗಳಾದ ಇಂದ್ರ, ವರುಣ ಇತ್ಯಾದಿ ದೇವತೆಗಳ ಅಮೂರ್ತಪೂಜೆಯೇ ಪ್ರಧಾನ, ಸೈಂಧವರಿಗೆ ಶಿವ-ಪಶುಪತಿ, ಮಾತೃದೇವತೆ, ನಾಗ, ವೃಕ್ಷ, ಪಶು ಇತ್ಯಾದಿ ಮೂರ್ತಿಪೂಜೆಯೇ ಮುಖ್ಯವಾಗಿದ್ದಿತು. ಆರ್ಯರಲ್ಲಿ ವರ್ಣಭೇದ ಗಳಿರಲಿಲ್ಲ, ಆದರೆ ಸಿಂಧೂಸಂಸ್ಕೃತಿಯಲ್ಲಿ ಕೆಲವು ಉದ್ದೇಶಪೂರ್ವಕವಾಗಿ ಒಡೆದುಹಾಕಿದ ಮಣ್ಣಿನ ಗಡಿಗೆ, ಬಟ್ಟಲು ಮುಂತಾದುವು ಸಿಕ್ಕಿರುವದರಿಂದ ಸೈಂಧವರಲ್ಲಿ ಅಸ್ಪೃಶ್ಯತೆಯೂ ವರ್ಣಭೇದಗಳೂ ಇದ್ದವೆಂದು ಊಹಿಸ ಬಹುದು. ಸೈಂಧವರಿಗೆ ಲಿಪಿ ತಿಳಿದಿದ್ದಿತು, ಆರ್ಯರಿಗೆ ಬರಹವು ತಿಳಿದಿರಲಿಲ್ಲ— ಈ ಕಾರಣಗಳಿಂದ ಸಿಂಧೂಸಂಸ್ಕೃತಿಯು ಅನಾರ್ಯರದೆಂದೂ ಬಹುಶಃ ದ್ರಾವಿಡರದೆಂದೂ ನಿರ್ಧರಿಸಬಹುದು.

ಈ ವಾದವು ಕೇವಲ ಭ್ರಾಂತಿಜನ್ಯವಾದುದು. ಕಪಾಲಾವಶೇಷಗಳಲ್ಲಿ ದೀರ್ಘ ಮತ್ತು ವಿಶಾಲ ಕಪಾಲಗಳೆರಡೂ ಸಿಕ್ಕಿರುವದರಿಂದ ಸೈಂಧವರು ಯಾವ ಮಾನವವರ್ಗಕ್ಕೆ ಸೇರಿದವರೆಂದು ನಿರ್ಣಯಿಸಲಾಗುವದಿಲ್ಲ. ಆರ್ಯರ ಮತ್ತು ದಸ್ಯುಗಳ "ಪುರ" (ಪಟ್ಟಣ ಎಂಬ ಅರ್ಥದಲ್ಲಿ) ವೇದದಲ್ಲಿ ಉಕ್ತವಾಗಿದೆ. ಆರ್ಯರು ಯಾವಾಗಲೂ ಯುದ್ಧಪ್ರಿಯರು, ಹಳ್ಳಿಗಳಲ್ಲೇ ಇದ್ದರು ಎಂದು ಹೇಳುವದು ಹಾಸ್ಯಾಸ್ಪದ. ಆರ್ಯರು ಮೂರ್ತ ಮತ್ತು ಅಮೂರ್ತ ಪೂಜಕರೂ ಆಗಿದ್ದರು. "ಇಂದ್ರಂವಯಂ ವಣಿಜಂ ಹವಾಮಹೇ" ಮುಂತಾದ ಮಂತ್ರಗಳಿಂದಲೂ ಭುಜ್ಯು ಇತ್ಯಾದಿಗಳು ಸಮುದ್ರದ ಮೇಲೆ ಪ್ರಯಾಣಮಾಡಿದರೆಂಬ ಇತಿಹಾಸಗಳು ವೇದದಲ್ಲಿ ಕಂಡುಬರುವದರಿಂದ

ಆರ್ಯರಿಗೆ ಸಮುದ್ರಯಾನ, ವ್ಯಾಪಾರಪದ್ಧತಿಗಳು ತಿಳಿದಿದ್ದವೆಂದು ಸ್ಪಷ್ಟವಾಗಿ ನಿರ್ಧರಿಸಬಹುದು. ಆರ್ಯರಿಗೆ ಹಸು ಎಷ್ಟು ಪವಿತ್ರವೋ ವೃಷಭವೂ ಅಷ್ಟೇ ಪವಿತ್ರವಾಗಿದ್ದಿತು. ಶಿವ, ನಾರಾಯಣ, ಮಾತೃದೇವತಾಪೂಜೆಯು ಅನಾರ್ಯರದೆಂಬುದಕ್ಕೆ ಸಂಸ್ಕೃತಸಾಹಿತ್ಯವನ್ನೇ ಹುಡುಕಿದರೂ ಸಮರ್ಪಕವಾದ ಆಧಾರವು ಕಂಡುಬರುವದಿಲ್ಲ. ಹರಪ್ಪ ಅವಶೇಷಗಳಲ್ಲಿ ಕುದುರೆಯ ಜೀನು, ಲಗಾಮು, ಕಡಿವಾಣಗಳು ಸಿಕ್ಕಿವೆಯೆಂದು ಡಾ|| ಮಾಕೇ ನಿರ್ಧರಿಸಿರುವದರಿಂದ ಸೈಂಧವ ಸಂಸ್ಕೃತಿಯಲ್ಲೂ ಕುದುರೆಗಳ ಉಪಯೋಗವು ತಿಳಿದಿದ್ದಿತು. ಋಗ್ವೇದದಲ್ಲಿಯೇ ಅಕ್ಷರ (ಋಚೋ ಅಕ್ಷರೇ ಪರಮೇವ್ಯೋಮನ್), ಸಂಖ್ಯೆ (ಅಷ್ಟಕರ್ಣೀಗೌಃ)ಗಳ ಉಲ್ಲೇಖವಿರುವದರಿಂದ ಆರ್ಯರಿಗೆ ಲಿಪಿ ತಿಳಿದಿರಲಿಲ್ಲವೆಂಬ ವಾದವು ನಿರಾಧಾರವಾದುದು. ವೇದಾಧ್ಯಯನಕ್ಕೆ ಸಹಕಾರಿಗಳಾದ ಜ್ಯೋತಿಷ, ಛಂದಸ್ ಮುಂತಾದ ವೇದಾಂಗಗಳನ್ನು ಕಲಿಯಲು ಲಿಪಿಸಹಾಯವಿಲ್ಲದಿದ್ದರೆ ಸಾಧ್ಯವೇ ಇಲ್ಲ.

ಋಗ್ವೇದಸಂಸ್ಕೃತಿಯು ಕ್ರಿ.ಪೂ. ೧೦೦೦೦ ದಲ್ಲಿ ಮಧ್ಯಶಿಲಾಯುಗ, ನವಶಿಲಾಯುಗಗಳಲ್ಲಿ ಆರಂಭವಾಯಿತೆಂಬುದಕ್ಕೆ ಜ್ಯೋತಿಷ ಮತ್ತು ಇತರ ನಿದರ್ಶನಗಳಿರುವದರಿಂದ ಹರಪ್ಪ ಸಂಸ್ಕೃತಿಯು ವೈದಿಕಸಂಸ್ಕೃತಿಯ ಆಧುನಿಕರೂಪವೆಂಬುದೇ ಸಮರ್ಪಕವಾದ ಸಿದ್ಧಾಂತ. ಋಗ್ವೇದದಲ್ಲಿಯೇ ಹರಪ್ಪ—ಹರಿಯೂಪೀಯ ಅಥವಾ ಯವ್ಯಾವತೀ ಎಂಬ ನದಿಯ (ಅಥವಾ ಪಟ್ಟಣದ) ಉಲ್ಲೇಖವಿರುವದರಿಂದ ಹರಪ್ಪ ಪಟ್ಟಣಸ್ಥಾಪನೆಗೆ ಮುಂಚೆಯೇ ಋಗ್ವೇದ ಸಂಹಿತೆಯ ರಚನೆ ಆಯಿತೆಂದು ನಿರ್ಧರಿಸಬಹುದು.

ಏ ತತ್ಯತ್ತ ಇನ್ದ್ರಿಯಮಚೇತಿ ಯೇನಾವಧೀರ್ವರಶಿಖಸ್ಯ ಶೇಷಃ

ವಜ್ರಸ್ಯಯತ್ತೇ ನಿಹತಸ್ಯಶುಷ್ಮಾತ್ಸ್ವನಾಚ್ಚಿದಿನ್ದ್ರಪರಮೋದದಾರ ||

ವಧೀದಿನ್ದ್ರೋ ವರಶಿಖಸ್ಯಶೇಷೋsಭ್ಯಾವರ್ತಿನೇ ಚಾಯಮಾನಾಯಶಿಕ್ಷನ್ |

ವೃಚೀವತೋ ಯುದ್ಧರಿಯೂಪೀಯಾಯಾಂಹನ್ ಪೂರ್ವೇsರ್ಧೇಭಿಯಸಾಪರೋsದರ್ತ್ ||

ತ್ರಿಂಶಚ್ಛತಂ ವರ್ಮಿಣ ಇಂದ್ರಸಾಕಂ ಯವ್ಯಾವತ್ಯಾಂ ಪುರುಹೂತಶ್ರವಸ್ಯಾ |

ವೃಚೀವನ್ತಃ ಶರವೇಪತ್ಯಮಾನಾಃ ಪಾತ್ರಾಭಿನ್ದಾನಾ ನ್ಯರ್ಥಾನ್ಯಾಯನ್ ||

(ಋಗ್ವೇದ VI—೩—೨೭. ೪, ೫, ೬).

ಹರಪ್ಪ ಸಂಸ್ಕೃತಿಯ ಸಮಾಧಿಕುಂಭಗಳ ಮೇಲೆ ನದೀಪ್ರವಾಹ, ವಾಯಸ, ಶ್ವಾನಗಳು, ವೃಷಭಗಳು, ನವಿಲು, ಮುಂತಾದ ಚಿತ್ರಗಳಿರುವದರಿಂದಲೂ, ಮೃತರಿಗೆ ಅಗ್ನಿಸಂಸ್ಕಾರವೇ ಸಾಮಾನ್ಯವಾಗಿ ನಡೆಯುತ್ತಿದ್ದುದರಿಂದಲೂ, ಋಗ್ವೇದದಲ್ಲಿ (X-೧೬-೬) ಸೂಚಿಸಿರುವ ಔರ್ಧ್ವದೈಹಿಕ ಭಾವಗಳೇ ಹರಪ್ಪ ಸಂಸ್ಕೃತಿಯಲ್ಲಿದ್ದವೆಂದು ನಿರ್ಧರಿಸಿದೆ. ಆದುದರಿಂದ ಹರಪ್ಪ ಸಂಸ್ಕೃತಿಯು ಆರ್ಯಸಂಸ್ಕೃತಿಯ ಅತ್ಯಂತ ಆಧುನಿಕ ರೂಪ.[6]

ಈ ಪ್ರಾಗ್ಭಾರತೀಯ ಸಂಸ್ಕೃತಿಯು ಈಜಿಪ್ಟ, ಸುಮೇರಿಯನ್, ಅಸ್ಸಿರಿಯನ್ ಸಂಸ್ಕೃತಿಗಳಿಗಿಂತಲೂ ಹೆಚ್ಚು ವಿಸ್ತಾರ ಮತ್ತು ಪ್ರಾಚೀನವಾದುದು. ಹರಪ್ಪ, ಮೊಹೆಂಜೊದಾರೊ ಮುಂತಾದ ನಗರಗಳ ಮನೆಗಳಿಗೆ ಉಪಯೋಗಿಸಿರುವ ಇಟ್ಟಿಗೆಗಳು ಕಾಶ್ಯಪಸಂಹಿತಾ ಪ್ರಮಾಣಾನುಸಾರವಾಗಿವೆ (೧೧.೭೫" × ೫.೨೫" × ೭.೫"; ೧೧.೨೫" × ೭.೭೫"; ೧೦.೫" × ೫.೫" × ೭.೫"). ಗೋಡೆಗಳಿಗೆ ಗಾರೆಯನ್ನು ಹಾಕುತ್ತಿದ್ದರು. ಮನೆಗೆ ಒಂದೇ ಮುಖ್ಯದ್ವಾರವಿದ್ದು ಒಳಗೆ ಅಂಗಳಗಳಿದ್ದವು. ಎರಡು ಮೂರು ಅಂತಸ್ತುಗಳಿದ್ದ ಮನೆಗಳೂ ಕಂಡುಬರುವವು. ಬೀದಿಯ ಕಡೆಗೆ ಕಿಟಕಿಗಳಿರುತ್ತಿದ್ದವು. ಮೇಲ್ಛಾವಣಿಗೆ ಧೃಢವಾದ ಮರದ ತೊಲೆಗಳನ್ನುಪಯೋಗಿಸುತ್ತಿದ್ದರು. ಮನೆಗಳಲ್ಲಿ ಇಪ್ಪತ್ತೈದು ಕೋಣೆಗಳೂ ಕೂಡ ಇರುತ್ತಿದ್ದವು. ಮೇಲ್ತರದ ಗೃಹಗಳಲ್ಲಿ ಕುರ್ಚಿ, ಮಂಚ, ಕಾಲ್ಮಣೆ, ಸುಖಾಸನ, ಮೇಜು ಮುಂತಾದ ಉಪಕರಣಗಳಿದ್ದವು. ಗೃಹನೈರ್ಮಲ್ಯಕ್ಕಾಗಿ ಮಾಡಿರುವ ಮುಚ್ಚಿದ ಚರಂಡಿಗಳು, ಕೊಳವೆಗಳು ಪಾಯ್ಖಾನೆಗಳು ಈಗಿನ ಪಟ್ಟಣಗಳಲ್ಲಿ ಕೂಡ ಅಪರೂಪವಾದ ರೀತಿಯಲ್ಲಿರುವದನ್ನು ಕಾಣಬಹುದು. ನೀರಿಗಾಗಿ ಮುಚ್ಚಬಹುದಾದ ಬಾವಿಗಳು ಮನೆಯ ಅಂಗಳದಲ್ಲಿಯೂ ಹೊರಗಡೆಯಲ್ಲಿಯೂ ಇದ್ದವು. ಇದರಿಂದ "ಮುನಿಸಿಪಾಲಿಟಿ" ಅಧಿಕಾರಿಗಳು ಪಟ್ಟಣಗಳಲ್ಲಿ ಮನೆ ಕಟ್ಟುವ ವಿಷಯದಲ್ಲೂ ನಿರ್ಮಲೀಕರಣ ವ್ಯವಸ್ಥೆಯಲ್ಲಿಯೂ ಬಹಳ ಜಾಗರೂಕರಾಗಿದ್ದರೆಂದು ತಿಳಿದುಬರುವದು. ಮನೆಗಳಲ್ಲಿ ಅಡುಗೆಮನೆ, ಸ್ನಾನದ ಮನೆಗಳಲ್ಲಿ ಸೌದೆ ಮತ್ತು ಇದ್ದಿಲು ಉರಿಸುವ ಅಗ್ಗಿಷ್ಟಿಕೆಗಳೂ, ದೇವರ ಪೂಜೆಗಾಗಿ ಪ್ರತ್ಯೇಕ ಕೋಣೆಗಳೂ ಇದ್ದವು. ಬಿಸಿಲುಕಾಲದಲ್ಲಿ ಜನರು ಗಾರೆ ಹಾಕಿದ ಮೇಲ್ಛಾವಣಿ ಮೇಲೆ ಮಲಗುತ್ತಿದ್ದರು.

ಪಟ್ಟಣದ ರಸ್ತೆಗಳೂ ಗಲ್ಲಿಗಳೂ ನೆಟ್ಟಗೆ ಶುಭ್ರವಾಗಿ ವಿಶಾಲವಾಗಿದ್ದು ಅಲ್ಲಲ್ಲಿ ಕಶ್ಮಲಸಂಗ್ರಹಕ್ಕಾಗಿ ತೊಟ್ಟಿಗಳಿದ್ದವು. ಸಾಮೂಹಿಕ ಸ್ನಾನಕ್ಕಾಗಿ

---

[6] S. Śrikaṇṭha Śāstri, *Proto Indic Religion.*

ಒಂದು ವಿಶಾಲ ಸ್ನಾನಗೃಹವಿದ್ದಿತು. ಇದರ ಅನೇಕ ಕೋಣೆಗಳಿಗೆ ಕೊಳವೆ ಗಳನ್ನು ಹಾಕಿ ಸುರಂಗಮಾರ್ಗವಾಗಿ ಹಬೆಯು ಬರುವಂತೆ ಮಾಡಿ "ಆವಿ ಸ್ನಾನ" (ಹಮಾಮ್)ಕ್ಕೆ ಅನುಕೂಲಮಾಡಿದ್ದರು. ಇಂತಹ ಸ್ನಾನಗೃಹ ಗಳು ನಗರಮಧ್ಯದಲ್ಲಿದ್ದವು.

ಜನರು ಪ್ರಾಯಃ ಸಸ್ಯ ಮತ್ತು ಮತ್ಸ್ಯಾಹಾರಿಗಳು. ಗೋಧಿ, ಯವೆ, ಅಕ್ಕಿ, ತಾವರೆಯ ಕಂದು, ಖರ್ಜೂರ, ಕಲ್ಲಂಗಡಿಹಣ್ಣು, ಕುಂಬಳ, ತೆಂಗಿನ ಕಾಯಿ ಮುಂತಾದುವು ಆಹಾರವಸ್ತುಗಳಾಗಿದ್ದುವು. ಬಟ್ಟೆಗಳನ್ನು ಹತ್ತಿ, ಸಣಬು, ನಾರಿನಿಂದ ಮಾಡುತ್ತಿದ್ದರು. ಈ ವಸ್ತ್ರಗಳನ್ನು ನಿವೀತ, ಉಪವೀತ ವಿಧಾನಗಳಲ್ಲಿ ಧರಿಸುತ್ತಿದ್ದರು. ಹೆಂಗಸರು ನಡುವಿನಿಂದ ಕೆಳಕ್ಕೆ ಮಾತ್ರ ವಸ್ತ್ರಗಳನ್ನು ಧರಿಸುತ್ತಿದ್ದರು.

ಪ್ರಾಣಿಗಳಲ್ಲಿ ಗೂಳಿ, ಎತ್ತು, ಹಸು, ಎಮ್ಮೆ, ಕುರಿ, ಆನೆ, ಒಂಟೆ, ಹಂದಿ, ಕೋಳಿ, ನಾಯಿ, ಕುದುರೆ, ಹೇಸರಕತ್ತೆಗಳನ್ನು ಪಳಗಿಸಿದ್ದರು. ಹುಲಿ, ಜಿಂಕೆ, ಕಾಡೆಮ್ಮೆ, ಗಂಡಮೃಗ, ಕೋತಿ, ಕರಡಿ, ಕುಂದಿಲಿ ಮುಂತಾದ ಅರಣ್ಯಜಂತುಗಳೂ, ಹಾವು, ಚೇಳು, ಮೊಸಳೆ, ಪಾರಿವಾಳ, ಮುಂತಾದವೂ ಪರಿಚಿತವಾಗಿದ್ದವು. ಲೋಹಗಳಲ್ಲಿ ಚಿನ್ನ, ಬೆಳ್ಳಿ, ಸೀಸ, ತವರ, ತಾಮ್ರ, ನಿಕ್ಕಲ್, ಕಂಚು ಮುಂತಾದವೂ, ಕೆಂಪು, ವಜ್ರ, ಪುಷ್ಯರಾಗ, ಹವಳ ಇತ್ಯಾದಿ ರತ್ನಗಳೂ, ಪಾತ್ರೆ ಆಭರಣಗಳಿಗಾಗಿ ಬಳಿಕೆಯಲ್ಲಿದ್ದವು. ಬಣ್ಣದ ರೇಖೆಗಳುಳ್ಳ ಕಲ್ಲುಗಳಿಂದ ಪಾತ್ರೆಗಳನ್ನೂ ಒರಳುಕಲ್ಲು, ತೂಕದಕಲ್ಲು, ಮಣಿ ಗಳೇ ಮುಂತಾದುವನ್ನೂ ಮಾಡುತ್ತಿದ್ದರು.

ಪುರುಷರೂ ಸ್ತ್ರೀಯರೂ ಅಲಂಕಾರಪ್ರಿಯರಾಗಿದ್ದರು. ಕೆಲವರು ಪುರು ಷರು ತಲೆಗೂದಲನ್ನೂ ಗಡ್ಡವನ್ನೂ ಬೆಳಸಿ ಮೀಸೆಯನ್ನು ಮಾತ್ರ ತೆಗೆಯು ತ್ತಿದ್ದರು. ಕೆಲವರು ಸಂಪೂರ್ಣ ಮುಂಡನವನ್ನೂ ಇತರರು ಅರ್ಧಮುಂಡನ ವನ್ನೂ ಮಾಡಿಸಿಕೊಳ್ಳುತ್ತಿದ್ದರು, ಅಥವಾ ತಲೆಗೂದಲನ್ನು ಚಿಕ್ಕದಾಗಿ ಕತ್ತರಿಸಿ ಮಧ್ಯದಲ್ಲಿ ಬೈತಲೆ ತೆಗೆದು ಪಕ್ಕ ಅಥವಾ ಹಿಂದುಗಡೆ ಗಂಟುಹಾಕಿ ಒಂದು ಪಟ್ಟಿಯಿಂದ ಕಟ್ಟುತ್ತಿದ್ದರು. ಹೆಂಗಸರು ಈಗಿನ ಕಾಲದ ಸ್ತ್ರೀಯ ರಂತೆ ಸೌಂದರ್ಯಕ್ಕಾಗಿ ವಿಶೇಷ ಪ್ರಯತ್ನಮಾಡುತ್ತಿದ್ದರು. ಸಣ್ಣ ಲಾಳದ ಆಕಾರದ ಕ್ಷೌರದ ಕತ್ತಿಗಳನ್ನೂ, ಕಣ್ಣಿಗೆ ಅಂಜನ, ತುಟಿಗೆ ಕೆಂಪುಬಣ್ಣ, ಹುಬ್ಬು ತಿದ್ದುವದಕ್ಕೆ ಬಣ್ಣ, ಮುಖಕ್ಕೆ ಲೋಧ್ರದ ಪುಡಿ, ಕೂದಲಿಗೆ ಪರಿಮಳ ತೈಲಗಳನ್ನೂ ಉಪಯೋಗಿಸುತ್ತಿದ್ದರು. ಹೆಂಗಸರು ಅನೇಕ ರೀತಿ ಗಳಲ್ಲಿ ಜಡೆಗಂಟುಗಳನ್ನು ಹಾಕಿಕೊಳ್ಳುವದರಲ್ಲಿ ನೈಪುಣ್ಯವನ್ನು ತೋರಿಸು

ತ್ತಿದ್ದರು. ಕಂಚಿನ ತಗಡಿಗೆ ಮೆರಗುಕೊಟ್ಟು ಕನ್ನಡಿಯಂತೆ ಉಪಯೋಗಿಸುತ್ತಿದ್ದರು. ಡಾಬು, ಕರ್ಣಾಭರಣ, ಬಳೆ, ಅಂದಿಗೆ, ತೋಳ, ಹಾರ, ಮೂಗುಬೊಟ್ಟು, "ಹೇರ್‌ಪಿನ್", ಕರೀಮಣಿ ಸರ ಇತ್ಯಾದಿ ಅಲಂಕಾರಗಳನ್ನೂ ತಲೆಯಲ್ಲಿ ಅನೇಕ ವಿಧವಾದ ರುಮಾಲುಗಳನ್ನೂ ಹೆಂಗಸರು ಧರಿಸುತ್ತಿದ್ದರು.

ಯೋಧರು ಬಿಲ್ಲು, ಬಾಣ, ಭರ್ಜಿ, ಕವಣೆಕಲ್ಲು, ಕೊಡಲಿ, ಗದೆಗಳನ್ನು ಪಯೋಗಿಸುತ್ತಿದ್ದರು. ವಾಣಿಜ್ಯವು ಉಚ್ಚಸ್ಥಿತಿಯಲ್ಲಿದ್ದಿತು. ತೂಕಗಳು ಅಸ್ಸಿರಿಯಾ, ಬ್ಯಾಬಿಲೋನಿಯ, ಈಜಿಪ್ಟ್ ದೇಶಗಳ ತೂಕಗಳಿಂದ ಬೇರೆಯಾಗಿದ್ದವು. ತೂಕದ ಪ್ರಮಾಣಗಳು ೧, ೨, ೮×೧/೩, ೪, ೮, ೧೬, ೩೨, ೬೪, ೧೬೦, ೨೦೦, ೩೨೦, ೬೪೦, ೧೬೦೦, ೩೨೦೦, ೬೪೦೦, ೮೦೦೦, ೧೨೦೦೦ ತಾರತಮ್ಯದಂತೆಯಿದ್ದು ಮೂಲಪ್ರಮಾಣ ೧೩.೫, ೨೭ ಗ್ರ್ಯಾಮ್ ಆಗಿದ್ದವು. ಒಂದು ಅಳತೆಯ ಕೋಲಿನ ಮೇಲೆ .೦೦೩ ಅಂಗುಲ ಕೂಡ ವ್ಯತ್ಯಾಸಬಾರದಂತೆ ವಿಭಾಗರೇಖೆಗಳಿವೆ. ವ್ಯಾಪಾರದಲ್ಲಿ ನಾಣ್ಯಗಳ ಚಲಾವಣೆಯಿದ್ದಿರಬೇಕು. ಆದರೆ ನಾಣ್ಯಗಳೆಂದು ನಿಸ್ಸಂಶಯವಾಗಿ ಹೇಳಬಹುದಾದ ವಸ್ತುಗಳು ಸಿಕ್ಕಿಲ್ಲ. ಕುಂಭಗಳ ಮೇಲೆ ಚಿತ್ರಿಸಿರುವ ಹಡಗುಗಳಿಂದಲೂ ಮೆಸೊಪೊಟೇಮಿಯ ಪ್ರಾಂತ್ಯದಲ್ಲಿ ಸಿಕ್ಕಿರುವ ಭಾರತೀಯ ಮುದ್ರೆಗಳು ಮತ್ತು ಇತರ ವಸ್ತುಗಳಿಂದಲೂ ಈ ಜನರು ಸಮುದ್ರಮಾರ್ಗವಾಗಿ ಸುಮೇರಿಯ, ಬ್ಯಾಬಿಲೋನಿಯ, ಈಜಿಪ್ಟ್ ಮುಂತಾದ ದೇಶಗಳೊಡನೆಯೂ, ಹವಳ, ಮುತ್ತು, ನೀಲಗಿರಿಕಲ್ಲು, ಚಿನ್ನ, ಮೆಣಸು ಮುಂತಾದ ದಕ್ಷಿಣದೇಶದ ವಸ್ತುಗಳಿಗಾಗಿ ದಕ್ಷಿಣಾಪಥದೊಡನೆಯೂ ವ್ಯಾಪಾರಮಾಡುತ್ತಿದ್ದರೆಂಬುದು ಸ್ಪಷ್ಟವಾಗಿದೆ.

ಕಲಾಕೌಶಲ್ಯದಲ್ಲಿಯೂ ಈ ಜನರು ನಿಪುಣರಾಗಿದ್ದರು. ಚಾನ್ಹುದಾರೋ ಪಟ್ಟಣವು ಮಣಿ ಮತ್ತು ಆಟದ ಸಾಮಾನುಮಾಡುವ ಕಾರ್ಖಾನೆಗಳ ಕೇಂದ್ರವಾಗಿದ್ದಿತು. ಮಣಿಗಳಲ್ಲಿ ಅನೇಕ ತರಹ ಇವೆ. ಒಂದು ಅಂಗುಲ ಉದ್ದ ತಂತಿಗೆ ಎಂಬತ್ತು ಅಥವಾ ನೂರು ಮಣಿಗಳನ್ನು ಪೋಣಿಸಬಹುದು. ಈ ಮಣಿಗಳ ರಂಧ್ರದಲ್ಲಿ ಒಂದು ಕೂದಲನ್ನು ಮಾತ್ರ ಪೋಣಿಸಬಹುದಾದ್ದರಿಂದ ಇಷ್ಟು ಸೂಕ್ಷ್ಮವಾಗಿ ಕಲ್ಲಿನಿಂದ ಮಣಿಗಳನ್ನು ಹೇಗೆ ಮಾಡಿದರೆಂದು ಆಶ್ಚರ್ಯವಾಗುತ್ತದೆ. ಸಂಗೀತ ಮತ್ತು ನಾಟ್ಯವಿದ್ಯೆಗಳೂ ಇದ್ದವು. ವೀಣೆಯನ್ನು ಹೋಲುವ ತಂತ್ರೀವಾದ್ಯ, ಕರತಾಳ, ಮೃದಂಗ, ತಮ್ಮಟೆಗಳು ಮುದ್ರೆಗಳ ಮೇಲೆ ಕಂಡುಬರುವವು. ವಿಗ್ರಹಗಳನ್ನು ಕಲ್ಲಿನಿಂದಲೂ ಮಣ್ಣಿನಿಂದಲೂ ಅತ್ಯುತ್ತಮರೀತಿಯಲ್ಲಿ ಮಾಡಿರುವರು. ಕೆಲವು ನರ್ತನಭಂಗಿಗಳನ್ನು ತೋರಿ

ಸುವ ಸ್ತ್ರೀ ಮತ್ತು ಪುರುಷರ ನಗ್ನ ವಿಗ್ರಹಗಳು ನಾಟ್ಯಕಲೆಗೆ ನಿದರ್ಶನಗಳಾಗಿರುವವು. ಕುಂಭಗಳು ಅನೇಕಾಕಾರವಾಗಿದ್ದು ಅನೇಕ ವರ್ಣಚಿತ್ರಗಳಿಂದ ಅಲಂಕೃತವಾಗಿವೆ. ಎಲ್ಲಕ್ಕಿಂತಲೂ ಅದ್ಭುತವಾದ ಕೌಶಲ್ಯವು ಮುದ್ರೆಗಳಲ್ಲಿ ಕಂಡುಬರುವದು. ವಿನೋದಕ್ಕಾಗಿ ಚೌಕಬಾರ, ಕೊಯ್ಯಂಗೂಟ್ಟ, ಚದುರಂಗ ಮುಂತಾದ ಗೃಹಕ್ರೀಡೆಗಳೂ, ಮಕ್ಕಳಿಗೆ ಮೃಚ್ಛಕಟಗಳು, ತಲೆಯನ್ನು ಅಲ್ಲಾಡಿಸುವ ನಾಯಿ, ಬೆಕ್ಕು, ಕೋತಿ, ಮುಂತಾದ ಗೊಂಬೆಗಳೂ, ಪಕ್ಷಿಯ ಆಕಾರದ ಸಿಳ್ಳುಗಳು, ಗೋಲಿಗಳು, ಚೆಂಡು, ದಾಂಡು, ಮುಂತಾದ ಉಪಕರಣಗಳೂ ಇದ್ದವು.

ಈ ಸಂಸ್ಕೃತಿಯ ಲಿಪಿಯು ಮುದ್ರೆ ಮತ್ತು ಘಟಗಳ ಮೇಲೆ ಕಂಡುಬರುವದು. ಬರವಣಿಗೆಯು ಸುಮೇರಿಯನ್ ಮುಂತಾದ ಪ್ರಾಚೀನ ಲಿಪಿಗಳಿಗಿಂತ ಭಿನ್ನವಾದುದರಿಂದ ಭಾಷೆಯೂ ಭಿನ್ನವೆಂದೂ ಊಹಿಸಿರುವರು. ದೀರ್ಘಗ್ರಂಥಗಳಾವುವೂ ಸಿಕ್ಕಿಲ್ಲ. ಈ ಸಂಸ್ಕೃತಿಯು ಆರ್ಯೇತರರದೆಂದು ಭಾವಿಸಿ ಈ ಲಿಪಿಯನ್ನು ಸುಮೇರಿಯನ್, ಕ್ರೀಟನ್, ಪುರಾತನ ಚೀಣಾ, ಈಸ್ಟರ್ ಐಲೆಂಡ್, ಈಜಿಪ್ಷಿಯನ್, ಐಬೀರಿಯನ್, ದ್ರಾವಿಡ, ಇಂಡೋನೀಸಿಯನ್ ಲಿಪಿಗಳಿಗೆ ಹೋಲಿಸಿ ತಮ್ಮ ತಮ್ಮ ಇಚ್ಛಾನುಸಾರ ಆಯಾ ಸಂಸ್ಕೃತಿಗಳೊಡನೆ ಸಂಬಂಧವನ್ನು ಕಲ್ಪಿಸಲು ವಿದ್ವಾಂಸರು ಯತ್ನಿಸಿರುವರು. ಭಾಷೆಯು ಪ್ರಾಗ್ದ್ರಾವಿಡ, ಮುಂಡ, ಬುರೀಶಸ್ಕಿ ಭಾಷೆಗಳಲ್ಲಾವದೂ ಅಲ್ಲವೆಂದು ಡಾ|| ಆಲನ್‌ರಾಸ್ ನಿಶ್ಚಯಿಸಿರುವನು. ಆದರೆ ಕೆಲವರು ದ್ರಾವಿಡ ಭಾಷೆಯೆಂದು ನಿರ್ಧರಿಸಲು ಯತ್ನಿಸಿರುವರು. ಈ ಊಹೆಯು ಐತಿಹಾಸಿಕ ಮತ್ತು ಭಾಷಾಶಾಸ್ತ್ರಕ್ಕೆ ವಿರೋಧವಾಗಿದೆ. ಡಾ|| ಲ್ಯಾಂಗ್ಡನ್ ಈ ಲಿಪಿಯಿಂದ ಬ್ರಾಹ್ಮೀ ಲಿಪಿಯು ಹುಟ್ಟಿತೆಂದು ಅಭಿಪ್ರಾಯಪಡುವನು. ಈ ಮುದ್ರೆಗಳು ಪ್ರಾಯಃ ರಕ್ಷಾಯಂತ್ರಗಳಾದುದರಿಂದ ಅಥರ್ವವೇದದಲ್ಲಿ ಉಕ್ತವಾದ ಮಂತ್ರಗಳೆಂದೂ ಮತ್ತು ಕೆಲವು ವೈದಿಕಯಜ್ಞ ಅಥವಾ ದೇವತಾ ಪೂಜೆಯ ಸ್ಮಾರಕಗಳೆಂದೂ ಕೆಲವರು ತರ್ಕಿಸಿರುವರು.

ಮತವಿಷಯದಲ್ಲಿ ಈ ಜನರು ಪುರುಷ ಮತ್ತು ಸ್ತ್ರೀದೇವತಾ ವಿಗ್ರಹಗಳನ್ನಾರಾಧಿಸುತ್ತಿದ್ದರು. ಸಾಮೂಹಿಕಪೂಜೆಗಾಗಿ ದೇವಾಲಯಗಳಿರಲಿಲ್ಲ. ಆದರೆ ಪ್ರತಿ ಗೃಹದಲ್ಲಿಯೂ ಮನೆದೇವರ ಪೂಜೆಗೆ ಪ್ರತ್ಯೇಕವಾದ ಸ್ಥಳವಿದ್ದಿತು. ಮುದ್ರೆಗಳ ಮೇಲೆ ಯೋಗಾಸನದಲ್ಲಿರುವ "ಶಿವ—ಪಶುಪತಿ", "ದುರ್ಗಾ" ಇತ್ಯಾದಿ ವಿಗ್ರಹಗಳು, ಕಂಡುಬರುವವು. ಮೂರ್ತಿಗಳಲ್ಲಿ ನಿಮೀಲಿತನೇತ್ರ, ನಾಸಾಗ್ರನ್ಯಸ್ತ ದೃಷ್ಟಿ, ನಗ್ನತೆ, ತಾಂಡವಭಂಗಿ ಕಂಡು

ಬರುವುವು. ಇವಲ್ಲದೆ ಹುಲಿ, ಗೂಳಿ, ಹಾವು, ಗರುಡ, ಆನೆ, ಮೊಸಳೆ, ಮಹಿಷ, ಮೀನು, ತುಳಸಿ, ಅಶ್ವತ್ಥ, ಬೇವು, ಲಿಂಗ-ಯೋನಿ ಇತ್ಯಾದಿಗಳನ್ನು ಪೂಜಿಸುತ್ತಿದ್ದರು. ಮಾತೃದೇವತಾಪೂಜೆಯೊಂದೇ ಮುಖ್ಯವಾಗಿರಲಿಲ್ಲ. ಸ್ಥೂಲವಾಗಿ ಈಗಿರುವ ಹಿಂದೂ ಮತವೇ ಇದ್ದಿತೆಂದು ಹೇಳಬಹುದು.

ಅಂತ್ಯಸಂಸ್ಕಾರವಿಧಾನಗಳಲ್ಲಿ ದಹನ, ಖನನ, ಕಾಡಿನಲ್ಲಿ ಹದ್ದು ನರಿಗಳಿಗೆ ಬಿಡುವದು, ನೀರಿನಲ್ಲಿ ತ್ಯಜಿಸುವದು, ಶಿಶುಗಳನ್ನು ಕುಂಭದಲ್ಲಿಟ್ಟು ಹೂಳುವದು ಮುಖ್ಯವಾದುವು. ಮೃತನ ಅಸ್ಥಿಸಂಚಯನ ಮಾಡಿ ಯಾವದಾದರೂ ತೀರ್ಥದಲ್ಲಿ ಹಾಕುತ್ತಿದ್ದರು, ಅಥವಾ ಅಸ್ಥಿಗಳನ್ನು ಕುಂಭದಲ್ಲಿ ಹಾಕಿ ಮರದ ಬುಡದಲ್ಲಿಯೋ ಮನೆ ಬಳಿಯಲ್ಲಿಯೋ ಹೂಳುತ್ತಿದ್ದರು. ಘಟಚಿತ್ರಗಳಿಂದ ತಿಳಿದುಬರುವ ಈ ಜನರ ಔರ್ಧ್ವದೈಹಿಕ ಭಾವಗಳನ್ನು ಹಿಂದೆಯೇ ಸೂಚಿಸಿದೆ. ನರಬಲಿ ಪದ್ಧತಿ ಇದ್ದಿತೆಂಬುದಕ್ಕೆ ನಿದರ್ಶನಗಳಿಲ್ಲ.

ಇಂತಹ ಉತ್ಕೃಷ್ಟ ಸಂಸ್ಕೃತಿಯು ವಿದೇಶಗಳಲ್ಲಿ ವ್ಯಾಪಿಸಿದುದು ಆಶ್ಚರ್ಯವಲ್ಲ. ಮೆಸೊಪೊಟೇಮಿಯ ಪ್ರಾಂತದಲ್ಲಿ ಕ್ರಿ.ಪೂ. ೨೭೦೦ ರಲ್ಲಿಯೇ ಮುದ್ರೆಗಳೂ ಮಣಿಗಳೂ ಅನುಕರಿಸಲ್ಪಟ್ಟವು. ಹರಪ್ಪ ಸಂಸ್ಕೃತಿಯು ಸುಮೇರು ದೇಶದ ಜಮ್ದತ್-ನಸ್ರ್, ಅನಟೋಲಿಯಪ್ರಾಂತದ ಟೆಲ್-ಹಲಾಫ್ ಸಂಸ್ಕೃತಿಗಳಿಗೂ ಕಾರಣ. ಝುಕಾರ್ ಸಂಸ್ಕೃತಿಯು ಇಟಲಿ, ಸಿಸಿಲಿ ವರೆಗೂ ವ್ಯಾಪಿಸಿದ್ದಿತು. ಈ ಸಂಸ್ಕೃತಿಯು ಕ್ರಿ.ಪೂ. ೨೨೦೦ ರಲ್ಲಿ ಸ್ಥೂಲದೃಷ್ಟಿಗೆ ಅದೃಶ್ಯವಾದರೂ ಭಾರತೀಯರ ಸಾಮಾನ್ಯಸಂಸ್ಕೃತಿ ಪ್ರವಾಹದಲ್ಲಿ ಸಮ್ಮಿಳಿತವಾಗಿ ಈಗಲೂ ಪ್ರಭಾವವನ್ನು ತೋರಿಸುತ್ತಿರುವದು. ಯೋಗದೇವತಾಪೂಜೆ ಮಾತೃದೇವತಾಪೂಜೆ, ಲಿಂಗಪೂಜೆ, ನಾಗ, ವೃಷಭ, ಅಶ್ವತ್ಥವೃಕ್ಷ ಇತ್ಯಾದಿಗಳ ಪೂಜೆ, ಪುರಾಣ ನಾಣ್ಯಗಳ ಗುರುತುಗಳು, ರಾಜವಂಶಗಳ ಲಾಛನಗಳು, ಬುದ್ಧ ಜಿನವಿಗ್ರಹಗಳು, ತಾಂತ್ರಿಕ ಚಿಹ್ನೆಗಳಾದ ಚಕ್ರ, ತ್ರಿಕೋಣ, ನಂದಿಪದ, ಪಾದಚಿಹ್ನೆಗಳ ಪೂಜೆ, ಶಿವ ಪಶುಪತಿ, ನಾರಾಯಣ-ವಿಷ್ಣುಪೂಜೆ, ವಸ್ತ್ರಧಾರಣ ವಿಧಾನ, ಶಾಕಾಹಾರ ಶಾಂತಿಪ್ರಿಯತೆ, ಆಧ್ಯಾತ್ಮಿಕದೃಷ್ಟಿ, ನಾಟ್ಯ, ಸಂಗೀತ, ವ್ಯಾಪಾರ, ವ್ಯವಸಾಯ, ಅಲಂಕಾರ, ವಿನೋದಪದ್ಧತಿಗಳು ಈ ಭಾರತೀಯ ಜನಜೀವನದ ಮುಖ್ಯಾಂಶಗಳೆಲ್ಲವೂ ಹರಪ್ಪಸಂಸ್ಕೃತಿಯಿಂದ ಬಂದ ಸಂಪತ್ತು.

# ೪. ವೈದಿಕ ಸಂಸ್ಕೃತಿ

ಅನನ್ತಾ ವೈವೇದಾಃ | ನಾವೇದವಿನ್ಮನುತೇ ತಂಬೃಹನ್ತಮ್ ||

(ತೈತ್ತಿರೀಯ ಸಂಹಿತಾ)

**ವೇದದ ಸ್ವರೂಪ:** ವೇದವೆಂದರೆ ಜ್ಞಾನ. ಜ್ಞಾನವು ಮೋಕ್ಷಸಂಬಂಧವಾದುದರಿಂದ ಅಲೌಕಿಕಾರ್ಥವನ್ನು ಬೋಧಿಸುವದೂ ಅತೀಂದ್ರಿಯ ವಿಷಯ ಪ್ರತಿಪಾದನೆ ಮಾಡುವ ಗ್ರಂಥವು ವೇದ. ಧರ್ಮಾರ್ಥ ಕಾಮಮೋಕ್ಷ ಗಳೆಂಬ ನಾಲ್ಕು ಪುರುಷಾರ್ಥಗಳಲ್ಲಿ ಅರ್ಥ ಮತ್ತು ಕಾಮಗಳನ್ನು ಲೌಕಿಕ ವ್ಯವಹಾರದಿಂದಲೂ ತಿಳಿಯಬಹುದು. ಆದರೆ ಧರ್ಮ ಮತ್ತು ಮೋಕ್ಷಗಳಿಗೆ ವೇದಜ್ಞಾನವೇ ಅವಶ್ಯಕ. ಲೋಕದಲ್ಲಿ ಸಾಮಾನ್ಯವಾದ ಅನುಭವದಿಂದಲೂ ಇತರ ಶಾಸ್ತ್ರಗಳಿಂದಲೂ ವಿಜ್ಞಾನವನ್ನು ಮಾತ್ರ ಪಡೆಯಬಹುದು. ಆದರೆ ತರ್ಕಕ್ಕೆ ನಿಲುಗಡೆ ಇಲ್ಲದಿರುವದರಿಂದ ಅಪೌರುಷೇಯವಾದ ವೇದವಿದ್ಯೆಯೇ ಚರಮಪುರುಷಾರ್ಥಕ್ಕೆ ಸಾಧಕವು. ಅಪೌರುಷೇಯವಾದ ಅನಾದಿಯಾದ ವೇದದಿಂದಲೇ ಈಶ್ವರಾಸ್ತಿತ್ವ ಸರ್ವಜ್ಞತ್ವ ಸರ್ವಶಕ್ತಿಮತ್ವಾದಿಗಳನ್ನು ಸಾಧಿಸಬಹುದೇ ವಿನಾ ಕೇವಲ ಪುರುಷಕೃತ ತರ್ಕಶಾಸ್ತ್ರದಿಂದ ಸಾಧಿಸಲು ಆಗದು.[1] ಆಸ್ತಿಕ ದರ್ಶನಗಳು ವೇದಗಳು ಈಶ್ವರಕೃತವಾದರೂ ಅಪೌರುಷೇಯವೆಂದು ಸಾಧಿಸುವವು. ಆದರೆ ಮೀಮಾಂಸಕರು ಈಶ್ವರನು ಇರಲಿ, ಇರದಿರಲಿ, ಯಜ್ಞಕರ್ಮವೇ ಪ್ರಧಾನ, ದೇವತೆಯು ಗೌಣ, ಯಜತಿಕರ್ಮವೇ ಅಪೂರ್ವ ಫಲವನ್ನು ಕೊಡುವದು, ಆದುದರಿಂದ ವೇದವು ಅಪೌರುಷೇಯ, ನಿರ್ದುಷ್ಟವಾದುದು ಎಂದು ಹೇಳುವರು. ಈಶ್ವರಪ್ರಣೀತವೆಂದು ಅಂಗೀಕರಿಸಿದರೂ ವೇದದಲ್ಲಿ ಲೌಕಿಕ ಶಬ್ದಗಳ ಪ್ರಯೋಗವಿದ್ದರೂ ವೇದವು ಸರ್ವಜ್ಞರೂಪ.

ವೇದಾರ್ಥವನ್ನು ತಿಳಿಯಬೇಕಾದರೆ ಷಡಂಗಗಳು, ಇತಿಹಾಸ, ಪುರಾಣ ಮುಂತಾದುವೆಲ್ಲವೂ ಅವಶ್ಯಕ. ಸ್ವೇಚ್ಛೆಯಾಗಿ ಕೇವಲ ಚಾರಿತ್ರಿಕ,

---

[1] ಕಿಮುವಕ್ತವ್ಯಂ? ಅನೇಕ ಶಾಖಾಭೇದಭಿನ್ನಸ್ಯ ದೇವತಿರ್ಯಙ್ಮನುಷ್ಯ ವರ್ಣಾಶ್ರಮ ಪ್ರವಿಭಾಗಹೇತೋ: ಋಗ್ವೇದಾದ್ಯಾಖ್ಯಸ್ಯ ಸರ್ವಜ್ಞಾನಾಕಾರಸ್ಯ ಅಪ್ರಯತ್ನೇನೈವಲೀಲಾನ್ಯಾಯೇನ ಪುರುಷ ನಿಃಶ್ವಾಸವದ್ ಯಸ್ಮಾದ್ಭೂತಾದ್ಯೋನೇಃ ಸಂಭವಃ . . . . ತಸ್ಯ ಭೂತಸ್ಯ ನಿರತಿಶಯಂ ಸರ್ವಜ್ಞತ್ವಂ ಸರ್ವಶಕ್ತಿಮತ್ವಂಚ ಇತಿ. . . . ಶಾಸ್ತ್ರಾದೇವ ಪ್ರಮಾಣಾತ್ ಜಗತೋಜನ್ಮಾದಿಕಾರಣಂ ಬ್ರಹ್ಮಾಧಿಗಮ್ಯತ ಇತ್ಯಭಿಪ್ರಾಯಃ||

ಶ್ರೀ ಶಾಂಕರಭಾಷ್ಯ. ಬ್ರ. ಸೂ. I, 1-3.

ವೈಜ್ಞಾನಿಕ, ಮತತಾರತಮ್ಯ, ಭಾಷಾತಾರತಮ್ಯ ಇತ್ಯಾದಿ ಏಕದೃಷ್ಟಿ ಕಾಕದೃಷ್ಟಿಯಿಂದ ವೇದದ ನಿಜರೂಪವನ್ನು ನಿರ್ಣಯಿಸಲು ಸಾಧ್ಯವಿಲ್ಲ.

ಬಿಭೇತ್ಯಲ್ಪ ಶ್ರುತಾದ್ವೇದಃ ಮಾಮಯಂ ಪ್ರತರೇದಿತಿ |
ಇತಿಹಾಸಪುರಾಣಾಭ್ಯಾಂ ವೇದಾರ್ಥಮುಪಬೃಂಹಯೇತ್ ||
ವಿದ್ಯಾಹ ವೈಬ್ರಾಹ್ಮಣಮಾಜಗಾಮ ಗೋಪಾಯಮಾಂ ಶೇವಧಿಷ್ಟೇಽಹಮಸ್ಮಿ |
ಅನಾರ್ಯಕಾಯಾನೃಜವೇಶಠಾಯ ನಮಾಂಬ್ರೂಯಾ ಋಜವೇಬ್ರೂಹಿನಿತ್ಯಮ್ ||

ಸಾಂಪ್ರದಾಯಿಕವಾಗಿ ವೇದಾರ್ಥನಿಶ್ಚಯಕ್ಕಾಗಿ ಏರ್ಪಡಿಸಿರುವ ವಿದ್ಯೆಗಳೆಲ್ಲವನ್ನೂ ವೇದವಾಙ್ಮಯವೆಂದು ಹೇಳಬಹುದು. ಆದುದರಿಂದ ವೈದಿಕ ಸಂಸ್ಕೃತಿಯ ಸ್ವರೂಪವನ್ನು ವಿವರಿಸುವದಕ್ಕಾಗಿ ವೇದಗಳು, ಬ್ರಾಹ್ಮಣಗಳು, ಆರಣ್ಯಕಗಳು, ಉಪನಿಷತ್ತುಗಳು, ಷಡಂಗಗಳು, ಸೂತ್ರ ಮತ್ತು ಶಾಸ್ತ್ರಗಳನ್ನೂ ವಿಮರ್ಶಿಸಬೇಕು.

**ವೇದಗಳ ಕಾಲ:** ಮೀಮಾಂಸಕರು ವೇದವು ಅನಾದಿ ಮತ್ತು ಅನಂತವೆಂದು ಹೇಳುತ್ತಾರೆ. ಒಂದು ಪ್ರಳಯವಾದ ನಂತರ ಪುನಃ ಸೃಷ್ಟಿಯಾಗುವವರೆಗೆ ವೇದಗಳು ಪರಮೇಶ್ವರನಲ್ಲಿ ಬೀಜರೂಪದಿಂದಿದ್ದು ಜಗತ್ಸರ್ಜನೆಯಾದಾಗ ಪೂರ್ವಸ್ಮರಣಾನುಸಾರವಾಗಿ ಮಂತ್ರದ್ರಷ್ಟರಾದ ಋಷಿಗಳಿಂದ ಅಭಿವ್ಯಕ್ತವಾಗುವದರಿಂದ ಸಾದಿಯೆಂದೂ ಹೇಳಬಹುದು[2]. ಪೂರ್ವಮೀಮಾಂಸಕರು ಜಗತ್ಸೃಷ್ಟಿವಾದವನ್ನಂಗೀಕರಿಸುವದಿಲ್ಲ. ಆದಿಕಾಲವೆಂಬುದು ಇಲ್ಲ. ಎಲ್ಲಾ ಸೃಷ್ಟಿವಾಕ್ಯಗಳೂ ವಿಧ್ಯಂತರ ಪ್ರರೋಚನಾರೂಪವಾದ ಅರ್ಥವಾದಗಳು (ನಹಿಕದಾಚಿದಪಿ ಅನೀದೃಶಂಜಗತ್). ವರ್ಣಗಳು ನಿತ್ಯವಾದುವು. ಅನೇಕಸಲ ಉಚ್ಚರಿಸುವದರಿಂದ ವರ್ಣಗಳು ವ್ಯಂಜಕಗಳಾದರೂ ಉತ್ಪಾದಕಗಳಲ್ಲ. ಆದುದರಿಂದ ಶಬ್ದವೂ ನಿತ್ಯ ಮತ್ತು ಪ್ರಮಾಣಭೂತವಾದುದು ಎಂದು ಹೇಳುವರು.

ಪಾಶ್ಚಾತ್ಯವಿದ್ವಾಂಸರು ಕೆಲವು ಉಪಪತ್ತಿಗಳಿಂದ ವೇದಗಳ ಕಾಲವನ್ನು ನಿರ್ಧರಿಸಲು ಯತ್ನಿಸಿರುವರು. ಶ್ಲೆಗೆಲ್ ಮತ್ತು ವೀಬರ್ ಅವರು ವೇದಗಳ ರಚನಾಕಾಲವನ್ನು ನಿರ್ಣಯಿಸುವದು ಅಸಾಧ್ಯವೆಂದೂ ವೇದವಾಙ್ಮಯವು ಪ್ರಪಂಚದಲ್ಲೆಲ್ಲ ಅತ್ಯಂತ ಪ್ರಾಚೀನವೆಂದೂ ಪುರಾತನ ಪ್ರಪಂಚದ ಚರಿತ್ರೆಯನ್ನು ಹೇಳುವವು ಎಂದೂ ಅಭಿಪ್ರಾಯಪಡುವರು. ಮ್ಯಾಕ್ಸ್‌ಮೂಲರ್ ಮುಂತಾದವರು ಋಗ್ವೇದ ಸಂಹಿತೆಯ ಮಂಡಲಗಳಲ್ಲಿ ಮೊದಲು ೪, ೫,

[2] ಅಸ್ಮಾಕಂ ತು ಮತೇ ವೇದೋ ನನಿತ್ಯ ಉತ್ಪತ್ತಿಮತ್ವಾತ್—ವೇದಾಂತಪರಿಭಾಷಾ.

೬, ಅನಂತರ ೨, ೩, ೭, ೮, ಅನಂತರ ೯, ಕೊನೆಗೆ ೧ ಮತ್ತು ೧೦ ನೆಯ ಮಂಡಲಗಳು ರಚಿತವಾಯಿತೆಂದೂ ಈ ಬೆಳವಣಿಗೆಗೆ ಸರಾಸರಿ ಇನ್ನೂರು ವರ್ಷಗಳಂತೆ ಗಣನೆಮಾಡಿದರೆ ಋಗ್ವೇದವು ಕ್ರಿ.ಪೂ. ೧೫೦೦-೧೨೦೦ ಮಧ್ಯೆ ರಚಿತವಾಯಿತೆಂದು ನಿರ್ಧರಿಸಿದ್ದರು.[3] ಈಚೆಗೆ ವಾಲ್ತರ್‌ವೂನ್ಸ್ಟ ಎಂಬಾತನು ವ್ಯಾಕರಣದ ಆಧಾರದ ಮೇಲೆ ಒಂಬತ್ತನೆಯ ಮಂಡಲವೇ ಅತ್ಯಂತ ಪ್ರಾಚೀನ (ಕ್ರಿ.ಪೂ. ೧೫೦೦), ಅನಂತರ ೪-೩-೭, ನಂತರ ೨-೬, ಅನಂತರ ೫, ಅನಂತರ ೮, ಅನಂತರ ೧ ಕೊನೆಯಲ್ಲಿ ಹತ್ತನೆಯ ಮಂಡಲವು (ಕ್ರಿ.ಪೂ. ೧೦೦೦) ರಚಿತವಾಯಿತೆಂದು ಹೇಳಿರುವನು.[4] ಇಂತಹ ಭಾಷಾಶಾಸ್ತ್ರವನ್ನನುಸರಿಸಿದ ವಾದಗಳೆಲ್ಲವೂ ನಿರಾಧಾರವಾದುವು. ಋಗ್ವೇದವನ್ನೆಲ್ಲ ಪರೀಕ್ಷಿಸಿದರೂ ಭಾಷಾದೃಷ್ಟಿಯಿಂದ ಯಾವ ವಿಶೇಷ ವ್ಯತ್ಯಾಸವೂ ಕಂಡುಬರುವದಿಲ್ಲವೆಂದು ಸ್ಸಿಮ್ಮರ್‌ಮನ್ ಹೇಳುವನು. ಸೋಮದೇವತಾಕವಾದ ನವಮ ಮಂಡಲವು ಎರಡನೆಯ ಮತ್ತು ಏಳನೆಯ ಮಂಡಲಗಳ ಋಕ್ಕುಗಳ ಸಂಗ್ರಹರೂಪವಾಗಿದ್ದರೂ ಯಾವ ಭಾಷಾ ವ್ಯತ್ಯಾಸವೂ ಕಂಡುಬರುವದಿಲ್ಲ. ಯಾಕೊಬಿ, ತಿಲಕ್ ಮುಂತಾದವರು ಜ್ಯೋತಿಷದ ಆಧಾರದಿಂದ ವೇದಕಾಲವು ಕ್ರಿ.ಪೂ. ೪೫೦೦, ೬೦೦೦ ಇತ್ಯಾದಿಯಾಗಿ ನಿರ್ಧರಿಸಿದರು. ಹೀಗೆಯೇ ಇತರರೂ ಕೆಲವು ಕಾರಣಗಳನ್ನು ತೋರಿಸಿ ಕ್ರಿ.ಪೂ. ೨೫,೦೦೦, ೧೦,೦೦೦ ಎಂದೂ ಹೇಳಿರುವರು.[5]

ಏಷ್ಯಾ ಮೈನರ್ ಪ್ರಾಂತದಲ್ಲಿ ಸಿಕ್ಕಿರುವ ಬೊಘಾಸ್ ಕಾಯಶಾಸನ ಮತ್ತು ಟೆಲ್ ಅಲ್ ಅಮಾರ್ನ ಲೇಖನಗಳಲ್ಲಿ ಬ್ಯಾಬಿಲೋನಿಯ ದೇವತೆಗಳೊಡನೆ ವೈದಿಕ ದೇವತೆಗಳ ಉಲ್ಲೇಖನವಿದೆ.

(ಇಲಾನಿ) ಮಿಇತ್‌ರ್ ಅಶ್‌ಶಿಇಲ್ (ಇಲಾನಿ) ಉರುವ್‌ನ ಅಶ್‌ಶಿಇಲ್ [ಅರುನ ಅಶ್‌ಶಿಇಲ್—ಪಾಠಾಂತರ], (ಇಲು) ಇಂದರ್ [ಇಂದರ—ಪಾಠಾಂತರ], (ಇಲಾನಿ) ನಸಅ (—ತ್‌ತ್ತಿಇಅ) ನ್‌-ನ (ನ-ಶ್‌-ಅ-ಅತ್‌-ತಿ-ಇ ಅ ಅ-ಅನ್‌-ನ).

ಇಲ್ಲಿ ಮಿತ್ರ, ವರುಣ, ಇಂದ್ರ ನಾಸತ್ಯ ಎಂಬ ವೈದಿಕ ದೇವತೆಗಳ

---

[3] S. Śrīkaṇṭha Śāstri: *Proto-Indic Religion.*

[4] Walther Wünst: *Vergleichendes Wörterbuch des Alt-Indoarischen* (Alt-Indischen), 1934 Munich.

[5] ಎಸ್. ವಿ. ವೆಂಕಟೇಶ್ವರ—ಕ್ರಿ.ಪೂ. ೧೦,೦೦೦ ; ಎ. ಸಿ. ದಾಸ್—೨೫,೦೦೦ ; ಸಿ. ವಿ. ವೈದ್ಯ—ಶತಪಥ ಕ್ರಿ.ಪೂ. ೨೦೦೦ . ಪಾಟಂಕರ್—ತೈ. ಸಂ. I, ೫-೫. ಕ್ರಿ. ಪೂ. ೧೧,೦೦೦ ; ಜೆ. ಸಿ. ರಾಯ್—ಶತ II—೧-೨ ೨೦೦೦ ಕ್ಕೆ ಹಿಂದೆ ; ಪಿ. ಸಿ. ಸೇನಗುಪ್ತ—೩೦೦೦ ; ಕೇತ್ಕರ್—ತೈ. ಬ್ರಾ. ೨೫೦೦ ಹಿಂದೆ.

ಹೆಸರುಗಳಿವೆ. ಈ ಮಿಟಾನಿಭಾಷೆಯು ಇದುವರೆಗೂ ತಿಳಿಯದ ಇಂಡೋ-ಆರ್ಯನ್ ಭಾಷಾಪ್ರಭೇದವೆಂದು ಲೆಸ್ನಿ ಹೇಳುವನು. ಓಲ್ಡೆನ್‌ಬರ್ಗ್, ಕೀತ್, ಮ್ಯಾಕ್ಡೋನೆಲ್ ಇದು ಇಂಡೋ-ಇರಾನಿಯನ್ ಎಂದೂ, ಯಾಕೊಬಿ, ಸ್ಟೆನ್‌ಕೋನೋ ಶುದ್ಧ ಭಾರತೀಯ ಭಾಷೆಯೆಂದೂ ಹೇಳುವರು. ನಾವು ಇಂಡೋ-ಹಟ್ಟಿ ಅಥವಾ ಚಿತ್ರಲಿಪಿಯ ಹಟ್ಟಿಲಿ ಭಾಷೆಯೇ ಆರ್ಯರ ದೆಂದು ಹಿಂದೆಯೇ ಸೂಚಿಸಿರುವೆವು. ಇದರಿಂದ ಮಿಟಾನಿ, ಲೂಯಿಲಿ ಭಾಷೆ, ಹುರ್‍ರಿಲಿ, ನಾಸಿಲಿ, ಪಲೌಮ್ನಿಲಿ ಮುಂತಾದ ಆನಟೋಲಿಯ ಪ್ರಾಂತದ ಭಾಷಾಪ್ರಭೇದಗಳು ಬಹುಶಃ ಕ್ರಿ.ಪೂ. ೩೦೦೦ ದಲ್ಲಿ ಹುಟ್ಟಿದವು. ಇವುಗಳ ನಂತರ ಇರಾನ್ ದೇಶದಲ್ಲಿ ಸಕಾರಕ್ಕೆ ಬದುಲಾಗಿ ಹಕಾರವನ್ನು ಉಪಯೋಗಿಸುವ (ಉದಾಹರಣೆ: ಹಿಮಾಲಯ-ಸಿಮೇಲಿಯ, ಅಸುರ—ಅಹುರ, ಸೋಮ-ಹೋಮ ಇತ್ಯಾದಿ) ಅವೆಸ್ತಾಭಾಷೆಯು ಕ್ರಿ.ಪೂ. ೧೦೦೦ ದಲ್ಲಿ ಪ್ರತ್ಯೇಕ ವಾಯಿತು. ಆದುದರಿಂದ ಭಾಷಾದೃಷ್ಟಿಯಿಂದ ಋಗ್ವೇದವು ಕ್ರಿ.ಪೂ. ೩೦೦೦ ಕ್ಕೆ ಹಿಂದಣದೆಂದು ನಿಸ್ಸಂಶಯವಾಗಿ ಹೇಳಬಹುದು.

ತೈತ್ತಿರೀಯ ಸಂಹಿತಾ, ಶತಪಥ ಬ್ರಾಹ್ಮಣ, ತೈತ್ತಿರೀಯ ಬ್ರಾಹ್ಮಣಗಳಲ್ಲಿ ಕಂಡುಬರುವ ಜ್ಯೋತಿಷ ವಿಷಯಗಳ ಆಧಾರದ ಮೇಲೆ ತೈತ್ತಿರೀಯ ಸಂಹಿತೆಯು ಕ್ರಿ.ಪೂ. ೧೧೦೦೦ ದಲ್ಲಿಯೂ, ಬ್ರಾಹ್ಮಣಗಳು ಕ್ರಿ.ಪೂ. ೩೦೦೦ ದಲ್ಲಿಯೂ ರಚಿತವಾದುವೆಂದು ನಿರ್ಧರಿಸಬಹುದು.[6]

ಸಂಸ್ಕೃತಿ ಚರಿತ್ರೆಯ ದೃಷ್ಟಿಯಿಂದಲೂ ವೇದಗಳ ಪ್ರಾಚೀನತೆಯನ್ನು ನಿರ್ಧರಿಸಬಹುದು. ಋಗ್ವೇದ ಸಂಹಿತೆಯಲ್ಲಿ ಅಶ್ವಮೇಧ ಮುಂತಾದ ಯಜ್ಞಗಳು ಅತ್ಯಂತ ಪ್ರಾಚೀನಕಾಲದಿಂದ ಪ್ರಚಾರದಲ್ಲಿದ್ದವೆಂದು ಹೇಳಿದೆ. "ಪ್ರೇಲ್‌ಸ್ಕಿ" ಜಾತಿಯ ಕುದುರೆಯು ಏಷ್ಯಾ ಹುಲ್ಲುಗಾವಲು ದೇಶದಲ್ಲಿದ್ದಿತೆಂದೂ ಕ್ರಿ.ಪೂ. ೩೦೦೦ ದಲ್ಲಿಯೇ ಸುಮೇರಿಯನ್ ಜನರು ಈ ಕುದುರೆಯನ್ನು ಪಳಗಿಸಿದ್ದರೆಂದೂ ತಿಳಿದುಬರುವದು. ಆದುದರಿಂದ ಋಗ್ವೇದದಲ್ಲಿ ಅಶ್ವದ ಉಲ್ಲೇಖನೆಯು ವೇದದ ಅರ್ವಾಚೀನತೆಯನ್ನು ತೋರಿಸುವದಿಲ್ಲ. ಈಗಲೂ ಕೂಡ ಯಜ್ಞಾಯುಧಗಳಾದ ಸ್ಫ್ಯ, ಕಪಾಲ, ಅಗ್ನಿಹೋತ್ರಹವಣೀ, ಶೂರ್ಪ, ಕೃಷ್ಣಾಜಿನ, ಶಮ್ಯಾ, ಉಲೂಖಲ, ಮುಸಲ, ದೃಷತ್, ಉಪಲ, ಅರಣಿ ಮುಂತಾದವುಗಳನ್ನೆಲ್ಲ ಕಲ್ಲು, ಮರ, ಅಸ್ಥಿ, ಚರ್ಮಗಳಿಂದಲೇ ಮಾಡಬೇಕಾದುದರಿಂದ ವೈದಿಕ ಯಜ್ಞವಿಧಾನವು ಶಿಲಾಯುಗದಲ್ಲಿ ಪ್ರಚಾರಕ್ಕೆ ಬಂದಿರಬೇಕೆಂದು ಹೇಳಬಹುದು. ಲೋಹಗಳಲ್ಲಿ ತಾಮ್ರವೂ ಹಿರಣ್ಯವೂ

---

[6] *S. Śrīkaṇṭha Ṣāstri: Proto-Indic Religion*, p. 59–60.

ಪವಿತ್ರವೆಂದು ಗಣಿಸಲ್ಪಟ್ಟಿರುವದಕ್ಕೆ ತಾಮ್ರ-ಶಿಲಾಯುಗ ಸಂಸ್ಕೃತಿಯು ಕಾರಣ. ಆದುದರಿಂದ ಋಗ್ವೇದ ಮಂತ್ರಗಳನ್ನು ಸಂಹಿತೆಯಲ್ಲಿ ಒಂದು ನಿಯಮವನ್ನನುಸರಿಸಿ ಸೇರಿಸಿದುದಕ್ಕೆ ಹಿಂದೆಯೇ ಬಹುಶಃ ಕ್ರಿ.ಪೂ. ೧೦,೦೦೦ ದಲ್ಲಿ ಮಂತ್ರರಚನೆ ಆಗಿರಬೇಕೆಂದು ನಿರ್ಧರಿಸಿರುವೆವು.

**ವೇದವಾಙ್ಮಯ ವಿಭಾಗ:** ವೇದವು ಒಂದೇ ಆದರೂ ವಿನಿಯೋಗ ದೃಷ್ಟಿಯಿಂದ ಋಗ್, ಯಜುಸ್, ಸಾಮ, ಅಥರ್ವಣವೆಂದು ವಿಭಾಗಿಸಿದೆ. ಅಧ್ಯಯನ ಸೌಲಭ್ಯಕ್ಕಾಗಿ ಋಗ್ವೇದ, ಯಜ್ಞಕ್ಕಾಗಿ ಯಜುರ್ವೇದ, ಗಾನಕ್ಕಾಗಿ ಸಾಮ, ಅಭ್ಯುದಯಕ್ಕಾಗಿ ಅಥರ್ವ ಎಂದು ಬೇರ್ಪಡಿಸಿದೆ. ಕೆಲವರು ಯಜ್ಞವೇ ವೇದದ ತಾತ್ಪರ್ಯವಾದುದರಿಂದ ಯಜುರ್ವೇದವೇ ಮುಖ್ಯವೆಂದು[7], ಮತ್ತೆ ಕೆಲವರು ಋಗ್ವೇದವನ್ನೂ ಇತರರು ಸಾಮವೇದವನ್ನೇ ಮುಖ್ಯವೆಂದು ಹೇಳುವರು. ಆದರೆ ಒಂದು ಪ್ರಾಚೀನ ಮತ್ತೊಂದು ಅರ್ವಾಚೀನ, ಒಂದು ಉತ್ಕೃಷ್ಟ ಮತ್ತೊಂದು ಅಪಕೃಷ್ಟ ಎಂದು ಭಾವಿಸುವದು ತಪ್ಪು. ನಾಗರಿಕತೆ ಚರಿತ್ರೆಯ ದೃಷ್ಟಿಯಿಂದ ಅಥರ್ವವೇದವೇ ಅತ್ಯಂತ ಪ್ರಾಚೀನವೆಂದು ಹೇಳಲೂ ಸಾಧ್ಯ.

ವೇದವನ್ನು ಮನ್ತ್ರ ಮತ್ತು ಬ್ರಾಹ್ಮಣ ಎಂದೂ ವಿಭಾಗಿಸಿರುವರು. ಪೂರ್ವಮೀಮಾಂಸಕರು ಈ ವಿಭಜನೆಯನ್ನಂಗೀಕರಿಸಿದ್ದರೂ ಕರ್ಮದೃಷ್ಟಿಯಿಂದ ವೇದವಾಕ್ಯಗಳನ್ನು ವಿಧಿ, ಮನ್ತ್ರ, ನಾಮಧೇಯ, ನಿಷೇಧ, ಅರ್ಥವಾದವೆಂದು ಐದು ವಿಧವಾಗಿ ಭಾಗಿಸಿರುವರು. ವೇದದ ಪ್ರತಿಯೊಂದು ಮನ್ತ್ರಕ್ಕೂ ವಿನಿಯೋಗವಿರುವದರಿಂದ ಯಾವುದೂ ನಿರರ್ಥಕವಲ್ಲ. ವಿನಿಯೋಗವನ್ನು ತಿಳಿಯಬೇಕಾದರೆ ಬ್ರಾಹ್ಮಣಗಳು ಅವಶ್ಯಕ. ಬ್ರಾಹ್ಮಣಗಳು ಗದ್ಯರೂಪವಾಗಿವೆ. ಇವುಗಳ ಅರ್ಥವನ್ನು ವಿಶದೀಕರಿಸುವದಕ್ಕಾಗಿ ಆರಣ್ಯಕ, ಉಪನಿಷತ್, ಶ್ರೌತಸೂತ್ರ, ಗೃಹ್ಯಸೂತ್ರ, ಧರ್ಮಸೂತ್ರ, ಧರ್ಮಶಾಸ್ತ್ರ, ಶಿಕ್ಷಾ, ಪ್ರಾತಿಶಾಖ್ಯ ಇತ್ಯಾದಿ ಗ್ರಂಥಗಳು ಹುಟ್ಟಿವೆ. ಹೀಗೆ ಪ್ರತಿಯೊಂದು ವೇದಕ್ಕೂ ಶಾಖಾನುಸಾರವಾಗಿ ಬ್ರಾಹ್ಮಣ ಮುಂತಾದ ಗ್ರಂಥಗಳಿವೆ.

---

[7] ಏಕಏವ ಯಜುರ್ವೇದಃ ತಂ ಚತುರ್ಧಾವ್ಯಕಲ್ಪಯತ್ || ವಿಷ್ಣುಪುರಾಣ.
ವೇದನಾಂ ಸಾಮವೇದೋಽಸ್ಮಿ-ಗೀತಾ. ಋಗ್ಭ್ಯೋಜಾತಂ ವೈಶ್ಯಂವರ್ಣಮಾಹುಃ | ಯಜುರ್ವೇದಂ ಕ್ಷತ್ರಿಯಸ್ಯಾಹುರ್ಯೋನಿಮ್ | ಸಾಮವೇದೋ ಬ್ರಾಹ್ಮಣಾನಾಂ ಪ್ರಸೂತಿಃ ||—ತೈ. ಬ್ರಾ.
ಋಚಸ್ಸಾಮಾನಿಜಜ್ಞಿರೇ | ಛನ್ದಾಂಸಿಜಜ್ಞಿರೇತಸ್ಮಾತ್ | ಯಜುಸ್ತಸ್ಮಾದಜಾಯತ || ತೈ. ಆ. 3.

**ಋಗ್ವೇದ :**—ಬ್ರಾಹ್ಮಣಗಳು—ಐತರೇಯ, ಕೌಷೀತಕಿ, ಶಾಂಖಾಯನ (ಸಾಂಖ್ಯಾಯನ)

ಆರಣ್ಯಕಗಳು—ಐತರೇಯ, ಸಾಂಖ್ಯಾಯನ.

ಉಪನಿಷತ್ತು—ಐತರೇಯ, ಕೌಷೀತಕೀ, ಬಾಸ್ಕಲ.

ಶ್ರೌತಸೂತ್ರ—ಅಶ್ವಲಾಯನ, ಸಾಂಖ್ಯಾಯನ, ಕೌಷೀತಕೀ.

ಗೃಹ್ಯಸೂತ್ರ—ಅಶ್ವಲಾಯನ, ಸಾಂಖ್ಯಾಯನ, ಕೌಷೀತಕೀ.

ಧರ್ಮಸೂತ್ರ—ವಸಿಷ್ಠ.

**ಯಜುರ್ವೇದ :**—ಕೃಷ್ಣ ಅಥವಾ ತೈತ್ತೀರಿಯ—ಬ್ರಾಹ್ಮಣ—ತೈತ್ತಿರೀಯ.

ಆರಣ್ಯಕ ತೈತ್ತಿರೀಯ.

ಉಪನಿಷತ್ತು—ತೈತ್ತೀರಿಯ, ಕಠ, ಮೈತ್ರಾಯಣ.

ಶ್ರೌತಸೂತ್ರ—ಆಪಸ್ತಂಬ, ಬೋಧಾಯನ, ಹಿರಣ್ಯಕೇಶಿ, (ಸತ್ಯಾಷಾಢ).

ಗೃಹ್ಯಸೂತ್ರ—ಮಾನವ.

ಧರ್ಮಸೂತ್ರ—ಆಪಸ್ತಂಬ, ಬೋಧಾಯನ, ಹಿರಣ್ಯಕೇಶಿ.

ಶುಕ್ಲ ಯಜುರ್ವೇದ—ಬ್ರಾಹ್ಮಣ—ಶತಪಥ, ಕಾಣ್ವ.

ಆರಣ್ಯಕ—ಕಾಣ್ವ, ಮಾಧ್ಯನ್ದಿನ.

ಉಪನಿಷತ್ತು—ಈಶಾವಾಸ್ಯ, ಬೃಹದಾರಣ್ಯ.

ಶೌತಸೂತ್ರ—ಭಾರದ್ವಾಜ, ವೈಖಾನಸ ವಾಧೂಲ, ಮಾನವ, ವಾಸಹ (?) ಕಾತ್ಯಾಯನ, ಪಾರಸ್ಕರ.

ಗೃಹ್ಯಸೂತ್ರ—ಕಾತ್ಯಾಯನ.

**ಸಾಮವೇದ :**—ಬ್ರಾಹ್ಮಣ : ಪಂಚವಿಂಶ, ಷಡ್ವಿಂಶ, ಸಾಮವಿಧಾನ, ಆರ್ಷೇಯ, ಮಂತ್ರ-ದೇವತಾಧ್ಯಾಯ, ವಂಶ, ಸಂಹಿತೋಪನಿಷದ್, ಗೋಪಥ, ಜೈಮಿನೀಯ, ಜೈಮಿನೀಯೋಪನಿಷದ್ಬ್ರಾಹ್ಮಣ, ಆಪಯ (?).

ಉಪನಿಷತ್ತು—ಛಾಂದೋಗ್ಯ, ಕೇನ.

ಶ್ರೌತಸೂತ್ರ—ಖಾದಿರ, ಲಾಟ್ಯಾಯನ, ದ್ರಾಹ್ಯಾಯಣ.

ಗೃಹ್ಯಸೂತ್ರ—ಖಾದಿರ, ಗೋಭಿಲ, ಗೌತಮ.

ಧರ್ಮಸೂತ್ರ—ಗೋತಮ.

**ಅಥರ್ವವೇದ :** ಉಪನಿಷದ್—ಪ್ರಶ್ನ, ಮುಂಡಕ, ಮಾಂಡೂಕ್ಯ.
ಶ್ರೌತಸೂತ್ರ—ವೈತಾನ.
ಗೃಹ್ಯಸೂತ್ರ—ಕೌಶಿಕ.

ಡಾ|| ಬೆಲ್ವಾಲ್ಕರರು ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳ ಭಾಗಗಳ ಕಾಲವನ್ನು ಹೀಗೆ ನಿರ್ಧರಿಸಿರುವರು.

೧. ಬ್ರಾಹ್ಮಣಗಳು (ಕ್ರಿ. ಪೂ. ೧೨೫೦-೧೧೮೦)
ಆದಿಭಾಗ—ಐತರೇಯ ಆರಣ್ಯಕ II, ೧-೩ ; ಬೃ. ಉಪ. I, ೨ ; ಛಾಂ. I ; ಬೃ. I, ೩ ; ಛಾಂ. II, ಶತಪಥ ಬ್ರಾ. X, ೩-೩ ; ಜೈಮಿನಿಬ್ರಾ. Ex. ೨೦೯, ೧೫೨.
ಅಂತ್ಯಭಾಗ—ಐ. ಆರ. III, ತೈತ್ತಿ. ಬ್ರಾ. I, ಕೇನ. ಉಪ. ೩-೪ ; ಜೈ. ಉಪ. ಬ್ರಾ IV, ೧೧-೧೩ ; III, ೧-೧.೨ ; I, ೨೫-೩೦ ; ಶತಪಥ ಬ್ರಾ. XI, ೬-೧ ; X, ೬-೨.

೨. ಬ್ರಾಹ್ಮಣ ಮತ್ತು ಉಪನಿಷತ್ತು (ಕ್ರಿ.ಪೂ. ೧೧೦೦-೯೦೦).
ಪ್ರಾಚೀನ—ಈಶ, ಬಾಷ್ಕಲ, ಐ. ಆರ. II, ೪-೬ ; ಬೃ. ಉಪ. I, ೪ ; ಛಾಂ. III, ೧-೪ ; ೧೨ ; ಬೃ. ಉಪ. I, ೫; I, ೬.
ಮಧ್ಯ—ತೈ. ಬ್ರಾ. II, ೧-೫, ೯ ; ಛಾಂ. III, ೧೪ ; ೫-೧, ೨ ; ಬೃ. ಉಪ. ೬. ೧-೩ ; ತೈ. III, ೧-೬ ; ಕೇನ, I, II.
ಆಧುನಿಕ—ಛಾಂ. ೩-೧೫ ; ೩-೧೬, ೧೭ ; ೩-೧೮, ೧೯ ; ೪-೧೬, ೧೭ ; ಛಾಗಲೇಯ.

೩. (ಕ್ರಿ.ಪೂ. ೯೦೦-೭೫೦).
ಪ್ರಾಚೀನ—ಕಠ I, ೧-೨ ; ಛಾಂ. V, ೩.೧೦ ; ಬೃ. ಉಪ. VI, ೨ ; ಕೌಷೀತಕಿ I, ಕಠ I, ೩ ; ಮುಣ್ಡಕ ; ಶ್ವೇತಾಶ್ವತರ ; ಐ. ಬ್ರಾ. V, ೧೦ ; ತೈ. ಬ್ರಾ. II, ೨-೯ ; VI, ೧-೧೮ ; XI, ೩-೨೧ ; ಇತ್ಯಾದಿ.
ಅಂತ್ಯ—ಛಾಂ. IV, ೧-೩ ; ೪-೯ ; ೧೦-೧೫ ; V, ೧೧-೨೪ ; ಬೃ. ಉಪ. II, ೧ ; ೪ ; III, IV, ೨ ; ಪ್ರಶ್ನ ; ಆರ್ಷೇಯ.

೪. (ಕ್ರಿ.ಪೂ. ೭೫೦-೫೫೦).
ಪ್ರಾಚೀನ—ಬೃ. ಉಪ. II, ೬; IV, ೬; IV, ೫ (ವಂಶ);
ಛಾಂ. ೧೩, ೧೪, ೧೫, ಬೃ. ಉಪ. V, VI, ४;
ಛಾಂ. VII, ಶ್ವೇ. II, ಮೈ. III.
ಆಧುನಿಕ—ಶ್ವೇ. III, IV, ಮಾಣ್ಡೂಕ್ಯ; ಮೈ. IV, ೧-೩;
೪-೨೨; VI, VII.

೫. ಕ್ರಿ.ಪೂ. ೫೦೦—ಜೈನ ಮತ್ತು ಬೌದ್ಧಮತಗಳ ಪ್ರಚಾರ.

**ಉಪನಿಷತ್ತುಗಳು:** ಬ್ರಹ್ಮವಸ್ತುವಿನ ಸಮೀಪಕ್ಕೆ ಎಳೆದುಕೊಂಡು ಹೋಗುವ ಗ್ರಂಥಗಳು ಉಪನಿಷತ್ತುಗಳು. ಇವುಗಳಲ್ಲಿ ಈಶ, ಕೇನ, ಕಠ, ಪ್ರಶ್ನ, ಮುಣ್ಡ, ಮಾಣ್ಡೂಕ್ಯ, ತೈತ್ತಿರಿ, ಐತರೇಯ, ಛಾಂದೋಗ್ಯ ಮತ್ತು ಬೃಹದಾರಣ್ಯಕ ಎಂಬ ಹತ್ತು ಮುಖ್ಯ. ಏಕದೇವತಾಪರವಾದ ಶ್ವೇತಾಶ್ವತರ ಜಾಬಾಲ, ಸುಬಾಲ, ಅಥರ್ವಣ, ರಾಮತಾಪಿನೀ, ನೃಸಿಂಹತಾಪಿನೀ ಇತ್ಯಾದಿ ನೂರೆಂಟು ಉಪನಿಷತ್ತುಗಳೂ ಇನ್ನೂ ಅನೇಕವೂ ಪ್ರಚಾರದಲ್ಲಿವೆ.

**ಷಡಂಗಗಳು:** ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ ಮತ್ತು ಕಲ್ಪ ಎಂಬುವು ವೇದಾಧ್ಯಯನಕ್ಕೆ ಅವಶ್ಯಕವಾದ ಆರು ಅಂಗಗಳು. ಋಗ್ವೇದಕ್ಕೆ ಶೌನಕ, ಸ್ವರವ್ಯಂಜನ, ಮತ್ತು ಶ್ಯಮಾನ: ಕೃಷ್ಣಯಜು ರ್ವೇದಕ್ಕೆ ವ್ಯಾಸ; ಶುಕ್ಲಯಜುರ್ವೇದಕ್ಕೆ ಯಾಜ್ಞವಲ್ಕ್ಯ; ಸಾಮವೇದಕ್ಕೆ ನಾರದೀಯ, ಅಥರ್ವವೇದಕ್ಕೆ ಮಾಣ್ಡೂಕೀ, ಎಲ್ಲಾ ವೇದಗಳಿಗೂ ಪಾಣಿ ನೀಯ, ಸಿದ್ಧಾನ್ತ, ಸರ್ವಸಮ್ಮತ ಎಂಬ ಶಿಕ್ಷೆಗಳಿವೆ. ಪ್ರಾತಿಶಾಖ್ಯಗಳು ಶ್ರೌತ ಮತ್ತು ಸ್ಮಾರ್ತ ಸೂತ್ರಗ್ರಂಥಗಳಿಗಿಂತ ಅರ್ವಾಚೀನ, ಪರಿಶಿಷ್ಟ ಗ್ರಂಥಗಳಿಗಿಂತ ಪ್ರಾಚೀನವೆಂದು ನಿರ್ಧರಿಸಿದೆ. ವ್ಯಾಕರಣಗಳಲ್ಲಿ ಇನ್ದ್ರ, ಚನ್ದ್ರ, ಕಾಶಕೃತ್ಸ್ನ, ಆಪೀಶಲಿ, ಶಾಕಟಾಯನ, ಪಾಣಿನಿ, ಅಮರ, ಜೈನೇಂದ್ರ ಎಂಬ ಎಂಟು ಮುಖ್ಯವಾದುವು. ಪಾಣಿನ್ಯಾಚಾರ್ಯರಿಗೆ ಹಿಂದೆ (ಕಿ.ಪೂ. ೬೦೦) ಯಾಸ್ಕ, ಗಾರ್ಗ್ಯ, ಆಪೀಶಲಿ, ಶಾಕಟಾಯನ ಮುಂತಾದ ಅನೇಕ ವೈಯಾಕರಣರು ಇದ್ದರು. ಛಂದಸ್ಸಿಗೆ ಪೈಂಗಳ ಸೂತ್ರಗಳಿರುವವು. ಯಾಸ್ಕಾಚಾರ್ಯರಿಗಿಂತ ಹಿಂದೆಯೇ (ಕ್ರಿ.ಪೂ. ៩೦೦) ಅನೇಕ ನಿರುಕ್ತ ಕಾರರು ಇದ್ದರು. ಜ್ಯೋತಿಷಗ್ರಂಥಗಳಲ್ಲಿ ವೇದಾಂಗ ಜ್ಯೋತಿಷವು ಕ್ರಿ.ಪೂ. ೧೪೦೦ ರಲ್ಲಿ ರಚಿತವಾಯಿತೆಂದು ಯಾಕೊಬಿ ಮತ್ತು ತಿಲಕರು ನಿರ್ಧರಿಸಿರುವರು. ಕಲ್ಪಗ್ರಂಥಗಳು ಯಾಜ್ಞಿಕ ಮತ್ತು ತಾನ್ತ್ರಿಕ ವಿಷಯ

ಗಳನ್ನು ಅಧಿಕರಿಸಿ ರಚಿತವಾಗಿವೆ. ಪರಶುರಾಮ ಕಲ್ಪಸೂತ್ರ ಮುಂತಾದವು ಶ್ರೀವಿದ್ಯಾಪರವಾಗಿವೆ.

**ಸೂತ್ರಗಳು:** ಹೆಚ್ಚು ಪದಗಳಿಲ್ಲದೇ ಇದ್ದರೂ ಸಂಶಯ ಉಂಟಾಗ ದಂತೆ ಸಾರವತ್ತಾದ ಸಮಸ್ತಾರ್ಥವನ್ನೂ ಸೂಚಿಸುವ ವಾಕ್ಯಕ್ಕೆ ಸೂತ್ರ ಎಂದು ಹೆಸರು[8]. ಸೂತ್ರಗ್ರಂಥಗಳು ಧರ್ಮ, ಶ್ರೌತ, ಗೃಹ್ಯ, ಕಲ್ಪ, ಶುಲ್ಬ, ಶಿಲ್ಪ, ಇತ್ಯಾದಿ ವಿಷಯಕಗಳಾಗಿಯೂ, ಷಡ್ದರ್ಶನಗಳಿಗೂ ಇರುವುವು. ಆಪಸ್ತಂಬ, ಆಶ್ವಲಾಯನ, ಬೋಧಾಯನ, ಕಾತ್ಯಾಯನ, ಶಾಂಖಾಯನ, ಲಾಟ್ಯಾಯನ, ದ್ರಾಹ್ಯಾಯಣ, ಸತ್ಯಾಷಾಢ ಶ್ರೌತ ಸೂತ್ರಗಳೂ, ಆಶ್ವಲಾ ಯನ, ಆಪಸ್ತಂಬ, ಬೋಧಾಯನ ಮುಂತಾದ ಗೃಹ್ಯಸೂತ್ರಗಳೂ ಕ್ರಿ.ಪೂ. ೮೦೦-೩೦೦ ರಲ್ಲಿಯೂ, ಆಪಸ್ತಂಬ, ಗೌತಮ, ಬೋಧಾಯನ, ವಾಸಿಷ್ಠ ಧರ್ಮಸೂತ್ರಗಳೂ ಪಾರಸ್ಕರ, ಬೋಧಾಯನ ಮುಂತಾದ ಗೃಹ್ಯಸೂತ್ರ ಗಳೂ ಕ್ರಿ.ಪೂ. ೬೦೦-೩೦೦ ರಲ್ಲಿಯೂ, ದರ್ಶನಗಳ ಸೂತ್ರಗಳು, ವಿಷ್ಣು ಧರ್ಮಸೂತ್ರ ಮುಂತಾದುವು ಕ್ರಿ.ಪೂ. ೩೦೦—ಕ್ರಿ.ಶ. ೧೦೦ ರಲ್ಲಿಯೂ, ವೈಖಾನಸ ಸ್ಮಾರ್ತಸೂತ್ರಗಳು ಕ್ರಿ.ಶ. ೨೦೦ ರಲ್ಲಿಯೂ ರಚಿತವಾದುವು[9].

**ಶಾಸ್ತ್ರಗಳು:** ಶಾಸನಮಾಡುವ, ಜೀವಕ್ಕೆ ತ್ರಾಣಕೊಡುವ ಮತ್ತು ಪ್ರವೃತ್ತಿ ನಿವೃತ್ತಿ ಮಾರ್ಗಗಳನ್ನೂ ನಿತ್ಯಾನಿತ್ಯ ವಸ್ತುವಿವೇಕವನ್ನೂ ಬೋಧಿ ಸುವ ಗ್ರಂಥವು ಶಾಸ್ತ್ರವೆನಿಸುವುದು.[10] ಶಾಸ್ತ್ರವು ಬಲವಂತವಾಗಿ ಯಾರನ್ನೂ ನಿಯಮಿಸುವದಿಲ್ಲ, ಅಭ್ಯುದಯ ನಿಃಶ್ರೇಯಸಗಳನ್ನು ಕೋರುವವರಿಗೆ ಮಾತ್ರ ದಾರಿ ತೋರಿಸುವದು. ಶಾಸ್ತ್ರದಿಂದಲೇ ಧರ್ಮಾಧರ್ಮಗಳನ್ನು ತಿಳಿಯಲು ಸಾಧ್ಯ. ಶಬ್ದಕ್ಕೂ ಅರ್ಥಕ್ಕೂ ಔತ್ಪತ್ತಿಕ (ನಿತ್ಯ) ಸಂಬಂಧವಿದೆ. ಇದೇ ಧರ್ಮನಿರ್ಣಯದಲ್ಲಿ ನಿಮಿತ್ತವು. ಆದುದರಿಂದ ಧರ್ಮವನ್ನು ಮತ್ತಾವ ಪ್ರಮಾಣದಿಂದಲೂ ತಿಳಿಯಲು ಸಾಧ್ಯವಿಲ್ಲ ಎಂಬುದು ಬಾದರಾಯಣರ ಮತ.[11] ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳ

---

8 ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ |
ಅಸ್ತೋಭಮನವದ್ಯಂಚಸೂತ್ರಂ ಸೂತ್ರವಿದೋವಿದುಃ ||

9 P. V. Kane: *History of Dharma Śāstra*, Vol. I.

10 ಶಾಸನಾತ್ತ್ರಾಣಗುಣಾಚ್ಚ ಶಾಸ್ತ್ರಮ್ ||

11 ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಃ | ತಸ್ಯಜ್ಞಾನ ಮುಪದೇಶಃ, ಅವ್ಯತಿರೇ ಕಶ್ಚ, ಅರ್ಥೇಽನುಪಲಬ್ಧೇ ತತ್ಪ್ರಮಾಣಂಬಾದರಾಯಣಸ್ಯ ಅನಪೇಕ್ಷತ್ವಾತ್ ||
(ಪೂರ್ವಮೀಮಾಂಸಾ ಸೂತ್ರ. I, ೫).

ವಿಷಯಕವಾಗಿ ಶಾಸ್ತ್ರಗಳಿವೆ. ಮನುಧರ್ಮ ಶಾಸ್ತ್ರವು ಕ್ರಿ.ಪೂ. ೫ ನೆಯ ಶತಾಬ್ದದಲ್ಲಿ ಮೊದಲು ರಚಿತವಾಯಿತೆಂದೂ ಕ್ರಿ ಪೂ. ೨ ನೆಯ ಶತಾಬ್ದದಲ್ಲಿ ಮಾರ್ಪಡಿಸಲಾಯಿತೆಂದೂ ಕೊನೆಗೆ ಕ್ರಿ.ಶ. ೨೦೦ ರಲ್ಲಿ ಈಗಿನ ರೂಪವನ್ನು ಹೊಂದಿತೆಂದೂ ಕೆಲವರ ಅಭಿಪ್ರಾಯವಾಗಿದೆ. ಕೌಟಿಲ್ಯನ ಅರ್ಥಶಾಸ್ತ್ರವು ಕ್ರಿ.ಪೂ. ೩೦೦ ರಲ್ಲಿಯೂ ವಾತ್ಸ್ಯಾಯನರ ಕಾಮಸೂತ್ರಗಳು ಕ್ರಿ.ಶ. ೨೦೦ ರಲ್ಲಿಯು ರಚಿತವಾದವು.

**ಸ್ಮೃತಿಗಳು :** ಯಾಜ್ಞವಲ್ಕ್ಯಸ್ಮೃತಿಯು ಕ್ರಿಸ್ತಶಕ ಎರಡನೆಯ ಶತಾಬ್ದದಲ್ಲಿಯೂ, ನಾರದ ಪರಾಶರಸ್ಮೃತಿಗಳು ಸುಮಾರು ಕ್ರಿ.ಶ. ೪೦೦ ರಲ್ಲಿಯೂ ಬೃಹಸ್ಪತಿ ಮತ್ತು ಕಾತ್ಯಾಯನಸ್ಮೃತಿಗಳು ಕ್ರಿ.ಶ. ೫೦೦ ರಲ್ಲಿಯೂ ರಚಿತವಾದವು. ವಿಷ್ಣು, ವಸಿಷ್ಠ ಸ್ಮೃತಿಗಳೂ, ಶಂಖ ಲಿಖಿತ ಇತ್ಯಾದಿ ಇತರ ಸ್ಮೃತಿಗಳೂ ಏಳನೆಯ ಶತಮಾನದಲ್ಲಿ ಪ್ರಚಾರಕ್ಕೆ ಬಂದವು.

ಈ ಗ್ರಂಥ ಜಾಲದ ಮೇಲೆ ವಾರ್ತಿಕಾ, ಟೀಕಾ, ಭಾಷ್ಯ, ವ್ಯಾಖ್ಯಾನ, ಟಿಪ್ಪಣಿ, ಕ್ರೋಡಪತ್ರ ರೂಪಗಳಾದ ಅರ್ಥವನ್ನು ವಿಶದೀಕರಿಸುವ ಅನೇಕ ಗ್ರಂಥಗಳು ರಚಿತವಾಗಿವೆ. ಮೂಲಗ್ರಂಥದಲ್ಲಿ ಹೇಳಿರುವದನ್ನೂ, ಬಿಟ್ಟುದನ್ನೂ, ದುರುಕ್ತವಾದುದನ್ನೂ ಚಿಂತನೆಮಾಡುವ ಗ್ರಂಥಕ್ಕೆ ವಾರ್ತಿಕ ಎಂದು ಹೆಸರು. ಪದಚ್ಛೇದ, ಪದಾರ್ಥೋಕ್ತಿ, ವಿಗ್ರಹ, ವಾಕ್ಯಯೋಜನೆ, ಆಕ್ಷೇಪ, ಸಮಾಧಾನ ಎಂಬ ಅಂಶಗಳುಳ್ಳ ಗ್ರಂಥವು ವ್ಯಾಖ್ಯಾನ, ಟೀಕಾ, ಟಿಪ್ಪಣಿ ಎಂದೆನಿಸಿಕೊಳ್ಳುವದು.

---

' ಧರ್ಮಾಧರ್ಮಿಕತ್ವಾಭ್ಯಾಂಪೀಡಾನುಗ್ರಹಕಾರಿಣೌ | ಪ್ರಸಿದ್ಧೌ ಹಿ ತಥಾಚಾಹ ಪಾರಾಶರ್ಯೋಽತ್ರವಸ್ತುನಿ || ಇದಂ ಪುಣ್ಯಮಿದಂಪಾಪಮಿತ್ಯೇತಸ್ಮಿನ್ ಪದದ್ವಯೇ | ಆ ಚಣ್ಡಾಲಂ ಮನುಷ್ಯಾಣಾಮಲ್ಪಂ ಶಾಸ್ತ್ರಪ್ರಯೋಜನಮ್ || ನಿರ್ಮೂಲಾ ಸಂಭವಾದತ್ರ ಪ್ರಮಾಣೈಸ್ಸೈವಮೃಗ್ಯತೇ || ಕುತಃಪುನಃಪ್ರವೃತ್ತೇತಿ ಪ್ರತ್ಯಕ್ಷಾದಿ ತು ವಾರಿತಮ್ | ನಚೈತಾನಿ ಪರಿತ್ಯಜ್ಯ ಪೃಥಗ್ಲೋಕೇಪ್ರಮಾಣತಾ | ಸಂಸಾರಮೋಚಕಾದೇಶ್ಚ ಹಿಂಸಾ ಪುಣ್ಯತ್ವ ಸಮ್ಮತಾ || ಮ್ಲೇಚ್ಛಾರ್ಯಾಣಾಂ ಪ್ರಸಿದ್ಧತ್ವಂ ನಧರ್ಮಸ್ಯೋಪಪದ್ಯತೇ | ನಚಾರ್ಯಾಣಾಂ ವಿಶೇಷೋಽಸ್ತಿ ಯಾವಚ್ಛಾಸ್ತ್ರಮನಾಶ್ರಿತಮ್ || ತನ್ಮೂಲಾರ್ಥ ಪ್ರಸಿದ್ಧಿಸ್ತು ತತ್ಪ್ರಾಮಾಣ್ಯೇ ಸ್ಥಿತೇಭವೇತ್ ||

(ಶ್ಲೋಕವಾರ್ತಿಕ).

**ಭಾಷ್ಯಗಳು :** ಮೂಲಸೂತ್ರಗಳ ಅಕ್ಷರಗಳ ಅನುಸಾರವಾಗಿ ಸೂತ್ರಾರ್ಥವನ್ನು ವಿಷಯ, ವಿಶಯ, ಪೂರ್ವಪಕ್ಷ, ಉತ್ತರ, ಸಂಗತಿಗಳನ್ನಧಿಕರಿಸಿ ವಿವರಿಸುವ ಗ್ರಂಥಕ್ಕೆ ಭಾಷ್ಯವೆಂದು ಹೆಸರು.[12] ದರ್ಶನಗ್ರಂಥಗಳ ಭಾಷ್ಯಗಳ ವಿಷಯವನ್ನು ಮುಂದೆ ಸೂಚಿಸುತ್ತೇವೆ. ವೇದಗಳಿಗೆ ಅನೂಚಾನವಾದ ಭಾಷ್ಯಪರಂಪರೆಯು ಈಗಿನ ಕಾಲದ ವರೆಗೂ ಅಖಂಡ ಪ್ರವಾಹದಂತೆ ಬಂದಿರುವದು. ತಮ್ಮ ವೇದಭಾಷ್ಯದಲ್ಲಿ ಸಾಯಣಾಚಾರ್ಯರು ಅನೇಕ ಪ್ರಾಚೀನ ವೇದಭಾಷ್ಯಗಳನ್ನು ಉಲ್ಲೇಖಿಸಿರುವರು. ಹಸ್ತಾಮಲಕ, ಗೋಮತಿ, ಧಾನುಷ್ಕಯಜ್ವನ್, ಆತ್ಮಾನಂದ, ರಾವಣರು ವೇದಭಾಷ್ಯಗಳನ್ನು ಬರೆದಂತೆ ತಿಳಿದುಬರುವದು. ಈಗ ಸಿಕ್ಕಿರುವ ವೇದಭಾಷ್ಯಗಳಲ್ಲಿ ಕ್ರಿ. ಶ. ೫೦೦ ರಲ್ಲಿ ವಲಭೀವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿದ್ದ ಸ್ಕನ್ದ ಸ್ವಾಮಿನ್, ನಾರಾಯಣ, ಉದ್ಗೀಥಾಚಾರ್ಯರೆಂಬುವರ ಭಾಷ್ಯವೇ ಅತ್ಯಂತ ಪ್ರಾಚೀನವು. ಉದ್ಗೀಥಾಚಾರ್ಯನು ಬನವಾಸಿ ದೇಶದವನೆಂದೂ ಅಲ್ಲಿಂದ ವಲಭಿಗೆ ಆಹೂತನಾಗಿ ಹೋಗಿ ಗ್ರಂಥರಚನೆ ಮಾಡಿದನೆಂದೂ ತಿಳಿದು ಬಂದಿದೆ. ಸ್ಕನ್ದಸ್ವಾಮಿಯ ಶಿಷ್ಯನಾದ ಹರಿಸ್ವಾಮಿಯು ಅವನ್ತಿನಾಥನಾದ ವಿಕ್ರಮನ ಆಸ್ಥಾನದಲ್ಲಿ ಧರ್ಮಾಧ್ಯಕ್ಷನಾಗಿದ್ದು ಕ್ರಿ.ಶ. ೫೩೮ ರಲ್ಲಿ ಶತಪಥ ಬ್ರಾಹ್ಮಣಕ್ಕೆ ಭಾಷ್ಯವನ್ನು ಬರೆದನು. ಭವಸ್ವಾಮಿ, ಭಟ್ಟಭಾಸ್ಕರ ಮಿಶ್ರ, ಹರದತ್ತ, ಚೋಳದೇಶದ ವೇಂಕಟಮಾಧವ, ಧ್ರುವವೇಂಕಟ, ಗೋವಿನ್ದಸ್ವಾಮಿ, ಉವ್ವಟ, ಹೊಯ್ಸಳರ ಆಶ್ರಯದಲ್ಲಿದ್ದ ಭರತಸ್ವಾಮಿ, ದೇವರಾಜ ಯಜ್ವನ್, ಶ್ರೀಪತಿ ಪಣ್ಡಿತ, ಗುಣವಿಷ್ಣು ಮುಂತಾದವರು ಸಾಯಣಾಚಾರ್ಯರಿಗೆ ಹಿಂದೆಯೇ ವೇದವಾಙ್ಮಯದ ಕೆಲಕೆಲವು ಭಾಗಗಳಿಗೆ ಭಾಷ್ಯಗಳನ್ನು ಬರೆದಿರುವರು.

---

[12] ಉಕ್ತಾನುಕ್ತ ದುರುಕ್ತಾನಾಂ ಚಿನ್ತಾ ಯತ್ರ ಪ್ರವರ್ತತೇ | ತಂಗ್ರನ್ಥಂ ವಾರ್ತಿಕಂ ಪ್ರಾಹುಃ ವಾರ್ತಿಕಜ್ಞಾ ಮನೀಷಿಣಃ || ಸೂತ್ರಾರ್ಥೋ ವರ್ಣ್ಯತೇ ಯತ್ರ ವಾಕ್ಯೈಃ ಸೂತ್ರಾನುಸಾರಿಭಿಃ | ಸ್ವಪದಾನಿ ಚ ವರ್ಣ್ಯನ್ತೇ ಭಾಷ್ಯಂ ಭಾಷ್ಯವಿದೋ ವಿದುಃ || ಪದಚ್ಛೇದಃ ಪದಾರ್ಥೋಕ್ತಿಃ ವಿಗ್ರಹೋ ವಾಕ್ಯಯೋಜನಾ | ಆಕ್ಷೇಪಸ್ಯ ಸಮಾಧಾನಂ ವ್ಯಾಖ್ಯಾನಂ ಪಂಚಲಕ್ಷಣಮ್ || ವಿಷಯೋ ವಿಶಯಶ್ಚೈವ ಪೂರ್ವಪಕ್ಷಸ್ತಥೋತ್ತರಮ್ | ಸಂಗತಿಶ್ಚೇತಿ ಪಂಚಾಂಗಂ ಶಾಸ್ತ್ರೇಧಿಕರಣಂ ಸ್ಮೃತಮ್ || ಪ್ರವೃತ್ತಿರ್ವಾ ನಿವೃತ್ತಿರ್ವಾ ನಿತ್ಯೇನ ಕೃತಕೇನ ವಾ | ಪುಂಸಾಂ ಯೇನೋಪದಿಶ್ಯೇತ ತಚ್ಛಾಸ್ತ್ರಮಿತಿ ಕಥ್ಯತೇ || ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಮ್ | ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ||

**ವೈದಿಕ ಸಂಸ್ಕೃತಿ:** ವೇದಯುಗದ ಆದಿಭಾಗದಲ್ಲಿ ಹಿಂದೂಕುಷ್ ಮತ್ತು ವಾಯವ್ಯಪ್ರಾಂತದಲ್ಲಿ ಗಾನ್ಧಾರ, ಕಾಂಭೋಜ, ಪಕ್ಥ, ಭಲಾನ, ವಿಷಾಣಿನ್, ಅಲಿನ, ಆರ್ಜಿಕೀಯ ಎಂಬ ಜನರೂ ; ಸಿಂಧು, ಜೇಲಂ ನದಿಗಳ ನಡವೇ ಉತ್ತರಕುರು, ಉತ್ತರಮದ್ರ, ಶಿವ, ಕೇಕಯ, ವೃಚೀವಂತ, ಸೃಂಜಯ ಎಂಬ ವಂಶದವರೂ ; ಜೇಲಂ-ಚೀನಾಬ್ ಪ್ರಾಂತ್ಯದಲ್ಲಿ ಬಾಹ್ಲಿಕ (ಬಾಲ್ಹಿಕ), ಮಹಾವೃಷ, ಮೂಜವನ್ತ ಎಂಬವರೂ ; ಚೀನಾಬ್-ರಾವಿ ಅಂತರ್ವೇದಿಯಲ್ಲಿ ಅನು, ತುರ್ವಸು, ದ್ರುಹ್ಯುಗಳೂ; ರಾವಿ-ಬಿಯಾಸ್ ನಡುವೆ ಭರತರೂ; ಬಿಯಾಸ್-ಸಟ್ಲೇಜ್ ಪ್ರಾಂತ್ಯದಲ್ಲಿ ಉಶೀನರ, ತೃತ್ಸು, ಪೂರು ಎಂಬವರೂ ; ಸರಸ್ವತೀ-ಕುರುಕ್ಷೇತ್ರಭಾಗದಲ್ಲಿ ವಸು, ಕುರುಗಳೂ ; ಗಂಗಾ ತೀರದಲ್ಲಿ ಪಾಂಚಾಲ, ಕೋಸಲರೂ ; ಸದಾನೀರಾನದಿಯ ಬಳಿಯಲ್ಲಿ ವೈದೇಹರೂ ಪ್ರಾಚ್ಯರೂ ಇದ್ದರು. ಪೂರ್ವದಲ್ಲಿ ಬ್ರಹ್ಮಪುತ್ರಾ ನದಿಯ ಹತ್ತಿರ ಕಾಮರೂಪ ; ಉತ್ತರದಲ್ಲಿ ಉತ್ತರಕುರು, ತ್ರಿವಿಷ್ಟಪ ; ದಕ್ಷಿಣದಲ್ಲಿ ನೀಚ್ಯ, ಅಪಾಚ್ಯ, ಮರು, ಶೌರಸೇನ, ವತ್ಸ, ಚೇದಿ, ಮಗಧ, ಕೀಕಟ, ಪುಣ್ಡ್ರ, ವಂಗ, ನಿಷಾದ ಎಂಬ ದೇಶಗಳಿದ್ದವೆಂದು ವೇದಗಳಿಂದ ತಿಳಿದುಬರುವದು. ಇವಲ್ಲದೆ ವಾಹಿಕ (ಬಾಹಿಕ, ಬಾಹ್ಲೀಕ), ಆರಟ್ಟ, ಮದ್ರ, ವಾಟಧಾನ, ಆಭೀರ, ಕಾಲತೋಯಕ, ಅಪರಾನ್ತ, ಕುಳಿಂದ, ಪಾರದ, ಮಾಠರ, ದಶಮೂಲಿಕ, ಪಿಶಾಚ, ದಾರದ, ಬರ್ಬರ, ಚೀಣ, ತುಖಾರ, ಲಂಪಾಕ, ಮೂಲಿಕ, ಅಂಧ್ರ, ಕಿರಾತ, ಅಶ್ವಕ, ಅಶ್ಮಕ ಮುಂತಾದ ಅಂತ್ಯವಾಸಿಗಳು ಬ್ರಾಹ್ಮಣಗಳಲ್ಲಿಯೂ ಪುರಾಣಗಳಲ್ಲಿಯೂ ಉಕ್ತರಾಗಿರುವರು. ಇವರಲ್ಲಿ ಪರಸ್ಪರ ಕಲಹಗಳು ನಡೆಯುತ್ತಿದ್ದುದರಿಂದ ಆಯಾ ಜನಾಂಗಗಳ ರಾಜರನ್ನಾಶ್ರಯಿಸಿದ್ದ ಋಷಿಗಳು ತಮ್ಮ ಶತ್ರುಗಳನ್ನು ಅನಾರ್ಯ, ದಸ್ಯು, ಅಯಜ್ವನ್, ಅನಿಂದ್ರ, ಶಿಶ್ನದೇವ ಎಂಬುದಾಗಿ ದೂಷಿಸುತ್ತಿದ್ದರು.

ಆರ್ಯರು ಪಶುಪಾಲನಾಸ್ಥಿತಿಯನ್ನು ಕಳೆದು ವ್ಯವಸಾಯವನ್ನು ಚೆನ್ನಾಗಿ ಬಲ್ಲವರಾಗಿದ್ದರು. ಗೋವು ಮುಖ್ಯವಾದುದರಿಂದ ಗೋತ್ರಗಳು ಏರ್ಪಾಡಾದುವು. ಕುದುರೆ, ಕುರಿ, ನಾಯಿ ಮುಂತಾದ ಪ್ರಾಣಿಗಳನ್ನೂ ಪಳಗಿಸಿದ್ದರು. ಕೃಷಿಗಾಗಿ ಭೂಮಿಯನ್ನು ವಾಸ್ತು (Arable), ಹುಲ್ಲುಗಾವಲು ಮತ್ತು ಅರಣ್ಯಾ ಎಂಬುದಾಗಿ ವಿಭಾಗಿಸಿದ್ದರು. ಕ್ಷೇತ್ರವು ಒಂದು ಕುಟುಂಬದ ಅಧೀನದಲ್ಲಿದ್ದಿತು. ಕುಟುಂಬಕ್ಕೆ ಪಿತೃವೇ ಅಧಿಕಾರಿಯಾಗಿದ್ದನು. ಭಾರತೀಯ ಆರ್ಯರಲ್ಲಿ ಮೊದಲನೆಯ ಮಗನಿಗೆ ಮಾತ್ರ ಆಸ್ತಿಯ ಮೇಲೆ ಹಕ್ಕು ಎಂಬ ನಿಯಮವಿರಲಿಲ್ಲ. ಗಂಡುಮಕ್ಕಳಿಗೆಲ್ಲ ಸಮವಾಗಿಯೂ, ಪುತ್ರರಿಲ್ಲದಿದ್ದರೆ

ಪುತ್ರೀಪುತ್ರನಿಗೂ ಹಕ್ಕು ಇದ್ದಿತು. ಷಂಡ, ಪತಿತ, ಹುಚ್ಚ ಮತ್ತು ಅಂಗ ಹೀನರಿಗೆ ಆಸ್ತಿಯ ಮೇಲೆ ಅಧಿಕಾರವಿಲ್ಲದಿದ್ದರೂ ಅಂತಹ ದಾಯಾದಿಗಳಿಗೆ (Heirs) ಭಾಗವು ಸಲ್ಲುತ್ತಿದ್ದಿತು. ಆರ್ಯರು ಗ್ರಾಮಜೀವನವೇ ಪ್ರಶಸ್ತ ವೆಂದೂ ಪಟ್ಟಣನಿವಾಸವು ಹಾನಿಕರವೆಂದೂ ಭಾವಿಸಿದ್ದರು. ಆದರೂ ಅನೇಕ ಪುರಗಳು ಪ್ರಸಿದ್ಧವಾಗಿದ್ದವು. ಪುರ ಎಂದರೆ ಮರಗಳ ಬೇಲಿಯಿಂದ ರಕ್ಷಿತ ವಾದ ಗ್ರಾಮವಲ್ಲ. ಕಾಶೀ ಕಾಮ್ಪಿಲ್ಯ ಮುಂತಾದ ಪ್ರಸಿದ್ಧ ಪಟ್ಟಣಗಳೂ ಇದ್ದವು.

ವ್ಯವಸಾಯದಲ್ಲಿ ಎತ್ತು ಹೂಡಿದ ಹಲ, ಬೀಜಾವಾಪನೆಗೆ ಸಲಕರಣೆ, ಕುಡುಗೋಲು, ಒನಕೆ, ಒರಳು, ಮುಂತಾದ ಉಪಕರಣಗಳ ಉಪಯೋಗ ವನ್ನು ಆರ್ಯರು ತಿಳಿದಿದ್ದರು. ಮುಖ್ಯವಾಗಿ ಶಾಕಾಹಾರಪದ್ಧತಿಯೇ ಇದ್ದಿತು. ಮತ್ಸ್ಯಮಾಂಸ ಭೋಜನೆಯು ಋಗ್ವೇದಕಾಲದಲ್ಲಿರಲ್ಲಿಲವೆಂದೂ ಅನಂತರ ಯಾವಾಗಲೋ ಆಪತ್ಸಮಯದಲ್ಲಿ ಆರಂಭವಾದ ಮಾಂಸಾಹಾರ ಪದ್ಧತಿಯು ಯಜ್ಞವಿಧಿಯಲ್ಲಿಯೂ ಸೇರಿಕೊಂಡಿತೆಂದು ಕೆಲವರು ಹೇಳುವರು. ಋಗ್ವೇದದಲ್ಲಿ ಅನ್ನವಾಚಕಗಳಾದ ಶಬ್ದಗಳೆಲ್ಲವೂ ವನಸ್ಪತಿಗಳ ಪರವಾಗಿವೆ. ಈ ವನಸ್ಪತಿಗಳಲ್ಲಿ ಸೋಮವೇ ರಾಜನು, ಅದೇ ಅಮೃತವನ್ನು ಕೊಡತಕ್ಕದ್ದು. ಅದನ್ನು ಭುಜಿಸಿ ದೇವತೆಗಳು "ಅಮೃತಾಂಧಸ"ರಾದರು. ಅನಾರ್ಯರನ್ನು ಪಿಶಿತಾಶನ, ಪಲಾಶಿ, ಅಸುರ (ಅಪಕ್ವಮಾಂಸವನ್ನು ತಿನ್ನುವವರು, ಪ್ರಾಣ ವನ್ನು ಅಪಹರಿಸುವವರು) ಎಂದು ಕರೆದಿರುವದರಿಂದಲೂ ವೈದಿಕ ಯಜ್ಞಗಳು ವಸಂತಾದಿ ಋತುಗಳಲ್ಲಿ ಆರಂಭವಾಗಬೇಕೆಂಬ ನಿಯಮವಿರುವುದರಿಂದಲೂ ಯಜ್ಞಗಳಲ್ಲಿ ನಿಸರ್ಗಸಿದ್ಧವಾದ ಪದಾರ್ಥದ್ವಾರವಾಗಿಯೇ ಕರ್ಮವು ನಡೆಯು ತ್ತಿದ್ದಿತು. ಮತ್ತು ಯಜ್ಞದಲ್ಲಿ ಪೂರ್ವವೇದಿಯಲ್ಲಿ ಕೇವಲ ವನಸ್ಪತಿಗಳಿಂದಲೇ ಹವನಮಾಡಬೇಕು. ಉತ್ತರವೇದಿಯಲ್ಲಿ ಮಾಂಸವನ್ನು ಅರ್ಪಿಸಬೇಕು. ಆದುದರಿಂದ ಪೂರ್ವದಲ್ಲಿ ಶಾಕಾಹಾರವೇ ಇದ್ದಿತೆಂದೂ ಅನಂತರ ಮಾಂಸಾ ಹಾರಪದ್ಧತಿಯು ಪ್ರಚಾರಕ್ಕೆ ಬಂದಿತೆಂದು ಕೆಲವರು ಹೇಳುವರು. ಯವ-ಧಾನ, ನೆಲ್ಲು, ಗೋಧಿ, ಶಾಲಿ, ಎಳ್ಳು, ಶಾಣ, ಹೆಸರು ಇವು ಮುಖ್ಯವಾದ ಧಾನ್ಯ ಗಳು. ಕಬ್ಬಿನಿಂದ ಸಕ್ಕರೆ, ಬೆಲ್ಲವನ್ನೂ, ಅನೇಕ ದ್ರವ್ಯಗಳಿಂದ ಸೋಮ, ಸುರಾ, ಮದ್ಯ, ಮುಂತಾದ ಪಾನೀಯಗಳನ್ನೂ ಮಾಡುತ್ತಿದ್ದರು. ನೀರಾ ವರಿಗೆ ಕಾಲುವೆಗಳು ಘಟೀಯಂತ್ರ ಅಥವಾ ಅರಘಟ್ಟವೂ ಇದ್ದವು. ನದೀ ಮತ್ತು ಸಮುದ್ರಗಳನ್ನು ದಾಟುವುದಕ್ಕೆ ತಕ್ಕ ದೋಣಿಗಳಿದ್ದವು. ಆರ್ಯರಿಗೆ ಸಮುದ್ರವು ಅಪರಿಚಿತವಾಗಿದ್ದಿತೆಂದೂ ಸಿಂಧು ಎಂದರೆ ಆ ಹೆಸರಿನ ನದೀ

ಮಾತ್ರವೆಂದೂ ಕೆಲವರು ಹೇಳುವರು. ಆದರೆ ಬೂಹ್ಲರ್ ಮುಂತಾದವರು ಆರ್ಯರಲ್ಲಿ ಕೆಲವರು ದ್ರವ್ಯಸಂಪಾದನೆಗಾಗಿ ದೊಡ್ಡ ದೋಣಿಗಳಲ್ಲಿ (ಶತಾರಿತ್ರ, ಶತಸ್ಫ್ಯ) ಸಮುದ್ರಯಾನವನ್ನು ಮಾಡುತ್ತಿದ್ದರೆಂಬುದಕ್ಕೆ ನಿದರ್ಶನಗಳನ್ನು ತೋರಿಸಿರುವರು. ವ್ಯಾಪಾರದಲ್ಲಿ ಸಾಮುಗ್ರಿಗಳ ಅದಲುಬದಲು, ಮಾರಾಟ, ಮತ್ತು ಶತಮಾನ, ನಿಷ್ಕ, ಹಿರಣ್ಯಪಿಂಡ ಎಂಬ ನಾಣ್ಯಗಳೂ ಪ್ರಚಾರದಲ್ಲಿದ್ದವು.

ವರ್ಣವಿಭಾಗಗಳು ಋಗ್ವೇದಕಾಲದಲ್ಲಿ ಇರಲಿಲ್ಲವೆಂದು ಮೂರ್, ವೀಬರ್, ಸ್ಸಿಮ್ಮರ್ ಮುಂತಾದವರು ಹೇಳುವರು. ಆದರೆ ಗೆಲ್ಡ್ನರ್ ಮತ್ತು ಓಲ್ಡನ್‌ಬರ್ಗ್ ವರ್ಣವ್ಯವಸ್ಥೆಯು ಆಗಲೇ ಬೇರೂರಿದ್ದಿತೆಂದು ಹೇಳುವರು. ಋಗ್ವೇದದಲ್ಲಿ ಆರ್ಯವರ್ಣ, ದಾಸವರ್ಣ, ವಿಶಾ ಅಸಿಕ್ನೀ, ಕೃಷ್ಣತ್ವಚ ಎಂಬ ಪದಗಳಿರುವದರಿಂದ ವರ್ಣವ್ಯವಸ್ಥೆಯು ಮಾನವವರ್ಗಗಳನ್ನನುಸರಿಸಿದ್ದಿತೆಂದು ಕೆಲವರು ಊಹಿಸುವರು. ಋಗ್ವೇದದಲ್ಲೆಲ್ಲಿಯೂ "ವೈಶ್ಯ," "ಶೂದ್ರ" ಎಂಬ ಪದಗಳು ಕಂಡುಬರುವದಿಲ್ಲ. ಬ್ರಾಹ್ಮಣ ಮತ್ತು ಕ್ಷತ್ರಿಯ ವರ್ಣಗಳು ಮಾತ್ರ ಪ್ರತ್ಯೇಕವಾಗಿದ್ದು ಮಿಕ್ಕವರಿಗೆಲ್ಲರಿಗೂ "ವಿಶ್" ಎಂಬ ಹೆಸರಿದ್ದಿತು. ವೈಶ್ಯ ಮತ್ತು ಶೂದ್ರ ಎಂಬ ಪದಗಳು ಮೊದಲು ಪುರುಷ ಸೂಕ್ತ ಮತ್ತು ಅಥರ್ವವೇದ (V, ೧೭, ೯; IV, ೨೦, ೪-೮) ಗಳಲ್ಲಿ ಕಂಡುಬರುವವು. ಬ್ರಾಹ್ಮಣ್ಯವು ವಂಶಾನುಕ್ರಮವನ್ನೂ ಶಿಷ್ಯಪರಂಪರೆಯನ್ನೂ ಗುಣಕರ್ಮಗಳನ್ನೂ ಅನುಸರಿಸಿದ್ದಿತು. ಕ್ಷತ್ರಿಯನು ಕೂಡ ಋಷಿಯಾಗಬಹುದು. ಋಗ್ವೇದದ "ಪಂಚಜನರು" ಆರ್ಯರು. ಇವರಲ್ಲಿ ನಿಷಾದರೂ ಒಂದು ಪಂಗಡ. ಕೆಲವು ಬೌದ್ಧ ಮತ್ತು ಜೈನಗ್ರಂಥಗಳಲ್ಲಿ ಕ್ಷತ್ರಿಯರೇ ಅಗ್ರವರ್ಣದವರೆಂದು ಹೇಳಿದ್ದರೂ, ಋಗ್ವೇದವೇ ಬ್ರಾಹ್ಮಣರಿಗೆ ಅಗ್ರಸ್ಥಾನವನ್ನು ಕೊಟ್ಟಿದೆ.[13] ಯಜುರ್ವೇದ ಮತ್ತು ಬ್ರಾಹ್ಮಣಗಳಲ್ಲಿ ಬ್ರಾಹ್ಮಣರು ಪ್ರತ್ಯಕ್ಷ ದೇವತೆಗಳೆಂದೂ ಆರ್ಷೇಯರೆಂದೂ ಸ್ಪಷ್ಟವಾಗಿ ಹೇಳಿದೆ.[14] ಬ್ರಾಹ್ಮಣರಿಗ

---

13 ಋಗ್. VIII, ೩೩, ೧೯ ; I, ೧೫೭-೨.

14 ಏತೇ ವೈದೇವಾಃ ಪ್ರತ್ಯಕ್ಷಂಯದ್ಬ್ರಾಹ್ಮಣಃ—ತೈ. ಸಂ. I, ೭, ೩-೧ ;
ಯಾವತೀರ್ವೈದೇವತಾಸ್ತಾಃ ಸರ್ವಾವೇದವಿದಿ ಬ್ರಾಹ್ಮಣೇವಸನ್ತಿ
ತಸ್ಮಾದ್ಬ್ರಾಹ್ಮಣೇಭ್ಯೋವೇದವಿದ್ಭ್ಯೋ ದಿವೇ ದಿವೇ ನಮಸ್ಕುರ್ಯಾತ್ |
ನಾಶ್ಲೀಲಂಕೀರ್ತಯೇದ್ ಏತಾಏವ ದೇವತಾಃ ಪ್ರೀಣಾತಿ—ತೈ. ಆರ. II ೪
ಬ್ರಾಹ್ಮಣೋವಾ ಆರ್ಷೇಯಃ ಸರ್ವಾದೇವತಾನಿ—ಶತಪಥ. XII, ೪, ೪, ೬,
ಭೂಯಾನ್ವೈಬ್ರಾಹ್ಮಣಃ ಕ್ಷತ್ರಿಯಾದಿತಿ ವರುಣ ಉವಾಚ—ಐ. ಬ್ರಾ. III, ೩೪.

ಸೋಮನೇ ರಾಜನು. ಇತರರಿಗೆ ಕ್ಷತ್ರಿಯನು. ಬ್ರಾಹ್ಮಣನು ಕ್ಷತ್ರಿಯನ ನ್ನಾಶ್ರಯಿಸುವುದು ವಿಪರೀತ ಕ್ರಮ.[15] ಶತಪಥಬ್ರಾಹ್ಮಣದಲ್ಲಿ ಬ್ರಾಹ್ಮಣ ನಾದವನು ತನ್ನ ಪ್ರಜ್ಞೆಯನ್ನು ಹೆಚ್ಚುಮಾಡಿಕೊಂಡು ಒಳ್ಳೆಯ ನಡತೆಯಿಂದ ಯಶಸ್ಸನ್ನು ಪಡೆದು ಲೋಕಕ್ಷೇಮಕ್ಕಾಗಿ ಯಾವಾಗಲೂ ಯತ್ನಿಸುತ್ತಿದ್ದರೆ ಲೋಕವು ಅವನನ್ನು ಗೌರವಿಸುವುದು; ಅಂತಹವನು ದಾನಕ್ಕೆ ಸತ್ಪಾತ್ರನು, ಅಜೇಯನು, ಅವಧ್ಯನು ಎಂದು ಹೇಳಿದೆ.[16] ಧರ್ಮಶಾಸ್ತ್ರಗಳಲ್ಲಿ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹಗಳು ಬ್ರಾಹ್ಮಣಧರ್ಮ ಗಳೆಂದು ಹೇಳಿದೆ.

ಕ್ಷತ್ರಿಯರ ಕರ್ತವ್ಯವು ಧರ್ಮೋದ್ಧರಣೆ[17]. ರಾಜಸೂಯಯಾಗದಲ್ಲಿ ಕ್ಷತ್ರಿಯರು ತಮ್ಮದೇ ಅಗ್ರವರ್ಣವೆಂದು ಹೇಳಿಕೊಳ್ಳುತ್ತಿದ್ದರು. ವೈಶ್ಯರು ಪಶುಪಾಲನೆ ಕೃಷಿ ವಾಣಿಜ್ಯಗಳಿಂದ ಜೀವಿಸುತ್ತಿದ್ದರು. ಶೂದ್ರರು ಇತರ ವರ್ಣದವರನ್ನಾಶ್ರಯಿಸಿ ಜೀವಿಸುತ್ತಿದ್ದರು.[18] ಇಂತಹ ವರ್ಣವ್ಯವಸ್ಥೆಯು ಮನುಷ್ಯರಲ್ಲಿಯೇ ಅಲ್ಲದೆ ದೇವತೆಗಳಲ್ಲಿಯೂ ಇದ್ದಿತೆಂದು ನಂಬಿಕೆಯಿದ್ದಿತು. ಅಗ್ನಿ ಬೃಹಸ್ಪತಿಗಳು ಬ್ರಾಹ್ಮಣರು; ಇಂದ್ರ ವರುಣ ಸೋಮ ಯಮ ವಿಷ್ಣು ಕ್ಷತ್ರಿಯರು; ವಸು ರುದ್ರ ಆದಿತ್ಯ ವಿಶ್ವೇದೇವ ಮರುತ್ತುಗಳು ವೈಶ್ಯರು; ಪೂಷನು ಶೂದ್ರನು. ಶ್ರೇಣಿ, ವ್ರಾತ, ಪೂಗ, ಶರ್ಧ, ಗಣ, ವರ್ಗ,

---

15 ಪ್ರತಿಲೋಮರೂಪಮೇವಸ್ಯಾದ್ ಯತ್‌ಕ್ಷತ್ರಿಯೋಬ್ರಾಹ್ಮಣಮುಪನಯೀತ—ಬೃ. ಉಪ II, ೧-೧೫; ಕಾಷೀತಕೀ. ಬ್ರಾ. ಉಪ. IV, ೧೮.

16 ಪ್ರಜ್ಞಾವರ್ಧಮಾನಾ ಚತುರೋಧರ್ಮಾನ್ ಬ್ರಾಹ್ಮಣಮಭಿನಿಷ್ಪಾದಯತಿ | ಬ್ರಾಹ್ಮಣ್ಯಂ ಪ್ರತಿರೂಪಚರ್ಯಾಂ ಯಶೋ ಲೋಕಪಕ್ತಿಂ ಲೋಕಃ ಪಚ್ಯಮಾನಶ್ಚತುರ್ಭಿಃ ಧರ್ಮೈಃ ಬ್ರಾಹ್ಮಣಂ ಭುನಕ್ತಿ ಅರ್ಚಯಾಚದಾನೇನ ಚಾಜೇಯತಯಾಚಾವಧ್ಯತಯಾಚ||
ಶತಪಥ XI ೫—೭. ೧

17 ತಸ್ಮಾದ್ರಾಜ್ಞಾಮನುಷ್ಯಾವಿಧೃತಾಃ—ತೈ. ಸಂ. II ೬—೭—೭; ಬ್ರಾಹ್ಮಣೋಗೋಪ್ತಾಜನಿ ಧರ್ಮಸ್ಯಗೋಪ್ತಾಜನಿ—ಐ. ಬ್ರಾ. ೩೮, ೩೯—೩; ಧೃತವ್ರತೋವೈರಾಜಾ—ಶತಪಥ V—೬೪—೪—೫; ಋಗ್. I ೨೫—೧೦.

18 ವೈಶ್ಯೇಮನುಷ್ಯಾಣಾಂ ಗಾವಃಪಶೂನಾಂ—ತೈ. ಸಂ. VII—೧—೧೫; ಋಗ್ಭ್ಯೋಜಾತಂವೈಶ್ಯಂವರ್ಣಮಾಹುಃ—ತೈ. ಬ್ರಾ.

ರುಚಂ ನೋಧೇಹಿ ಬ್ರಾಹ್ಮಣೇಷು ರುಚಂ ರಾಜಸು ನಸ್ಕೃಧಿ |
ರುಚಂ ವಿಶ್ಯೇಷು ಶೂದ್ರೇಷು ಮಯಿಧೇಹಿ ರುಚಾರುಚಮ್ ||
ತೈ. ಸಂ. VII—೬—೩. ೪.

ಮೈ. ಸಂ. I—೧೦—೧೨; ಶತ. XIV—೪—೨, ೨೩. ೨೫; ಕೌಷೀ. ೯—೫; ಐ. ಬ್ರಾ. ೧೩೪—೫.

ಸಮೂಹ ಎಂಬ ಪದಗಳು ವರ್ಣವ್ಯವಸ್ಥೆಯನ್ನು ಸೂಚಿಸುವವು. ಆದುದರಿಂದ ಅತ್ಯಂತ ಪ್ರಾಚೀನಕಾಲದಲ್ಲಿ ಆರ್ಯ—ದಸ್ಯು ಎಂಬ ಎರಡೇ ವರ್ಣಗಳಿದ್ದರೂ ಸಂಹಿತಾಕಾಲಕ್ಕೆ ಮುಂಚೆಯೇ ದಸ್ಯುಗಳು ದಾಸರಾಗಿ ಶೂದ್ರರೆಂದೆನಿಸಿಕೊಂಡರು. ಆರ್ಯರಲ್ಲಿಯೇ ಪಂಗಡಗಳುಂಟಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ವರ್ಣಗಳಾದುವು. ಆದರೆ ಬಹುಳ ಆಧುನಿಕ ಕಾಲದವರೆಗೂ ವರ್ಣಗಳನ್ನು ಬದಲಾಯಿಸಲು ಅವಕಾಶವಿದ್ದಿತು. ವೇದಯುಗದಲ್ಲಿ ಚಣ್ಡಾಲ, ಪುಲ್ಕಸ, ನಿಷಾದ ಮುಂತಾದವರು ಅಸ್ಪೃಶ್ಯರೆಂದು ಗಣಿಸಲ್ಪಟ್ಟಿದ್ದರೆಂಬುದಕ್ಕೆ ಆಧಾರವಿಲ್ಲ. ಪ್ರಾಚೀನ ಸ್ಮೃತಿಗಳಲ್ಲಿಯೂ ನಾಲ್ಕೇ ವರ್ಣಗಳಿವೆಯೆಂದು ಪಂಚಮವರ್ಣವಿಲ್ಲವೆಂದೂ ಹೇಳಿದೆ.[19] ಪಾಣಿನಿ ಪತಂಜಲಿಗಳು ಚಣ್ಡಾಲ, ಮೃತಪರನ್ನು ನಿರವಸಿತ ಶೂದ್ರರೆಂದು ಹೇಳಿರುವದರಿಂದ ಅವರೂ ಚತುರ್ಥವರ್ಣಕ್ಕೆ ಸೇರಿದವರು. . ಆಂಗಿರಸ ಸ್ಮೃತಿಯಲ್ಲಿ "ಅಂತ್ಯಾವಸಾಯಿನ್" ಶೂದ್ರರಾದ ಕ್ಷತ್ತೃ, ಸೂತರೊಡನೆ ಚಣ್ಡಾಲ, ಶ್ವಪಚರನ್ನೂ ಸೇರಿಸಿದೆ.

ಭರತಖಣ್ಡದಲ್ಲಿ ದಾಸ್ಯವೆಂಬುದೇ ಇಲ್ಲವೆಂದು ಕ್ರಿ.ಪೂ. ಮೂರನೆಯ ಶತಾಬ್ದದಲ್ಲಿದ್ದ ಮೆಗಾಸ್ತನೀಸನು ಹೇಳಿರುವನು. ಆದರೆ ಋಗ್ವೇದದಲ್ಲಿ ದಾಸದಾಸಿಗಳನ್ನು ದಕ್ಷಿಣೆಯಾಗಿ ಕೊಟ್ಟಂತೆ ಹೇಳಿದೆ. ಯಜುರ್ವೇದ ಮತ್ತು ಬ್ರಾಹ್ಮಣಗಳಲ್ಲಿ ಯಜ್ಞಶಾಲೆಯಲ್ಲಿ ದಾಸಿಗಳು ನೃತ್ಯಮಾಡಬೇಕೆಂದು ಹೇಳಿದೆ. ಯುದ್ಧದಲ್ಲಿ ಸೆರೆಸಿಕ್ಕಿದವರೂ ದುರ್ಭಿಕ್ಷಕಾಲದಲ್ಲಿ ತಮ್ಮನ್ನೇ ಮಾರಿಕೊಂಡವರೂ ದಾಸರಾಗಿದ್ದಿರಬಹುದೆಂದು ಊಹಿಸಿದೆ. ವಿಶ್ವಜಿದ್ಯಜ್ಞದಲ್ಲಿ ಯಜಮಾನನು ಸರ್ವವನ್ನೂ ದಾನಮಾಡುವಾಗ ತನಗೆ ಅಧೀನರಾದ ಶೂದ್ರರನ್ನು ಕೊಡಲು ಹಕ್ಕಿಲ್ಲವೆಂದು ಜೈಮಿನಿಯು ಹೇಳುವದರಿಂದ ಶೂದ್ರರೆಲ್ಲರೂ ದಾಸರಾಗಿರಲಿಲ್ಲ.

ಸ್ತ್ರೀಯರಿಗೆ ಸಮಾಜದಲ್ಲಿ ಉನ್ನತಸ್ಥಾನವಿದ್ದಿತು. ವೇದಗಳಲ್ಲಿ ಮನ್ತ್ರದ್ರಷ್ಟರಾದ ವಾಕ್, ಅಮ್ಭೃಣೀ, ರೋಮಶಾ ಮುಂತಾದವರೂ ಉಪನಿಷತ್ತುಗಳಲ್ಲಿ ಗಾರ್ಗೀ, ಮೈತ್ರೇಯೀ ಇತ್ಯಾದಿಗಳೂ ಪ್ರಸಿದ್ಧರು. ಗೃಹಿಣಿಯೇ ಗೃಹ ಮತ್ತು ಯಜಮಾನನಲ್ಲಿ ಅರ್ಧ.[20] ಪತಿಯೇ ಪತ್ನಿಯಲ್ಲಿ ಮಗನಾಗಿ

---

[19] ಚತುರ್ಥ ಏಕಜಾತಿಸ್ತು ಶೂದ್ರೋನಾಸ್ತಿ ಪಂಚಮಃ—ಮನು X ೪ ; ಸ್ಮೃತಾಶ್ಚ ವರ್ಣಾಶ್ಚತ್ವಾರಃ ಪಂಚಮೋನಾಧಿಗಮ್ಯತೇ. ಅನುಶಾಸನಪರ್ವ ೪೭—೧೮.

[20] ಅರ್ಧೋವಾ ಏಷ ಆತ್ಮನೋಯತ್ಪತ್ನೀ—ತೈ. ಸಂ. VI ೧—೮. ೫ ; ಐ. ಬ್ರಾ. ೩೩-೧ ; ಋಗ್. III-೫೩-೪ ; X. ೮೫—೩೬ ; V. ೩-೨ V. ೨೮-೩.

ಹುಟ್ಟುವುದರಿಂದ ಪತ್ನಿಗೆ ಜಾಯಾ ಎಂದು ಹೆಸರು.[21] ಪ್ರೌಢಾವಿವಾಹ ಕನ್ಯಾವಿವಾಹ ಪದ್ಧತಿಗಳೆರಡೂ ವೇದಯುಗದಲ್ಲಿದ್ದವು.[22] ಕನ್ಯೆಗೆ ಅಭರ್ಗ, ಆಟಕೀ ಎಂದು ಹೆಸರು. ಛಾಂದೋಗ್ಯೋಪನಿಷತ್ತಿನಲ್ಲಿ ಉಷಸ್ತಿಚಾಕ್ರಾಯಣನ ಹೆಂಡತಿಯು ಆಟಕೀ ಆಗಿದ್ದಳೆಂದು ಹೇಳಿದೆ.[23] ಕನ್ಯಾವಿಕ್ರಯವನ್ನು ಖಂಡಿಸಿದೆ. ಈ ಪದ್ಧತಿಯು ದಾಕ್ಷಿಣಾತ್ಯರಲ್ಲಿದ್ದಿತೆಂದು ಯಾಸ್ಕನು ಹೇಳುವನು.[24] ಕೊಂಡುಕೊಂಡ ಪತ್ನಿಯು ದಾಸಿಯೇ ವಿನಾ ಧರ್ಮಪತ್ನಿಯಲ್ಲ.[25] "ಸೌಭಾಗ್ಯಕ್ಕಾಗಿ ನಿನ್ನ ಪಾಣಿಗ್ರಹಣ ಮಾಡುವೆನು. ದೇವತೆಗಳು ನಮ್ಮ ಸಂಸಾರಕ್ಕೆ ಮಂಗಳವನ್ನುಂಟುಮಾಡಲಿ. ನಾವಿಬ್ಬರು ನಮ್ಮ ಗೃಹದಲ್ಲಿ ಮಕ್ಕಳು ಮೊಮ್ಮಕ್ಕಳೊಡನೆ ಸಂತೋಷದಿಂದ ಇರೋಣ. ಇಂದ್ರನೇ! ಈಕೆಯನ್ನು ಪುತ್ರವಂತಳನ್ನಾಗಿ ಮಾಡು. ಹತ್ತು ಮಕ್ಕಳನ್ನು ಹಡೆದು ಪತಿಯನ್ನು ಹನ್ನೊಂದನೆಯ ಮಗನಾಗಿ ಭಾವಿಸಲಿ. ಅತ್ತೆ, ಮಾವ, ಅತ್ತಿಗೆ, ಭಾವ ಮುಂತಾದವರಿಗೆಲ್ಲ ಸಾಮ್ರಾಜ್ಞಿಯಾಗಿರಲಿ; ಧರ್ಮ ಅರ್ಥ ಕಾಮಗಳೆಂಬ ಪುರುಷಾರ್ಥ ಸಾಧನೆಯಲ್ಲಿ ನಾವಿಬ್ಬರೂ ಏಕಮನಸ್ಕರಾಗಿರುವೆವು" ಎಂಬುದೇ ವಿವಾಹದ ಧ್ಯೇಯವಾಗಿದ್ದಿತು.[26]

---

21 ಅರ್ಧೋಹವಾ ಏಷ ಆತ್ಮನೋಯಜ್ಜಾಯಾ ತಸ್ಮಾದ್ಯಾವಜ್ಜಾಯಾಂವಿನ್ದತೇ ನೈವತಾವತ್ಪ್ರಜಾಯತೇ ಅಸರ್ವೋಹಿತಾವದ್ಭವತಿ। ಅಥ ಯದ್ವೈವಜಾಯಾಂವಿನ್ದತೇಽಥ ಪ್ರಜಾಯತೇ ತರ್ಹಿಹಿ ಸರ್ವೋಭವತಿ—ಶತಪಥ V. ೨. ೧; VIII–೭ ೩. ೩, ತಸ್ಮಾತ್ಪುರುಷೋ ಜಾಯಾಂವಿತ್ವಾ ಕೃತ್ಸ್ನತರಮಿವಾತ್ಮಾನಂ ಮನ್ಯತೇ—ಐ. ಆರ. I ೭–೫.

22 ಪ್ರೌಢಾವಿವಾಹ—ಋಗ್. X. ೨೭–೧೨; X. ೮೫. ೨೬, ೪೬; ಕನ್ಯಾವಿವಾಹ—ಯಾವರ್ಭಗಾಯ ವಿಮದಾಯ ಜಾಯಾಂಸೇನಾಜುವಾನ್ಯೂಹತ್‌ರಥೇನ—ಋಗ್. I. ೧೧೬–೧; I. ೧೨೬–೬, ೭, I—೫೧–೩.

23 ಆಟಿಕ್ಯಾ ಅನುಪಜಾತಪಯೋಧರಾದಿ ಸ್ತ್ರೀವ್ಯಂಜನಯಾ—ಶಂಕರಭಾಷ್ಯ.

24 ವಿಜಾಮಾತುರುತಘಾವಾಸ್ಯಾಲಾತ್—ಋಗ್ I. ೧೦–೯. ೭; ವಿಜಾಮಾತಾ ಇತಿಶಶ್ವದ್ ದಾಕ್ಷಿಣಾಜಾಃ ಕ್ರೀತಾಪತಿಮಾಚಕ್ಷತೇ—ನಿರುಕ್ತ, VI–೯. ಅಸುಸಮಾಪ್ತ ಇವನರೋಽಭೀಪ್ರೇತಃ ||

25 ಬೋಧಾಯನ ಧರ್ಮಸೂತ್ರ I. ೧೧–೨೦. ೪.

26 ಗೃಭ್ಣಾಮಿತೇ ಸೌಭಗತ್ವಾಯ ಹಸ್ತಂಮಯಾ ಪತ್ಯಾ ಜರದಷ್ಟಿರ್ಯಥಾಸಃ |
ಭಗೋ ಅರ್ಯಮಾ ಸವಿತಾ ಪುರನ್ಧಿರ್ಮಹ್ಯಂತ್ವಾದುರ್ಗಾರ್ಹ ಪತ್ಯಾಯದೇವಾಃ ||
ಇಹೈವಸ್ತಂ ಮಾವಿಯೌಷ್ಟಂ ವಿಶ್ವಮಾಯು ರ್ವ್ಯಶ್ನುತಮ್ |
ಕ್ರೀಳನ್ತೌ ಪುತ್ರೈರ್ನಪ್ತೃಭಿರ್ಮೋದಮಾನೌ ಸ್ವೇಗೃಹೇ ||
ಇಮಾಂತ್ವಮಿನ್ದ್ರ ಮೀಢ್ವಃ ಸುಪುತ್ರಾಂ ಸುಭಗಾಂ ಕೃಣು |
ದಶಾಸ್ಯಾಂ ಪುತ್ರಾನಾಧೇಹಿ ಪತಿಮೇಕಾದಶಂ ಕೃಧಿ ||

ಉಪಪನ್ನರು ಮಾತ್ರ ಬಹುಪತ್ನೀಕರಾಗಿದ್ದರು[27]. ಬಹುಪತಿತ್ವ (Polyandry) ಇದ್ದಿತೆಂದು ಕೆಲವರು ಊಹಿಸಿರುವದಕ್ಕೆ ವೇದದಲ್ಲಿ ಆಧಾರವಿಲ್ಲ. ವಿಧವೆಯರು ಒಬ್ಬ ಪುತ್ರನನ್ನು ಮಾತ್ರ ನಿಯೋಗಕ್ರಮ (Levirate)ದಿಂದ ಇಷ್ಟವಿದ್ದರೆ ಪಡೆಯಬಹುದು[28]. ಪುನರ್ವಿವಾಹವಾದವಳಿಗೆ ಪುನರ್ಭೂ ಎಂದು ಹೆಸರು. ವಿಧವೆಗೆ ತಲೆಗೂದಲು ತೆಗೆಯುವ ಪದ್ಧತಿ ಇರಲಿಲ್ಲ[29]. ಸತ್ತವನ ಮಗಳೂ ವಿಕೇಶಿ ಅಥವಾ ವಿಕೀರ್ಣಕೇಶಿ ಎಂದು ಹೇಳಿದೆ. ಪರದಾಪದ್ಧತಿಯು ಐಚ್ಛಿಕವಾಗಿದ್ದಿತೆಂದು ಊಹಿಸಬಹುದು. ಮದುವೆಯ ಜಗುಲಿಯ ಮೇಲೆ ನಿಂತಿರುವ ವಧುವನ್ನು ಎಲ್ಲರೂ ನೋಡಬಹುದು.[30] ಅವಕುಂಠನವನ್ನು ಕೆಲವರು ಹಾಕಿಕೊಳ್ಳುತ್ತಿದ್ದರು. ಪತಿಯೊಡನೆ ಸಹಗಮನಮಾಡುವ ಪದ್ಧತಿಗೂ ವೇದಗಳಲ್ಲಿ ಆಧಾರ ಸಿಕ್ಕುವದಿಲ್ಲ. ಗೃಹಿಣಿಯರಲ್ಲದೆ ಸಾಧಾರಣಾ, ಸಟೀ ಎಂಬ ವೇಶ್ಯೆಯರು ವೇದಕಾಲದಲ್ಲಿದ್ದರು.[31]

ಆರ್ಯರು ಹತ್ತಿ, ಉಣ್ಣೆ, ಸಣಬು, ನಾರು ಬಟ್ಟೆಗಳನ್ನು ತ್ರಸರದ ಸಹಾಯದಿಂದ ಸೆಯ್ದು ನೀವಿ, ಅದರ ಮೇಲೆ ವಾಸ, ಎಲ್ಲದರಮೇಲೂ ಅಧಿವಾಸ ಎಂಬ ಮೂರು ವಸ್ತ್ರಗಳನ್ನು ಧರಿಸುತ್ತಿದ್ದರು. ಮೇಲಣ ವಸ್ತ್ರವನ್ನು ಹಾಕಿಕೊಳ್ಳುವದರಲ್ಲಿ ಮೂರು ವಿಧಗಳಿದ್ದವು[32]. ಎಡಭುಜದ ಮೇಲೂ ಬಲಗೈ

---

ಸಮ್ರಾಜ್ಞೀಶ್ವಶುರೇಭವ ಸಮ್ರಾಜ್ಞೀ ಶ್ವಶ್ರ್ವಾಂ ಭವ |
ನನಾನ್ದರಿ ಸಮ್ರಾಜ್ಞೀ ಭವ ಸಮ್ರಾಜ್ಞೀ ಅಧಿ ದೇವೃಷು ||
ಧರ್ಮೇ ಚ ಅರ್ಥೇಚ ಕಾಮೇಚ ನಾತಿಚರಿತವ್ಯಃ ||
(ಋಗ್. X. ೮೫-೯. ಇತ್ಯಾದಿ).

27 ಋಗ್, X. ೧೪೫, ೧೫೯ ; I-೧೦೫-೮ ; ಅಥರ್ವ. III ೧೮ ; ತೈ. ಸಂ. VI. ೬-೪.೩ ; ಶತಪಥ, XIII ೪-೧.೯.

28 ಋಗ್. X. ೪-೭. ದೇವರಃ = ದ್ವಿತೀಯೋವರಃ—ನಿರುಕ್ತ III. ೧೫.

29 ಯದೀಯಂ ದುಹಿತಾತವ ವಿಕೇಶ್ಯರುದದ್ ಗೃಹೇರೋದೇನ ಕೃಣ್ವತ್ಯಘಮ್ |
ಅಗ್ನಿಷ್ಟ್ವಾತ ಸ್ಮಾದೇನಸೋಸವಿತಾಚಪ್ರಮುಂಚತಾತ್ ||
ಅಥರ್ವ. XIV. ೨-೬೦. ವಿಕೇಶೀ = ವಿಕೀರ್ಣಕೇಶೀ—ಸಾಯಣಭಾಷ್ಯ. Winternitz: *Die witve in Veda.* V. O. J. 1915. p. 172.

30 ಸುಮಂಗಲೀರಿಯಂವಧೂ ಇಮಾಂಸಮೇತಪಶ್ಯತ |
ಸೌಭಾಗ್ಯಮಸ್ಯೈದತ್ವಾಯಾದಾಸ್ತಂವಿಪರೇತನ ||

31 ಪರಾಶುಭ್ರಾ ಅಯುಸೋಯವ್ಯಾ ಸಾಧಾರಣ್ಯೇವ ಮರುತೋಮಿಮಿಕ್ಷುಃ :—
ಋಗ್. I-೧೬೭-೪ ; ಜಾರಾ-ಋಗ್ I-೬೬-೪ ; I-೧೧೭-೧೮ ; I-೧೩೪-೩.

32 ಅಜಿನಂ ವಾಸೋವಾ ದಕ್ಷಿಣತ ಉಪವೀಯ ದಕ್ಷಿಣಂಬಾಹುಮುದ್ಧರತೇವಧತ್ತೇ ಸವ್ಯಮಿತಿ ಯಜ್ಞೋಪವೀತಮೇತದೇವ | ವಿಪರೀತಂ ಪ್ರಾಚೀನಾವೀತಂ ಸಂವೀತಂ ಮಾನುಷಮ್—ತೈ. ಆರ II. ೧.

ಕೆಳಗೂ ಹಾಕಿಕೊಳ್ಳುವದಕ್ಕೆ ಉಪವೀತಿಕ್ರಮವೆಂದೂ, ಬಲಭುಜದ ಮೇಲೂ ಎಡ ತೋಳಿನ ಕೆಳಗೂ ಹಾಕಿಕೊಳ್ಳುವದಕ್ಕೆ ಪ್ರಾಚೀನಾವೀತಿ ಎಂದೂ, ಗಂಟಲಿನಿಂದ ಜೋಲಾಡುವಂತೆ ಹಾಕಿಕೊಳ್ಳುವದಕ್ಕೆ ನಿವೀತಿಯೆಂದೂ ಹೆಸರು. ಇವು ಮನುಷ್ಯರು, ಪಿತೃಗಳು ಮತ್ತು ದೇವತೆಗಳ ಕ್ರಮವೆಂದು ಹೇಳಿದೆ. ಯಜ್ಞೋಪವೀತವು ಪ್ರಜಾಪತಿಗೆ ಸಹಜವಾದುದೆಂದು ಹೇಳಿರುವದರಿಂದ ಬಹುಶಃ ಮೃಗಶಿರಾ (Orion) ನಕ್ಷತ್ರದ ಅನುಕರಣೆಯೆಂದು ತಿಲಕರು ಊಹಿಸಿದ್ದರು. ಯಾವಾಗಲೂ ಯಜ್ಞೋಪವೀತವು ದೇಹದ ಮೇಲೆ ಇರಬೇಕೆಂಬ ನಿಯಮವಿದ್ದಂತೆ ಕಂಡುಬರುವದಿಲ್ಲ. ಉಪವೀತವು ಮೊದಲು ಕೃಷ್ಣಾಜಿನ ಅಥವಾ ವಸ್ತ್ರವೇ ಆಗಿದ್ದಿತು. ವಾಗ್ದೇವಿಯು ದೇವಭಾಗನಿಗೆ ಪ್ರತ್ಯಕ್ಷಳಾದಾಗ ಆತನು ತನ್ನ ವಸ್ತ್ರವನ್ನೇ ಯಜ್ಞೋಪವೀತದಂತೆ ಹಾಕಿಕೊಂಡು ನಮಸ್ಕಾರ ಮಾಡಿದನೆಂದು ಹೇಳಿದೆ[33]. ಅಭಿಚಾರ ಕರ್ಮದಲ್ಲಿ ಕೆಂಪುಬಟ್ಟೆ ಮತ್ತು ಉಷ್ಣೀಷಗಳನ್ನು ಹಾಕಿಕೊಳ್ಳುತ್ತಿದ್ದರು. ಹಣೆಗೆ ಯಜ್ಞಕುಂಡದ ಅವಶೇಷವಾದ ಭಸ್ಮವನ್ನೇ ಮೂರು ಅಡ್ಡಗೆರೆಗಳಂತೆ ಅಥವಾ ಬೊಟ್ಟಿನಂತೆ ಧರಿಸುತ್ತಿದ್ದರು[34]. ಅನಂತರ ಅಗ್ನಿಯೇ ರುದ್ರನೆಂದು ಭಾವಿಸಿ ಶೈವರು ತಿರ್ಯಕ್ ತ್ರಿಪುಂಡ್ರವನ್ನು ಶೈವಚಿಹ್ನೆಯೆಂದು ಗಣಿಸಿದರು. ಊರ್ಧ್ವತ್ರಿಪುಣ್ಡ್ರ, ಅರ್ಧಚನ್ದ್ರ ಚಿಹ್ನೆ ಮುಂತಾದವು ಆಧುನಿಕ ಧರ್ಮಶಾಸ್ತ್ರಗಳಲ್ಲಿ ಉಕ್ತವಾಗಿದ್ದರೂ ಕ್ರಿ. ಶ. ೧೦ ನೆಯ ಶತಾಬ್ದಕ್ಕೆ ಹಿಂದೆ ಪ್ರಚಾರದಲ್ಲಿದ್ದಂತೆ ಕಂಡುಬರುವುದಿಲ್ಲ.

ವೇದಯುಗದಲ್ಲಿ ಚಿನ್ನ ತಾಮ್ರ ಮುಂತಾದ ಲೋಹಗಳಿಂದ ಮಾಡಿದ ಕವಚ, ತಲೆಪಾಗು, ಬಾಣ, ಬತ್ತಳಿಕೆ, ಭರ್ಜಿ, ಗಂಡುಕೊಡಲಿಗಳನ್ನೂ ರಥಗಳನ್ನೂ ಯೋಧರು ಉಪಯೋಗಿಸುತ್ತಿದ್ದರು. ಕ್ಷೌರದ ಕತ್ತಿ, ಕತ್ತರಿ, ಸೂಜಿ ಮುಂತಾದುವೂ ಪರಿಚಿತವಾಗಿದ್ದವು. ತಲೆಗೆ ಕುರೀರ, ಕುಮ್ಬ, ಓಪಶ, ಕಿ(ತಿ)ರೀಟ; ಕಂಠಕ್ಕೆ ನಿಷ್ಕ, ಸುವರ್ಣ, ಹಿರಣ್ಯ, ಶತಮಾನಗಳ ಹಾರಗಳು; ಕೈಗೆ ಕಂಕಣ, ಪರಿಸರ; ಕಾಲಿಗೆ ನೂಪುರ, ಕಿವಿಗೆ ಕುಣ್ಡಲ, ಬೆರಳಿಗೆ ಉಂಗುರಗಳೇ ಮುಂತಾದ ಆಭರಣಗಳನ್ನು ಸ್ತ್ರೀಯರೂ ಪುರುಷರೂ

---

[33] ಏತಾವತಿ ಹಗೌತಮಃ ಯಜ್ಞೋಪವೀತಂಕೃತ್ವಾ ಅಧೋನಿಪಪಾತ ನಮೋನಮ ಇತಿ—ತೈ. ಬ್ರಾ. III. ೧೦.೯. ಸ್ವಕೀಯೇನ ವಸ್ತ್ರೇಣಯಜ್ಞೋಪವೀತಂಕೃತ್ವಾ—ಸಾಯಣಭಾಷ್ಯ.

[34] ಬೃಹತ್ಸಾಮ ಕ್ಷತ್ರಭೃದ್ವೃಷ್ಣಿಯಂ ತ್ರಿಷ್ಟುಭೋಜಶ್ಶುಭಿತಮುಗ್ರವೀರಂ |
ಇನ್ದ್ರಸ್ತೋಮೇನ ಪಂಚದಶೇನಮಧ್ಯಮಿದಂ ವಾತೇನಸಗರೇಣ ರಕ್ಷಾ ||

ಸಾಮಾನ್ಯವಾಗಿ ಧರಿಸುತ್ತಿದ್ದರು. ಚರ್ಮಕಾರ, ಕುಮ್ಭಕಾರ, ತನ್ತುವಾಯ, ತಕ್ಷಕ, ಸ್ಥಪತಿ, ಲೋಹಕಾರ, ವಂಶಕಾರ, ದಾಶ, ವ್ಯಾಧ, ರಥಕಾರ, ನಾಪಿತ, ಮಾಗಧ, ಸೂತ, ನಟೀನಟ ಮುಂತಾದವರು ಕಸುಬುಮಾಡುತ್ತಿದ್ದರು.

ಒಂದೊಂದು ಜನಾಂಗಕ್ಕೂ ಮುಖಂಡರಾಗಿ ರಾಜರು ಜನಸಮ್ಮತಿಯಿಂದ ಆಳುತ್ತಿದ್ದರು. ಧರ್ಮರಕ್ಷಣೆಯೇ ರಾಜನ್ಯನ ವ್ರತವಾದುದರಿಂದ ಅಧರ್ಮಿಯಾದ ರಾಜನನ್ನು ಪ್ರಜೆಗಳು ಪದಭ್ರಷ್ಟನನ್ನಾಗಿ ಮಾಡುತ್ತಿದ್ದರು. ಪಟ್ಟಾಭಿಷೇಕಕ್ಕೆ ಮುಂಚೆ ರಾಜನು ನವರತ್ನಿಗಳೆಂಬ ಮುಖ್ಯಾಧಿಕಾರಿಗಳ ಮತ್ತು ಎಲ್ಲಾ ಪ್ರಜೆಗಳ ಅನುಮತಿಯನ್ನು ಪಡೆಯಬೇಕಾಗಿದ್ದಿತು. ಹೀಗೆ ಚುನಾವಣೆ ಮತ್ತು ವಂಶಪರಂಪರಾಗತವಾದ ಹಕ್ಕು ಎರಡೂ ಇದ್ದರೂ, ಪ್ರಜೆಗಳು ತಮ್ಮ ಸಮಾಜ, ಗಣ, ಶ್ರೇಣಿ, ಪೂಗ ಮುಂತಾದ ಸಂಸ್ಥೆಗಳ ಮೂಲಕ ನಿರಂಕುಶ ಪ್ರಭುತ್ವವನ್ನು ತಡೆಗಟ್ಟುತ್ತಿದ್ದರು. ಸಾಮ್ರಾಜ್ಯಾಕಾಂಕ್ಷೆಯಿಂದ ಪ್ರಾಣಿಹಿಂಸೆ ಮಾಡುವದು ಅತ್ಯಂತ ಹೇಯವೆಂದು ಭಾವಿಸುತ್ತಿದ್ದರು. ಜನಕ, ಅಶ್ವಪತಿಕೇಕಯ ಮುಂತಾದವರು ಆದರ್ಶ ರಾಜರಾಗಿದ್ದರು. ಅಶ್ವಪತಿಯು ಹೆಮ್ಮೆಯಿಂದ "ನನ್ನ ಜನಪದದಲ್ಲಿ ಕಳ್ಳನಿಲ್ಲ, ಮೋಸಗಾರನಿಲ್ಲ, ಹೆಂಡಕುಡುಕನಿಲ್ಲ, ಅನಾಹಿತಾಗ್ನಿಯಿಲ್ಲ, ಅವಿದ್ಯಾವಂತನಿಲ್ಲ, ಜಾರನಿಲ್ಲ, ಇನ್ನು ಜಾರಿಣಿ ಹೇಗಿರುವಳು?" ಎಂದು ಹೇಳಿಕೊಂಡಿರುವನು.[35] ಇದರಿಂದ ಆದರ್ಶರಾಜ್ಯದಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥ ಸಾಧನೆಗೂ ಹೇಗೆ ಸ್ವಾತಂತ್ರ್ಯವಿದ್ದಿತೆಂದು ವಿದಿತವಾಗುವದು.

ಆಶ್ರಮಗಳಲ್ಲಿ ಬ್ರಹ್ಮಚರ್ಯ, ಗೃಹಸ್ಥ ಮತ್ತು ವಾನಪ್ರಸ್ಥಗಳು ವೇದಯುಗದಲ್ಲಿ ಕಂಡುಬರುವವು. ಬ್ರಹ್ಮಚರ್ಯ ಮತ್ತು ಗೃಹಸ್ಥಾಶ್ರಮಗಳ ಪ್ರಶಂಸೆಯು ಅಧಿಕವಾಗಿದೆ. ವಾನಪ್ರಸ್ಥರು ವೈಖಾನಸರೆಂದೂ ತಮ್ಮ ಜೀವನಾಂತಿಮ ಕಾಲದಲ್ಲಿ ಅರಣ್ಯವಾಸ ಮಾಡಿಕೊಂಡು ಮೋಕ್ಷಕ್ಕಾಗಿ ಯತ್ನಿಸುತ್ತಿದ್ದರೆಂದೂ ಇವರ ಉಪದೇಶಗಳು ಅರಣ್ಯಕ ಮತ್ತು ಉಪನಿಷದ್ಗ್ರಂಥಗಳಲ್ಲಿ ಅಡಕವಾಗಿದೆಯೆಂದೂ ಹೇಳಲಾಗಿದೆ. ಕೆಲವರು ಆರ್ಯರಲ್ಲಿ ಸಂನ್ಯಾಸಾಶ್ರಮವಿರಲಿಲ್ಲವೆಂದೂ ಬಹುಶಃ ಅನಾರ್ಯರಿಂದ ಬಂದಿತೆಂದೂ ಹೇಳುವರು. ಆದರೆ ವೇದಗಳಲ್ಲಿ ಮುನಿ, ವ್ರತಿ ಪರಿವ್ರಾಜಕ, ಯತಿ, ವ್ರಾತ್ಯ

[35] ನಮೇಸ್ತೇನೋ ಜನಪದೇ ನಕದರ್ಯೋ ನಮದ್ಯಪೋ ನಾನಾಹಿತಾಗ್ನಿಃ ನಾವಿದ್ವಾನ್ ನಸ್ವೈರೀ ಸ್ವೈರಿಣೀಕುತಃ || ಛಾಂದೋಗ್ಯ. V. 11.5.

ಮುಂತಾದವರ ಉಲ್ಲೇಖವಿದೆ.[86] ಈ ಅತ್ಯಾಶ್ರಮಿಗಳು ನಿರಂಕುಶರಾಗಿದ್ದುದರಿಂದ ಕೆಲವರಿಗೆ ಸರಿಬೀಳದೆ ಗೃಹಸ್ಥಾಶ್ರಮವೇ ಉತ್ತಮವೆಂದು ಹೇಳುತ್ತಿದ್ದರು. ಇನ್ದ್ರನು ಕೆಲವರು ಯತಿಗಳನ್ನು ಕೊಂದನು. ಆದರೂ ಇನ್ದ್ರನು ಯತಿಗಳ ಸಖನು. ಕಪಟಸನ್ಯಾಸಿಗಳು ಜನರನ್ನು ಮೋಸಪಡಿಸುತ್ತ ಇದ್ದುದರಿಂದ ಇವರನ್ನು ವ್ರಾತ್ಯರೆಂದು ಕರೆಯುತ್ತಿದ್ದರು. ಆದರೇ ಈ ವ್ರಾತ್ಯರೂ ಆರ್ಯರೇ ಆಗಿದ್ದರು.[87] ಇವರು ಮಹಾವ್ರತವನ್ನು ಸ್ವೀಕರಿಸಿ ಮಹಾನ್ ದೇವನ ಆರಾಧಕರಾಗಿದ್ದುದರಿಂದಲೂ ಯಾವಾಗಲೂ ಗುಂಪು ಗುಂಪಾಗಿ (ವ್ರಾತ) ಸಂಚಾರ ಮಾಡುತ್ತಿದ್ದುದರಿಂದ ಇವರು ವ್ರಾತ್ಯರಾದರು. ಅಥರ್ವವೇದದಲ್ಲಿ ವ್ರಾತ್ಯನು ಪರಬ್ರಹ್ಮಸ್ವರೂಪವೆಂದು ಹೇಳಿದೆ. ಬೌದ್ಧರು ಬ್ರಾಹ್ಮಣರಿಂದ "ಪಬ್ಬಜ್ಜ" (ಪ್ರವ್ರಜ್ಯ) ಪದ್ಧತಿಯನ್ನು ತೆಗೆದುಕೊಂಡರು.

ಆಧ್ಯಾತ್ಮಿಕ ದೃಷ್ಟಿಯಿಂದ ವೇದವಾಙ್ಮಯವು ಭಕ್ತಿ, ಜ್ಞಾನ, ಕರ್ಮ ಮುಂತಾದ ಎಲ್ಲಾ ಭಾರತೀಯ ತತ್ವಗಳಿಗೂ ಮೂಲ. ವೇದದಲ್ಲಿ ಹೇಳಿದ ಶ್ರದ್ಧಾ, ಉಪನಿಷತ್ತುಗಳ ಉಪಾಸನಾ ಇವೇ ಪುರಾಣಗಳ ಕಾಲದಲ್ಲಿ ಭಕ್ತಿ ಎಂಬುದಾಗಿ ಪರಿಣಮಿಸಿದುವು. ಆದುದರಿಂದ ಭಕ್ತಿ ಮಾರ್ಗಕ್ಕೆ ವಿದೇಶೀಯ ಮತಗಳ ಸಂಪರ್ಕವೇ ಕಾರಣವೆಂದು ಕೆಲವರು ಪಾಶ್ಚಾತ್ಯರು ಹೇಳಿರುವುದಕ್ಕೆ ಯಾವ ಆಧಾರವೂ ಇಲ್ಲ. ಪ್ರಾಚೀನ ಆರ್ಯರು ಪ್ರಕೃತಿಯ ಶಕ್ತಿಗಳನ್ನು ಉತ್ಪ್ರೇಕ್ಷಿಸಿ ಇನ್ದ್ರ, ವರುಣ, ಅಗ್ನಿ, ರುದ್ರ ವಿಷ್ಣು, ಸೂರ್ಯ, ಸೋಮ ಇತ್ಯಾದಿ ದೇವತೆಗಳನ್ನಾಗಿ ಭಾವಿಸಿದ್ದಿದುದರಿಂದ ವೇದಗಳಲ್ಲಿ ಉಚ್ಚತರವಾದ ಆಧ್ಯಾತ್ಮಿಕ ವಿವೇಚನೆ ಕಂಡುಬರುವುದಿಲ್ಲವೆಂದೂ, ಋಷಿಗಳಿಗೆ ಮುಖ್ಯವಾಗಿ ದಕ್ಷಿಣೆಯ ಮೇಲೆಯೇ ಆಸೆಯೆಂದೂ, ಆ ಕಾಲದಲ್ಲಿ ಮೂರ್ತಿಪೂಜೆಯಿರಲಿಲ್ಲವೆಂದೂ, ಉಪನಿಷತ್

---

[86] ವಾನಪ್ರಸ್ಥ-ತಾಣ್ಡ್ಯಬ್ರಾ. XIV 4-7; ಯತಿಗಳು ಮೇರುನಿವಾಸಿಗಳೆಂದು ಮೇಧಾತಿಥಿಯು ಹೇಳುವನು—ಮನು, XII-48.

ಯೇನಾ ಯತಿಭ್ಯೋ ಭೃಗವೇ ಧನೇಹಿತೇ| ಯೇನ ಪ್ರಸ್ಕಣ್ವಮಾವಿಥ-ಋಗ್. VIII. 39; ಯ ಇನ್ದ್ರ ಯತಯಸ್ತ್ವಾ ಭೃಗವೋ ಯೇಚ ತುಷ್ಟುವುಃ. ಋಗ್, VIII-6.18.— ಮುನಯೋವಾತರಶನಾಃ ಪಿಶಂಗಾಃವಸತೇಮಲಾಃ-ಋಗ್. X-136-2, ಇನ್ದ್ರೋ ಮುನೀನಾಂಸಖಾ—ಋಗ್, VIII. 18-14.

[87] ವ್ರಾತೇಭ್ಯೋವ್ರಾತಪತಿಭ್ಯಶ್ಚವೋ ನಮೋನಮೋ ಗಣೇಭ್ಯೋ ಗಣಪತಿಭ್ಯಶ್ಚವೋ ನಮೋ ನಮೋ ವಿರೂಪೇಭ್ಯೋ ವಿಶ್ವರೂಪೇಭ್ಯಶ್ಚ || ಶ್ರೀರುದ್ರ. ತ್ರಯೋಧರ್ಮಸ್ಕನ್ಧಾಃ ಯಜ್ಞೋಽಧ್ಯಯನಂ ದಾನಮಿತಿ . . . ಪುಣ್ಯಲೋಕಾಭವನ್ತಿ ಬ್ರಹ್ಮಸಂಸ್ಥೋಽಮೃತತ್ವಮೇತಿ. ಛಾಂದೋಗ್ಯ. II-22-1 ಶ್ರಮಣೋಽಶ್ರಮಣಃ ತಾಪಸೋಽತಾಪಸಃ-ಬೃ. ಉಪ. VI. 3-22.

ಕಾಲದಲ್ಲಿ ಮಾತ್ರ ಬ್ರಹ್ಮ-ಆತ್ಮ ಸಂಬಂಧವು ಕಲ್ಪಿತವಾಯಿತೆಂದೂ ಪಾಶ್ಚಾತ್ಯ ಪಂಡಿತಂಮನ್ಯರು ಹೇಳುವರು. ಇದು ಕೇವಲ ಭ್ರಾಂತಿ. ವೇದಗಳಲ್ಲಿ ಸಗುಣ ನಿರ್ಗುಣ ಭೇದವನ್ನನುಸರಿಸಿ ದೇವತಾ ಮೂರ್ತಿಗಳ ಮತ್ತು ಆತ್ಮದ ಉಲ್ಲೇಖವಿದೆ. ಇನ್ದ್ರನು ತುವಿಗ್ರೀವ, ವಪೋದರ, ಸುಬಾಹು, ಸುಶಿಪ್ರ, ಹರಿಕೇಶ ಎಂದೂ, ರುದ್ರನು ರುದೂದರ, ಭಭ್ರು, ಸ್ಥಿರವಾದ ಅಂಗವುಳ್ಳವನು, ಪುರುರೂಪನು, ಉಗ್ರನು ಎಂದೂ, ವಿಷ್ಣುವು ಯುವ, ಬೃಹಚ್ಛರೀರನೆಂದೂ ಪೂಷನು ಶ್ಮಶ್ರು ಉಳ್ಳವನು ದನ್ತಹೀನನು ಎಂದೂ, ಸವಿತೃ ಮತ್ತು ವರುಣರಿಗೆ 'ಹಿರಣ್ಯದ್ರಾಪಿ'ಯಿದೆ ಎಂದೂ ವರ್ಣಿಸಿರುವುದರಿಂದಲೂ, ಭಾರತೀ, ಇಡಾ, ಸರಸ್ವತೀ ದೇವಿಯರು ಹಿರಣ್ಯಾಭರಣ ಭೂಷಿತರೆಂದೂ ಸರಸ್ವತಿ ವಾಗ್ರೂಪ, ನದೀರೂಪ, ಮತ್ತು ಮೂರ್ತಿರೂಪವಿದೆಯೆಂದು ಹೇಳಿರುವುದರಿಂದಲೂ, ಇನ್ದ್ರನ ವಿಗ್ರಹಗಳನ್ನು ಮನೆಯಲ್ಲಿ ಋಷಿಗಳು ಪೂಜಿಸುತ್ತಿದ್ದರೆಂದು ಸ್ಪಷ್ಟವಾಗಿ ಹೇಳಿರುವುದರಿಂದಲೂ ಆರ್ಯರು ವಿಗ್ರಹಾರಾಧನೆಯನ್ನೂ ಮಾಡುತ್ತಿದ್ದರೆಂದು ನಿರ್ಧರಿಸಬಹುದು.[38] ಉತ್ತಮಾಧಿಕಾರಿಗಳು ಯಜ್ಞ ಮತ್ತು ಯೋಗಾಭ್ಯಾಸದಲ್ಲಿ ಅನುರಕ್ತರಾಗಿದ್ದುದರಿಂದ ಸಗುಣೋಪಾಸನೆ ಪ್ರತೀಕೋಪಾಸನೆಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಿರಲಿಲ್ಲ. "ಶಿಶ್ನದೇವಾ:"[39] ಎಂಬ ಪದಕ್ಕೆ ಅಬ್ರಹ್ಮಚಾರಿಗಳು ಎಂಬ ಅರ್ಥವಿರುವುದರಿಂದ ಲಿಂಗಪೂಜೆ ನಿಷೇಧಿಸಲ್ಪಟ್ಟಿದ್ದಿತೆಂದಾಗಲೀ ಮೂರ್ತಿಪೂಜೆಯು ಅನಾರ್ಯರಿಂದ ಬಂದಿತೆಂದಾಗಲೀ ಹೇಳುವದಕ್ಕೆ ಸಾಧ್ಯವಿಲ್ಲ. ವೈದಿಕ ಮತ್ತು ತಾನ್ತ್ರಿಕ ಪದ್ಧತಿಗಳು ಪರಸ್ಪರ ವಿರುದ್ಧವೆಂದು ಕೆಲವರು ಭಾವಿಸಿರುವುದು ಸರಿಯಲ್ಲ. ವೈದಿಕಮತದಲ್ಲಿ ಪುರುಷ ಮತ್ತು ಸ್ತ್ರೀದೇವತೆಗಳಿಗೆ ಸಮಪ್ರಾಧಾನ್ಯವಿದೆ. ಆದುದರಿಂದ ಮಾತೃದೇವತಾಪೂಜೆಯು ಅವೈದಿಕವೆಂದು ಹೇಳುವುದು ತಪ್ಪು. ಷಣ್ಮತಗಳೆನಿಸಿದ ಶೈವ, ವೈಷ್ಣವ, ಶಾಕ್ತ, ಗಾಣಾಪತ್ಯ,

---

[38] ಹೋತಾ ಯಕ್ಷತ್ತ್ರೇಶಸ್ವತೀಃ ತಿಸ್ರೋದೇವೀ ಹಿರಣ್ಯಯೀ | ಭಾರತೀ ಬೃಹತಿ ರ್ಮಹೀಃ—ತೈ. ಬಾ. II.16-17. ಅಮ್ಬಿತಮೇ ನದೀತಮೇ ದೇವಿತಮೇ ಸರಸ್ವತೀ-ಋಗ್. I.

ಕ ಇಮಂ ದಶಭಿರ್ಮಮೇನ್ದ್ರಂ ಕ್ರೀಣಾತಿ ಧೇನುಭಿಃ | ಯದಾ ವೃತ್ರಾಣಿ ಜಂಘನತ್ ಅಥೈನಂ ಮೇಪುನರ್ದದತ್ || ಋಗ್. IV. 24-10.

ಮಹೇಚನ ತ್ವಾಮದ್ರಿವಃ ಪರಾಶುಲ್ಕಾಯದೇಯಾವ್ | ನಸಹಸ್ರಾಯನಾಯುತಾಯ ವಜ್ರಿವೋ ನಶತಾಯ ಶತಾಮಘ || ಋಗ್, VIII. 1-5.

[39] ಋಗ್. VII. 21-5 ; X.99-3 ; ನಿರುಕ್ತ IV. 19.

ಸೌರ, ಕೌಮಾರ ಮತಗಳೆಲ್ಲವೂ ವೇದಗಳ ಆಧಾರದ ಮೇಲೆಯೇ ನಿಂತಿವೆ. ಈ ವಿಷಯವನ್ನು ಮುಂದೆ ವಿಸ್ತಾರವಾಗಿ ಚರ್ಚಿಸುವೆವು.

ಯಜ್ಞಗಳು ಸಂಹಿತಾಕಾಲಕ್ಕಿಂತ ಬಹುಳ ಪ್ರಾಚೀನ. ವೇದದಲ್ಲಿಯೇ ಅಗ್ನಿತ್ರಯ, ಸವನತ್ರಯ, ಹೋತೃ, ಅಧ್ವರ್ಯು, ಗ್ರಾವಸ್ತುತ್, ಅಗ್ನೀತ್, ಬ್ರಾಹ್ಮಣಾಚ್ಛಂಸಿನ್, ಯಜಮಾನ, ಪತ್ನೀ ಇತ್ಯಾದಿಗಳ ಉಲ್ಲೇಖವಿದೆ. ಅತಿರಾತ್ರ ಮತ್ತು ಅಶ್ವಮೇಧಗಳು ಪುರಾತನ ಕಾಲದಿಂದ ಬಂದಿವೆಯೆಂದು ಹೇಳಿದೆ. ಪಶುವಿನ ಭೌತಿಕ ದೇಹದ ಅಂಶಗಳು ಆಯಾ ಭೂತಗಳಲ್ಲಿ ಅಡಗುವವು. ಆದರೆ ಆ ಜೀವವು ಸ್ವರ್ಗವನ್ನು ಸೇರುವದು. ಹಿಂದೆ ದೇವತೆಗಳು ಮಾಡಿದ ಯಜ್ಞ ರೀತಿಯಲ್ಲೇ ಈಗ ಮನುಷ್ಯರು ಮಾಡುವರು. ಪಶುಹಿಂಸೆ ಮಾಡುವದು "ಋತ"ಕ್ಕಾಗಿ. ಆದುದರಿಂದ ಶಾಮಿತೃವಿಗೆ ಪಾಪದೋಷವಿಲ್ಲ. ಅವನು 'ಅಪಾಪ'.[40] ದೇವ, ಪಿತೃ, ಭೂತ, ಮನುಷ್ಯ ಮತ್ತು ಬ್ರಹ್ಮ ಎಂಬವು ಐದು ಮಹಾಯಜ್ಞಗಳು. ಅಷ್ಟಕಾ, ಪಾರ್ವಣಶ್ರಾದ್ಧ, ಶ್ರಾವಣೀ, ಆಗ್ರಹಾಯಣೀ, ಪ್ರೌಷ್ಠಪದೀ, ಚೈತ್ರೀ, ಆಶ್ವಯುಜೀ ಎಂಬವು ಪಾಕಸಂಸ್ಥೆಗಳು. ಅಗ್ನ್ಯಾಧೇಯ, ಅಗ್ನಿಹೋತ್ರ, ದರ್ಶಪೌರ್ಣಮಾಸ, ಆಗ್ರಾಯಣ, ಚಾತುರ್ಮಾಸ್ಯ, ನಿರೂಢಪಶುಬನ್ಧ, ಸೌತ್ರಾಮಣಿ—ಇವು ಹವಿರ್ಯಜ್ಞಗಳು. ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶಿ, ವಾಜಪೇಯ (ಕ್ಷತ್ರಿಯರಿಗೆ ರಾಜಸೂಯ), ಅತಿರಾತ್ರ, ಅಪ್ತೋರ್ಯಾಮ ಎಂಬುವು ಸೋಮಸಂಸ್ಥೆಗಳು.

---

[40] ನವಾ ಉ ಏತನ್ಮ್ರಿಯಸೇ ನರಿಷ್ಯಸಿ ದೇವಾಗ್ಂ ಇದೇಷಿ ಪಥಿಭಿಃ ಸುಗೇಭಿಃ| ಹರೀತೇಯುಂಜಾ ಪೃಷತೀ ಅಭೂತಾಮುಪಸ್ಥಾದ್ವಾಜೀ ಧುರಿ ರಾಸಭಸ್ಯ|| ಋಗ್. I. 162-21 ; I. 163-13. ಇತ್ಯಾದಿ.

ಋತಸ್ಯ ತ್ವಾ ದೇವಹವಿಃ ಪಾಶೇನಾರಭೇ—ತೈ. ಸಂ.

ದೈವ್ಯಾಶ್ಶಮಿತಾರ ಆರಭಧ್ವಂ ಉತಮನುಷ್ಯಾ ಉಪನಯತ ಮೇಧ್ಯಾದುರ ಆಶಾಸಾನಾಮೇಧಪತಿಭ್ಯಾಂಮೇಧಮ್| ಪ್ರಾಸ್ಮಾ ಅಗ್ನಿಂಭರತಸ್ತೃಣೀತ ಬರ್ಹಿರನ್ವೇನಂ ಮಾತಾಮನ್ಯತಾಂ ಅನುಪಿತಾ ಅನುಭ್ರಾತಾಸಗರ್ಭ್ಯೋನುಸಖಾಸಯೂಥ್ಯಃ| ಉದೀಚೀನಾ ಅಸ್ಯಪದೋನಿಧತ್ತಾತ್ ಸೂರ್ಯಂಚಕ್ಷುರ್ಗಮಯತಾದ್ವಾತಂ ಪ್ರಾಣಮನ್ವಸೃಜತಾದಂತರಿಕ್ಷಮಸುಂದಿಶಃ ಶ್ರೋತ್ರಮ್ಪೃಥಿವೀಶರೀರಮ್| ಏಕಧಾಸ್ಯತ್ವಚಯ ತಾದ್ವಾತಮಾಚ್ಛಿತಾತ್ಪುರಾನಾಭ್ಯಾ ಅಪಿಶಸೋವಪಾಮುತ್ಖಿದತಾದನ್ತರೇವೋಷ್ಮಾಣಂ ವಾರಯಧ್ವಾತ್| ಶ್ಯೇನಮಸ್ಯವಕ್ಷಃ ಕೃಣುತಾತ್ ಪ್ರಶಸಾ ಬಾಹೂಶಲಾ ದೋಷಣೀ ಕಶ್ಯಪೇವಾಂಸಾವಚ್ಛಿದ್ರೇ ಶ್ರೋಣೀಕವಷೋರುೂ ಸ್ರೇಕಪರ್ಣಾಷ್ಠೀವನ್ತಾ| . . . ಅಧ್ರಿಗೋಶಮೀಧ್ವಂ ಸುಶಮಿಶಮೀಧ್ವಂ ಶಮೀಧ್ವಮಧ್ರಿಗಾ ಇ ಉ ಅಪಾಪಾ|| ತೈ. ಬ್ರಾ. III. 6-6,

ಈ ರೀತಿಯಲ್ಲಿ ಶ್ರದ್ಧಾ, ಉಪಾಸನಾ, ಭಕ್ತಿ ಮತ್ತು ವೈದಿಕ ಕರ್ಮಗಳಿಂದ ಸಂಸ್ಕೃತವಾದ ಆತ್ಮವು ಕೊನೆಗೆ ಜ್ಞಾನಮಾರ್ಗವನ್ನವಲಂಬಿಸುವುದು. "ಬ್ರಹ್ಮನ್" ಎಂಬುದಕ್ಕೆ ಬೃಹತ್ವ ಬೃಂಹಣತ್ವವೆಂದು ಸಾಂಪ್ರದಾಯಿಕ ಅರ್ಥ. ಪಾಶ್ಚಾತ್ಯರು ಬ್ರಹ್ಮನ್ ಎಂದರೆ ಮಾಂತ್ರಿಕ ಶಕ್ತಿ, ಮಾಟ, ಸ್ತೋತ್ರ ಶಬ್ದ, ಬರ್ಹಿ, ಬೆಳಕು ಇತ್ಯಾದಿಯಾಗಿ ಅರ್ಥಗಳನ್ನು ಕಲ್ಪಿಸಿ ವಿಚಿತ್ರಸಿದ್ಧಾಂತಗಳನ್ನು ಮಾಡಿರುವರು. ಇವೆಲ್ಲ ಅಪಾರ್ಥಗಳು. ವೇದದಲ್ಲಿ ಜನ್ಮಸ್ಥಿತಿ ಭಂಗಗಳಿಗೆ ಕಾರಣವಾದ ಮಾಯಾಶಕ್ತಿಸಹಿತವಾದ ನಿರ್ಗುಣ-ಸಗುಣ ರೂಪಗಳನ್ನು ಹೊಂದಿದ, ಅಂತರ್ಯಾಮಿಯಾಗಿಯೂ ಆತ್ಮಾಭೇದವಾಗಿಯೂ ಇರುವ ಸತ್ತೆಯೇ ಬ್ರಹ್ಮವಸ್ತುವೆಂದು ನಿರ್ಧರಿಸಿದೆ. ಆದುದರಿಂದ ಮನ್ತ್ರದ್ರಷ್ಟರಾದ ಋಷಿಗಳು ಮಾಟಗಾರರೆಂದಾಗಲೀ ಆತ್ಮವೆಂಬ ಪದಾರ್ಥವನ್ನು ಅನಾರ್ಯರಿಂದ ತಿಳಿದುಕೊಂಡರೆಂದಾಗಲೀ ಹೇಳುವುದು ತಪ್ಪು. ವೇದತತ್ವಗಳನ್ನೇ ಉಪನಿಷತ್ತುಗಳೂ, ಗೀತೆಯೂ, ಬ್ರಹ್ಮಸೂತ್ರಗಳೂ, ಇತಿಹಾಸಪುರಾಣಗಳೂ, ದರ್ಶನಗ್ರಂಥಗಳೂ ಅಧಿಕಾರಭೇದಕ್ಕನುಸಾರವಾಗಿ ಪ್ರತಿಪಾದಿಸುತ್ತವೆ.

ವೈದಿಕ ವಾಙ್ಮಯದಲ್ಲಿ ಪ್ರಪಂಚವು ವಿವರ್ತಿತವೆಂದೂ ಆವರಣ ಮತ್ತು ವಿಕ್ಷೇಪಶಕ್ತಿಗಳುಳ್ಳ ಮಾಯೆಯಿಂದ ಕಲ್ಪಿತವಾದುದೆಂದೂ ಸುಕೃತರು ಅರ್ಚಿರಾದಿ ಮಾರ್ಗವಾಗಿಯೂ ಇತರರು ಧೂಮಾದಿಮಾರ್ಗವಾಗಿಯೂ ಗಮಿಸುವರೆಂದೂ ಬ್ರಹ್ಮಸಿದ್ಧಿ ಹೊಂದಿದವರು ಪುನರಾವೃತ್ತಿಯಿಲ್ಲದೆ ಅಲ್ಲಿಯೇ ಆತ್ಮೈಕ್ಯವನ್ನು ಪಡೆಯುವರೆಂದೂ ನಿಶ್ಚಯಿಸಿದೆ.[41] ಬ್ರಹ್ಮವೆಂಬ ವಸ್ತು ಒಂದೇ. "ಸತ್ಯಸ್ಯ ಸತ್ಯಂ", "ಜ್ಯೋತಿಷಾಂ ಜ್ಯೋತಿಃ" ಯೆಂದೂ ಇತರ ದೇವತೆಗಳು ಈ ಬ್ರಹ್ಮವಸ್ತುವಿನ ಆಭಾಸ ರೂಪಗಳೆಂದೂ ನಿರ್ಧರಿಸಿದೆ.[45]

---

[41] ನದೇವಾನಾಮತಿವ್ರತಂ ಶತಾತ್ಮಾ ಚ ನಜೀವತಿ| ತಥಾಯುಜಾ ವಿವಾವೃತೇ॥ ಋಗ್ X. ೩೩—೧೦. ಉತ್ಪತ್ತಿ ಸ್ಥಿತಿ ಪ್ರಳಯಕರಣೇನ| ಯುಜ್ಯತ ಇತಿಯುಕ್—ಪ್ರಜಾಪತಿಃ, ತೇನ ಯುಜಾಪ್ರಜಾಪತಿನಾ, ವಿವೃತೇ—ವಿವರ್ತಿತಂ ನಿರ್ವಿತಂ ಜಗದಿತ್ಯರ್ಥಃ—ಉದ್ಗೀಥಭಾಷ್ಯ.

ಇನ್ದ್ರೋ ಮಾಯಾಭಿಃ ಪುರುರೂಪ ಈಯತೇ| ರೂಪಂ ರೂಪಂ ಪ್ರತಿರೂಪೋ ಬಭೂವ| ಯತ್ರಹಿದ್ವೈತಮಿವಭವತಿ ತದಿತರ ಇತರಂಪಶ್ಯತಿ| ಯತ್ರವಾ ಅಸ್ಯಸರ್ವಮಾತ್ಮೈವಾಭೂತ್ತತ್ಕೇನ ಕಂಜಿಘ್ರೇತ್| ಅಹಂಬ್ರಹ್ಮಾಸ್ಮೀತಿ . . . ಋಷಿರ್ವಾಮದೇವಃ ಪ್ರತಿಪೇದೇಽಹಂಮನುರಭವಗ್ಂ ಸೂರ್ಯಶ್ಚೇತಿ—ಇತ್ಯಾದಿ.

[45] ಇನ್ದ್ರಂ ಮಿತ್ರಂ ವರುಣಮಗ್ನಿಮಾಹುಃ ಅಥೋ ದಿವ್ಯಃ ಸುಪರ್ಣೋಗರುತ್ಮಾನ್. ಏಕಂಸದ್ವಿಪ್ರಾ ಬಹುಧಾವದನ್ತಿ ಅಗ್ನಿಂ ಯಮಂ ಮಾತರಿಶ್ವಾನಮಾಹುಃ॥ ಋಗ್. I. ೨೨-೧೬೪-೪೬.

ಇಂತಹ ಅದ್ವೈತಜ್ಞಾನದಿಂದ ಮರ್ತ್ಯರೂ ಕೂಡ, ಹಿಂದೆ ಋಭು, ಮರುತ್ತು, ಆಂಗೀರಸ, ವಿರೂಪ, ನವಗ್ವ, ದಶಗ್ವ, ಅಥರ್ವನ್, ಭೃಗು, ಕುಶಿಕರೇ ಮುಂತಾದವರು ಅಮರ್ತ್ಯರಾದಂತೆ, ಅಮರ್ತ್ಯರಾಗಬಹುದು. ನರಕದ ವಿಷಯವು ವೇದ ವಾಙ್ಮಯದಲ್ಲೆಲ್ಲಿಯೂ ಕಂಡುಬರುವದಿಲ್ಲ. ನಿತ್ಯನಾರಕಿ ನಿತ್ಯಸಂಸಾರಿ ಎಂಬ ತಾರತಮ್ಯಗಳು ಬಹುಶಃ ಸೆಮಿಟಿಕ್ ಮತಗಳ ಸಂಪರ್ಕದಿಂದ ಪುರಾಣ ಯುಗದಲ್ಲಿ ಬಂದುವು. ಯಮಲೋಕವು ಸುಖಸಂತೋಷಗಳಿಗೆ ಆಸ್ಪದವಾದುದು. ಅನ್ಧತಾಮಿಸ್ರ ಅಥವಾ ಅಸೂರ್ಯ ನಾಮಕಲೋಕವೆಂಬುದು ಅವಿದ್ಯೆಯ ಉತ್ಪ್ರೇಕ್ಷೆ. ಮೃತರು ಅಗ್ನಿದಗ್ಧರಾದರೂ ಅನಗ್ನಿದಗ್ಧರಾದರೂ ಅವರವರ ಇಷ್ಟಾಪೂರ್ತಕರ್ಮಾನುಸಾರವಾಗಿ ಇನ್ದ್ರಿಯಗಳನ್ನು ಪಂಚಭೂತಗಳಲ್ಲಿ ಲಯಮಾಡಿ ತಮಗೆ ಹಿತವಾದ ಸ್ಥಾನವನ್ನು ಹೊಂದಬಹುದು.[46]

ಭಾರತೀಯ ಸಂಸ್ಕೃತಿಯ ವಿಶಿಷ್ಟಗುಣಗಳೆನಿಸಿದ ಕರ್ಮ, ಪುನರ್ಜನ್ಮ, ಅದ್ವೈತಭಾವನೆಗಳಿಂದ ಉತ್ಪನ್ನವಾದ, ಜಗತ್ತಿನಲ್ಲೆಲ್ಲ ಉತ್ತಮಕರವಾದ, ನೈತಿಕದೃಷ್ಟಿಯು ವೇದಗಳ ಆಧಾರದ ಮೇಲೆಯೇ ನಿಂತಿದೆ. "ಸತ್ಯಂವದ, ಧರ್ಮಂಚರ, ಮಾವಿದ್ವಿಷಾಹವೈ" ಎಂಬ ಘೋಷವು ಈಗಲೂ ಪ್ರತಿಧ್ವನಿತವಾಗುತ್ತಿದೆ. ಸ್ವರೂಪ, ಪ್ರಮಿತಿ, ಪ್ರವೃತ್ತಿಗಳು ಸತ್ತಾ ಎಂಬ ಪದದ ಅರ್ಥ. ಋತ, ಸತ್ಯ, ಜ್ಞಾನ, ಆನನ್ದ, ಅಮೃತತ್ವ, ಸ್ವಾತಂತ್ರ್ಯ ಧರ್ಮ ಎಂಬ ಭಾವಗಳು ಸತ್ತಾರೂಪಗಳು. ಆದುದರಿಂದ ವೈದಿಕ ಸಂಸ್ಕೃತಿಯಲ್ಲಿ ಮಾನವನು ಪ್ರಾರ್ಥಿಸುವುದು ಏಕಮುಕ್ತಿಯನ್ನಲ್ಲ, ಅರ್ಥಕಾಮಗಳನ್ನಲ್ಲ. ಸಾವಿತ್ರೀ ಪ್ರಾರ್ಥನೆಯು ಸತ್ಯವಾನ್ ಆಗುವದಕ್ಕಾಗಿ. ಗಾಯತ್ರೀ ಅಥವಾ ಸಾವಿತ್ರೀ ಮನ್ತ್ರವು ಸತ್ಯಸ್ಯಸತ್ಯವಾದ ಜ್ಯೋತಿಗಳಿಗೆಲ್ಲ ಪರಂಜ್ಯೋತಿಯಾದ ಬ್ರಹ್ಮವೆಂಬ ಸದ್ವಸ್ತುವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ನಮ್ಮ ಬುದ್ಧಿಯು ಪ್ರಚೋದಿತವಾಗಲಿ ಎಂದು ಹೇಳುವದು. ಅಸತ್ತಿನಿಂದ ಸತ್ತಿಗೂ, ತಮಸ್ಸಿನಿಂದ ಜ್ಯೋತಿಗೂ, ಮೃತ್ಯುವಿನಿಂದ ಅಮೃತತ್ವಕ್ಕೂ ಹೋಗುವುದಕ್ಕೆ ಭಾರತೀಯರು

[46] ಯತ್ರ ಜ್ಯೋತಿರಜಸ್ರಂ ಯಸ್ಮಿನ್‌ಲ್ಲೋಕೇಸ್ವರ್ಹಿತಂ| ತಸ್ಮಿನ್ ಮಾಂಧೇಹಿ ಪವಮಾನಾಮೃತೇಲೋಕೇ ಅಕ್ಷಿತಃ || ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ | ಕಾಮಸ್ಯ ಯತ್ರಾಪ್ತಾಃ ಕಾಮಸ್ತತ್ರ ಮಾಮಮೃತಂಕೃಧಿ | ಇನ್ದ್ರಾಯೇನ್ದೋ ಪರಿಸ್ರವ || ಋಗ್. IX. ೧೧೩-೭.೧೧.

ಸೂರ್ಯಂ ಚಕ್ಷುರ್ಗಚ್ಛತು ವಾತಮಾತ್ಮಾ ದ್ಯಾಂಚ ಗಚ್ಛಪೃಥ್ವೀಂ ಚ ಧರ್ಮಣಾ | ಅಪೋವಾ ಗಚ್ಛಯದಿ ತತ್ರ ತೇ ಹಿತಂ ಓಷಧೀಷು ಪ್ರತಿತಿಷ್ಠಾ ಶರೀರೈಃ || ಅಜೋ ಭಾಗಸ್ತಪಸ್ತಂ ತಪಸ್ವ ತಂತೇ ಶೋಚಿಸ್ತಪತು ತಂತೇಽರ್ಚಿಃ | ಯಾಸ್ತೇಶಿವಾಸ್ತನ್ವೋ ಜಾತವೇದಸ್ತಾಭಿರ್ವಹೈನಂ ಸುಕೃತಾಂ ಉಲೋಕಮ್ || ಋಗ್. X. ೧೬೩-೪.

ಪ್ರಾರ್ಥಿಸುವರೇ ವಿನಾ ಮಿಕ್ಕ ತುಚ್ಛ ವಸ್ತುಗಳಿಗಲ್ಲ.[47] ಸಾವಿತ್ರೀ ಸಹಿತ ಸತ್ಯವಂತರಾದವರು ಆತ್ಮೈಕ್ಯವನ್ನು ಸಾಕ್ಷಾತ್ಕಾರಮಾಡಿಕೊಂಡರೆ ಮೃತ್ಯುಮುಖದಿಂದಲೂ ಬಿಡುಗಡೆ ಹೊಂದಬಹುದೆಂದು ಇತಿಹಾಸಗಳೂ ಹೇಳುವವು. ಕ್ರಿಸ್ತ ಪೂರ್ವ ಮೂರನೆಯ ಶತಾಬ್ದದಿಂದ ಕ್ರಿಸ್ತ ಶಕ ೧೯ನೆಯ ಶತಾಬ್ದದ ವರೆಗೆ ಭರತಖಂಡದಲ್ಲಿ ಪ್ರವಾಸಮಾಡಿದ ಮೆಗಾಸ್ತನೀಸ್, ಯುವಾನ್‌ಚ್ವಾಂಗ್, ಫಾಹಿಯಾನ್ ಮುಂತಾದ ವಿದೇಶೀಯರೆಲ್ಲರೂ ಭಾರತೀಯರಂತಹ ಸತ್ಯವಂತರೂ ಅಹಿಂಸಾಪರರೂ ಪ್ರಮಾಣಿಕರೂ ಇನ್ನಾವ ದೇಶದಲ್ಲಿಯೂ ಇಲ್ಲವೆಂದು ಘಂಟಾಘೋಷವಾಗಿ ಹೇಳಿ ಭಾರತೀಯರ ಸತ್ಯಾನ್ವೇಷಣೆಗೆ ತಮ್ಮ ಪ್ರಣಾಮಗಳನ್ನು ಸಲ್ಲಿಸಿರುವರು.[48] ಇದಕ್ಕೆ ವೈದಿಕ ನೀತಿವಿಧಾನವೇ ತಳಹದಿ. ಕಾಯಿಕ, ವಾಚಿಕ, ಮಾನಸಿಕ, ಆರ್ಥಿಕ, ಸಾಮಾಜಿಕ, ರಾಜಕೀಯ ಇತ್ಯಾದಿ ಯಾವ ಅಂಶದಲ್ಲಿಯಾದರೂ ಮಾನವನ ವ್ಯಕ್ತಿತ್ವವು (Personality) ಸಂಕುಚಿತವಾದರೇ ಅಲ್ಲಿ ಅನೃತಚಿಹ್ನೆಯಿರುವದು. ಸಂಪೂರ್ಣ ಸ್ವಾತಂತ್ರ್ಯಕ್ಕೆ ಸತ್ಯವೇ ಕಾರಣ. ಹಿಂಸೆ ಅಸತ್ಯಗಳಿಂದ ತುಂಬಿರುವ ಪ್ರಕೃತ ಪ್ರಪಂಚದಲ್ಲಿಯೂ ಕೂಡ ಭಾರತೀಯರಲ್ಲೇ ಕೆಲವರು ಅಹಿಂಸಾ, ಸತ್ಯಗಳೆಂಬ ಶಾಶ್ವತ ತತ್ವಗಳನ್ನು ಬಲವಾಗಿ ಹಿಡಿದು ಪ್ರಪಂಚಕ್ಕೆಲ್ಲ ಆದರ್ಶವ್ಯಕ್ತಿಗಳಾಗಿರುವರು. ಸತ್ಯವೇ ಶಾಶ್ವತ. ಸತ್ಯಾನೃತಗಳಿಗೆ ಸ್ಪರ್ಧೆಯುಂಟಾದಾಗ ಪರಮ ಕಾರುಣಿಕನಾದ ಪರಮೇಶ್ವರನು ಅನೃತವನ್ನು ನಾಶಮಾಡಿ ಸತ್ಯವನ್ನು ರಕ್ಷಿಸುವನು ಎಂಬ ವೇದಗಳ ಮುಖ್ಯಬೋಧನೆಯು ಭಾರತೀಯರ ಪ್ರತಿಯೊಂದು ರಕ್ತಕಣದಲ್ಲಿಯೂ ಸೇರಿಹೋಗಿದೆ.[49]

---

47 ಅಸತೋಮಾ ಸದ್ಗಮಯ | ತಮಸೋ ಮಾಜ್ಯೋತಿರ್ಗಮಯ | ಮೃತ್ಯೋರ್ಮಾಮೃತಂಗಮಯ || ಬೃ.ಉಪ.
ಅಗ್ನಿರ್ಮೇವಾಚಿ ಶ್ರಿತಃ | ವಾಗ್ಘೃದಯೇ | ಹೃದಯಂಮಯಿ | ಅಹಮಮೃತೇ | ಅಮೃತಂಬ್ರಹ್ಮಣಿ || ತೈ.ಬ್ರಾ. III. ೧೦-೧೬.
ಪ್ರಜಾಪಶುಭಿರ್ಬ್ರಹ್ಮವರ್ಚಸೇನ ಸುವರ್ಗೇಲೋಕೇ | ಅನೃತಾತ್ಸತ್ಯಮುಪೈಮಿ | ಮಾನುಷಾದ್ದೈವ ಮುಪೈಮಿ | ದೈವೀಂವಾಚಂ ಯಚ್ಛಾಮಿ | ಶಕ್ಷೈರಗ್ನಿಮಿನ್ಧಾನಃ ಉಭೌಲೋಕೌಸನೇಮಹಂ | ಉಭಯೋರ್ಲೋಕಯೋ ಋರ್ಧ್ವಾ | ಅತಿಮೃತ್ಯುಂ ತರಾಮ್ಯಹಮ್ ||—ತೈ. ಬ್ರಾ. II. ೧೫.

48 ಅಮೇಧ್ಯೋ ವೈಪುರುಷೋ ಯದನೃತಂ ವದತಿ—ಶತಪಥ I, ೧, ೧-೧.

49 ಸುವಿಜ್ಞಾನಂ ಚಿಕಿತುಷೇಜನಾಯ ಸಚ್ಚಾಸಚ್ಚ ವಚಸೀ ಪಸ್ಪೃಧಾತೇ |
ತಯೋರ್ಯತ್ಸತ್ಯಂ ಯತರದೃಜೀಯಸ್ತದಿ ತ್ಸೋಮೋಽವತಿ ಹನ್ತ್ಯಸತ್ ||
ಋಗ್. VII. ೧೦೪-೧೨.

**ಇತಿಹಾಸ-ಪುರಾಣಗಳು:** ಪರಮೇಶ್ವರನು ಸತ್ಯ-ಧರ್ಮಕ್ಕೆ ಗ್ಲಾನಿಯುಂಟಾದಾಗ ತಾನೇ ಚರಿತ್ರೆಯಲ್ಲಿ ಪ್ರವೇಶಿಸಿ ಹೇಗೆ ಸತ್ಯವನ್ನೇ ಉದ್ಧರಿಸಿ ದುಷ್ಟರನ್ನು ನಿಗ್ರಹಮಾಡುವನೆಂಬ ವೇದತತ್ತ್ವವನ್ನು ಸ್ತ್ರೀ, ಶೂದ್ರ, ದ್ವಿಜಬನ್ಧುಗಳಿಗೆ ಉಪದೇಶಮಾಡುವದಕ್ಕಾಗಿಯೇ ಇತಿಹಾಸಗಳೂ ಪುರಾಣಗಳೂ ರಚಿತವಾಗಿವೆ. ಇತಿಹಾಸವೆಂದರೆ ಹಿಂದೆ ಹೀಗೆ ಇದ್ದಿತು (ಇತಿ+ಹ+ಆಸ) ಎಂದು ಹೇಳುವ ಗ್ರಂಥ. ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತಗಳೆಂಬ ಐದು ಮುಖ್ಯ ಲಕ್ಷಣಗಳುಳ್ಳ ಪ್ರಾಚೀನಗ್ರಂಥಕ್ಕೆ ಪುರಾಣವೆಂದು ಹೆಸರು. ಸಂಹಿತಾ ಕಾಲದಲ್ಲಿ ದಾನಸ್ತುತಿ, ಗಾಥಾ, ನಾರಾಶಂಸಿ, ಇತಿವೃತ್ತ ಮುಂತಾದ ರೂಪದಲ್ಲಿದ್ದ ಚಾರಿತ್ರಕವಿಷಯಗಳನ್ನು ಕ್ರೋಢೀಕರಿಸಿ ಧರ್ಮಬೋಧೆ ಮಾಡುವದಕ್ಕಾಗಿ ಪುರಾಣಗಳು ಹುಟ್ಟಿದವು. ವ್ಯಾಸರೇ ಎಲ್ಲಾ ಮುಖ್ಯ ಪುರಾಣಗಳನ್ನು ರಚಿಸಿದರೆಂಬ ನಂಬಿಕೆಯಿದೆ. ಭಾರತೀಯ ಸಂಸ್ಕೃತಿಯ ಚರಿತ್ರೆಯಲ್ಲಿ ವ್ಯಾಸರ ಸ್ಥಾನವು ಬಹು ಮುಖ್ಯವಾದುದು. ವೇದಗಳನ್ನು ವಿಂಗಡಿಸಿ, ಪಂಚಮ ವೇದವೆಂದೆನಿಸಿದ ಭಾರತವನ್ನು ರಚಿಸಿ, ಅಷ್ಟಾದಶ ಪುರಾಣಗಳಿಗೂ ಪ್ರವರ್ತಕರಾಗಿ, ಬ್ರಹ್ಮಸೂತ್ರಗಳಲ್ಲಿ ಸಕಲವೇದಾನ್ತತತ್ತ್ವಗಳನ್ನೂ ಪ್ರತಿಪಾದಿಸಿ, ಭಾರತೀಯ ಸಂಸ್ಕೃತಿಯನ್ನು ರಕ್ಷಿಸಿದ ಈ ಮಹಾತ್ಮರನ್ನು ಮಹಾವಿಷ್ಣುವಿನ ಅವತಾರವೆಂದು ಗಣಿಸಿದುದರಲ್ಲಿ ಏನು ಆಶ್ಚರ್ಯ. ಭಗವಾನ್ ಬಾದರಾಯಣರು ಮಹಾಭಾರತ ಯುದ್ಧಕಾಲದಲ್ಲಿ ಉಂಟಾದ ಧರ್ಮವಿಪ್ಲವವನ್ನು ವರ್ಣಿಸಿ ಪರಮೇಶ್ವರನು ಹೇಗೆ ಅವತರಿಸಿ ಅಧರ್ಮವನ್ನು ಅಡಗಿಸಿದನೆಂದು ಹೇಳಿ, ಸ್ವರ್ಗಾರೋಹಣಪರ್ವದಲ್ಲಿ ಕೊನೆಗೆ ಧರ್ಮಕ್ಕೇ ಜಯ, ಧರ್ಮವೇ ಸತ್ಯ, ಧರ್ಮದಿಂದಲೇ ಇತರ ಪುರುಷಾರ್ಥಗಳೂ ಸಿದ್ಧಿಸುವವು ಎಂದು ಕೈಯೆತ್ತಿ ಘಂಟಾಘೋಷವಾಗಿ ಹೇಳಿರುವರು.[50]

ವೈದಿಕ ವಾಙ್ಮಯಕ್ಕೂ ಪುರಾಣಗಳಿಗೂ ಬಹುಳ ಅಂತರವಿದೆಯೆಂದೂ,

---

50 ಮಾತಾಪಿತೃಸಹಸ್ರಾಣಿ ಪುತ್ರದಾರಶತಾನಿಚ | ಸಂಸಾರೇಷ್ವನುಭೂತಾನಿ ಯಾನ್ತಿ ಯಾಸ್ಯನ್ತಿಚಾಪರೇ || ಹರ್ಷಸ್ಥಾನ ಸಹಸ್ರಾಣಿ ಭಯಸ್ಥಾನಶತಾನಿಚ | ದಿವಸೇ ದಿವಸೇ ಮೂಢಮಾವಿಶನ್ತಿ ನಪಣ್ಡಿತಮ್ || ಊರ್ಧ್ವಬಾಹುರ್ವಿರೋಮ್ಯೇಷನಚ ಕಶ್ಚಿಚ್ಛೃಣೋತಿಮಾಂ | ಧರ್ಮಾದರ್ಥಶ್ಚ ಕಾಮಶ್ಚ ಸಕಿಮರ್ಥಂ ನ ಸೇವ್ಯತೇ || ನ ಜಾತು ಕಾಮಾನ್ನ ಭಯಾನ್ನ ಲೋಭಾದ್ಧರ್ಮಂತ್ಯಜೇಜ್ಜೀವಿತಸ್ಯಾಪಿಹೇತೋಃ, ನಿತ್ಯೋಧರ್ಮಃಸುಖದುಃಖೇತ್ವನಿತ್ಯೇ ಜೀವೋನಿತ್ಯೋಹೇತುರಸ್ಯತ್ವನಿತ್ಯಃ || ಇಮಾಂಭಾರತಸಾವಿತ್ರೀಂಪ್ರಾತರುತ್ಥಾಯಯಃಪಠೇತ್ | ಸಭಾರತಫಲಂಪ್ರಾಪ್ಯ ಪರಂಬ್ರಹ್ಮಾಧಿಗಚ್ಛತಿ || ಸ್ವರ್ಗಾರೋಹಣಪರ್ವ

ಸಂಸ್ಕೃತಿಯ ಪ್ರತ್ಯೇಕವಾದ ಎರಡು ಸ್ಥಿತಿಗಳನ್ನು ಸೂಚಿಸುವವೆಂದೂ, ಪುರಾಣಗಳು ಏಕದೇವತಾಪರವಾದುದರಿಂದ ಕೇವಲ ಆಧುನಿಕ ಗ್ರಂಥ ಗಳೆಂದೂ, ಇವುಗಳಲ್ಲಿರುವ ಚರಿತ್ರಾಂಶಗಳು ಕೇವಲ ಕಲ್ಪಿತವೆಂಬುದಾಗಿಯೂ ಕೆಲವರು ಪಾಶ್ಚಾತ್ಯರು ಹೇಳುವರು. ಆದರೆ ಪುರಾಣಗಳಲ್ಲಿ ಅನೇಕವು ಈಚೆಗೆ ರಚಿತವಾಗಿದ್ದರೂ, ಅನೇಕ ಪ್ರಕ್ಷಿಪ್ತ ಭಾಗಗಳನ್ನು ಸೇರಿಸಿದ್ದರೂ, ಸಂಹಿತಾ ಕಾಲದಲ್ಲಿಯೇ ಪುರಾಣ ಪಠನ, ಶ್ರವಣ ಪದ್ಧತಿಯು ಇದ್ದಿತು. ಅತ್ಯಂತ ಪ್ರಾಚೀನವಾದ ಅಶ್ವಮೇಧಯಜ್ಞದಲ್ಲಿ ಒಂದು ವರ್ಷದ ವರೆಗೂ ಕುದುರೆಯು ದೇಶಸಂಚಾರಮಾಡುತ್ತಿರುವಾಗ ದೀಕ್ಷಿತನಾದ ರಾಜನು ಇತಿ ಹಾಸ ವೇದ ಪುರಾಣವೇದವನ್ನು ಪಾರಿಪ್ಲವಾರ್ಥವಾಗಿ ಹೋತೃಮುಖದಿಂದ ಕೇಳಬೇಕೆಂಬ ನಿಯಮವಿದೆ.[51] ಧರ್ಮಸೂತ್ರ ಮತ್ತು ಉಪನಿಷತ್ತುಗಳಲ್ಲಿ ಇತಿಹಾಸಪುರಾಣದ ಉಲ್ಲೇಖವಿದೆ. ಕ್ರಿಸ್ತ ಪೂರ್ವ ಆರನೆಯ ಶತಾಬ್ದದಲ್ಲಿಯೇ ಒಂದು ಭವಿಷ್ಯಪುರಾಣವಿದ್ದಿತೆಂದು ತಿಳಿದುಬರುವುದು. ಪಾಣಿನಿಯೂ ಪುರಾಣ ಗಳೂ ಬ್ರಾಹ್ಮಣಗಳ ಸಮಕಾಲೀನವೆಂದು ಸೂಚಿಸುವನು.[52] ಪುರಾಣಗಳಲ್ಲಿ ಕಂಡುಬರುವ ಅವತಾರ ಕಥೆಗಳೂ ಪ್ರಾಚೀನ ರಾಜವಂಶ ಚರಿತ್ರೆಗಳೂ ವೇದ ಮನ್ತ್ರಗಳ ಆಧಾರದ ಮೇಲೆ ವಿಸ್ತಾರವಾಗಿ ರಚಿತವಾಗಿವೆ. ಪ್ರತಿಯೊಂದು ಪುರಾಣವೂ ಒಂದು ವಿಶ್ವಕೋಶ. ಆಧ್ಯಾತ್ಮಿಕ ವಿಷಯಗಳಲ್ಲದೆ ನ್ಯಾಯ, ರಾಜಕೀಯ ವ್ಯವಸ್ಥೆ, ಶಿಲ್ಪ, ವೈದ್ಯ ಸಾಹಿತ್ಯ, ಅಲಂಕಾರ, ಚಿತ್ರಕಲೆ. ಜ್ಯೋತಿಷ್ಯ, ಮೂರ್ತಿವಿಜ್ಞಾನಮುಂತಾದ ಸಕಲ ಲೋಕೋಪಕಾರಕಗಳಾದ ವಿಷಯಗಳೂ ಅಡಕವಾಗಿವೆ. ಶ್ರೀಹರಿಯೇ ಪುರಾಣ ರೂಪಿ. ಹದಿನೆಂಟು ಪುರಾಣಗಳೂ ಪುರಾಣಪುರುಷನ ಅಂಗಗಳೆಂದು ಪದ್ಮಪುರಾಣವು ಹೇಳು ವುದು.[53] ಶ್ರೀ ಭಾಗವತದಲ್ಲಿ ಅಷ್ಟಾದಶ ಪುರಾಣಗಳ ಗ್ರಂಥಸಂಖ್ಯೆಯು ಹೀಗೆ ಉಕ್ತವಾಗಿದೆ :

---

51 ಶತಪಥ. XIII. ೪, ೫ ; ಆಪ, XX. ೩ ೧–೨ ; ಆಶ್ವ. X, ೭, ೧–೧೦.

52 ಪುರಾಣ ಪ್ರೋಕ್ತೇಷು ಬ್ರಾಹ್ಮಣ ಕಲ್ಪೇಷು–ಪಾಣಿನಿ IV. ೩–೧೦೫. ತುಲ್ಯ ಕಾಲತ್ವಾತ್. ವಾರ್ತಿಕ.

53 ಏಕಂ ಪುರಾಣಂ ರೂಪಂವೈತತ್ರಪಾದ್ಮಂ ಪರಂಮಹತ್ | ಬ್ರಾಹ್ಮಂ ಮೂರ್ಧಾ ಹರೇರೇವ ಹೃದಯಂ ಪದ್ಮಸಂಜ್ಞಕಮ್ || ವೈಷ್ಣವಂ ದಕ್ಷಿಣೋಬಾಹುಃ ಶೈವಂವಾಮೋ ಮಹೇಶಿತುಃ | ಊರೂ ಭಾಗವತಂ ಪ್ರೋಕ್ತಂ ನಾಭಿಃಸ್ಯಾನ್ನಾರದೀಯಕಮ್ || ಮಾರ್ಕ ಣ್ಡೇಯಂಚ ದಕ್ಷಾಂಘ್ರಿರ್ವಾಮೋಹ್ಯಾಗ್ನೇಯಮುಚ್ಯತೇ | ಭವಿಷ್ಯಂ ದಕ್ಷಿಣೋಜಾನು ರ್ವಿಷ್ಣೋರೇವ ಮಹಾತ್ಮನಃ || ಬ್ರಹ್ಮವೈವರ್ತಸಂಜ್ಞಂತು ವಾಮಜಾನು ರುದಾಹೃತಃ | ಲೈಂಗಂತುಗುಲ್ಫಕಂದಕ್ಷಂ ವಾರಾಹಂ ವಾಮಗುಲ್ಫಕಮ್ || ಸ್ಕಾನ್ದಂ ಪುರಾಣಂಲೋಮಾನಿ

| | | | |
|---|---|---|---|
| ಬ್ರಾಹ್ಮ | —೧೦೦೦೦ | ಬ್ರಹ್ಮವೈವರ್ತ | —೧೮೦೦೦ |
| ಪಾದ್ಮ | —೫೫೦೦೦ | ಲಿಂಗ | —೧೧೦೦೦ |
| ವಿಷ್ಣು | —೨೩೦೦೦ | ವಾರಾಹ | —೨೪೦೦೦ |
| ಶಿವ (ವಾಯು) | —೨೪೦೦೦ | ಸ್ಕಾನ್ದ | —೮೧೧೦೦ |
| ಭಾಗವತ | —೧೮೦೦೦ | ವಾಮನ | —೧೦೦೦೦ |
| ನಾರದೀಯ | —೨೫೦೦೦ | ಕೂರ್ಮ | —೧೭೦೦೦ |
| ಮಾರ್ಕಣ್ಡೇಯ | — ೯೦೦೦ | ಮತ್ಸ್ಯ | —೧೪೦೦೦ |
| ಅಗ್ನಿ | —೧೫೪೦೦ | ಗರುಡ | —೧೯೦೦೦ |
| ಭವಿಷ್ಯತ್ | —೧೪೫೦೦ | ಬ್ರಹ್ಮಾಣ್ಡ | —೧೨೦೦೦ |

ಒಟ್ಟು ನಾಲ್ಕು ಲಕ್ಷ ಗ್ರಂಥಗಳಿವೆ. ಇವಲ್ಲದೆ ಹದಿನೆಂಟು ಉಪಪುರಾಣಗಳೂ ಇನ್ನೂ ಅನೇಕ ಸ್ಥಲಪುರಾಣಗಳೂ ಪ್ರಚಾರದಲ್ಲಿವೆ. ಇವುಗಳಲ್ಲಿ ವಾಯು, ವಿಷ್ಣು ಮತ್ತು ಪದ್ಮ ಪುರಾಣಗಳು ಕ್ರಿಸ್ತಶಕ ೩೨೦ಕ್ಕೆ ಹಿಂದೆ ರಚಿತವಾದುವು. ಇವು ಸಮುದ್ರಗುಪ್ತನು ಗುಪ್ತಸಾಮ್ರಾಜ್ಯವನ್ನು ವಿಸ್ತರಿಸುವದಕ್ಕೆ ಮುಂಚೆ ಇದ್ದ ಗುಪ್ತರ ರಾಜ್ಯವನ್ನು ಮಾತ್ರ ವರ್ಣಿಸುವವು.[54] ಪುರಾಣರಚನೆಯಲ್ಲಿ ಮೂರು ಮುಖ್ಯ ಘಟ್ಟಗಳಿವೆ. ಭಾರತ ಯುದ್ಧದಿಂದ ಮಹಾ ಪದ್ಮನನ್ದನ ವರೆಗೆ ಒಂದು ಘಟ್ಟ. ಮಹಾಪದ್ಮನು ಕ್ಷತ್ರಿಯ ರಾಜರನ್ನು ನಾಶಮಾಡಿ ಶೂದ್ರಸಾಮ್ರಾಜ್ಯವನ್ನು ಸ್ಥಾಪಿಸಿದುದರಿಂದ ಈ ಕಾಲವನ್ನು ಕೆಲವು ಪುರಾಣಗಳು ಕಲಿಸನ್ಧ್ಯೆಯೆಂದು ಕರೆದಿವೆ. ಕ್ರಿಸ್ತಪೂರ್ವ ೩೨೨ ರಿಂದ ಕ್ರಿಸ್ತ ಶಕ ೩೨೦ ವರೆಗೆ ಎರಡನೆಯ ಘಟ್ಟ. ಅನಂತರ ಗುಪ್ತ ಮತ್ತು ಹರ್ಷ ಸಾಮ್ರಾಜ್ಯ ಕಾಲದಲ್ಲಿ ಶ್ರೀಭಾಗವತ, ದೇವೀಭಾಗವತ, ಮಾರ್ಕಣ್ಡೇಯ ಮುಂತಾದ ಪುರಾಣಗಳು ರಚಿತವಾದವು. ಆರನೆಯ ಶತಾಬ್ದದ ಲಿಪಿಯಲ್ಲಿ ಬರೆದ ಸ್ಕಾನ್ದ ಪುರಾಣದ ಒಂದು ಪ್ರತಿಯು ನೇಪಾಳ ಸಂಸ್ಥಾನದ ಪುಸ್ತಕ ಭಣ್ಡಾರದಲ್ಲಿ ಸಿಕ್ಕಿರುವದರಿಂದ ಈ ಪುರಾಣವು ಆ ಕಾಲಕ್ಕೆ ಹಿಂದಿನದು. ಆದರೆ ಈಗ ಪ್ರಚಾರದಲ್ಲಿರುವ ಸ್ಕಾನ್ದ ಪುರಾಣದಲ್ಲಿ ಅನೇಕ ಸ್ಥಲ ಪುರಾಣಗಳೂ ಮತಮಾಹಾತ್ಮ್ಯಗಳೂ ಸೇರಿಕೊಂಡಿವೆ. ಅಗ್ನಿ, ಗರುಡ, ಬ್ರಹ್ಮ ವೈವರ್ತ

---

ತ್ವಗಸ್ಯ ವಾಮನಂಸ್ಮೃತಮ್ | ಕೌರ್ಮಂಪೃಷ್ಠಂಸಮಾಖ್ಯಾತಂ ಮಾತ್ಸ್ಯಂ ಮೇಧಃ ಪ್ರಕೀರ್ತ್ಯತೇ || ಮಜ್ಜಾತುಗಾರುಡಂಪ್ರೋಕ್ತಂ ಬ್ರಹ್ಮಾಣ್ಡಮಸ್ಥಿಗೀಯತೇ | ಏವಮೇವಾ ಭವದ್ವಿಷ್ಣುಃ ಪುರಾಣಾವಯವೋ ಹರಿಃ || ಪಾದ್ಮ. 42, 3,8.

[54] ಅನು ಗಂಗಾ ಪ್ರಯಾಗಂ ಚ ಸಾಕೇತಂ ಮಗಧಾಂಸ್ತಥಾ. . . ಭೋಕ್ಷ್ಯನ್ತೇಗುಪ್ತ ವಂಶಜಾಃ ||

ಮತ್ತು ಬ್ರಹ್ಮಾಣ್ಡ ಪುರಾಣಗಳು ಕ್ರಿಸ್ತಶಕ ೧೧ ನೆಯ ಶತಾಬ್ದಕ್ಕೆ ಹಿಂದೆ ರಚಿತವಾದುವೆದು ನಿರ್ಧರಿಸಬಹುದು[55].

**ರಾಮಾಯಣ :**[56] ರಾಮಾಯಣದ ಕಥೆಯು ಋಗ್ವೇದದಲ್ಲಿಯೇ (X. 3-3) ಸೂಚಿತವಾಗಿದೆಯೆಂದು ಕೆಲವರು ಊಹಿಸುವರು. ಮಹಾಭಾರತದ ವನಪರ್ವ (ಅಧ್ಯಾಯ ೨೭೨-೨೯೧), ಬೌದ್ಧರ ಜಾತಕಗಳು, ಜೈನಪುರಾಣ ಗಳು, ರಾಮತಾಪಿನೀ ಉಪನಿಷತ್ತು (ಪೂರ್ವ), ಬ್ರಹ್ಮಾಣ್ಡ ಪುರಾಣದ ಅಧ್ಯಾತ್ಮರಾಮಾಯಣ, ಪದ್ಮಪುರಾಣ (ಪಾತಾಳಖಣ್ಡ), ಶ್ರೀಭಾಗವತ, ವಿಶ್ವಾಮಿತ್ರ ಕೃತರಾಮಾಯಣ, ಮೂಲರಾಮಾಯಣ, ಆನನ್ದರಾಮಾಯಣ, ಶತಕಣ್ಠ ರಾಮಾಯಣ, ಜಾವದ್ವೀಪದಲ್ಲಿ ಪ್ರಚಾರವಾಗಿರುವ ರಾಮೋಪಾಖ್ಯಾನ ಇತ್ಯಾದಿ ಗ್ರಂಥಗಳಲ್ಲಿ ರಾಮಕಥೆಯು ಅನೇಕ ವಿಧವಾಗಿ ಕಂಡುಬರುವದು. ವಾಲ್ಮೀಕಿ ರಾಮಾಯಣವು ಆದಿಕಾವ್ಯವೆಂದು ಪ್ರಸಿದ್ಧವಾಗಿದೆ. ವಾಲ್ಮೀಕಿಯ ಶೋಕವು ಶ್ಲೋಕರೂಪವಾಗಿ ಪರಿಣಮಿಸಿತು. ಕಾವ್ಯದೃಷ್ಟಿಯಿಂದ ಇದರಲ್ಲಿ ಕರುಣಾರಸವೇ ಪ್ರಧಾನವು.

ಶ್ರೀರಾಮನು ಚಾರಿತ್ರಿಕ ಪುರುಷನಲ್ಲವೆಂದು ಲಾಸೆನ್, ವೀಬರ್, ಆರ್. ಸಿ. ದತ್ ಮುಂತಾದವರು ಅಭಿಪ್ರಾಯಪಟ್ಟಿದ್ದರು. ಆದರೆ ವಾಲ್ಮೀಕಿ ರಾಮಾಯಣವೂ ಕೂಡ ಶ್ರೀರಾಮನು ಮನುಷ್ಯನೆಂದೇ ಹೇಳುತ್ತದೆ. ಇಕ್ಷ್ವಾಕು, ರಾಮ, ದಶರಥ ಎಂಬ ಹೆಸರುಗಳು ಋಗ್ವೇದದಲ್ಲಿಯೂ ಸಿಕ್ಕುವವು (X. ೬೦-೧; X. ೯೩-೪೧). ಪಾಣಿನಿಯು ಕೋಸಲ-ಕೌಸಲ್ಯಾ, ಕೇಕಯ-ಕೈಕೆಯೀ, ವೈಶ್ರವಣ, ರಾವಣ, ವಿಭೀಷಣ, ವಾಲ್ಮೀಕಿ ಎಂಬ ಪದಗಳ ವ್ಯುತ್ಪತ್ತಿಯನ್ನು ಹೇಳುವನು. ಬೌದ್ಧರ ದಶರಥ ಜಾತಕ, ಸಾಮಜಾತಕ, ವೆಸ್ಸಂತರ ಜಾತಕ, ಸಂಬುಲಜಾತಕ, ಲಂಕಾವತಾರಸೂತ್ರಗಳಲ್ಲಿ ರಾಮಾಯಣ ಕಥೆಯು ಕಂಡುಬರುವದು. ಪುರಾಣಗಳಲ್ಲಿ ಇಕ್ಷ್ವಾಕು ವಂಶಾನುಚರಿತೆಯಲ್ಲಿ ಶ್ರೀರಾಮನ ಕಾಲನಿರ್ಣಯವಿದೆ. ಯಾಕೊಬಿ, ಲೆವಿ, ರೂಬೆನ್

---

55 ಮಹಾವಿದ್ವಾನ್ ಎಂ. ರಾಮಶೇಷಶಾಸ್ತ್ರಿಗಳ ಕರ್ಣಾಟಕ ಟೀಕಾ ತಾತ್ಪರ್ಯಸಹಿತಶ್ರೀ ಭಾಗವತಪುರಾಣದ ಉಪೋದ್ಘಾತವಿಮರ್ಶೆಯಲ್ಲಿ ಪುರಾಣಗಳ ವಿಶೇಷ ವಿಷಯಗಳನ್ನು ಚರ್ಚಿಸಿದ್ದೇವೆ.

56 Jacobi: *Das Rāmāyaṇa*, Bonn, 1893.
Walter Rüben: *Studien zur Text Geschichet de Rāmāyaṇa*. 1936.
Weber: *I. A.* 1872.
Kern: *La legende de Rāma*, 1920.
Fausboll: *Jātakas*. Vol. IV.
F. W. Thomas: *Indian Studies in honour of Lanman.*

ಮುಂತಾದವರು ಶ್ರೀರಾಮನು ಚಾರಿತ್ರಿಕ ವ್ಯಕ್ತಿಯೆಂದು ಹೇಳುವರು. ವಾಲ್ಮೀಕಿ ರಾಮಾಯಣವು ಯಾವಾಗ ರಚಿತವಾಯಿತೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಯಾಕೊಬಿಯು ರಾಮಾಯಣದಲ್ಲಿ ಪಾಟಲೀಪುತ್ರ ನಗರದ ಉಲ್ಲೇಖವಿಲ್ಲವಾದುದರಿಂದಲೂ, ಮಿಥಿಲಾ ಮತ್ತು ವಿಶಾಲ ಪಟ್ಟಣ ಗಳು ಬುದ್ಧನಿಗೆ ಹಿಂದೆಯಿದ್ದಂತೆ ಬೇರೆಬೇರೆಯಾಗಿ ಹೇಳಿರುವದರಿಂದಲೂ, ಕೋಸಲದೇಶದ ರಾಜಧಾನಿಯನ್ನು ಅಯೋಧ್ಯಾ (ಸಾಕೇತ-ಶ್ರಾವಸ್ತಿ ಅಲ್ಲ) ಎಂದೇ ನಿರ್ದೇಶಿಸಿರುವದರಿಂದಲೂ, ಅರಣ್ಯಕಾಣ್ಡದಲ್ಲಿ (XVI-೧೨) ಉತ್ತ ರಾಯಣ ಸಂಕ್ರಮಣಕಾಲದಲ್ಲಿ ಪುಷ್ಯನಕ್ಷತ್ರವಿದ್ದಿತೆಂದು ಹೇಳಿರುವದ ರಿಂದಲೂ, ಕ್ರಿಸ್ತಪೂರ್ವ ಏಳನೆಯ ಶತಾಬ್ದದಲ್ಲಿ ಮೂಲಭಾಗವು ರಚಿತ ವಾಯಿತೆಂದು ನಿರ್ಧರಿಸಿರುವನು. ಮೂಲಭಾಗವು ಪ್ರಥಮಕಾಂಡ ಸ್ವಲ್ಪ ಭಾಗ ಮತ್ತು ಎರಡರಿಂದ ಆರನೆಯ ಕಾಣ್ಡಗಳು. ಮೂಲಗ್ರಂಥದ ಸಮಾಪ್ತಿ:—

> ದಶವರ್ಷಸಹಸ್ರಾಣಿ ದಶವರ್ಷಶತಾನಿ ಚ
> ಭ್ರಾತೃಭಿಃ ಸಹಿತಃಶ್ರೀಮಾನ್ ರಾಮೋರಾಜ್ಯಮಕಾರಯತ್ ||
> (VI ೧೩೧-೧೦೧)

ಈ ಶ್ಲೋಕವೇ ಬೌದ್ಧರ ದಶರಥ ಜಾತಕದ ಪಾಲಿಶ್ಲೋಕಕ್ಕೆ (ದಸವಸ್ಸಸಹ ಸ್ಸಾನಿ . . . ರಾಮೋರಜ್ಜಂ ಅಕಾರಯಿ) ಮೂಲವೆಂದು ಯಾಕೋಬಿ ನಿರ್ಧರಿಸಿರುವನು. ಉತ್ತರ ಕಾಣ್ಡಕ್ಕೆ ಬೇರೆ ಫಲಶ್ರುತಿಯಿರುವದರಿಂದ ಅದು ಪ್ರಕ್ಷಿಪ್ತ. ವನಪರ್ವದಲ್ಲಿರುವ ರಾಮೋಪಾಖ್ಯಾನದಲ್ಲಿ ಸೀತಾಪರಿತ್ಯಾಗ ಕಥೆಯಿಲ್ಲ. ಕಾಳಿದಾಸ, ಭಾಸ, ಭವಭೂತಿಗಳ ಕಾಲಕ್ಕೆ ಈ ಕಥೆಯು ಪ್ರಚಾರಕ್ಕೆ ಬಂದಿದ್ದಿತು. ಭವಭೂತಿಯು ವಾಲ್ಮೀಕಿ ರಾಮಾಯಣದಿಂದ ಎರಡು ಶ್ಲೋಕಗಳನ್ನು ಉದ್ಧರಿಸಿರುವದೇ ಅಲ್ಲದೆ ರಾಮಾಯಣದಲ್ಲಿ ಅಧ್ಯಾಯ ಗಳು (ಸರ್ಗಗಳಲ್ಲಿ) ಇರುವನೆಂದು ಹೇಳುವನು (ಬಾಲಕಾಣ್ಡಸ್ಯಾನ್ತಿ ಮೋಽಧ್ಯಾಯೇ—ಉತ್ತರ ರಾಮಚರಿತ).

ಮೂಲಗ್ರಂಥವಾದ ಎರಡರಿಂದ ಆರನೆಯ ಕಾಣ್ಡಗಳಲ್ಲಿಯೂ ಅನೇಕ ಪ್ರಕ್ಷಿಪ್ತಶ್ಲೋಕಗಳಿವೆಯೆಂದು ತಿಲಕ, ಮಹೇಶ್ವರ, ಗೋವಿಂದರಾಜ, ಉಡಾರಿವರದರಾಜ ಮುಂತಾದ ವ್ಯಾಖ್ಯಾನಕಾರರು ಹೇಳಿರುವರು. ಯಾಕೊ ಬಿಯು ಕಾಶ್ಮೀರ, ವಂಗ ಮತ್ತು "ಸಿ" ಅಥವಾ ದಕ್ಷಿಣದೇಶದ ಮೂರು ಪಾಠಭೇದಗಳಿವೆಯೆಂದು ನಿರ್ಧರಿಸಿರುವನು. ಇವುಗಳಲ್ಲಿ ಪ್ರತಿಯೊಂದರ ಲ್ಲಿಯೂ ಮೂರನೆಯ ಒಂದುಭಾಗವು ಮತ್ತೊಂದು ಪಾಠಾಂತರದಲ್ಲಿ ಸಿಕ್ಕುವ

ದಿಲ್ಲ. ಒಟ್ಟಿನಲ್ಲಿ ವಾಲ್ಮೀಕಿ ರಾಮಾಯಣವು ಕ್ರಿಸ್ತಶಕ ಎರಡನೆಯ ಶತಮಾನ ದಲ್ಲಿ ಆಧುನಿಕ ರೂಪವನ್ನು ಪಡೆಯಿತೆಂದು ಹೇಳಬಹುದು. ಬೌದ್ಧರ ೧೨೧ ಅವದಾನ ಕಥೆಗಳಲ್ಲಿ ಮೊದಲನೆಯದಾದ ರಾಮಕಥೆಯನ್ನು ಕಿ-ಕಿಯು-ಯೆ ಎಂಬವನು ಕ್ರಿಸ್ತಶಕ ೪೭೨ ರಲ್ಲಿ ಚೀಣಾಭಾಷೆಗೆ ಪರಿವರ್ತಿಸಿದನು. ವನಪರ್ವದಲ್ಲಿರುವ ರಾಮೋಪಾಖ್ಯಾನವನ್ನನುಸರಿಸಿ ಟಿಬೆಟ್ ಭಾಷೆಯಲ್ಲಿ ಕ್ರಿಸ್ತಶಕ ೭೦೦ ರಲ್ಲಿ ರಾಮಚರಿತೆಯು ರಚಿತವಾಯಿತು. ಆರನೆಯ ಶತಾಬ್ದದ ಕಾಂಬೋಡಿಯ ಶಾಸನವು ರಾಮಾಯಣ, ಮಹಾಭಾರತ ಪಾರಾಯಣೆಗಾಗಿ ಒಬ್ಬ ರಾಜನು ವ್ಯವಸ್ಥೆಮಾಡಿದಂತೆ ಹೇಳುವುದು. ಚಂಪದೇಶದ ಪ್ರಕಾಶ ಧರ್ಮನೆಂಬ ರಾಜನು (ಕ್ರಿ.ಶ. ೬೫೩-೬೭೯) ವಾಲ್ಮೀಕಿಯ ವಿಗ್ರಹವನ್ನು ಪ್ರತಿಷ್ಠಿಸಿದನು. ಆಂಗೋರ್‌ವಾಟ್, ಬು-ಫೋನ್, ಪ್ರಾಂಬಣಂ ದೇವಾಲಯ ಗಳ ಪ್ರಾಕಾರಗಳ ಮೇಲೆ ರಾಮಾಯಣ ಕಥೆಯು ಚಿತ್ರಿತವಾಗಿದೆ. ಕ್ರಿಸ್ತಶಕ ಒಂದನೆಯ ಶತಾಬ್ದದಲ್ಲಿದ್ದ ಜೈನಕವಿಯಾದ ವಿಮಲಸೂರಿಯು ರಾಮಕಥೆ ಯನ್ನೊಳಗೊಂಡ "ಪಉಮ ಚರಿಅ" (ಪದ್ಮಚರಿತ)ವನ್ನು ರಚಿಸಿರುವನು. ಅನಂತರ ಸ್ವಯಮ್ಭುದೇವ, ತ್ರಿಭುವನಸ್ವಯಮ್ಭು, ಜಸಕಿತ್ತಿ, ಜಿನಸೇನ, ಪುಷ್ಪದನ್ತ ಮುಂತಾದ ಜೈನಕವಿಗಳೂ ರಾಮಕಥೆಯನ್ನು ವರ್ಣಿಸಿರುವರು. ಮಹಾಭಾರತವನ್ನು ಮಾರ್ಪಡಿಸಿದ ಭೃಗುವಂಶದವರೇ ರಾಮಾಯಣಕ್ಕೂ ಪ್ರಕೃತರೂಪವನ್ನು ಕೊಟ್ಟರೆಂದು ಕೆಲವರು ಅಭಿಪ್ರಾಯಪಡುವರು.

**ಮಹಾಭಾರತ** :—ಪಂಚಮವೇದವೆನಿಸಿದ ಮಹಾಭಾರತವನ್ನು ಭೃಗು ಗೋತ್ರದವರು ಪ್ರಕೃತರೂಪಕ್ಕೆ ತಂದರೆಂದು ಡಾ. ಸೂಕ್ಥಂಕರರು ತೋರಿ ಸಿರುವರು.[57] ಮೊದಲು ಜಯ ಎಂಬ ಗ್ರಂಥವು ಕೌರವರ ಪರವಾಗಿದ್ದಿತೆಂದೂ ಅನಂತರ ವೈಷ್ಣವರಿಂದ ವಿಪರೀತವಾಯಿತೆಂದೂ ಆದುದರಿಂದ ಈ ಮಹಾ ಗ್ರಂಥದಲ್ಲಿ ಪರಸ್ಪರ ವಿರುದ್ಧಾಂಶಗಳಿವೆಯೆಂದೂ ಪಾಶ್ಚಾತ್ಯರು ಹೇಳುವರು. ಮೂಲಗ್ರಂಥವು ಕ್ರಿಸ್ತಪೂರ್ವ ೫೦೦ ಕ್ಕೆ ಮುಂಚೆ ರಚಿತವಾಗಿರಬೇಕು. ಮಹಾಭಾರತದ ಶ್ಲೋಕಗಳು ಬೋಧಾಯನ, ವಸಿಷ್ಠ, ಮನು, ವಿಷ್ಣುಧರ್ಮ ಶಾಸ್ತ್ರಗಳಲ್ಲಿ ಕಂಡುಬರುವವು. ಮೂಲಗ್ರಂಥವು ೨೪೦೦೦ ಗ್ರಂಥ ವಿಸ್ತಾರ ಹೊಂದಿದ್ದಿತೆಂದೂ ಅನಂತರ ಶತಸಾಹಸ್ರ (೧೦೦೦೦೦)ವಾಯಿತೆಂದೂ ನಿರ್ಧರಿಸಿದೆ[58]. ಪಾವೆಲ್ ಪೌಚ ಎಂಬಾತನು ಭಾರತದಲ್ಲಿ ತುಖಾರರ (Yue-chi)

[57] Sukthankar: *Prolegomena to the Mahābhārata*.

[58] ಕ್ವಚಿದ್ಗ್ರಂಥಾನ್ಪ್ರಕ್ಷಿಪನ್ತಿ ಕ್ವಚಿದನ್ತರಿತಾನಪಿ | ಕುರ್ಯುಃ ಕ್ವಚಿಚ್ಚ ವ್ಯತ್ಯಾಸಂ ಪ್ರಮಾದಾತ್ಕ್ವಚಿದನ್ಯಥಾ || ಅನುತ್ಪನ್ನಾ ಅಪಿ ಗ್ರಂಥಾ ವ್ಯಾಕುಲಾ ಇತಿಸರ್ವಶಃ |

ಉಲ್ಲೇಖಿಸಿರುವುದರಿಂದಲ್ಲ ಕ್ರಿಸ್ತಶಕ ಎರಡನೆಯ ಶತಾಬ್ದಕ್ಕನಂತರ ನಾಲ್ಕನೆಯ ಶತಾಬ್ದಕ್ಕೆ ಹಿಂದೆ ಈ ಗ್ರಂಥವು ಪೂರ್ತಿಯಾಯಿತೆಂದು ಹೇಳುವನು. ಅಷ್ಟಾದಶಪರ್ವಗಳಲ್ಲಿ ಅನೇಕ ಪಾಠಾಂತರಗಳೂ, ಪ್ರಕ್ಷಿಪ್ತಭಾಗಗಳೂ ಇವೆ. ನಲೋಪಾಖ್ಯಾನ, ಸನತ್ಸುಜಾತೀಯ, ಶಕುನ್ತಲೋಪಾಖ್ಯಾನ ಮುಂತಾದುವು ಪ್ರಕ್ಷಿಪ್ತಗಳೆಂದು ಕೆಲವರು ಊಹಿಸುವರು. ಆದಿಪರ್ವದಲ್ಲಿ ಸೃಷ್ಟಿವರ್ಣನೆ, ಅಭಿಮನ್ಯು ಚರಿತ್ರೆ, ವನಪರ್ವದ ರಾಮೋಪಾಖ್ಯಾನ, ಸಭಾಪರ್ವದ ಐದನೆಯ ಅಧ್ಯಾಯ ಭಾಗಗಳಿಗೂ ವಾಲ್ಮೀಕಿ ರಾಮಾಯಣಕ್ಕೂ ಅನೇಕ ಸಾಮ್ಯಗಳು ಕಂಡುಬರುವವು. ರಾಮಕಥೆಯನ್ನು ಭಾರ್ಗವರು ವಾಲ್ಮೀಕಿ ರಾಮಾಯಣದಿಂದಲೇ ಮುಖ್ಯವಾಗಿ ಗ್ರಹಿಸಿದರೆಂದು ನಿರ್ಧರಿಸಿದೆ.

**ಭಗವದ್ಗೀತೆ**—ಭಾರತ ಕಥಾವಸ್ತು ವಿವರಣೆಯಲ್ಲಿ ನೀತಿಬೋಧಕಗಳಾದ ಅಧ್ಯಾಯಗಳನ್ನು ಅಸಂಬದ್ಧ ಪ್ರಲಾಪಗಳಂತೆ ಸೇರಿಸಿಲ್ಲ. ಭಗವದ್ಗೀತೆಯ ವಿಷಯವಾಗಿ ಪಾಶ್ಚಾತ್ಯರು ಕೆಲವರು ಪ್ರಕ್ಷಿಪ್ತವೆಂದು ಹೇಳುವರು. ಗೀತೆಯು ಹದಿನೆಂಟು ಅಧ್ಯಾಯಗಳನ್ನೂ ಏಳುನೂರು ಶ್ಲೋಕಗಳನ್ನು ಉಳ್ಳ ಗ್ರಂಥವೆಂದು ಶ್ರೀ ಶಂಕರ, ರಾಮಾನುಜ, ಮಧ್ವ ಮುಂತಾದ ಆಚಾರ್ಯರು ಸ್ಪಷ್ಟವಾಗಿ ಹೇಳಿರುವರು. ಆದರೆ ಭೀಷ್ಮಪರ್ವದಲ್ಲಿ (VII-೪೩) ಶ್ರೀ ಕೃಷ್ಣನು ಹೇಳಿದುದು ೬೨೦, ಅರ್ಜುನನು ೫೭, ಸಂಜಯನು ೬೭, ಧೃತರಾಷ್ಟ್ರನು ೧, ಒಟ್ಟು ೭೪೫ ಶ್ಲೋಕಗಳೆಂದು ಹೇಳಿದೆ. ಅಲ್‌ಬೆರೂನಿಯೂ ೭೪೫ ಶ್ಲೋಕಗಳ ಗ್ರಂಥವೆಂದು ಹೇಳುವನು. ಅಬುಲ್ ಫಸ್ಲ್ ಮತ್ತು ಫೈಸಿ ಪರ್ಷಿಯನ್ ಭಾಷೆಗೆ ೭೪೫ ಶ್ಲೋಕದ ಗ್ರಂಥವನ್ನು ತರ್ಜುಮೆ ಮಾಡಿದರು. ಅಭಿನವಗುಪ್ತ, ರಾಜಾನಕ ರಾಮಕಂಠರು ಇಂತಹ ಗ್ರಂಥಕ್ಕೆ ವ್ಯಾಖ್ಯಾನ ಬರೆದಿರುವರು. ೭೪೫ ಶ್ಲೋಕಗಳುಳ್ಳ ಗೀತೆಯು ವಾಯವ್ಯ ಪ್ರಾಂತ್ಯದಲ್ಲಿ ಕ್ರಿಸ್ತಶಕ ಐದು-ಆರನೆಯ ಶತಾಬ್ದದಿಂದಲೂ ಇದ್ದಿತೆಂದು ಹೇಳಬಹುದು. ಆದರೇ ಶ್ರೀ ಶಂಕರಾಚಾರ್ಯರು ಏಳುನೂರೇ ಶ್ಲೋಕಗಳೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಅದೇ ಪ್ರಮಾಣಭೂತವಾದುದು. ಡಾ. ಬೆಲ್ವಾಳ್ಕರರು ೭೪೫

---

ಉತ್ಪನ್ನಾಃಪ್ರಾಯಶಃಸರ್ವೇ ಕೋಟ್ಯಂಶೋsಪಿನವರ್ತತೇ || ಗ್ರಂಥೋsಪ್ಯೇವಂ ವಿಲುಲಿತಃ ಕಿಮ್ವರ್ಥೋ ದೇವದುರ್ಗಮಃ | ಕಲಾವೇವಂವ್ಯಾಕುಲಿತೇ ನಿರ್ಣಯಾಯ ಪ್ರಚೋದಿತಃ || ಹರಿಣಾನಿರ್ಣಯಾನ್ವಚ್ಮಿ ವಿಜಾನನ್‌ಸ್ತತ್ಪ್ರಸಾದತಃ | ಶಾಸ್ತ್ರಾಂತರಾಣಿ ಸಂಜಾನನ್ ವೇದಾಂಶ್ಚಾಸ್ಯಪ್ರಸಾದತಃ || ದೇಶೇದೇಶೇ ತಥಾ ಗ್ರಂಥಾನ್ ದೃಷ್ಟ್ವಾಚೈವಪೃಥಗ್ವಿಧಾನ್ || ಮಹಾಭಾರತ ತಾತ್ಪರ್ಯ ನಿರ್ಣಯ. II-3 ff.

ಶ್ಲೋಕಗಳ ಗೀತೆಯು ಪ್ರಾಚೀನವಲ್ಲವೆಂದು ಸಪ್ರಮಾಣವಾಗಿ ತೋರಿಸಿರುವರು.

ಮಹಾಭಾರತ ಯುದ್ಧ ನಡೆಯುತ್ತಿದ್ದಾಗಲೇ ಗೀತೆಯು ಉಪದೇಶವಾಯಿತೆಂದು ಸಾಂಪ್ರದಾಯಕರು ಹೇಳುವದು ಅಸಂಭವವಲ್ಲ. ಮಹಾಭಾರತ ಯುದ್ಧವು ಕ್ರಿಸ್ತಪೂರ್ವ ೩೧೦೧ ರಲ್ಲಿ ನಡೆಯಿತೆಂದು ಜ್ಯೋತಿಷ ಗ್ರಂಥಗಳಿಂದಲೂ ಐಹೊಳೆ ಶಾಸನದಿಂದಲೂ ತಿಳಿದುಬರುವದು. ಇತರ ಪಂಡಿತರ ವಿವಿಧಾಭಿಪ್ರಾಯಗಳನ್ನು ಸೂಚಿಸಿರುವರು.[59] ಕೆಲವರು ಶ್ರೀ ಕೃಷ್ಣನು ಚಾರಿತ್ರಕ ವ್ಯಕ್ತಿಯೇ ಅಲ್ಲವೆಂದೂ ಹೇಳಿರುವರು. ಮತ್ತೆ ಕೆಲವರು ಮಹಾಭಾರತದ ಅಕ್ಷಕ್ರೀಡೆ, ದ್ರೌಪದೀ ಮಾನಭಂಗ ಮುಂತಾದ ಕಥೆಗಳು ಋಗ್ವೇದದಲ್ಲಿಯೇ ಸೂಚಿತವಾಗಿದೆಯೆಂದು ಅಭಿಪ್ರಾಯಪಡುವರು.[60]

ಭಗವದ್ಗೀತೆಗೆ ಹಿಂದೆ ಎಷ್ಟೋ ವ್ಯಾಖ್ಯಾನಗಳು ಹುಟ್ಟಿದವು. ಈಗಲೂ ಎಷ್ಟೋ ಹುಟ್ಟುತ್ತಿವೆ. ತಮ್ಮ ತಮ್ಮ ಇಷ್ಟಾನುಸಾರ ಗೀತೆಗೆ ಅರ್ಥವನ್ನು ಕಲ್ಪಿಸುತ್ತಿರುವರು. ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿ, ಸಾಂಖ್ಯಯೋಗ, ಹಠಯೋಗ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ದ್ವೈತಾದ್ವೈತ, ಪ್ರಾಣವಾದ ಮುಂತಾದ ಸಿದ್ಧಾಂತಗಳೇ ಗೀತೆಯ ತಾತ್ಪರ್ಯವೆಂದು ಆಯಾ ಮತದವರು ಪ್ರತಿಪಾದಿಸುತ್ತಿರುವರು. ಹದಿನೆಂಟು ಅಧ್ಯಾಯಗಳನ್ನು ಸಾಮಾನ್ಯವಾಗಿ ಎಲ್ಲಾ ಆಚಾರ್ಯರೂ ಆರು ಆರು ಅಧ್ಯಾಯಗಳಂತೆ ಮೂರು ಷಟ್ಕಗಳನ್ನಾಗಿ ವಿಭಾಗಿಸಿರುವರು. ಅದ್ವೈತದೃಷ್ಟಿಯಿಂದ ಈ ಮೂರು ಭಾಗಗಳು ತತ್, ತ್ವಂ, ಅಸಿ ಎಂಬ ಮೂರು ಪದಾರ್ಥಗಳ ವಿಷಯಕವಾಗಿವೆ. ಯಾಮುನಾಚಾರ್ಯರ ಗೀತಾರ್ಥ ಸಂಗ್ರಹದಲ್ಲಿ ಪ್ರಥಮ ಷಟ್ಕವು ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿ ಎಂಬ ಯೋಗಗಳು ಆತ್ಮಾವಲೋಕನೆಯನ್ನು ಪಡೆಯಲು ಸಾಧಕಗಳೆಂದೂ, ಎರಡನೆಯ ಷಟ್ಕವು ಭಕ್ತಿಯೇ ಅತ್ಯಂತ ಉತ್ತಮಸಾಧನ

---

[59] ಮಹಾಭಾರತ ಯುದ್ಧದ ಕಾಲ—ಪಾರ್ಜಿತರ್-ಕ್ರಿ.ಪೂ. ೯೫೦ ; ಪ್ರಧಾನ್—ಕ್ರಿ.ಪೂ. ೧೧೫೧ ; ಡಾ. ಶ್ಯಾಮಶಾಸ್ತ್ರಿ—ಕ್ರಿ.ಪೂ. ೧೯೧೧ ; ರಾಜತರಂಗಿಣೀ—ಕ್ರಿ.ಪೂ. ೨೪೪೮ ; ಗರ್ಗ ಮತ್ತು ವರಾಹಮಿಹಿರ—ಕ್ರಿ.ಪೂ. ೨೪೪೮ ಇತ್ಯಾದಿ.

[60] ಪ್ರಮಾ ಯುಯುಜೇಪ್ರಯುಜೋಜನಾನಃ ವಹಾಮಿ ಸ್ಮ ಪೂಷಣಮಸ್ತರೇಣ | ವಿಶ್ವೇದೇವಾಸೋ ಅಧ ಮಾಪುರಕ್ಷನ್ ದುಶ್ಶಾಸುರಾಗಾದಿತಿ ಘೋಷ ಆಸೀತ್ || ಸಂ ಮಾ ತಪನ್ತ್ಯಭಿತಃ ಸಪತ್ನೀರಿವ ಪರ್ಶವಃ | ನಿಬಾಧತೇ ಅಮತಿಃ ನಗ್ನತಾ ಜಸುರ್ವೇರ್ನವೇ ವೀಯತೇ ಮತಿಃ || . . . ಅಕ್ಷೈರ್ಮಾ ದೀವ್ಯಃ ಕೃಷಿಮಿತ್ಕೃಷಸ್ವ ವಿತ್ತೇರಮಸ್ವ ಬಹುಮನ್ಯಮಾನಃ | ತತ್ರಗಾವಃ ಕಿತವ ತತ್ರ ಜಾಯಾ ತನ್ಮೇವಿಬಕ್ಷ್ಟಿ ಸವಿತಾಯಮರ್ಯಃ ||

ಋಗ್. I. ೧೬೪ ; ೧೬೫.

ವೆಂದೂ, ಮೂರನೆಯ ಷಟ್ಕವು ಪ್ರಕೃತಿ, ಪುರುಷ, ಪುರುಷೋತ್ತಮ ಮತ್ತು ಶರಣಾಗತಿ ವಿಷಯವಾಗಿದೆಯೆಂದೂ—ಹೇಳಿದೆ. ಇತರ ಆಚಾರ್ಯರೂ ಪ್ರಸ್ಥಾನತ್ರಯಗಳಲ್ಲಿ ಒಂದಾದ ಗೀತೆಗೆ ತಮ್ಮ ತಮ್ಮ ಮತಾನುಸಾರವಾಗಿ ವ್ಯಾಖ್ಯಾನಗಳನ್ನು ರಚಿಸಿರುವರು. ಒಟ್ಟಿನಲ್ಲಿ ಗೀತೆಯು ಕರ್ಮಕ್ಕೂ ಈಶ್ವರಾನುಗ್ರಹಕ್ಕೂ ಸಮನ್ವಯವನ್ನು ಕಲ್ಪಿಸಿದೆಯೆಂದು ಹೇಳಬಹುದು. ಪ್ರಪಂಚದಲ್ಲಿರುವ ಮತಗಳಲ್ಲೆಲ್ಲ ಸ್ವಲ್ಪಮಟ್ಟಿಗೆ ಗುಣಾಂಶಗಳು ಕಂಡು ಬಂದರೂ ಆಧುನಿಕ ಕಾಲದ ಸಮಸ್ಯೆಗಳಿಗೆ ಭಗವದ್ಗೀತೆಯು ಸಂದೇಶವೇ ಸಮರ್ಪಕವಾದ ಉತ್ತರವೆಂದು ಪಾಶ್ಚಾತ್ಯರು ಕೂಡ ಅಂಗೀಕರಿಸುತ್ತಿರುವರು.[61]

ಮಹಾಭಾರತ ರಾಮಾಯಣಗಳ ರಚನಾಕಾಲವು ಯಾವುದೇ ಆಗಲಿ ಈ ಗ್ರಂಥಗಳ ಮಹಿಮೆಯು ಭಾರತೀಯ ಜನಜೀವನದಲ್ಲಿ ಇದುವರೆಗೂ ಕಂಡುಬರುವದು. ಸಿಲ್ವೈನ್‌ಲೆವಿ ಗೀತೆಯೇ ಮಹಾಭಾರತಕ್ಕೆಲ್ಲ ಕೇಂದ್ರವೆಂದೂ, ಗೀತಾರ್ಥವನ್ನು ವಿಶದೀಕರಿಸುವದಕ್ಕಾಗಿಯೇ, ಅನುಷ್ಠಾನದಲ್ಲಿ ತರುವದಕ್ಕಾಗಿಯೇ ಮಹಾಭಾರತವು ರಚಿತವಾಯಿತೆಂದು ಹೇಳುವನು. ಭಾರತ ರಾಮಾಯಣಗಳ ಕಥಾವಸ್ತುವು ಅತ್ಯಂತ ಪ್ರಾಚೀನವಾದ ಉಪಾಖ್ಯಾನಗಳು. ಆದುದರಿಂದ ಈ ಕಥೆಗಳು ಭರತಖಂಡದ ವಿವಿಧ ಭಾಗಗಳಲ್ಲಿ ಹರಡಿದಂತೆಲ್ಲ ನೂತನಾಂಶಗಳು ಸೇರಿಸಲ್ಪಟ್ಟವು. ಆದರೂ ಮೂಲಗ್ರಂಥಕಾರರಾದ ಮನ್ತ್ರಕೃತ್ ವಾಲ್ಮೀಕಿ ಋಷಿ, ಭಗವಾನ್ ಬಾದರಾಯಣರ ಉದ್ದೇಶಕ್ಕೆ ವಿರುದ್ಧವಾಗಿಲ್ಲ. ಮಹಾಭಾರತದಲ್ಲಿ ಕ್ಷತ್ರಿಯರಾಜರ ಆಸ್ಥಾನಕವಿಗಳ ರಚನೆಗಳು, ನೀತಿಬೋಧಕಗಳಾದ ಋಷ್ಯಾಶ್ರಮಗಳ ಉಪಾಖ್ಯಾನಗಳು, ಸ್ಥಲಪುರಾಣಗಳು, ಯಜ್ಞಶಾಲೆಗಳಲ್ಲಿ ಹುಟ್ಟಿದ ಪೂರ್ವಮೀಮಾಂಸಕರ ಇತಿಹಾಸಗಳು, ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆಯಿಂದ ಉಗಮವಾದ ತತ್ತ್ವಶಾಸ್ತ್ರ, ನೀತಿಶಾಸ್ತ್ರ, ಅರ್ಥಶಾಸ್ತ್ರ, ಕಾಮಶಾಸ್ತ್ರ, ಧರ್ಮಶಾಸ್ತ್ರ

---

[61] When I came across the Gīta, the gospel of our Lord Krishna, so wonderfully akin in spirit to the New Testament, but infinitely superior to it in philosophical clarity, I was lifted right out of myself. . . . These words, the deepest ever written by man or God, words which seem childishly simple until one starts working them out, and then . . . well, I know that it took me twenty years to see only the range of their implication. "The Lord regards not merit or demerit nor do men suffer because of sin, but because their knowledge is veiled by ignorance. But ignorance is destroyed by the knowledge of the Self, through it the Supreme reveals Himself."

NIKOLAI GUBSKY: *Angry Dust*, p. 181.

ಮುಂತಾದ ಶಾಸ್ತ್ರಗಳೂ, ಪೌರಾಣಿಕ ಕಥೆಗಳೂ, ದೇವತಾಸ್ತೋತ್ರಗಳೂ—ಇವೆಲ್ಲವೂ ಅಡಕವಾಗಿವೆ. ಮಹಾಭಾರತದ ಗದ್ಯಶೈಲಿಯು ಬ್ರಾಹ್ಮಣಗಳ ಶೈಲಿಯನ್ನು ಹೋಲುವದು.

ಮಹಾಭಾರತವು ಪ್ರಕೃತರೂಪವನ್ನು ಪಡೆದ ಕಾಲದಲ್ಲಿ ಸನಾತನ ಧರ್ಮಕ್ಕೂ ಗೀರ್ವಾಣಭಾಷೆಗೂ ಗ್ಲಾನಿಯುಂಟಾಗಿದ್ದಿತು. ಬೌದ್ಧರ ಶತಸಾಹಸ್ರಿಕಾ ಪ್ರಜ್ಞಾಪಾರಮಿತಾ ಮತ್ತು ವಿನಯ, ಗುಣಾಢ್ಯನು ಪೈಶಾಚಿಯಲ್ಲಿ ರಚಿಸಿದ ಬೃಹತ್ಕಥಾ ಮುಂತಾದ ವಿಸ್ತಾರಗ್ರಂಥಗಳು ರಚಿತವಾಗುತ್ತಿದ್ದ ಸಮಯದಲ್ಲಿ, ಸನಾತನ ಮತವನ್ನುದ್ಧರಿಸುವದಕ್ಕಾಗಿ ಸರ್ವಜನರಿಗೂ ತಿಳಿದಿದ್ದ ಸ್ವದೇಶೀಯವಾದ ಕಥಾವಸ್ತುವನ್ನು ಮಹಾಭಾರತದ ಕವಿಯು ಆರಿಸಿಕೊಂಡು ಮಹಾಯಾನ ಪಂಥದ ಭಕ್ತಿಮಾರ್ಗವನ್ನು ಪ್ರತಿಭಟಿಸಿ ವೈದಿಕವಾದ ಭಕ್ತಿಮಾರ್ಗವನ್ನು ಬೋಧಿಸುವದಕ್ಕಾಗಿ ಈ ಐದನೆಯ ವೇದವೆಂಬ ಗ್ರಂಥವನ್ನು ರಚಿಸಿದನು. ಸಾಂಖ್ಯ—ಯೋಗಕ್ಕೂ ವೇದಾಂತಕ್ಕೂ ಸಮನ್ವಯಮಾಡಿರುವನು. ಅಲ್ಲದೆ ಬೌದ್ಧರೂ, ಜೈನರೂ, ಗುಣಾಢ್ಯನಂತಹ ಕವಿಗಳೂ ಪ್ರಾಕೃತವಾಙ್ಮಯವನ್ನೇ ಬೆಳಸುತ್ತಿದ್ದುದರಿಂದ ಈ ಚಳುವಳಿಯನ್ನು ವಿರೋಧಿಸಿ ಈ ಮಹಾಕವಿಯು ದೇವಭಾಷೆಯನ್ನು ದೇಶಭಾಷೆಯನ್ನಾಗಿ ಮಾಡಿದನು. ಮತ್ತು ಶಕ, ಯವನ, ಹೂಣ, ಮ್ಲೇಚ್ಛ ಮುಂತಾದ ವಿದೇಶೀಯರೂ, ನೈರಾತ್ಮ್ಯವಾದಿಗಳೂ ಭರತಖಂಡದ ಧರ್ಮ, ಸಂಸ್ಕೃತಿ, ಸ್ವಾತಂತ್ರ್ಯಗಳನ್ನು ನಾಶಮಾಡುತ್ತಿದ್ದ ಸಮಯದಲ್ಲಿ ಭಾರತೀಯತೆಯನ್ನು ಕಾಪಾಡಿದುದು ಮಹಾಭಾರತ.[62] ಹೀಗೆ ಯಾವ ದೃಷ್ಟಿಯಿಂದ ಅವಲೋಕಿಸಿದರೂ ಕ್ರಿಸ್ತಶಕದ ಆರಂಭ ಶತಮಾನಗಳಿಂದ ಭಾರತೀಯ ಸಂಸ್ಕೃತಿಯನ್ನು ರಕ್ಷಿಸಿಕೊಂಡು ಬಂದವರು ವಾಲ್ಮೀಕಿ, ವ್ಯಾಸರು.

---

[62] The Mahābhārata is at the same time the announcement of a new faith and the speculum of kings and warriors, the deposit of the heroic religious, juridic, moral traditions of the Indian Nation. It is the greatest cultural battle for the resurrection of India threatened with denationalisation by foreign domination and by the universalistic religion of the Buddha.

PISANI: *The Rise of the Mahā Bhārata.*

# ೫. ಆಧ್ಯಾತ್ಮಿಕಸತ್ಯಾನ್ವೇಷಣೆ

ಧರ್ಮಸ್ಯಚರಣಂಶ್ರೇಯೋ ಧರ್ಮಜ್ಞಾನಂತು ದುಷ್ಕರಮ್ |
ಯಃಸತಾಂಧಾರಕೋ ನಿತ್ಯಂ ಸಧರ್ಮಇತಿ ನಿಶ್ಚಯಃ ||

ಮಹಾಭಾರತ.

ಭಾರತೀಯ ಸಂಸ್ಕೃತಿಯ ಮುಖ್ಯ ಲಕ್ಷಣವು ಆಧ್ಯಾತ್ಮಿಕ. ಮೋಕ್ಷ, ಶಾಂತಿ, ಪ್ರಪಂಚೋಪಶಮ, ನಿರ್ವಾಣ ಇತ್ಯಾದಿ ಪದಗಳಿಂದ ಸೂಚಿಸಲ್ಪಡುವ ಪರಮಪುರುಷಾರ್ಥವೇ ಆಧ್ಯಾತ್ಮಿಕ ವಿವೇಚನೆಯ ಧ್ಯೇಯ. ಪ್ರಪಂಚ ಸಂಸ್ಕೃತಿಗಳಲ್ಲೆಲ್ಲ ಅತ್ಯಂತ ಪ್ರಾಚೀನ ಮತ್ತು ಸುವ್ಯವಸ್ಥಿತವಾದ ಧರ್ಮಮಾರ್ಗವು ಭರತಖಂಡದಲ್ಲಿಯೇ ಕಂಡುಬರುವದು. ಸಂಹಿತಾಕಾಲಕ್ಕೆ (ಕ್ರಿ. ಪೂ. ೧೦,೦೦೦) ಹಿಂದೆಯೇ ಆಧ್ಯಾತ್ಮವಿವೇಚನೆಯು ಬೆಳೆದಿದ್ದಿತು.

ಕೇವಲ ಪ್ರಾಚೀನತೆಯೇ ಅಲ್ಲದೆ ವಿವೇಚನಾಸ್ವಾತಂತ್ರ್ಯವೂ ಭಾರತೀಯರ ಆಧ್ಯಾತ್ಮಿಕತೆಯ ಲಕ್ಷಣ. ಆದುದರಿಂದ ಅನೇಕ ದರ್ಶನಗಳು ಭರತಖಂಡದಲ್ಲಿ ಹುಟ್ಟಿದವು, ಬೆಳೆದವು, ಮರೆಯಾದವು. ವೈದಿಕ—ಅವೈದಿಕ, ಆರ್ಯ—ಅನಾರ್ಯ, ಸನಾತನ—ಅಧುನಾತನ, ಔತ್ತರೇಯ—ದಾಕ್ಷಿಣಾತ್ಯ, ಸ್ವದೇಶೀಯ—ವಿದೇಶೀಯ ಮತಗಳು ಬೇರೆ ಬೇರೆ ಕಾಲಗಳಲ್ಲಿ, ಸನ್ನಿವೇಶಗಳಲ್ಲಿ, ಹುಟ್ಟಿ ಅನುಷ್ಠಾನದಲ್ಲಿರುವವು. ಆಯಾಮತಗಳ ಸ್ವಯೂಥ್ಯರಲ್ಲಿಯೇ ಅನೇಕಾಂಶಗಳಲ್ಲಿ ಸ್ವತಂತ್ರಾಭಿಪ್ರಾಯಗಳಿಗೆ ಅವಕಾಶವಿದೆ. ಮುಖ್ಯ ತತ್ವಗಳಲ್ಲಿ ಎಂತಹ ಕಟ್ಟುನಿಟ್ಟಾದ ವ್ಯವಸ್ಥೆಯಿದ್ದರೂ ಮೂಲತತ್ವಕ್ಕೆ ವಿರೋಧವಿಲ್ಲದ ಪಕ್ಷದಲ್ಲಿ ಸ್ವಾತಂತ್ರ್ಯಕ್ಕೆ ಅವಕಾಶವಿದೆ.

ಮೂರನೆಯ ಅಂಶವೇನೆಂದರೆ ಭಾರತೀಯ ಮತಗಳಲ್ಲಿ ಕಂಡುಬರುವ ಸಹನೆ. ಈ ಸಹನೆ ಕೇವಲ ಭಾವನಾಜನ್ಯವಲ್ಲ. ಅಸಹನೆಯನ್ನು ಸಹಿಸುವದು ಸಹನಾವಂತರಿಗೂ ಸಹ ಸಾಧ್ಯವಲ್ಲವಾದುದರಿಂದ ಸ್ವಮತಸ್ಥಾಪನೆ. ಪರಮತಖಂಡನೆಗಳು ನಡೆದುಬಂದಿವೆ. ಆದರೂ ಯಾವ ದರ್ಶನವನ್ನೂ ಕೇವಲ ಸ್ವಕಪೋಲಕಲ್ಪಿತವೆಂದಾಗಲೀ ಸಾಂಕರ್ಯವಿಲ್ಲದ್ದೆಂದಾಗಲೀ ಹೇಳಲು ಸಾಧ್ಯವಲ್ಲ. ಅತಿವಾದ, ಜಲ್ಪ, ವಿತಂಡಾ ಮುಂತಾದುವೂ ಉಂಟು. ಇದು ತರ್ಕಸಮಯದಲ್ಲಿ. ಮೂಲತತ್ವಗಳನ್ನು ಪರೀಕ್ಷಿಸಿದರೆ ಚಾರ್ವಾಕರ ಈಶ್ವರ ಮತ್ತು ಆತ್ಮನಿರಾಕರಣವಾದವು ಇತರ ಮತಗಳಲ್ಲಿಯೂ ಸ್ವಲ್ಪ ಕಂಡುಬರುವದು. ಪ್ರಾಚೀನ

ಮೀಮಾಂಸಕರನ್ನೂ ಬೌದ್ಧರನ್ನೂ ಸಾಂಖ್ಯರನ್ನೂ ಅರ್ಥಲೋಕಾಯತ ರೆಂದೂ ಹೇಳಬಹುದು. ಅವೈದಿಕವೆನಿಸಿದ ಬೌದ್ಧಮತದಲ್ಲಿ ವೈದಿಕ ತತ್ತ್ವ ಗಳನ್ನು ಕಾಣಬಹುದು. ಉತ್ಕಟ ವೈರಾಗ್ಯವನ್ನು ಬೋಧಿಸುವದಕ್ಕಾಗಿ ಉಪನಿಷತ್ತುಗಳ ಮೂಲಕವಾಗಿಯೇ ಬೌದ್ಧದರ್ಶನವು ಹೊರಟಿತೆಂದು ಕುಮಾರಿಲರೂ ಒಪ್ಪಿರುತ್ತಾರೆ. ಸಾಂಖ್ಯದರ್ಶನದ ನಿರೀಶ್ವರವಾದ, ಯೋಗ ದರ್ಶನದ ದ್ವೈತವಾದಗಳೂ ಇತರ ದರ್ಶನಗಳೊಡನೆ ಸಂಬಂಧವನ್ನು ಹೊಂದಿವೆ. ಜೈನದರ್ಶನದ ಅನೈಕಾಂತವಾದಕ್ಕೂ ವೈದಿಕವಾದ ಸದಸದ್ವಿ ಲಕ್ಷಣವಾದಕ್ಕೂ ಸಾಮ್ಯಗಳನ್ನು ತೋರಿಸಬಹುದು. ನ್ಯಾಯವೈಶೇಷಿಕ ದರ್ಶನಕ್ಕೂ ಬೌದ್ಧಮತಕ್ಕೂ ಕೆಲವು ಹೋಲಿಕೆಗಳಿರುವದರಿಂದ ಅದನ್ನು ಅರ್ಧವೈನಾಶಿಕವೆಂದು ಹೇಳಲಾಗಿದೆ. ಅದ್ವೈತದಲ್ಲಿ ಸಾಂಖ್ಯ ಸೌಗತ ಮತ್ತು ಭಾಟ್ಟ ಮತಗಳ ಸಾಂಕರ್ಯವಿದೆಯೆಂದೂ, ಇದು ಪ್ರಚ್ಛನ್ನ ಬೌದ್ಧಮತ ವೆಂದೂ ಕೆಲವರು ಹೇಳುವರು. ಬೌದ್ಧಮತದ ಮೂಲತತ್ತ್ವಗಳೂ ವೇದ ಮೂಲವೇ ಆಗಿರುವದರಿಂದ ಅದ್ವೈತಕ್ಕೆ ಇದರಿಂದ ಕುಂದುಬಾರದು. ಮತ್ತು ಶಾಂತರಕ್ಷಿತನು ತನ್ನ ತತ್ತ್ವಸಂಗ್ರಹದಲ್ಲಿ ಬೌದ್ಧರ ದೃಷ್ಟಿಯಿಂದ ಅದ್ವೈತದಲ್ಲಿ ಆತ್ಮಾಸ್ತಿತ್ವವಾದನೆಂಬ ಅಲ್ಪಾಪರಾಧವಿದೆಯೆಂದು ಹೇಳಿರುವನು. ಆದರೆ ಬೌದ್ಧಮತದ ಪ್ರಕ್ರಿಯಗಳನ್ನು ಚೆನ್ನಾಗಿ ವಿಮರ್ಶಿಸಿ ಗೌಡಪಾದರು ಅದ್ವೈತದ ವೈಶಿಷ್ಟ್ಯವನ್ನು "ನೈತದ್ಬುದ್ಧೇನ ಭಾಷಿತಮ್" ಎಂದು ಸ್ಪಷ್ಟವಾಗಿ ಸೂಚಿ ಸಿರುವರು. ವೈಷ್ಣವ ಮತ್ತು ಶೈವವಿಶಿಷ್ಟಾದ್ವೈತವಾದಗಳಲ್ಲಿ ಸಾಂಖ್ಯ, ಪ್ರಾಭಾಕರ ಮತ್ತು ಯೋಗದರ್ಶನಗಳ ಅನೇಕಾಂಶಗಳು ಕಂಡುಬರುವವು, ಹಾಗೆಯೇ ಶೈವ ಮತ್ತು ವೈಷ್ಣವದ್ವೈತಿಗಳು ತಮ್ಮ ಈಶ್ವರನು ನಿಮಿತ್ತ ಕಾರಣನು ಮಾತ್ರ, ಜೀವ ತಾರತಮ್ಯವಿದೆ ಇತ್ಯಾದಿ ವಿಷಯಗಳಲ್ಲಿ ಸಾಂಖ್ಯ ಯೋಗದರ್ಶನಗಳ ಸಾಂಕರ್ಯವನ್ನು ತೋರಿಸುವರು. ಆದುದರಿಂದ ಕೇವಲ ಮತವೈಷಮ್ಯದಿಂದ ರಚಿತವಾದ ಕೆಲವು ಗ್ರಂಥಗಳನ್ನು ಬಿಟ್ಟರೆ ಸರ್ವಮತಗಳೂ ಯಾವುದೋ ಒಂದು ವಿಧವಾಗಿ ಅಧಮರ್ಣವಾಗಿ ಕಂಡುಬರುವವು. ಭರತ ಖಂಡದಲ್ಲಿ ಪರಮತದ್ವೇಷವು ಪಾಶ್ಚಾತ್ತ್ಯ ದೇಶಗಳಲ್ಲಿ ಪರಿಣಮಿಸಿದಂತೆ ಹಿಂಸೆಯಲ್ಲಿ ಕೊನೆಗಾಣಲಿಲ್ಲ. ಭರತಖಂಡದ ಚರಿತ್ರೆಯನ್ನೆಲ್ಲ ಸೂಕ್ಷ್ಮವಾಗಿ ಪರೀಕ್ಷಿಸಿದರೂ ಹಿಂಸೆಯಿಂದ ಪರಮತಗಳನ್ನು ಕೊನೆಗಾಣಿಸಿದಂತೆ ಕಂಡು ಬರುವದಿಲ್ಲ. ಪಾಮರರಂಜನೆಗೆ ಬರೆದ ಮತಪ್ರವರ್ತಕರ ಚರಿತ್ರೆಗಳಲ್ಲಿ ಭಿನ್ನ ಮತದವರನ್ನು ಹಿಂಸಿಸಿದಂತೆ ವರ್ಣಿಸಿದ್ದರೂ ಇಂತಹುದಕ್ಕೆ ಯಾವ ಚಾರಿ ತ್ರಿಕ ಆಧಾರವೂ ಸಿಕ್ಕಿಲ್ಲ.

ನಾಲ್ಕನೆಯ ಅಂಶವೇನೆಂದರೆ ಭಾರತೀಯದರ್ಶನಗಳಲ್ಲಿ ಪಾಶ್ಚಾತ್ಯ ದರ್ಶನಗಳಲ್ಲಿದ್ದಂತೆ ನೀತಿಗೂ ತತ್ತ್ವವಿವೇಚನೆಗೂ ಸಂಬಂಧರಾಹಿತ್ಯವಿಲ್ಲ. ಪಾಶ್ಚಾತ್ಯರ ಮತಗಳಿಗೆ ತತ್ತ್ವವಿವೇಚನೆ ಅನವಶ್ಯಕ, ತರ್ಕಿಸದೇ ನಂಬಬೇಕು. ತತ್ತ್ವಶಾಸ್ತ್ರಗಳಿಗೆ ಮತದ ಅವಶ್ಯಕತೆಯಿಲ್ಲ. ತತ್ತ್ವಾನುಷ್ಠಾನದ ಫಲವೇ ನೈತಿಕ ಜೀವನವೆಂಬುದನ್ನು ಪಾಶ್ಚಾತ್ಯರು ಮರೆತಿರುವರು. ಆದರೆ ಭರತ ಖಂಡದಲ್ಲಿ ಧರ್ಮಜೀವನವೇ ಮುಖ್ಯವೆಂದು ಎಲ್ಲ ಮತಪ್ರಚಾರಕರೂ ನಿರ್ಧರಿಸಿರುವರು. ಆದುದರಿಂದಲೇ ಅಂತಹ ಆದರ್ಶ ವ್ಯಕ್ತಿಗಳೂ ದರ್ಶನ ಪ್ರವರ್ತಕರೂ ಆದವರಿಗೆ ಆಚಾರ್ಯರೆಂಬ ಹೆಸರು ಸಲ್ಲುವದು. ಯಾರು ಶಾಸ್ತ್ರಾರ್ಥವನ್ನು ಸಂಗ್ರಹಿಸಿ ಸುಲಭವಾಗಿ ಬೋಧಿಸುವರೋ, ಯಾರು ಬೋಧನೆಯಿಂದ ತೃಪ್ತರಾಗದೆ ಲೌಕಿಕರಿಗೆ ಉಪದೇಶಮಾಡಿ ಸರಿಯಾದ ದಾರಿಗೆ ಎಳೆದು ಸದಾಚಾರದಲ್ಲಿ ಸ್ಥಾಪಿಸುವರೋ ಮತ್ತು ಪರರಿಗೆ ಉಪದೇಶಮಾಡುವುದು ಸುಲಭ, ತಾನು ಆಚರಿಸಿ ತೋರಿಸಿಕೊಡುವದು ಕಷ್ಟವಾದುದರಿಂದ ಯಾರು ತಮ್ಮ ನಡೆ ನುಡಿಗಳಲ್ಲಿ ತಮ್ಮ ತತ್ವಗಳೇ ಮೂರ್ತಿಮತ್ತಾಗಿ ಬಂದಂತೆ ಆದರ್ಶಜೀವನದ ಮೇಲ್ಪಂಕ್ತಿಯನ್ನು ಹಾಕಿಕೊಡುವರೋ ಅಂತಹವರೇ ಆಚಾರ್ಯರು.[1] ಆದುದರಿಂದ ಅಸ್ಮದಾಚಾರ್ಯ ಪ್ರಣೀತಗಳಾದ ದರ್ಶನಗಳಲ್ಲಿ ತತ್ವವಿವೇಚನೆಗೂ ನೈತಿಕ ಜೀವನಕ್ಕೂ, ದರ್ಶನಕ್ಕೂ ಮತಕ್ಕೂ ಪಾಶ್ಚಾತ್ಯ ತತ್ತ್ವಶಾಸ್ತ್ರಗಳಲ್ಲಿದ್ದಂತೆ ಪ್ರತಿಯೋಗಿತ್ವವಿಲ್ಲ. ಇದು ಭಾರತೀಯ ಆಧ್ಯಾತ್ಮಿಕ ರೀತಿಯ ವೈಶಿಷ್ಟ್ಯ.

ಪ್ರಾಯಃ ಭಾರತೀಯ ತಾತ್ವಿಕ ಸಂಪ್ರದಾಯಗಳನ್ನು ದರ್ಶನ ಮತ್ತು ಮತ ಎಂದು ವಿಂಗಡಿಸಬಹುದು. ತರ್ಕಪ್ರಧಾನವಾದುದು ದರ್ಶನ. ಭಾವನಾಪ್ರಧಾನವಾದುದು ಮತ. ಎರಡನ್ನೂ ಆಸ್ತಿಕ ನಾಸ್ತಿಕಯೆಂಬುದಾಗಿಯೂ ವಿಭಜಿಸಬಹುದು. ಚಾರ್ವಾಕ, ಬೌದ್ಧ, ಜೈನ ಮತಗಳು ವೇದಪ್ರಾಮಾಣ್ಯ

---

[1] ಆಚಿನೋತಿಚ ಶಾಸ್ತ್ರಾರ್ಥಮಾಚಾರೇ ಸ್ಥಾಪಯತ್ಯಪಿ |
ಸ್ವಯಮಾಚರತೇ ಯಸ್ಮಾದಾಚಾರ್ಯಸ್ತೇನಚೋಚ್ಯತೇ ||
ದೇವಮಿವಾಚಾರ್ಯಮುಪಾಸೀತ || ಆಪ. ಧ. ಸೂ I. ೨-೬, ೧೩.

ಆಚಾರ್ಯ: ಕಸ್ಮಾದಾಚಾರಂ ಗ್ರಾಹಯಿತ್ವಾಚಿನೋತಿ ಅರ್ಥಾನ್ಯಾಚಿನೋತಿ ಬುದ್ಧಿಮಿತಿ ವಾ—ನಿರುಕ್ತ I, ೪.

ಯಸ್ಮಾದ್ಧರ್ಮಾನಾಚಿನೋತಿ ಸ ಆಚಾರ್ಯಃ || ಆಪ. ಧ. ಸೂ. I. ೧-೧-೧೪.

ಶಾಸ್ತ್ರಜ್ಞೋऽಪಿ ಸ್ವಾತಂತ್ರ್ಯೇಣ ಬ್ರಹ್ಮಜ್ಞಾನಾನ್ವೇಷಣಂ ನ ಕುರ್ಯಾತ್—ಶಾಂಕರಭಾಷ್ಯ.

ವನ್ನಂಗೀಕರಿಸುವದಿಲ್ಲ. ಕಣಾದ, ಅಕ್ಷಪಾದಕಪಿಲ, ಪತಂಜಲಿ, ಜೈಮಿನಿ, ವ್ಯಾಸರಿಂದ ಪ್ರಣೀತಗಳಾದ ಷಡ್ದರ್ಶನಗಳು ಒಂದು ಗುಂಪಿಗೆ ಸೇರುವವು. ಸ್ವದೇಶೀಯ ಮತಗಳಲ್ಲಿ ಶೈವ, ವೈಷ್ಣವ, ಶಾಕ್ತ, ಸೌರ, ಗಾಣಪತ್ಯ ಕೌಮಾರ ಎಂಬವು ಷಣ್ಮತಗಳು. ಆಸ್ತಿಕದರ್ಶನ ಮತ್ತು ಮತಗಳಿಗೆ ವೇದವೇ ಮೂಲ. ತೈತ್ತಿರೀಯೋಪನಿಷತ್ತಿನಲ್ಲಿ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನನ್ದಮಯ ಕೋಶಗಳೂ ಇವುಗಳಿಗೆ ಅತಿರಿಕ್ತವಾದ ನಿರ್ಗುಣ ಬ್ರಹ್ಮವಸ್ತುವೂ ಉಕ್ತವಾಗಿವೆ.[2] ಚಾರ್ವಾಕರು ಅನ್ನಮಯ ಕೋಶವನ್ನೇ ಆತ್ಮವೆಂದು ಹೇಳುವರು. ಇವರಲ್ಲಿ ಕೆಲವರು ಪುತ್ರನನ್ನೇ ಆತ್ಮವೆಂದೂ, ಇತರರು ಸ್ಥೂಲಶರೀರವನ್ನೇ ಆತ್ಮವೆಂದೂ, ಮತ್ತೆ ಕೆಲವರು ಇನ್ದ್ರಿಯಗಳನ್ನೇ ಆತ್ಮವೆಂದೂ ಹೇಳುವರು. ದೇಹಕ್ಕಿಂತಲೂ ಪ್ರಾಣ ಪ್ರಧಾನವಾದುದರಿಂದ ಪ್ರಾಣಮಯ ಕೋಶವೇ ಆತ್ಮವೆಂದು ಕೆಲವರು ಅಭಿಪ್ರಾಯಪಡುವರು. ಹೀಗೆಯೇ ಮನೋಮಯ ಕೋಶವೇ ಆತ್ಮವೆಂದು ಹೇಳುವವರೂ ಇರುವರು (Physical, Biological, Psycho-physical). ವಿಜ್ಞಾನಮಯ ಕೋಶವೇ ಆತ್ಮವೆಂದು ಬೌದ್ಧರು ಹೇಳುವರು (Psychical). ಬ್ರಹ್ಮವಸ್ತುವು ಆನನ್ದಮಯ ಕೋಶವೆಂದು ಹೇಳಿರುವದನ್ನು ಅನುಸರಿಸಿ ಪ್ರಭಾಕರರೂ, ತಾರ್ಕಿಕರೂ ಅಜ್ಞಾನರೂಪವಾದ ಮತ್ತು ಸುಷುಪ್ತಿಯಲ್ಲಿ ಅನುಭೂತವಾದ ಆನನ್ದವೇ ಆತ್ಮವೆಂದು ವಾದಿಸುವರು. ಇತರ ಸಗುಣ ಬ್ರಹ್ಮವಾದಿಗಳು ಚೈತನ್ಯಪೂರ್ಣವಾದ ಆನನ್ದವೇ ಬ್ರಹ್ಮವೆಂದೂ ಈಶ್ವರನೆಂದೂ ಹೇಳುವರು. ಬ್ರಹ್ಮವು ಪ್ರಜ್ಞಾನ ಘನವೆಂದು ಹೇಳಿರುವುದರಿಂದ ಅಜ್ಞಾನೋಪಹಿತ ಚೈತನ್ಯವೇ ಆತ್ಮವೆಂದು ಭಾಟ್ಟಮತದವರು ಹೇಳುವರು. ಮೊದಲು ಅಸತ್ತೇ ಇದ್ದಿತು, ಸುಷುಪ್ತಿಯಲ್ಲಿ ನಾನು ಎಂಬ ಅನುಭವವಿಲ್ಲವಾದುದರಿಂದ ಎಲ್ಲವೂ ಕ್ಷಣಿಕ, ಶೂನ್ಯವೆಂದು ಕೆಲವರು ಬೌದ್ಧರೂ ಹೇಳುವರು. ಆದರೆ ಶಾಸ್ತ್ರದಲ್ಲಿ ಅಸ್ಥೂಲ, ಅಚಕ್ಷು, ಅಪ್ರಾಣ, ಅಮನ, ಅಕರ್ತಾ, ಚೈತನ್ಯ, ಚಿನ್ಮಾತ್ರ, ಸದ್ ಎಂದು ಆತ್ಮವನ್ನು ನಿರ್ದೇಶಿಸಿರುವುದರಿಂದ ಈ ವಾದಗಳೆಲ್ಲವನ್ನೂ ನಿರಾಕರಿಸಿರುವದರಿಂದಲೂ, ದೃಶ್ಯವು ಘಟಾದಿ

[2] "ಆತ್ಮಾ ವೈ ಜಾಯತೇ ಪುತ್ರಃ", "ಆತ್ಮಾ ವೈ ಪುತ್ರನಾಮಾಸಿ", "ಸವಾ ಏಷ ಪುರುಷೋऽನ್ನರಸಮಯಃ" "ದೇಹಪ್ರಾಣಾಃಊಚುಃ", "ಅನ್ಯೋऽನ್ತರ ಆತ್ಮಾ ಪ್ರಾಣಮಯಃ" "ಅನ್ಯೋऽನ್ತರ ಆತ್ಮಾ ಮನೋಮಯಃ", "ಅನ್ಯೋऽನ್ತರ ಆತ್ಮಾ ವಿಜ್ಞಾನಮಯಃ", "ಆನನ್ದಮಯಃ", "ಪ್ರಜ್ಞಾನಘನ ಏವಾನನ್ದಮಯಃ", ಅಸದೇವೇದಮಗ್ರ ಆಸೀತ್" "ಬ್ರಹ್ಮಪುಚ್ಛಂಪ್ರತಿಷ್ಠಾ". (ತೈತ್ತಿರೀಯೋಪನಿಷತ್).

ಗಳಂತೆ ಅನಿತ್ಯತ್ವ, ಜಡತ್ವ, ಪರಿಚ್ಛಿನ್ನತ್ವದಿಂದ ಕೂಡಿರುವದರಿಂದಲೂ "ಅಹಂ ಬ್ರಹ್ಮಾಸ್ಮಿ" ಎಂಬ ವಿದ್ವದನುಭವದಿಂದಲೂ, ಅಧ್ಯಾರೋಪ ಅಪವಾದ ನ್ಯಾಯದಿಂದಲೂ ಅದ್ವೈತವೇ ಅಂತ್ಯದಲ್ಲಿ ಸಿದ್ಧಿಸುವುದು.

ಪ್ರಮಾಣತ್ವ ಅಪ್ರಮಾಣತ್ವ ವಿಷಯದಲ್ಲಿ[೩] ಸಾಂಖ್ಯರು ಸ್ವತಃ ಪ್ರಮಾಣವನ್ನು ನೈಯಾಯಿಕರು ಪರತಃ ಪ್ರಾಮಾಣ್ಯವನ್ನು, ಸೌಗತರು ಮೊದಲು ಪರತಃ, ಕೊನೆಯಲ್ಲಿ ಸ್ವತಃ ಪ್ರಮಾಣವೆಂದೂ, ವೇದವಾದಿಗಳು ಸ್ವತಃ ಪ್ರಮಾಣವೇ ನಿಜವಾದುದು, ಪರತಃ ಪ್ರಮಾಣವು ಪ್ರಮಾಣವಲ್ಲವೆಂದೂ ಅಭಿಪ್ರಾಯಪಡುವರು. ಪ್ರಮಾಣಗಳು ಎಷ್ಟು ಎಂಬ ವಿಷಯದಲ್ಲಿ[೪] ಚಾರ್ವಾಕರು ಪ್ರತ್ಯಕ್ಷ ಒಂದೇ ಎಂದೂ; ಸೌಗತರಲ್ಲಿ ಕೆಲವರೂ ವೈಶೇಷಿಕರೂ ಪ್ರತ್ಯಕ್ಷ ಅನುಮಾನಗಳೆಂಬ ಎರಡನ್ನೂ ; ಜೈನರೂ, ದ್ವೈತಿಗಳು, ಕೆಲವರು ಬೌದ್ಧರೂ ಪ್ರತ್ಯಕ್ಷ ಅನುಮಾನ ಶಬ್ದಗಳನ್ನೂ : ನೈಯಾಯಿಕರು ಪ್ರತ್ಯಕ್ಷ ಅನುಮಾನ ಆಗಮ ಉಪಮಾನಗಳನ್ನೂ ; ಪ್ರಾಭಾಕರರು ಈ ನಾಲ್ಕಲ್ಲದೆ ಅರ್ಥಾಪತ್ತಿಯನ್ನೂ ; ಭಾಟ್ಟರೂ ವೇದಾಂತಿಗಳೂ ಅನುಪಲಬ್ಧಿಯೆಂಬ ಆರನೆಯ ಪ್ರಮಾಣವನ್ನೂ ; ಪೌರಾಣಿಕರು ಐತಿಹ್ಯ ಸಂಭವ ಎಂಬ ಎರಡನ್ನು ಸೇರಿಸಿ ಎಂಟು ಪ್ರಮಾಣಗಳನ್ನೂ ; ತಾಂತ್ರಿಕರು ಲಿಂಗ ಅಥವಾ ಸಂಜ್ಞಾ ಎಂಬ ಒಂಬತ್ತನೆಯ ಪ್ರಮಾಣವನ್ನೂ ಅಂಗೀಕರಿಸಿರುವರು. ಅತಿವಾದಗಳೂ ಕೂಡ ಯಾವುದೋ ಒಂದು ವಿಶೇಷ ವಿಷಯಕ್ಕೆ ಪ್ರಾಶಸ್ತ್ಯ ಕೊಡುವದಕ್ಕಾಗಿಯೇ ಹೊರಟಿರುವದರಿಂದ ಉದಾರ ಹೃದಯರು ಇವುಗಳಲ್ಲೂ ಸ್ವಲ್ಪ ತಥ್ಯಾಂಶವಿದೆಯೆಂದು ಗುಣಗ್ರಹಣ ಮಾಡಿಕೊಳ್ಳಬಹುದು.

ಪ್ರಕೃತ ಗ್ರಂಥದಲ್ಲಿ ಭಾರತೀಯರ ಆಧ್ಯಾತ್ಮಿಕ ಸಂಸ್ಕೃತಿಯ ಚರಿತ್ರೆ

---

[೩] ಪ್ರಮಾಣತ್ವಾಪ್ರಮಾಣತ್ವೇಸ್ವತಃ ಸಾಂಖ್ಯಾಃ ಸಮಾಶ್ರಿತಃ | ನೈಯಾಯಿಕಾಸ್ತೇಪರತಃ ಸೌಗತಾಶ್ಚರಮಂ ಸ್ವತಃ| ಪ್ರಥಮಂಪರತಃ ಪ್ರಾಹುಃ ಪ್ರಾಮಾಣ್ಯಂ ವೇದವಾದಿನಃ| ಪ್ರಮಾಣತ್ವಂ ಸ್ವತಃಪ್ರಾಹುಃ ಪರತಶ್ಚಾಪ್ರಮಾಣತಾಮ್ ||

ಸ್ವತಃ ಸರ್ವಪ್ರಮಾಣಾನಾಂ ಪ್ರಾಮಾಣ್ಯಮಿತಿಗಮ್ಯತಾಮ್ || ಶ್ಲೋಕವಾರ್ತಿಕೆ.

[೪] ಚಾರ್ವಾಕೋಽಧ್ಯಕ್ಷಮೇಕಂ, ಸುಗತಕಣಭುಜೌ ಸಾನುಮಾನಂ, ಸಶಬ್ದಂ| ತದ್ದ್ವೈತಂಪಾ ರಮರ್ಷಃ, ಸಹಿತಮುಪಮಯಾ, ತತ್ತ್ರಯಂಚಾಕ್ಷಪಾದಃ| ಅರ್ಥಾಪತ್ತ್ಯಾ ಪ್ರಭಾಕೃದ್, ವದತಿಚ ನಿಖಿಲಂಮನ್ಯತೇ ಭಟ್ಟ ಏತತ್| ಸಾಭಾವಂ, ದ್ವೇಪ್ರಮಾಣೇ ಜನಪತಿಸಮಯೇ ಸ್ಪಷ್ಟತಾಸ್ಪಷ್ಟತಾಚ|| ಪ್ರತ್ಯಕ್ಷಂಚಾನು ಮಾನಂಚ ಶಾಬ್ದಂಚೋಪ ಮಯಾಸಹ| ಅರ್ಥಾಪತ್ತಿರಭಾವಶ್ಚ ಷಟ್ಪ್ರಮಾಣಾನಿಜೈಮಿನೇಃ|| ಜೈನಂ ಮೀಮಾಂಸಕಂ ಬೌದ್ಧಂ ಸಾಂಖ್ಯಂ ಶೈವಂಚನಾಸ್ತಿಕಮ್| ಸ್ವಸ್ವತರ್ಕವಿಭೇದೇನ ಜಾನೀಯಾದ್ದರ್ಶನಾನಿ ಷಟ್||

ಯನ್ನು ಸೂಚಿಸುವದೇ ನಮ್ಮ ಮುಖ್ಯೋದ್ದೇಶವಾದುದರಿಂದ ಈ ದರ್ಶನ ಮತ್ತು ಮತಗಳ ಸೂಕ್ಷ್ಮತತ್ವಗಳನ್ನೂ ತರ್ಕಸರಣಿಯನ್ನೂ ವಿವರಿಸದೆ ಸ್ಥೂಲರೂಪವನ್ನೂ ಚರಿತ್ರೆಯನ್ನೂ ಮಾತ್ರ ವರ್ಣಿಸುವೆವು.[5]

**ಲೋಕಾಯತ—ಚಾರ್ವಾಕದರ್ಶನ:** ಪುರಾಣಗಳಲ್ಲಿ ವೇದವಿದ್ಯೆಗೆ ಅಧಿಕಾರವಿಲ್ಲದ ಅಸುರರಿಗೆ ಮೋಹವನ್ನುಂಟುಮಾಡುವದಕ್ಕಾಗಿ ನಾಸ್ತಿಕ ದರ್ಶನಗಳು ಪ್ರತಿಪಾದಿತವಾದುವೆಂದು ಹೇಳಿದೆ. ಚಾರಿತ್ರಕದೃಷ್ಟಿಯಿಂದ ನೋಡಿದರೆ ಈ ಮತಗಳು "ಅತಿಸರ್ವತ್ರವರ್ಜಯೇತ್" ಎಂಬ ನ್ಯಾಯದಂತೆ ಆಧ್ಯಾತ್ಮಿಕತೆಯ ವಿಪರೀತವನ್ನು ತಡೆಗಟ್ಟುವದಕ್ಕಾಗಿಯೂ, ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಗಳೆಂಬ ಅಂಶಗಳು ಮೂರೂ ವಿಹಿತ ಪ್ರಮಾಣದಲ್ಲಿರ ಬೇಕೆಂಬುದಕ್ಕಾಗಿಯೂ ಪ್ರಚಾರಕ್ಕೆ ಬಂದವೆಂದು ಹೇಳಬಹುದು. ಚಾರ್ವಾಕ ದರ್ಶನವನ್ನು ಬೃಹಸ್ಪತಿಯು ಮೊದಲು ಪ್ರಚಾರಮಾಡಿ ಸೂತ್ರಗಳನ್ನು ರಚಿಸಿದನೆಂದೂ, ಆ ಸೂತ್ರಗಳಿಗೆ ಚಾರುವಾಕನೆಂಬುವನು ಭಾಷ್ಯವನ್ನು ಬರೆದನೆಂದೂ ತಿಳಿದುಬರುವದು. ಈ ಮತವು ಲೋಕದಲ್ಲಿ ಹರಡಿದುದರಿಂದ ಲೋಕಾಯತವೆಂದೆನಿಸಿಕೊಂಡಿತು. ವಾಲ್ಮೀಕಿ ರಾಮಾಯಣದಲ್ಲಿ ಜಾಬಾಲಿ ಯೆಂಬವನು ಈ ಮತವನ್ನು ಬೋಧಿಸಿದಂತೆ ಹೇಳಿದೆ. ಮಹಾಭಾರತದಲ್ಲಿ ದುರ್ಯೋಧನನ ಮಿತ್ರನಾದ ಚಾರ್ವಾಕನೆಂಬುವನು ಧರ್ಮರಾಜನೊಡನೆ ಸಂವಾದಮಾಡಿದನೆಂದು ವರ್ಣಿಸಿದೆ. ಶಾನ್ತರಕ್ಷಿತನು ಕಂಬಳ ಅಶ್ವತರ ರೆಂಬುವರು ಚಾರ್ವಾಕ ಮತಾಚಾರ್ಯರೆಂದು ಹೇಳಿರುವನು. ಚಾರ್ವಾಕ ಮತವು ಬಹುಳ ಪ್ರಾಚೀನವಾದುದು. ಆದರೆ ಈ ದರ್ಶನದ ಪ್ರಕರಣ ಗ್ರಂಥ ಗಳೂ ಸೂತ್ರಗಳು ಈಗ ಅದೃಶ್ಯವಾಗಿವೆ. ಇತರ ಮತಗಳ ಗ್ರಂಥಗಳಲ್ಲಿ ಉದಾಹೃತವಾದ ಕೆಲವು ಶ್ಲೋಕಗಳು ಮಾತ್ರ ಕಂಡುಬರುವವು. ಆದುದ ರಿಂದ ಚಾರ್ವಾಕ ದರ್ಶನದ ಸಂಪೂರ್ಣ ಪ್ರಕ್ರಿಯೆಯನ್ನು ತಿಳಿದುಕೊಳ್ಳುವದು ಕಷ್ಟವಾಗಿದೆ. ಲೋಕಾಯತಮತದ ಪ್ರಭಾವವು ಪೂರ್ವಮೀಮಾಂಸಾ, ವೈದ್ಯಶಾಸ್ತ್ರ ಮುಂತಾದವುಗಳಲ್ಲಿ ಕಂಡುಬರುವದು.[6] ಭಾರತೀಯರು ಯಾವಾ ಗಲೂ ಆಧ್ಯಾತ್ಮಿಕ ವಿವೇಚನೆಯಲ್ಲೇ ಕಾಲಕಳೆಯುತ್ತಿದ್ದರೆಂದೂ ಲೋಕೋಪ ಕಾರಕಗಳಾದ ಶಾಸ್ತ್ರಗಳನ್ನು ತುಚ್ಛೀಕರಿಸುತ್ತಿದ್ದರೆಂಬ ಆಪಾದನೆಗೆ

---

[5] L. Śrīnivāsāchārya: "ಹಿಂದೂದರ್ಶನಸಾರ" ಇತ್ಯಾದಿ ಗ್ರಂಥಗಳನ್ನು ನೋಡ ಬಹುದು.

[6] ಪ್ರಾಯೇಣೈವ ಹಿ ಮೀಮಾಂಸಾ ಲೋಕೇ ಲೋಕಾಯತೀಕೃತಾ | ತಾಮಾಸ್ತಿಕ ಪಥೇ ನೇತುಮಯಂ ಯತ್ನಃ ಕೃತೋ ಮಯಾ || ಶ್ಲೋಕವಾರ್ತಿಕ.

ಚಾರ್ವಾಕ ದರ್ಶನ, ಕೌಟಿಲ್ಯನ ಅರ್ಥಶಾಸ್ತ್ರ, ವಾತ್ಸ್ಯಾಯನರ ಕಾಮಸೂತ್ರಗಳು, ಮಾನಸಾರ ಮುಂತಾದವು ಸಮರ್ಪಕವಾದ ಉತ್ತರ. ವೈದ್ಯಶಾಸ್ತ್ರದಲ್ಲಿ ಪಿತ್ತದ್ರವ್ಯದ ವಿಕಾರವೇ ಜ್ಞಾನವೆಂದು ಚಾರ್ವಾಕ ರೀತಿಯಾದ ಸಿದ್ಧಾಂತವಿದೆ. ಪಾಶ್ಚಾತ್ಯ ದೇಶಗಳಲ್ಲಿ ವೈಜ್ಞಾನಿಕರು ಪ್ರಚಾರಮಾಡಿರುವ ಅನೇಕ ತತ್ವಗಳನ್ನು (Physicism, Psycho-physical parallelism, Emergent Evolution, Behaviourism, Materialism etc.) ಎಷ್ಟೋ ಹಿಂದೆಯೇ ಚಾರ್ವಾಕರು ಬೋಧಿಸಿದ್ದರು. ಸಮತಾವಾದಕ್ಕೂ (Communism) ಚಾರ್ವಾಕ ತತ್ತ್ವಗಳೇ ಮೂಲ. ಪ್ರಾಣವಿರುವವರೆಗೂ ಯಾವ ಉಪಾಯದಿಂದಲಾದರೂ ಸುಖವಾಗಿ ಜೀವಿಸಬೇಕು. ಈಶ್ವರ, ಪರಲೋಕ, ಆತ್ಮ ಮುಂತಾದ ಭಾವಗಳನ್ನು ಸ್ವಾರ್ಥಕ್ಕಾಗಿ ಅಧಿಕಾರಾಕಾಂಕ್ಷಿಗಳಾದ ಮತಬೋಧಕರೂ ಆಳುವವರೂ ಆಸ್ತಿವಂತರೂ ಸೃಷ್ಟಿಸಿ ಮೂಢರೂ ಬಲಹೀನರೂ ಆದ ಸಾಮಾನ್ಯ ಜನರನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡರೆಂಬ ಸಮಾತಾವಾದಕ್ಕೂ ಚಾರ್ವಾಕಮತಕ್ಕೂ ಹೋಲಿಕೆಯಿದೆ.[7] ಲೋಕಾಯತ ದರ್ಶನವನ್ನು ಋಷ್ಯಾಶ್ರಮಗಳಲ್ಲಿಯೂ ವಿದ್ಯಾಸ್ಥಾನಗಳಲ್ಲಿಯೂ ೧೫ ನೆಯ ಶತಾಬ್ದದ ವರೆಗೂ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದರೆಂದು ತಿಳಿದುಬರುವದು. ಕಣ್ವಾಶ್ರಮದಲ್ಲಿ ಲೋಕಾಯತರಿದ್ದರೆಂದು ಮಹಾಭಾರತವು ಹೇಳುವದು. ದಿವಾಕರ ಮಿತ್ರನ ಆಶ್ರಮದಲ್ಲಿ ಚಾರ್ವಾಕರಿದ್ದರೆಂದು ಬಾಣನು ಹೇಳುವನು. ನಾಲಂದಾ, ತಕ್ಷಶಿಲಾ, ವಿಕ್ರಮಶೀಲ, ಪಾಟಲೀಪುತ್ರ, ಕಾಂಚೀ, ಬೆಳಗಾಮಿ, ವಲಭೀ, ಕಾಶಿ ಮುಂತಾದ ವಿಶ್ವವಿದ್ಯಾಲಯಗಳಲ್ಲಿ ಚಾರ್ವಾಕ ದರ್ಶನವನ್ನು ಬೋಧಿಸುತ್ತಿದ್ದರು. ಯುವಾನ್ ಚ್ವಾಂಗನು

[7] ಯಾವಜ್ಜೀವೇತ್ ಸುಖಂಜೀವೇತ್ ಋಣಂ ಕೃತ್ವಾಘೃತಂಪಿಬೇತ್ | ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂಕುತಃ ?''. ಅಹಂ ಸ್ಥೂಲಃ ಕೃಶೋಽಸ್ಮೀತಿ ಸಾಮಾನಾಧಿಕರಣ್ಯತಃ | ದೇಹ ಸ್ಥೌಲ್ಯಾದಿಯೋಗಾಚ್ಚ ಸ ಏವಾತ್ಮಾ ನಚಾಪರಃ || ಭುಂಕ್ತೇವೇತಿಚ ದೇಹಏವ ಸಮಹಾ ಭೂತಾನಿತೇಷ್ವೇವಧೀಃ | ಕಿಣ್ವಾದೌ ಮದಶಕ್ತಿವತ್‌ಕ್ರತುಫಲಂಭೋಕ್ತಾ ನಕೋಽಪಿಸ್ಥಿತಃ | ದಗ್ಧಾಃಕಿಂ ಪುನರಪ್ಯುಪೈತಿನಿಯಮೋನಕ್ವಾಪಿ ಜೀವೇತ್ಸುಖಂ | ಯಾವಜ್ಜೀವತಿ ದೈವತಂ ನರಪತಿಃಸ್ನ್ಯಾಯೋ ಬಲಂಕೇವಲಮ್ || ಅಗ್ನಿಹೋತ್ರಂ ತ್ರಯೋವೇದಾ : ತ್ರಿಪುಣ್ಡ್ರಂಭಸ್ಮಗುಣ್ಠನಂ | ಬುದ್ಧಿ ಪೌರುಷಹೀನಾನಾಂ ಜೀವಿಕಾ ಧಾತೃನಿರ್ಮಿತಾ || ತತಸ್ತು ಜೀವನೋಪಾಯೋ ಬ್ರಾಹ್ಮಣೈರ್ವಿಹಿತಸ್ತ್ವಿಹ | ಮೃತಾನಾಂ ಪ್ರೇತ ಕಾರ್ಯಾಣಿ ನತ್ವನ್ಯದ್ವಿದ್ಯತೇಕ್ವಚಿತ್ || ತ್ರಯೋವೇದಸ್ಯ ಕರ್ತಾರೋ ಭಣ್ಡಧೂರ್ತನಿಶಾಚರಾಃ | ಜರ್ಫರೀತ್ಯ ತುರ್ಫರೀತ್ಯಾದಿ ಪಣ್ಡಿತಾನಾಂವಚಃ ಸ್ಮೃತಮ್ || ಇತ್ಯಾದಿ.

ಒಬ್ಬ ಲೋಕಾಯತನೊಡನೆ ವಾದಮಾಡಿ ಗೆದ್ದನೆಂದು ಹೇಳಿಕೊಂಡಿರುವನು. ಕರ್ಣಾಟಕದಲ್ಲಿ "ಕೂರವಾಡಿಯ ಬಳಿಯ ಲೋಕಾಯ್ತುಪೊಳಲು ಗುಂಡೇರಿ" ಎಂಬ ಗ್ರಾಮವು ಕ್ರಿಸ್ತಶಕ ೯೭೮ ರಲ್ಲಿದ್ದಿತೆಂದು ಒಂದು ಶಾಸನವು ಹೇಳುವುದು (*E. C*, XI; *HI.*, ೨೩). ಇದು ಕಾಳಾಮುಖ ಸ್ಥಾನವಾದುದರಿಂದ ಲೋಕಾಯತರ ಕೇಂದ್ರವೆಂದು ಹೇಳುವದು ಕಷ್ಟ. ಲೋಕಾದಿತ್ಯನ ಪೊಳಲನ್ನು ಲೋಕಾಯ್ತುಪೊಳಲು ಎಂದು ಈ ಶಾಸನವು ಹೇಳಿದೆಯೆಂದು ಊಹಿಸಬೇಕು.

**ಬೌದ್ಧದರ್ಶನ:**—ಬೌದ್ಧ ಸಂಪ್ರದಾಯದ ಪ್ರಕಾರ ಗೌತಮಬುದ್ಧನಿಗೆ ಹಿಂದೆಯೇ ಅನೇಕ ಬೋಧಿಸತ್ವರೂ ಕ್ರಕುಚನ್ದ, ಕನಕಮುನಿ, ಕಾಶ್ಯಪರೇ ಮುಂತಾದ ಇಪ್ಪತ್ತುನಾಲ್ಕು ಬುದ್ಧರೂ ಈ ಮತವನ್ನು ಪ್ರಚಾರ ಮಾಡಿದರೆಂದು ತಿಳಿದುಬರುವದು.[8] ಅನಂತರ ಕ್ರಿಸ್ತಪೂರ್ವ ಆರನೆಯ ಶತಾಬ್ದದಲ್ಲಿ ಶುದ್ಧೋದನ ಮತ್ತು ಮಾಯಾದೇವಿಯರ ಪುತ್ರನಾದ ಗೌತಮನು ಸಂಬೋಧಿಯನ್ನು ಪಡೆದು ಮತಪ್ರವರ್ತಕನಾದನು. ಬುದ್ಧನಿರ್ವಾಣಕಾಲದ ವಿಷಯವಾಗಿ ಭಿನ್ನಾಭಿಪ್ರಾಯಗಳಿವೆ. ಕನಿಂಗ್ಹ್ಯಾಮ್, ಕಾರ್ಪೆನ್‌ಟೀರ್, ಮಾಕ್ಸ್‌ಮೂಲರ್, ಫ್ಲೀಟ್, ಸ್ವಾಮಿಕಣ್ಣುಪಿಳ್ಳೆ ಕ್ರಿಸ್ತಪೂರ್ವ ೪೭೮-೪೭೭ ಎಂದೂ, ಬ್ಯೂಲರ್, ರಾಹುಳ ಸಾಂಕೃತ್ಯಾಯನ ಕ್ರಿಸ್ತಪೂರ್ವ ೪೮೩ ಎಂದೂ, ಪೆಗು ಮತ್ತು ಚೀಣ ಗ್ರಂಥಗಳು ಕ್ರಿಸ್ತಪೂರ್ವ ೭೩೮ ಯೆಂದೂ, ಸಿಂಹಳಗ್ರಂಥಗಳು ಕ್ರಿಸ್ತಪೂರ್ವ ೫೪೪ ಯೆಂದೂ, ಟಿಬೆಟ್‌ಗ್ರಂಥಗಳು ಕ್ರಿಸ್ತಪೂರ್ವ ೮೪೭-೮೩೫ ಯೆಂದೂ, ಫಾಹಿಯಾನನು ಕ್ರಿಸ್ತಪೂರ್ವ ೧೦೯೭ ಯೆಂದೂ, ಪ್ರಿನ್ಸೆಪ್ ಕ್ರಿಸ್ತಪೂರ್ವ ೧೦೨೭ ಯೆಂದೂ ಅಭಿಪ್ರಾಯಗಳಿವೆ. ಕ್ರಿಸ್ತಪೂರ್ವ ೫೪೩ ರಲ್ಲಿ ಬುದ್ಧನಿರ್ವಾಣವಾಯಿತೆಂದು ಹೇಳಬಹುದು.

ಗೌತಮಬುದ್ಧನು ತನ್ನ ತಂದೆಯಾದ ಶುದ್ಧೋದನನಿಗೆ ಕುಲಗುರುವಾಗಿದ್ದ ಮತ್ತು ಬ್ರಹ್ಮವೇತ್ತನೂ ಯೋಗಿಯೂ ಆದ ಅಸಿತದೇವಲನಿಂದ ವೇದಾಂತ ತತ್ವಗಳನ್ನು ತಿಳಿದು[9] ವಿರಕ್ತಿಹೊಂದಿ ಸರ್ವವನ್ನೂ ತ್ಯಜಿಸಿ ಬುದ್ಧನಾಗಿ ವೈದಿಕ

---

[8] ದೀಪಂಕರ, ಕೊಣ್ಡನ್ನ, ಮಂಗಲ, ಸುಮನ, ರೆವತ, ಸೊಭಿತ, ಅನೊಮದಸ್ಸೀ, ಪದುಮ, ನಾರದ, ಪದುಮುತ್ತರ, ಸುಮೇಧ, ಸುಜಾತ, ಪಿಯದಸ್ಸೀ, ಅತ್ಥದಸ್ಸೀ, ಧಮ್ಮದಸ್ಸೀ, ಸಿದ್ಧತ್ಥ, ತಿಸ್ಸ, ಫುಸ್ಸ, ವಿಪಸ್ಸಿ, ಸಿಖಿ, ವೆಸ್ಸಭು, ಕಕುಸನ್ದ, ಕೊಣಾಗಮನ, ಕಸ್ಸಪ. ಇವರಲ್ಲಿ ಕೊನೆಯ ಮೂವರೂ ಬ್ರಾಹ್ಮಣರು. ಇತರರು ಕ್ಷತ್ರಿಯರು. ಮುಂದೆ ಮೆತ್ತೆಯನು ಬುದ್ಧನಾಗುವನು.

[9] ಅಶ್ವಘೋಷ: "ಬುದ್ಧಚರಿತ" I. ೫೪.

ಮತದ ಒಂದಂಶವನ್ನೇ ಮುಖ್ಯವಾಗಿಟ್ಟುಕೊಂಡು ಶಿಷ್ಯರಿಗೆ ಬೋಧಿಸಿದುದರಿಂದ ಪ್ರಾಚೀನ ಬೌದ್ಧಮತವು ವೈದಿಕವೇ ಆಗಿದೆ. ಬುದ್ಧನಿಗೆ ಮೊದಲು ಶಿಷ್ಯರಾದವರು ಬ್ರಾಹ್ಮಣರು. ವೈದಿಕಮತಕ್ಕೆ ಕೇಂದ್ರವಾದ ಕಾಶಿಯ ಬಳಿಯಲ್ಲಿಯೇ ಧರ್ಮಚಕ್ರ ಪ್ರವರ್ತನೆಯು ಆರಂಭವಾಯಿತು. ಗೌತಮನು ಸಮಾಜದಲ್ಲಿದ್ದ ದುರಾಚಾರಗಳನ್ನು ತೀವ್ರವಾಗಿ ಖಂಡಿಸಿದರೂ ಬ್ರಾಹ್ಮಣ ದ್ವೇಷಿಯಾಗಿರಲಿಲ್ಲ. ಉಭಯಕುಲ ಪವಿತ್ರರೂ, ಮನ್ತ್ರಜ್ಞರೂ, ಮೂರು ವೇದಗಳನ್ನೂ ಅಧ್ಯಯನಮಾಡಿದವರೂ (ತಿಣ್ಣಂವೇದಾನಂ ಪಾರಗು), ಆಹಿತಾಗ್ನಿಗಳೂ, ಶಮದಮಾದಿ ಗುಣಗಳುಳ್ಳವರೇ ನಿಜವಾದ ಬ್ರಾಹ್ಮಣರೆಂದೂ, ಬೌದ್ಧನಿಗೂ ಇಂತಹ ಬ್ರಾಹ್ಮಣನಿಗೂ ಯಾವ ವ್ಯತ್ಯಾಸವೂ ಇಲ್ಲವೆಂದು ಬುದ್ಧನು ಹೇಳಿರುವನು.[10] ಮಹಾಪರಿನಿರ್ವಾಣವಾದ ಕೂಡಲೇ ಬುದ್ಧನ ಶಿಷ್ಯರೆಲ್ಲರೂ ಮೊದಲನೆಯ ಮಹಾಸಂಘವನ್ನು ಸೇರಿಸಿ ಬುದ್ಧವಚನಗಳನ್ನು ಕ್ರೋಢೀಕರಿಸಿದರು. ಆದರೆ ಸ್ವಲ್ಪಕಾಲದಲ್ಲಿಯೇ ಶಿಷ್ಯರಲ್ಲಿ ಭಿನ್ನಾಭಿಪ್ರಾಯಗಳು ಉಂಟಾದವು. ಆದುದರಿಂದ ಮಗಧದೇಶದ ರಾಜನಾದ ಕಾಲಾಶೋಕನು ಎರಡನೆಯ ಸಂಘವನ್ನು ಸೇರಿಸಿ ವ್ಯವಸ್ಥೆಮಾಡಿದನು. ಆದರೂ ಸ್ವಯೂಥ್ಯರಲ್ಲಿಯೇ ಕಲಹಗಳುಂಟಾದುದರಿಂದ ಧರ್ಮಾಶೋಕನು ಕ್ರಿಸ್ತಪೂರ್ವ ಮೂರನೆಯ ಶತಾಬ್ದದಲ್ಲಿ ಪುನಃ ಸಂಘವನ್ನನುಕರಿಸಿದನೆಂದು ಸಿಂಹಳ ಗ್ರಂಥಗಳು ಹೇಳುವವು.

ಬೌದ್ಧಮತದ ಬೆಳವಣಿಗೆಯಲ್ಲಿ ಮೂರು ಘಟ್ಟಗಳಿವೆ (ತ್ರಿಚಕ್ರ). ಮೊದಲು ಪುದ್ಗಲ (Personality) ವನ್ನು ಸಾಸ್ರವ—ಅನಾಸ್ರವ, ಸಾಂಕ್ಲೇಶ—ವ್ಯಾವದಾನಿಕ, ಕುಶಲ—ಅಕುಶಲ ಎಂಬ ಧರ್ಮಗಳಿಗನುಸಾರವಾಗಿ ವಿಭಜಿಸಿ ಸಂಸಾರನಿರೋಧವೇ ನಿರ್ವಾಣ, ಶಾನ್ತಿಯೆಂದು ನಿರ್ಧರಿಸಿದ್ದರು. ಚಿತ್ತ ಮಹಾಭೂಮಿಕಾ ಧರ್ಮಗಳಿದ್ದರೂ ಇವನ್ನು ಆತ್ಮವೆಂದು ಹೇಳಲಾಗುವದಿಲ್ಲ. ಬಾಹ್ಯಾಯತನವು ಅನಿತ್ಯ ಮತ್ತು ಕ್ಷಣಿಕ. ಆದರೆ ಹೇತುಪ್ರತ್ಯಯ ವ್ಯವಸ್ಥೆಯು ಆಕಸ್ಮಿಕವಲ್ಲ. ಪ್ರತೀತ್ಯಸಮುತ್ಪನ್ನವಾದುದು. (ಅಸ್ಮಿನ್ ಸತಿ ಇದಂ ಭವತಿ). ಆದುದರಿಂದ ಕರ್ಮಕ್ಕೆ ತಕ್ಕ ಫಲವಿದ್ದೇ ಇರುವುದು. ಧರ್ಮಗಳು ಸಂಸ್ಕಾರರೂಪಗಳು. ಬಾಹ್ಯಾಯತನದಲ್ಲಿ ರೂಪ, ಶಬ್ದ, ಗನ್ಧ, ರಸ, ಸ್ಪರ್ಶಗಳಂತೆಯೂ, ಚಿತ್ತಚೈತ್ತಗಳಲ್ಲಿ ವೇದನಾ, ಸಂಜ್ಞಾ, ಸಂಸ್ಕಾರ

---

[10] ಸುತ್ತನಿಪಾತ—ದೀಘನಿಕಾಯದ ಬ್ರಹ್ಮಜಾಲ, ಸೋನದಂಡ, ಸಾಮುನ್ನ ಫಲ ಸುತ್ತಗಳು, ಧರ್ಮಪದದ ಬ್ರಾಹ್ಮಣವರ್ಗ, ವಾಸೆಠ್ಠಸುತ್ತ, ಬ್ರಹ್ಮಾಯುಸುತ್ತ, ಜಾನುಸ್ಸೋನಿಸುತ್ತ, ದಶಬ್ರಾಹ್ಮಣ ಜಾತಕ—ಇತ್ಯಾದಿ.

ಗಳಂತೆಯೂ ವ್ಯಕ್ತವಾಗುವವು. ನಿರ್ವಾಣಸಾಧನೆಗಾಗಿ ನಾಲ್ಕು ಆರ್ಯ ಸತ್ಯಗಳನ್ನು ತಿಳಿಯಬೇಕು. ಈ ಕಾಲದಲ್ಲಿ ಬೌದ್ಧಸಂಘದಲ್ಲಿ ತುರೀಯಾಶ್ರಮದವರೇವಿನಾ ಗೃಹಸ್ಥರಿರಲಿಲ್ಲ. ಕೆಲವರು ಭಿಕ್ಷುಗಳು ಆಗಾಗ ಪ್ರಾಯಶ್ಚಿತ್ತಕ್ಕಾಗಿ ಒಂದು ಕಡೆ ಸೇರುತ್ತಿದ್ದರು. ಚೈತ್ಯವಂದನೆ, ಬುದ್ಧವಿಗ್ರಹ ಪೂಜೆ, ಮಠಗಳೇ ಮುಂತಾದುವು ಇರಲಿಲ್ಲ. ಬೌದ್ಧಮತವು ಅಶೋಕನ ಕಾಲದವರೆಗೂ ಮಧ್ಯದೇಶದಿಂದ ಹೊರಗೆ ಪ್ರಚಾರವಾಗಲಿಲ್ಲ. ಮಧ್ಯದೇಶದಲ್ಲೂ ಬೌದ್ಧರು ಇತರ ಹಿಂದುಗಳಂತೆಯೇ ಆಚಾರ ವ್ಯವಹಾರಗಳನ್ನು ಹೊಂದಿದ್ದರು. ಭಿಕ್ಷುಗಳು ಸಾಮಾನ್ಯ ಜನರಿಗೆ ಬೋಧನೆ ಮಾಡುತ್ತಿರಲಿಲ್ಲ. ಬೌದ್ಧಮತವು ಸನ್ಯಾಸಿಗಳಿಗೆ ಮಾತ್ರವೆಂದು ಗಣಿಸಿದ್ದರು.

ಕಾಕವರ್ಣ (ಕಾಲಾಶೋಕ)ನ ಕಾಲದಲ್ಲಿ ಭಿನ್ನಾಭಿಪ್ರಾಯಗಳು ಹುಟ್ಟಿ ಅಶೋಕನ ಕಾಲಕ್ಕೆ ಹದಿನೆಂಟು ಪಂಗಡಗಳಾಗಿದ್ದವೆಂದು ಅಟ್ಟಕಥೆಯಿಂದ ತಿಳಿದುಬರುವದು.




ಚೈತ್ಯವಾದಿಗಳು ಆನ್ಧ್ರದೇಶದಲ್ಲಿ ನಾಗಾರ್ಜುನಿಕೊಂಡ (ಶ್ರೀಶೈಲ) ದಲ್ಲಿ ನೆಲಸಿ ಪೂರ್ವಶೈಲೀಯ, ಅಪರಶೈಲೀಯ, ರಾಜಗಿರಿಕ, ಸಿದ್ಧಾರ್ಥಕ, ವೆಪುಲ್ಲ (ವೇತುಲ್ಯ) ಎಂಬ ಪಂಗಡಗಳಾದರು.

ಈ ಸಮಯದಲ್ಲಿ ಅನೇಕ ಮಾರ್ಪಾಟುಗಳಾದವು. ಬುದ್ಧನು ಕೇವಲ ಮನುಷ್ಯನಲ್ಲ, ಸರ್ವರಿಗೂ ಮುಕ್ತಿಯಿದೆಯೆಂದು ನಿರ್ಧರಿಸಿದರು. ಭಾಗವತ ಮತಗಳ ಸಂಪರ್ಕದಿಂದ ಬೌದ್ಧಮತವೂ ಏಕದೇವತಾ ಪೂಜೆಯ ಕಡೆಗೆ ತಿರುಗಿತು. ಹಿಂದೆ ನೈರಾತ್ಮ್ಯವೆಂದರೆ ಪುದ್ಗಲಶೂನ್ಯತೆ. ಈಗ ಧರ್ಮನೈರಾತ್ಮ್ಯ ಅಥವಾ ಕೇವಲ ಶೂನ್ಯವಾದವು ಪ್ರಚಾರಕ್ಕೆ ಬಂದಿತು. ಪರಸ್ಪರ ಸಂಬಂಧವನ್ನು ಹೊಂದಿದ ವಸ್ತುಗಳೆಲ್ಲವೂ ಶೂನ್ಯತೆಯನ್ನು ಸೂಚಿಸುವವು. ಪರಸ್ಪರಾಪೇಕ್ಷೆಯೆಂದರೆ ಸ್ವಭಾವಶೂನ್ಯತೆ. ಇಂತಹ ಆತ್ಯಂತಿಕಶೂನ್ಯತೆಯೇ ಬುದ್ಧನ ಧರ್ಮಕಾಯ. ಧರ್ಮಗಳು ಪಂಚಸ್ಕಂಧ, ದ್ವಾದಶಾಯತನ, ಅಷ್ಟಾದಶಧಾತು ಎಂಬುದಾಗಿ ವಿಭಾಗಿಸಿ, ಶೂನ್ಯತೆಯೆಂದರೆ ಅತ್ಯಂತಾಭಾವವಲ್ಲ, ಇತರೇತರಾಭಾವವೆಂದು ನಿಶ್ಚಯಿಸಿದೆ. ಹಿಂದೆ ನಾಲ್ಕು ಆರ್ಯ ಸತ್ಯಗಳು ಮುಖ್ಯವೆಂದು ಅಂಗೀಕರಿಸಿದ್ದರು. ಈಗ ಸತ್ಯವನ್ನು ಸಂವೃತಿಸತ್ಯ, ಸಾಮ್ವೃತಸತ್ಯಗಳೆಂದು ವಿಭಾಗಿಸಿ ಪ್ರಪಂಚಕ್ಕೆ ವ್ಯಾವಹಾರಿಕ ಸತ್ಯವಿದೆಯೆಂದು ನಿಶ್ಚಯಿಸಿದರು. ಕರ್ಮ ಪ್ರವೃತ್ತಿಯೆಲ್ಲ ಭ್ರಾಂತಿಮೂಲವಾದುದರಿಂದ ತರ್ಕವೂ ಭ್ರಾಂತಿ. ವಿದ್ವದನುಭವನೇ ಪಾರಮಾರ್ಥಿಕಸತ್ಯ.[11] ಇವರಲ್ಲಿ ಕೆಲವರು (ಸ್ವಾತನ್ತ್ರಿಕರು) ಅನ್ಯಮತಖಣ್ಡನೆಗಾಗಿ ಮಾತ್ರ ತರ್ಕವನ್ನಂಗೀಕರಿಸಿದರು. ಈ ಮಹಾಯಾನ ಪಂಥದಲ್ಲಿ ಸರ್ವಮುಕ್ತಿವಾದವು ಹೊರಟಿತು. ಜ್ಞಾನದ ಪರಾಕಾಷ್ಠದಶೆಯಾದ ಪ್ರಜ್ಞಾಪಾರಮಿತಾ[12]ಯೆಂಬುದು ಬುದ್ಧನ ಜ್ಞಾನಕಾಯ. ವ್ಯಾವಹಾರಿಕ ದಶೆಯಲ್ಲಿ ಬುದ್ಧನಿಗೆ ಸ್ವಭಾವಕಾಯವಿದೆ. ಇವೆರಡಕ್ಕೂ ಅತಿಶಯವಾದುದೂ, ಲೋಕೋತ್ತರವಾದುದೂ, ಸುಖಸ್ವರೂಪವಾದುದೂ ಬುದ್ಧನ ಸಂಭೋಗಕಾಯ. ಆದರೇ ಈ ಸಂಭೋಗಕಾಯದಲ್ಲಿಯೂ ದುಃಖದ ಲೇಶವು ಇರುವದರಿಂದ ಬುದ್ಧನಿಗೂ ಸ್ವಲ್ಪ ಸಂವೃತಿಯಿದೆ.

---

11 ಧರ್ಮಸ್ಯಧರ್ಮೇಣ ಶೂನ್ಯತ್ವಾತ್ ಸರ್ವಧರ್ಮ ಶೂನ್ಯತಾ | ಸರ್ವಧರ್ಮಾಣಾಂ ಸಂಸ್ಕೃತಾಸಂಸ್ಕೃತರಾಶೇರಿತರೇತರಾಪೇಕ್ಷತ್ವೇನ ಸ್ವಭಾವಾಪರಿನಿಷ್ಪನ್ನತ್ವಾತ್ || (ಹರಿಭದ್ರ—ಅಭಿಸಮಯಾಲಂಕಾರಾಲೋಕ).

ಅನ್ಯತ್ಪ್ರತೀತ್ಯಯದಿನಾಮ ಪರೋಽಭವಿಷ್ಯ-| ಜ್ಜಾಯೇತತರ್ಹಿಬಹುಳಃ ಶಿಖಿನೋಂಧಕಾರಃ| ಸರ್ವಸ್ಯಜನ್ಮ ಚ ಭವೇತ್ಖಲು ಸರ್ವತಶ್ಚ | ತುಲ್ಯಂ ಪರತ್ವಮಖಿಲೇಽಜನಕೇಽಪಿಯಸ್ಮಾತ್ || ನಾಗಾರ್ಜುನ—ವಿಗ್ರಹವ್ಯಾವರ್ತಿನೀ.

ಸದ್ ಅಸದ್ ಸದಸಚ್ಚೇತಿ ಯಸ್ಯಪಕ್ಷೋನವಿದ್ಯತೇ | ಉಪಾಲಮ್ಭಶ್ಚಿರೇಣಾಪಿ ತಸ್ಯ ವಕ್ತುಂನಶಕ್ಯತೇ || ಆರ್ಯದೇವ—ಶತಶಾಸ್ತ್ರ.

12 ಸರ್ವೇಷಾಮಪಿ ವೀರಾಣಾಂ ಪರಾರ್ಥನಿಯತಾತ್ಮನಾಮ್ | ಯ್ಯಾಧಿಕಾಜನಯಿತ್ರೀಚ ಮಾತಾತ್ವಮಸಿ ವತ್ಸಲಾ || ಪ್ರಜ್ಞಾಪಾರಮಿತಾಮನ್ತ್ರ.

ಬುದ್ಧನನ್ನು ಜಗತ್ತಿಗೆ ಕಾರಣನಲ್ಲದಿದ್ದರೂ ದೇವತೆಯಂತೆ ಗಣಿಸಿ ವಿಗ್ರಹಾರಾಧನೆಯು ಆರಂಭವಾಯಿತು. ಮೊದಲು ಮಧುರೆಯಲ್ಲೂ ಅನಂತರ ಗ್ರೀಕರ ರೀತಿಯನ್ನನುಸರಿಸಿ ಗಾಂಧಾರದಲ್ಲಿಯೂ ವಿಗ್ರಹಗಳನ್ನು ಮಾಡಿ ತಾಂತ್ರಿಕಾಚಾರಗಳಿಂದ ಪೂಜಿಸಲು ತೊಡಗಿದರು. ಪ್ರತಿ ಮನುಷ್ಯನಲ್ಲಿಯೂ ಬುದ್ಧಬೀಜವಿದೆ. ಆದುದರಿಂದ ಕಾಲಕರ್ಮಗಳಿನುಸಾರವಾಗಿ ಎಲ್ಲಾ ಜೀವಗಳೂ ನಿರ್ವಾಣಪದವಿಯನ್ನು ಹೊಂದಬಹುದು ಎಂದು ನಿಶ್ಚಯಿಸಿದರು. ಈ ಮಹಾಯಾನಪಂಥವು ಕ್ರಿಸ್ತಪೂರ್ವ ಎರಡನೆಯ ಶತಾಬ್ದದಲ್ಲಿ ವಿಶಿಷ್ಟರೂಪವನ್ನು ಪಡೆದರೂ ಸ್ಥವಿರವಾದ ಅಥವಾ ಹೀನಯಾನದಂತೆಯೇ ಪ್ರಾಚೀನ. ಎರಡು ಯಾನದವರೂ ಸೌಹಾರ್ದದಿಂದ ಒಂದೇ ಮಠದಲ್ಲಿಯೂ ಇರುತ್ತಿದ್ದರು.

ಮೂರನೆಯ ಘಟ್ಟದಲ್ಲಿ ಮಾಧ್ಯಮಿಕರು ತರ್ಕಕ್ಕೆ ಹೆಚ್ಚು ಗಮನ ಕೊಟ್ಟರು. ಅಸಂಗ, ವಸುಬಂಧು ಮುಂತಾದವರು ಪರಿಕಲ್ಪಿತ, ಪರತಂತ್ರ, ಪರಿನಿಷ್ಪನ್ನಗಳೆಂಬ ಮೂರು ವಿಧಗಳಾದ ಸತ್ಯವನ್ನು ಅಂಗೀಕರಿಸಿ ಆಲಯ ವಿಜ್ಞಾನ ವಾದವನ್ನು ಹೂಡಿದರು. ಕರ್ಮವಾಸನೆಯು ಅನಾದಿಯಾದುದರಿಂದ ಆಲಯ ವಿಜ್ಞಾನವೆಂಬುದೊಂದು ಇದೆ. ಪ್ರಪಂಚದ ಸತ್ಯತ್ವಕ್ಕೆ ಯಾವ ಪ್ರಮಾಣವೂ ಇಲ್ಲ. ಎಲ್ಲವೂ ವಿಜ್ಞಾನ ಮಾತ್ರವಾದುದರಿಂದ ನಿರಾಲಂಬವೆಂದು ಕೆಲವರು ಬೌದ್ಧರು ವಾದಿಸಿದರು. ಆದರೆ ದಿಙ್ನಾಗ, ಶಂಕರಸ್ವಾಮಿ, ಧರ್ಮಕೀರ್ತಿ ಮುಂತಾದವರು ಈ ಆಲಯ ವಿಜ್ಞಾನವಾದವನ್ನು ಪ್ರಚ್ಛನ್ನ ಆತ್ಮಾಸ್ತಿತ್ವವಾದವೆಂದು ನಿರಾಕರಿಸಿ ಶೂನ್ಯವಾದಕ್ಕೆ ಬೇರೆ ರೂಪವನ್ನು ಕೊಟ್ಟರು.[18] ತರ್ಕದಲ್ಲಿ ತ್ರಿಲಕ್ಷಣಹೇತುವಾದವನ್ನು ತಾವೇ ಸೃಷ್ಟಿಸದಿದ್ದರೂ ಅದನ್ನು ಹೆಚ್ಚು ಪ್ರಾಮುಖ್ಯತೆಗೆ ತಂದರು. ಆದುದರಿಂದ ದಿಙ್ನಾಗನಿಗೆ ಮಧ್ಯಯುಗದ ತರ್ಕಶಾಸ್ತ್ರದ ಜನಕನೆಂಬ ಹೆಸರು ಬಂದಿತು. ಇದು ಯೋಗಾಚಾರ ಪಂಥ.

ಕ್ರಿಸ್ತಶಕ ಎಂಟನೆಯ ಶತಮಾನದಿಂದ ಬೌದ್ಧಮತದಲ್ಲಿ ಶೈವ-ಶಾಕ್ತರ ತಾಂತ್ರಿಕಾಚಾರಗಳು ಹೆಚ್ಚಾಗಿ ಸೇರಿ ವಜ್ರಯಾನ, ಮಂತ್ರಯಾನ ಮುಂತಾದ

---

[18] ಯದನ್ತರ್ಜ್ಞೇಯ ತತ್ತ್ವಂ ತದ್ ಬಹಿರ್ವದವ ಭಾಸತೇ | ಸೋऽರ್ಥೋ (ವಿ)ಜ್ಞಾನ ರೂಪತ್ವಾತ್ತತ್ಪ್ರತ್ಯಯತಯಾಪಿಚ || ದಿಙ್ನಾಗನ ಆಲಮ್ಬನ ಪರೀಕ್ಷಾ.—೬-೮.

ಯದಾ ನ ಭಾವೋ ನಾ ಭಾವೋ ಮತೇಃ ಸಂತಿಷ್ಠತೇ ಪುರಃ | ತದಾನ್ಯಗತ್ಯಭಾವೇನ ನಿರಾಲಮ್ಬಃ ಪ್ರಸಜ್ಯತೇ || ಶಾಂತಿದೇವ—ಬೋಧಿಚರ್ಯಾವತಾರ.

ನಿಃಸ್ವಭಾವಂ ನಿರಾಲಮ್ಬಂ ಸರ್ವಶೂನ್ಯಂನಿರಾಲಯಂ | ಪ್ರಪಂಚಸಮತಿಕ್ರಾನ್ತ ಬೋಧಿಚಿತ್ತಸ್ಯಲಕ್ಷಣಮ್ || ನೈರಾತ್ಮ್ಯಪರಿಪೃಚ್ಛ.

ಪಂಗಡಗಳುಂಟಾದುವು. ಶೂನ್ಯವೇ ವಜ್ರ.[14] ಬೌದ್ಧಮತದ ಈ ರೂಪವು ಪೂರ್ವದೇಶಗಳಲ್ಲಿ ಪ್ರಚಾರವಾಯಿತು. ಬೌದ್ಧಮತದ ಪತನಹೇತುವೂ ಆಯಿತು. ಹೀಗೆ ಬುದ್ಧನಿರ್ವಾಣದನಂತರ ಮೂಲ ಮತವು ಅಶೋಕ, ಕನಿಷ್ಕ, ಹರ್ಷವರ್ಧನರ ಕಾಲಗಳಲ್ಲಿ ಬೇರೆ ಬೇರೆ ರೂಪಗಳನ್ನು ಪಡೆಯಿತು.

ಬೌದ್ಧಮತವು ಹುಟ್ಟಿದ ದೇಶದಲ್ಲಿ ಅದೃಶ್ಯವಾಗಿ ಪರದೇಶಗಳಲ್ಲಿ ಮಾತ್ರ ಜೀವಂತವಾಗಿರುವುದು. ಸನಾತನಧರ್ಮದವರು ಬೌದ್ಧರನ್ನು ಹಿಂಸಿಸಿ ಪರದೇಶಗಳಿಗೆ ಅಟ್ಟಿದರೆಂದು ಕೆಲವು ನಿರಾಧಾರವಾದ ಜನಜನಿತ ಕಥೆಗಳು ಪ್ರಚಾರದಲ್ಲಿವೆ. ಕುಮಾರಿಲರೂ, ಶಂಕರಾಚಾರ್ಯರೂ, ಭಟ್ಟಾಕಲಂಕನೂ ಬೌದ್ಧ ಗ್ರಂಥಗಳನ್ನೂ, ನಾಗಾರ್ಜುನಕೊಂಡ ಕಂಚಿ ಮುಂತಾದ ಸ್ಥಳಗಳಲ್ಲಿದ್ದ ಬೌದ್ಧರ ಸಂಘಾರಾಮಗಳನ್ನೂ ನಾಶಮಾಡಿದರೆಂದು ಕಟ್ಟುಕತೆಗಳಿವೆ. ಆದರೆ ಬೌದ್ಧರಂತೆಯೇ ವೇದಪ್ರಾಮಾಣ್ಯವನ್ನು ಅಂಗೀಕರಿಸದ ಜೈನ ಮತವು ಈಗಲೂ ಸ್ವದೇಶದಲ್ಲಿ ಪ್ರಬಲವಾಗಿರುವದಕ್ಕೆ ಕಾರಣವನ್ನು ವಿವೇಚಿಸಬೇಕು. ಜೈನರು ಈಶ್ವರಾಸ್ತಿತ್ವವನ್ನಂಗೀಕರಿಸದಿದ್ದರೂ, ವೇದಗಳನ್ನು ಪ್ರಮಾಣವೆಂದು ಸ್ವೀಕರಿಸಿದಿದ್ದರೂ ಆತ್ಮವೆಂಬುದು ಇದೆ ಎಂದು ಒಪ್ಪಿಕೊಳ್ಳುವುದರಿಂದಲೇ ಜೈನಮತವು ಉಳಿದಿದೆ. ಜೈನರು ಸ್ವದೇಶೀಯತೆಯನ್ನು ಬಿಟ್ಟವರಲ್ಲ. ನೈರಾತ್ಮ್ಯವಾದವನ್ನೂ ಕೇವಲ ಭಾವನಾಮೂಲಕವಾದ ವಿಶ್ವಕುಟುಂಬತ್ವವನ್ನೂ ಯಾವ ರೂಪದಲ್ಲಿಯೇ ಆಗಲಿ ಭಾರತೀಯರು ಅಂಗೀಕರಿಸಲಾರರು. ನಿರೀಶ್ವರವಾದವು ಸಾಂಖ್ಯ, ಪೂರ್ವಮೀಮಾಂಸಾ, ಜೈನ, ಬೌದ್ಧ, ಚಾರ್ವಾಕ ಮತಗಳಲ್ಲೆಲ್ಲ ಕಂಡುಬರುವದು. ಆದರೆ ನೈರಾತ್ಮ್ಯವಾದವನ್ನು ಪ್ರತಿಪಾದಿಸಿದ ಬೌದ್ಧ, ಚಾರ್ವಾಕ ದರ್ಶನಗಳಿಗೆ ಭರತಖಂಡದಲ್ಲಿ ಸ್ಥಾನವಿಲ್ಲ. ಪೂರ್ವಮೀಮಾಂಸಕರೂ ವೇದಾಂತಿಗಳೂ ತರ್ಕವಿರುದ್ಧವಾದ ಬೌದ್ಧಮತದ ಅಂಶಗಳನ್ನು ನಿರಾಕರಿಸಿದರೂ ಅಹಿಂಸಾ, ಕಾರುಣ್ಯ, ವೈರಾಗ್ಯ, ಲೋಕಸಂಗ್ರಹ ಮುಂತಾದ ಸಾಮಾನ್ಯ ಧರ್ಮಗಳು ಸನಾತನ ಮತಗಳಲ್ಲಿಯೂ ಇದ್ದುದರಿಂದ ಅವನ್ನು ಅಂಗೀಕರಿಸಿ ಬುದ್ಧನನ್ನು ವಿಷ್ಣುವಿನ ಅವತಾರವೆಂದು ಗಣಿಸಿದರು. ಭರತಖಂಡದ ಈಶಾನ್ಯ ಭಾಗದಲ್ಲಿ ಬೌದ್ಧ ಮತಾನುಯಾಯಿಗಳು ಶೈವ ಮತ್ತು ಶಾಕ್ತಮತಗಳನ್ನಂಗೀಕರಿಸಿದರು. ದಕ್ಷಿಣದೇಶದಲ್ಲಿ ಸಂಘಸಾಹಿತ್ಯ ಕಾಲದಲ್ಲಿ ಬೌದ್ಧಮತವು ಪ್ರಬಲವಾಗಿದ್ದಂತೆ ಮಣಿಮೇಖಲೈ, ಶಿಲಪ್ಪದಿಕಾರಂ ಮುಂತಾದ ಗ್ರಂಥಗಳಿಂದ ಕಂಡುಬರುವದು.

---

[14] ದೃಢಂಸಾರಮಸೌಶೀರ್ಯಮಚ್ಛೇದ್ಯಾಭೇದ್ಯಲಕ್ಷಣಂ | ಅದಾಹಿ ಅವಿನಾಶೀಚ ಶೂನ್ಯತಾ ವಜ್ರಮುಚ್ಯತೇ ||

ಬುದ್ಧ ಕಂಚಿಯಲ್ಲಿ ಅಕಲಂಕ, ಶಂಕರಾಚಾರ್ಯರ ಕಾಲದಲ್ಲಿ ಬೌದ್ಧರ ಘಟಿಕಾಸ್ಥಾನವಿದ್ದಿತು. ಬುದ್ಧಘೋಷನು ಕಾವೇರಿ ತೀರದಲ್ಲಿ ಕಳಭ್ರರಾಜನಾದ ಅಚ್ಯುತವಿಕ್ರಾಂತನೆಂಬವನ ಆಳಿಕೆಯಲ್ಲಿ ಅನೇಕ ಗ್ರಂಥಗಳನ್ನು ರಚಿಸಿದನು. ದಿಙ್ನಾಗ, ಧರ್ಮಕೀರ್ತಿ ಮುಂತಾದ ಉದ್ದಾಮ ಪಣ್ಡಿತರು ದಕ್ಷಿಣದೇಶದವರು. ಅಶೋಕನು ಬೌದ್ಧನಾಗಿದ್ದನೆಂಬ ವಿಷಯದಲ್ಲಿ ಪ್ರಬಲ ಸಂಶಯವಿದೆ. ಸಿಂಹಳಗ್ರಂಥಗಳು ಮಾತ್ರ ಮಹಾರಠ್ಠ, ಮಹಿಷಮಂಡಲಗಳಿಗೆ ಮಹಾಧಮ್ಮರಖ್ಖಿತ, ರಖ್ಖಿತ, ಮಹಾದೇವ ಎಂಬ ಭಿಕ್ಷುಗಳು ಅಶೋಕನ ಕಾಲದಲ್ಲಿ ಬಂದು ಬೌದ್ಧಮತವನ್ನು ಪ್ರಚಾರಮಾಡಿದರೆಂದು ಹೇಳುವವು. ಏಳನೆಯ ಶತಾಬ್ದದಲ್ಲಿ ಪ್ರವಾಸ ಮಾಡಿದ ಯುವಾನ್‌ಚ್ವಾಂಗನು ಅಶೋಕನು ನಿರ್ಮಿಸಿದ ಚೈತ್ಯಗಳೂ, ಸಂಘಾರಾಮಗಳೂ, ವಿಹಾರಗಳೂ, ಕಂಚಿ, ಕೊಂಕಣಪುರ (ಬನವಾಸಿ), ಬಾದಾಮಿ ಮುಂತಾದ ಸ್ಥಳಗಳಲ್ಲಿ ಇದ್ದವೆಂದೂ ಕರ್ಣಾಟಕದಲ್ಲಿ ಎರಡು ಪಂಥದವರೂ ಇದ್ದರೆಂದು ಹೇಳಿರುವನು. ಬೆಳಗಾಮಿಯ ವಿಶ್ವವಿದ್ಯಾಲಯದಲ್ಲಿ ಚತುಸ್ಸಮಯ (ಶೈವ, ವೈಷ್ಣವ, ಜೈನ, ಬೌದ್ಧ)ಗಳನ್ನು ಉಪದೇಶಿಸುತ್ತಿದ್ದರೆಂದು ಶಾಸನಗಳಿಂದ ತಿಳಿದುಬರುವದು. ಶ್ರೀ ರಾಮಾನುಜಾಚಾರ್ಯರು ಜೈನರನ್ನೂ ಬೌದ್ಧರನ್ನೂ ವಿಷ್ಣುವರ್ಧನನ ಕಾಲದಲ್ಲಿ ವಾದದಲ್ಲಿ ಸೋಲಿಸಿದರೆಂದು ಹೇಳಲಾಗಿದೆ. ಬೆಳಗಾಮಿಯಲ್ಲಿ ೧೨ನೆಯ ಶತಾಬ್ದದ ವರೆಗೂ ತಾರಾಭಗವತಿಯ ಪೂಜೆಯು ಇದ್ದಿತೆಂಬುದಕ್ಕೆ ಇಲ್ಲಿ ಸಿಕ್ಕಿರುವ ಒಂದು ವಿಗ್ರಹವು ಸಾಕ್ಷಿಯಾಗಿದೆ. ಕಂಚಿಯಲ್ಲಿ ಶಂಕರಾಚಾರ್ಯರು ತಾರಾಭಗವತಿಯ ದೇವಾಲಯವನ್ನು ಮಾರ್ಪಡಿಸಿ ಮಹಿಷಮರ್ದಿನೀ ಅಥವಾ ಕಾಮಾಕ್ಷೀ ಪೂಜೆಯನ್ನು ಪ್ರಚಾರಕ್ಕೆ ತಂದರೆಂದು ಒಂದು ಐತಿಹ್ಯವಿದೆ. ಈಗಲೂ ಕೂಡ ಬೌದ್ಧಮತದ ಅವಶೇಷಗಳು ಕಂಚಿಯಲ್ಲಿ ಕಂಡುಬರುವವು. ಮಂಜುಶ್ರೀಮೂಲಕಲ್ಪವೆಂಬ ಎಂಟನೆಯ ಶತಾಬ್ದದ ಬೌದ್ಧಗ್ರಂಥದಲ್ಲಿ ಮಂಜುಶ್ರೀ ಅಥವಾ ಅವಲೋಕಿತ ಬೋಧಿಸತ್ವ ಪೂಜೆಯು ದಕ್ಷಿಣದೇಶದಲ್ಲಿ ಪ್ರಚಾರಹೊಂದಿತೆಂದು ಹೇಳಿದೆ.[15]

ನಾಗಾರ್ಜುನನು ಕರ್ಣಾಟಕದಲ್ಲಿ ನಾಗಾವಿಯಲ್ಲಿದ್ದನೆಂದೂ ಶಾತವಾಹನ ರಾಜನ ಮಿತ್ರನಾಗಿದ್ದು ಸುಹೃಲ್ಲೇಖವನ್ನು ಬರೆದನೆಂದೂ, ಅನಂತರ ಶಾತ

[15] ಮಂಜುಶ್ರಿಯೋಽಥಮಹಾತ್ಮಾ(ಂ)ವೈ ಕುಮಾರೋ ಬಾಲರೂಪಿಣಃ| ಸಿಧ್ಯತೇ ಚತದಾ ದೇಶೇ ಕಲಿಪ್ರಾಪ್ತೇ(ಚ)ತದಾಯುಗೇ || ಪರ್ವತಂವಿನ್ಧ್ಯಮಾಶ್ರ (ಶ್ರಿ)ತಂ ಸಾಗರೇ ಲವಣೋದಕೇ| ಕಾರ್ತಿಕೇಯೇತಿ ಸಾಮಾಖ್ಯಾತಃ ಸತ್ತ್ವಾನಾಂ ವರದಾಯಕಃ| ಅಜ್ಞಾಂಭೋ ! ಬೋಧಿಸತ್ವೇನ ಮಂಜುಘೋಷೇಣಧೀಮತಾ| ಸತ್ತ್ವಾನಾಂಹಿತ ಕಾಮ್ಯಾರ್ಥಂ

ವಾಹನರಾಜ್ಯದಲ್ಲಿದ್ದ ಶ್ರೀಶೈಲ (ನಾಗಾರ್ಜುನಿಕೊಂಡ)ಕ್ಕೆ ಹೋಗಿ ಅಲ್ಲಿ ಸಂಘಾರಾಮಗಳನ್ನು ಸ್ಥಾಪಿಸಿದನೆಂದೂ ತಿಳಿದುಬರುವದು. ಶಾತವಾಹನರ ಅನಂತರ ಆನ್ಧ್ರದೇಶದಲ್ಲಿ ಇಕ್ಷ್ವಾಕುವಂಶದ ರಾಜರು ಬೌದ್ಧಮತವನ್ನು ಪ್ರೋತ್ಸಾಹಿಸಿದರು. ಕಾರ್ಲೆ, ನಾಸಿಕ, ಅಜನ್ತಾ, ಅಮರಾವತೀ, ಜಗ್ಗಯ್ಯ ಪೇಟ, ಗೋಲಿ, ಬೆಜವಾಡ ಮುಂತಾದ ಸ್ಥಳಗಳಲ್ಲಿ ಶಿಲ್ಪಕಲೆಯು ಬೌದ್ಧರಿಂದ ವಿಕಾಸಹೊಂದಿತು. ದೇಶಾಂತರಗಳಲ್ಲಿ ಬೌದ್ಧಮತವು ಹೇಗೆ ಹರಡಿತೆಂಬು ದನ್ನು ಮುಂದೆ ವಿವರಿಸುವೆವು. ಪಶ್ಚಿಮ ತೀರಪ್ರದೇಶದಲ್ಲಿ, ಈಗಲೂ ಪ್ರಚಾರದಲ್ಲಿರುವ ಶಾಸ್ತ (ಅಯ್ಯನಾರ್), ಭಗವತೀ, ಮಂಜುನಾಥ, ಕುಮಾರ ಸ್ವಾಮಿ (ಮುರುಗನ್), ಮತ್ತು ಬಹುಶಃ ವೆಂಕಟ ಮತ್ತು ಧರ್ಮರಾಯ ಪೂಜೆಗಳು ಬೌದ್ಧಮತದ ಸಂಪರ್ಕವನ್ನು ತೋರಿಸುವವೆಂದು ಹೇಳಬಹುದು. ಹೀಗೆ ದಕ್ಷಿಣಾಪಥದಲ್ಲಿ ಶಾತವಾಹನ, ಚೋಳ, ಚಾಳುಕ್ಯ, ಪಲ್ಲವ, ಹೊಯ್ಸಳ, ಕಾಕತೀಯರ ಕಾಲಗಳಲ್ಲಿ ಬೌದ್ಧಮತವು ಇದ್ದಿತು. ವಿಜಯನಗರ ಸ್ಥಾಪನೆ ಯಾದ ಅನಂತರ ಬೌದ್ಧಮತದ ಕುರುಹು ಕಾಣುವದಿಲ್ಲ.

ಉತ್ತರದಲ್ಲಿ ಮುಸ್ಲಿಮ್ ದಂಡನಾಯಕನಾದ ಮುಹಮ್ಮದ್ ಬಾಖ್ತಿ ಯಾರ್ ಎಂಬುವನು ಬಂಗಾಳ ದೇಶವನ್ನು ಗೆದ್ದು ಬೌದ್ಧಮತದ ಕೇಂದ್ರ ಗಳಾದ ನಾಲಂದಾ ಮತ್ತು ವಿಕ್ರಮಶೀಲಾ ವಿಶ್ವವಿದ್ಯಾಲಯಗಳನ್ನು ನಾಶ ಮಾಡಿ ಬೌದ್ಧಭಿಕ್ಷುಗಳನ್ನು ಓಡಿಸಿದುದರಿಂದ ಬೌದ್ಧಮತವು ಕ್ಷೀಣವಾಗುತ್ತ ಬಂದಿತು. ಹದಿನಾರನೆಯ ಶತಾಬ್ದದಲ್ಲಿ ಪೋರ್ಚುಗೀಸರು ಬಂದು ಕನ್ಹೇರಿ ಸಂಘಾರಾಮದಲ್ಲಿದ್ದ ಬೌದ್ಧರನ್ನೆಲ್ಲ ಬಲವಂತವಾಗಿ ಕ್ರೈಸ್ತ ಮತಕ್ಕೆ ಸೇರಿಸಿ ಕೊಂಡರು. ಈ ಕಾರಣಗಳಿಂದ ಬೌದ್ಧಮತವು ಭರತಖಂಡದಲ್ಲಿ ಅದೃಶ್ಯ ವಾಯಿತು.

**ಆರ್ಹತದರ್ಶನ:** ಜೈನಮತದಲ್ಲಿ ಜೀವ ಅಜೀವಗಳೆಂದು ದ್ರವ್ಯವು ಎರಡುವಿಧ. ಜೀವಲಕ್ಷಣಗಳು ಉಪಯೋಗಮಯ (ಚಾರ್ವಾಕ—ನೈಯಾ ಯಿಕ ಪ್ರತಿ), ಅಮೂರ್ತ (ಚಾರ್ವಾಕ—ಭಾಟ್ಟ ಪ್ರತಿ), ಕರ್ತ (ಸಾಂಖ್ಯ ಪ್ರತಿ), ಸ್ವದೇಹ ಪರಿಮಾಣ (ನೈಯಾಯಿಕ-ಸಾಂಖ್ಯ-ಮೀಮಾಂಸಕ ಪ್ರತಿ), ಭೋಕ್ತಾ (ಬೌದ್ಧ ಪ್ರತಿ), ಸಂಸಾರಸ್ಥ (ಸದಾಶಿವಮತ ಪ್ರತಿ), ಸಿದ್ಧ (ಭಾಟ್ಟ

ನಿವಸೇದ್ದಕ್ಷಿಣಾಂದಿಶಿ || ಕಾರ್ತಿಕೇಯಸ್ಯಯೇಮನ್ತ್ರಾ ಕಥಿತಾಮಂಜುಭಾಣಿನಾ | ತಸ್ಮಿನ್ ದೇಶೇತದಾಸಿದ್ಧಿಃ ಭವಿಷ್ಯತಿ ನ ಸಂಶಯಃ || ಶ್ರೀಪರ್ವತೇ ತದಾ ದೇಶೇ ವಿನ್ಧ್ಯಕುಕ್ಷಿ ನಿತಮ್ಬಯೋಃ | ನಾನಾದ್ವೀಪೇಷು ಸರ್ವತ್ರ ಕಳಿಂಗೋದ್ರೇಷು ಕೀರ್ತ್ಯತೇ || ಮಂಜು ಶ್ರೀಮೂಲಕಲ್ಪ. *Tr- Skt. S.* ೬೩೬.

—ಚಾರ್ವಾಕ ಪ್ರತಿ) ಮತ್ತು ಊರ್ಧ್ವಗತಿಸ್ವಭಾವವುಳ್ಳದ್ದೆಂದು ನಿರ್ಧರಿಸಿದೆ. ಜೀವಗಳಲ್ಲಿ ಬದ್ಧ ಮುಕ್ತರೆಂಬ ಭೇದವಿದೆ. ಬದ್ಧರಲ್ಲಿ ಸ್ಪರ್ಶೇನ್ದ್ರಿಯವನ್ನು ಮಾತ್ರ ಹೊಂದಿದ ಸ್ಥಾವರ, ಹೆಚ್ಚು ಇನ್ದ್ರಿಯಗಳುಳ್ಳ ತ್ರಸ ಎಂಬ ಎರಡು ಪಂಗಡಗಳಿವೆ. ಅಜೀವ ದ್ರವ್ಯಗಳು ಧರ್ಮ, ಅಧರ್ಮ, ಆಕಾಶ, ಪುದ್ಗಲ, ಕಾಲ ವೆಂಬುವು. ಕಾಲವನ್ನು ಬಿಟ್ಟು ಮಿಕ್ಕ ಐದೂ ಅಸ್ತಿಕಾಯಗಳು. ಪುದ್ಗಲವು ಶುದ್ಧವಾದ ಆತ್ಮವನ್ನು ಹೊಕ್ಕು (ಆಸ್ರವ) ಬಂಧನವನ್ನುಂಟುಮಾಡುವದು. ಇದರಿಂದ ಸಂವರ ಉಂಟಾಗುವದು. ಆತ್ಮದಿಂದ ಪುದ್ಗಲವನ್ನು ಸಮ್ಯಗ್ದರ್ಶನ. ಸಮ್ಯಗ್ ಜ್ಞಾನ, ಸಮ್ಯಕ್ಚಾರಿತ್ರಗಳೆಂಬ ರತ್ನತ್ರಯಗಳ ಸಹಾಯದಿಂದ ಹೊರಕ್ಕೆ ಹೊರಡಿಸುವದಕ್ಕೆ ನಿರ್ಜರವೆಂದು ಹೆಸರು. ಇದರಿಂದ ಮೋಕ್ಷವು ಲಭಿಸುತ್ತದೆ. ಇಂತಹ ಮೋಕ್ಷಮಾರ್ಗವನ್ನು ಬೋಧಿಸುವವರೂ, ನಾಲ್ಕು ವಿಧವಾದ ಕರ್ಮಗಳನ್ನು (ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ, ಅನ್ತರಾಯ) ನಾಶಪಡಿಸಿಕೊಂಡಿರುವವರೂ, ದರ್ಶನ, ಸುಖ, ಜ್ಞಾನ, ವೀರ್ಯವುಳ್ಳವರೂ ಅರ್ಹತ್, ತೀರ್ಥಂಕರ (ತೀರ್ಥಂ ಪ್ರವಚನಂ. ತತ್ಪ್ರಕಾಶತ್ವಾತ್ ತೀರ್ಥ ಕರತ್ವಮ್), ವೀತರಾಗರೆಂದು ಎನಿಸಿಕೊಳ್ಳುವರು. ಋಷಭ ತೀರ್ಥಂಕರನಿಂದ ವರ್ಧಮಾನ ಮಹಾವೀರನ ವರೆಗೂ ಚತುರ್ವಿಂಶತಿ ತೀರ್ಥಂಕರರು ಈ ಮತವನ್ನು ಪ್ರಚಾರಮಾಡಿದರು.[16] ಲೋಕ ಶಿಖರದಲ್ಲಿ ಕರ್ಮದೇಹವನ್ನು ನಾಶಮಾಡಿ ಲೋಕಾಲೋಕವನ್ನರಿತ ಜ್ಞಾನಿಗಳು ಸಿದ್ಧರು. ದರ್ಶನಜ್ಞಾನ ಪ್ರಧಾನವಾಗಿ ವೀರ್ಯ, ಚಾರಿತ್ರ, ತಪ, ಆಚಾರ ಪರರಾದವರು ಆಚಾರ್ಯರು. ರತ್ನತ್ರಯಗಳಿಂದ ಕೂಡಿ ಯಾವಾಗಲೂ ಧರ್ಮೋಪದೇಶದಲ್ಲಿ ನಿರತರಾದವರು ಉಪಾಧ್ಯಾಯರು. ಶುದ್ಧರಾಗಿ ನಿತ್ಯವೂ ದರ್ಶನ ಜ್ಞಾನಚಾರಿತ್ರಗಳನ್ನು ಸಾಧಿಸುವವರು ಸಾಧುಗಳು. ಇವರೈವರಿಗೂ ಪಂಚಪರಮೇಷ್ಠಿಗಳೆಂದು ಹೆಸರು. "ಅರ್ಹತರಿಗೆ ನಮಸ್ಕಾರ, ಸಿದ್ಧರಿಗೆ ನಮಸ್ಕಾರ, ಆಚಾರ್ಯರಿಗೆ ನಮಸ್ಕಾರ, ಉಪಾಧ್ಯಾಯರಿಗೆ ನಮಸ್ಕಾರ ಲೋಕದ ಸರ್ವಸಾಧುಗಳಿಗೆ ನಮಸ್ಕಾರ" ಎಂಬುದು ಪಂಚಪರಮೇಷ್ಠಿ ನಮಸ್ಕಾರ ಮನ್ತ್ರ.[17]

---

16 ಋಷಭ, ಅಜಿತ, ಶಂಭುನಮಿ, ವಿಮಲ, ಸುವ್ರತ, ಚನ್ದ್ರ, ಶಾನ್ತಿ, ಕುಂಥು, ಸುಮತಿ, ಸುವಿಧಿ, ಶೀತಲ, ವಾಸುಪೂಜ್ಯ, ಧರ್ಮ, ನನ್ದನ. ಮಲ್ಲಿ, ಸುಪಾರ್ಶ್ವ, ಅರ, ಪದ್ಮಪ್ರಭ, ಶ್ರೇಯಾಂಸ, ಅನನ್ತ, ನೇಮಿ, ಪಾರ್ಶ್ವ, ಮಹಾವೀರ,

17 ಣಮೋ ಅರಿಹನ್ತಾಣಂ, ಣಮೋಸಿದ್ಧಾಣಂ ಣಮೋ ಆಇರಿಯಾಣಂ, ಣಮೋ ಉವಜ್ಝಾಯಾಣಂ, ಣಮೋ ಲೋಏ ಸವ್ವಸಾಹೂಣಮ್.

ಜೈನರು ಅನೈಕಾಂತವಾದಿಗಳು. ಜ್ಞಾನವು ಅಭಿನ್ನ ಬೋಧ, ಶ್ರುತ, ಅವಧಿ, ಮನಃಪರ್ಯಾಯ ಮತ್ತು ಕೇವಲ ಎಂಬ ಐದು ರೂಪವಾಗಿದೆ. ಇವುಗಳಲ್ಲಿ ಶ್ರುತಜ್ಞಾನದಲ್ಲಿ ನಯ ಸಪ್ತಭಂಗೀ ಪ್ರಮಾಣಸಪ್ತಭಂಗೀ ಎಂದು ಎರಡು ವಿಧ. ನಯದಲ್ಲಿ ದ್ರವ್ಯಾರ್ಥಿಕ, ಪರ್ಯಾಯಾರ್ಥಿಕವೆಂದು ಎರಡು ವಿಧ. ದ್ರವ್ಯಾರ್ಥಿಕವು ನೈಗಮ, ಸಂಗ್ರಹ, ವ್ಯವಹಾರವೆಂದೂ ; ಪರ್ಯಾಯಾರ್ಥಿಕವು ಋಜುಸೂತ್ರ, ಶಬ್ದ, ಸಮಭಿರೂಢ ಮತ್ತು ಏವಂಭೂತನೆಂಬುದಾಗಿ ವಿಭಾಗಿಸಲ್ಪಟ್ಟಿವೆ. ಪ್ರಮಾಣ ಸಪ್ತಭಂಗಿಗೆ ಸ್ಯಾದ್‌ವಾದವೆಂದು ಹೆಸರು. "ಸ್ಯಾದಸ್ತಿ" ಎಂಬುದು ವಿಧಾನ ವಿವಕ್ಷೆಯಲ್ಲಿಯೂ, "ಸ್ಯಾನ್ನಾಸ್ತಿ" ನಿಷೇಧದಲ್ಲಿಯೂ, "ಸ್ಯಾದಸ್ತಿಚ ನಾಸ್ತಿಚ" ಎಂಬುದು ಕ್ರಮದಿಂದ ಉಭಯವಾಂಛೆಯಲ್ಲಿಯೂ, "ಸ್ಯಾದವಕ್ತವ್ಯಂ" ಯುಗಪದ್ವಿವಕ್ಷೆಯಲ್ಲಿ ಅಶಕ್ತಿಯಿಂದಲೂ "ಸ್ಯಾದಸ್ತಿ ಅವಕ್ತವ್ಯಂ" ಆದ್ಯವಾಚ್ಯ ವಿವಕ್ಷೆಯಲ್ಲಿಯೂ, "ಸ್ಯಾನ್ನಾಸ್ತಿ ಅವಕ್ತವ್ಯಂ" ಎಂಬುದು ಅಂತ್ಯವಾಚ್ಯ ವಿವಕ್ಷೆಯಲ್ಲಿಯೂ, "ಸ್ಯಾದಸ್ತಿಚ ನಾಸ್ತಿಚ ಅವಕ್ತವ್ಯಂ" ಎಂಬುದು ಸಮುಚ್ಚಯದಲ್ಲಿಯೂ ಪರಮತ ಖಂಡನೆಗಾಗಿ ಉಪಯುಕ್ತವಾಗುವವು.[18] ಈ ತರ್ಕದಿಂದ ಸರ್ವಜ್ಞಾನವೂ ಅನೈಕಾಂತಿಕವಾಗುವದೆಂದು ಹೇಳಲಾಗದು. ಸಮ್ಯಗ್ ಜ್ಞಾನವು ಸಂಶಯ, ವಿಮೋಹ, ವಿಭ್ರಮ ವಿವರ್ಜಿತವೆಂದೂ, ಆತ್ಮಪರಸ್ವರೂಪವೆಂದೂ, ಸಾಕಾರ, ಅನೇಕ ಭೇದ ಮತ್ತು ಗ್ರಹಣಶಕ್ತಿಯುಳ್ಳದ್ದೆಂದು ನಿರ್ಧರಿಸಿದೆ.[19]

ಗೌತಮಬುದ್ಧನ ಸಮಕಾಲೀನನಾದ ವರ್ಧಮಾನಮಹಾವೀರನೂ, ಆತ

---

[18] ತದ್ವಿಧಾನವಿವಕ್ಷಾಯಾಂ ಸ್ಯಾದಸ್ತೀತಿಗತಿರ್ಭವೇತ್ | ಸ್ಯಾನ್ನಾಸ್ತೀತಿಪ್ರಯೋಗ ಸ್ಯಾತ್ ತನ್ನಿಷೇಧೇ ವಿವಕ್ಷಿತೇ || ಕ್ರಮೇಣೋಭಯವಾಂಛಾಯಾಂ ಪ್ರಯೋಗಃ ಸಮುದಾಯವಾನ್ | ಯುಗಪದ್ವಿವಕ್ಷಾಯಾಂತು ಸ್ಯಾದವಾಚ್ಯಮಶಕ್ತಿತಃ || ಆದ್ಯವಾಚ್ಯವಿವಕ್ಷಾಯಾಂ ಪಂಚಮೋಭಂಗ ಇಷ್ಯತೇ | ಅನ್ತ್ಯವಾಚ್ಯವಿವಕ್ಷಾಯಾಂ ಷಷ್ಠೋಭಂಗಃಸಮುದ್ಭವಃ || ಸಮುಚ್ಚಯೇನ ಯುಕ್ತಶ್ಚ ಸಪ್ತಮೋಭಂಗಉಚ್ಯತೇ || ಅಕಲಂಕ—ತತ್ತ್ವಾರ್ಥರಾಜವಾರ್ತಿಕ.

[19] ಜೀವಃಉಪಯೋಗಮಯಃ ಅಮೂರ್ತಃ ಕರ್ತಾಸ್ವದೇಹಪರಿಮಾಣಃ | ಭೋಕ್ತಾಸಂಸಾರಸ್ಥಃಸಿದ್ಧಃ ಸವಿಸ್ರಸಾಊರ್ಧ್ವಗತಿಃ || ದ್ರವ್ಯಸಙ್ಗ್ರಹ—I, ೨.

ಜೀವ ಇತಿ ಭವತಿ ಚೇತನೋಪಯೋಗ ವಿಶೇಷಿತಃ ಪ್ರಭುಃ ಕರ್ತಾ | ಭೋಕ್ತಾಚ ದೇಹಮಾತ್ರೋ ನಹಿಮೂರ್ತಃ ಕರ್ಮಸಂಯುಕ್ತಃ || ಪಂಚಾಸ್ತಿಕಾಯ,ಪೂ—I, ೨೮.

ಸಂಶಯವಿಮೋಹವಿಭ್ರಮವಿವರ್ಜಿತಂ ಆತ್ಮಪರಸ್ವರೂಪಸ್ಯ | ಗ್ರಹಣಂ ಸಮ್ಯಗ್‌ಜ್ಞಾನಂ ಸಾಕಾರಮನೇಕಭೇದಂ ಚ || ದ್ರವ್ಯಸಙ್ಗ್ರಹ.

ಸಿಗೆ ಹಿಂದೆ ಕ್ರಿಸ್ತಪೂರ್ವ ಎಂಟನೆಯ ಶತಾಬ್ದದಲ್ಲಿದ್ದ ಪಾರ್ಶ್ವನಾಥನೂ ಚಾರಿತ್ರಕ ವ್ಯಕ್ತಿಗಳೆಂದು ಯಾಕೊಬಿ ಹೇಳುವರು. ವೀರನಿರ್ವಾಣದ ಕಾಲವು ಕ್ರಿಸ್ತಪೂರ್ವ ೫೫೭ ಎಂದೂ ಡಾ. ಕಾರ್ಪೆಂಟೀರ್, ಕ್ರಿಸ್ತಪೂರ್ವ ೫೨೮ ಎಂದೂ ಮೇರುತುಂಗನು, ಆಟೋಸ್ಟಿನ್ ಕ್ರಿಸ್ತಪೂರ್ವ ४೬३-४೬೨ ಯೆಂದೂ, ನೇಮಿಚನ್ದ್ರನು ಕ್ರಿಸ್ತಪೂರ್ವ ೬೮೨ ಎಂದೂ ಶ್ರವಣಬೆಳಗೊಳ ಶಾಸನಗಳು ವಿಕ್ರಮನಿಗೆ ಹಿಂದೆ ೬೦೫ ವರ್ಷ, "ಶಕ" ಕಾಲಕ್ಕೆ ಹಿಂದೆ ४೬೧, ೯೭೯೫, ೧४೭೯३ ಎಂಬುದಾಗಿ ಹೇಳಲಾಗಿದೆ. ವರ್ಧಮಾನ ಮಹಾವೀರನು ಗೌತಮಬುದ್ಧ, ಮಂಖಲೀ ಪುತ್ರಗೋಶಾಲರಿಗಿಂತ ವಯಸ್ಸಿನಲ್ಲಿ ಜ್ಯೇಷ್ಠನು ಮತ್ತು ಬುದ್ಧನ ನಿರ್ವಾಣಕ್ಕೆ ಮುಂಚೆಯೇ ನಿರ್ವಾಣವನ್ನು ಪಡೆದನು.

ಮಹಾವೀರ ನಿರ್ವಾಣಾನಂತರ ಏಕಾದಶ ಗಣಧರರೂ, ಸಪ್ತಗಣಗಳೂ, ಅನುಬದ್ಧ ಕೇವಲಿಗಳೂ, ಶ್ರುತಕೇವಲಿಗಳೂ, ಅಭಿನ್ನದಶಪೂರ್ವಧರರೂ, ಏಕಾದಶಾಂಗಧರರೂ, ಆಚಾರಾಂಗಧರರೂ, ಸೂರಿಗಳೂ ಕ್ರಿಸ್ತಶಕ ಒಂದನೆಯ ಶತಾಬ್ದದ ವರೆಗೆ ಜೈನಮತವನ್ನು ಪ್ರಚಾರಮಾಡಿದರು.[20] ಶ್ರುತಕೇವಲಿ ಭದ್ರಬಾಹುವು ತನ್ನ ಶಿಷ್ಯನಾದ ಮೌರ್ಯಚನ್ದ್ರಗುಪ್ತನೊಡನೆ "ಕಟ್ಬಪ್ಪು" (ಕಟವಪ್ರ=ಶ್ರವಣಬೆಳಗೊಳ) ಪರ್ವತಕ್ಕೆ ಬಂದು ಇಲ್ಲಿಯೇ

[20] ೧೧ ಗಣಧರರರು-ಇನ್ದ್ರಭೂತಿ, ಗೌತಮತ, ಅಗ್ನಿಭೂತಿ, ವಾಯುಭೂತಿ, ಅಕಮ್ಪನ, ಮೌರ್ಯ, ಸುಧರ್ಮಪುತ್ರ, ಮೈತ್ರೇಯ, ಮೌನ್ದ್ಯ, ಅಂಧವಲ, ಪ್ರಭಾಸಕ,
೭ ಗಣಗಳು—ಪೂರ್ವಜ್ಞ| ವಾದಿ, ಅವಧಿಜ್ಞ, ವೈಕ್ರಿಯಕ, ಶಿಕ್ಷಕ, ಕೇವಲಜ್ಞಾನಿ.
३ ಧೀಪರ್ಯಯಜ್ಞ, ಅನುಬದ್ಧಕೇವಲಿಗಳು (ವೀರನಿರ್ವಾಣಾನಂತರ)—ಗೌತಮ, ಸುಧರ್ಮ, ಜಂಬು.
೫ ಶ್ರುತಕೇವಲಿಗಳು—ವಿಷ್ಣು, ಅಪರಾಜಿತ, ನನ್ದಿಮಿತ್ರ, ಗೋವರ್ಧನ, ಭದ್ರಬಾಹು.
೧೧ ಅಭಿನ್ನದಶಪೂರ್ವಧರರು—ಕ್ಷತ್ರಿಯ, ಪ್ರೋಷ್ಠಿಲ, ಗಂಗದೇವ, ಜಯ, ಸುಧರ್ಮ, ವಿಜಯ. ವಿಶಾಖ, ಬುದ್ಧಿಲ, ಧೃತಷೇಣ, ನಾಗ, ಸಿದ್ಧಾರ್ಥಕ.
೫ ಏಕಾದಶಾಂಗಧರರು—ನಕ್ಷತ್ರ, ಪಾಣ್ಡು, ಜಯಪಾಲ, ಕಂಸಾಚಾರ್ಯ, ದ್ರುಮಷೇಣ.
४ ಆಚಾರಾಂಗಧರರು—ಲೋಹಾಚಾರ್ಯ, ಸುಭದ್ರ, ಯಶೋಭದ್ರ, ಭದ್ರಬಾಹು.
೧३ ಸೂರಿಗಳು—ಕುಮ್ಭ, ವಿನೀತ, ಹಲಧರ, ವಸುದೇವ, ಅಚಲ, ಮೇರು, ಧೀರ, ಸರ್ವಜ್ಞ, ಸರ್ವ (ಗುಪ್ತಿ) ಗುಪ್ತ, ಮಹೀಧರ, ಧನಪಾಲ, ಮಹಾವೀರ, ವೀರ.

ಸಿದ್ಧಿ ಹೊಂದಿದನೆಂದೂ, ಆತನೊಡನೆ ದಿಟ್ಠಿವಾದವೊಂದು ವಿನಾ ಮಿಕ್ಕ ಎಲ್ಲಾ ಜೈನಶಾಸ್ತ್ರಗಳೂ ಮರೆಯಾದವೆಂದೂ, ಹನ್ನೆರಡು ವರ್ಷಗಳನಂತರ ಭದ್ರಬಾಹುವಿನ ಶಿಷ್ಯರು ಉತ್ತರದೇಶಕ್ಕೆ ಹೋದಾಗ ಅಲ್ಲಿದ್ದ ಜೈನರಲ್ಲಿ ವಿರುದ್ಧಾಚಾರಗಳು ಕಂಡುಬಂದುದರಿಂದ ಜೈನಸಂಘದಲ್ಲಿ ಎರಡು ಪಂಗಡಗಳಾದುವೆಂದೂ ದಿಗಂಬರ ಜೈನರು ಹೇಳುವರು. ಶ್ವೇತಾಮ್ಬರರು ಶಾಸ್ತ್ರಗಳೆಲ್ಲವು ತಮ್ಮಲ್ಲಿ ಉಳಿದಿವೆಯೆಂದು ಹೇಳುವರು. ಮೌರ್ಯರಾಜನಾದ ಅಶೋಕನೂ ಸಂಪ್ರತಿಯೂ ಜೈನರೆಂದೂ, ಸಂಪ್ರತಿಯು ಪರ್ಷಿಯ, ಅರೇಬಿಯ ಮುಂತಾದ ದೇಶಗಳಲ್ಲಿಯೂ ಜೈನಮತ ಪ್ರಚಾರಮಾಡಿದನೆಂದೂ ಶ್ವೇತಾಮ್ಬರರ ಗ್ರಂಥಗಳು ಹೇಳುವವು. ಕ್ರಿಸ್ತಪೂರ್ವ ಒಂದನೆಯ ಶತಾಬ್ದದಲ್ಲಿ ಕಾಲಕಾಚಾರ್ಯನು ಶಕರನ್ನು ಕರೆದುಕೊಂಡುಬಂದು ಗರ್ದಭಿಲರ ವಂಶವನ್ನು ನಾಶಮಾಡಿದನು. ಅನಂತರ ವಿಕ್ರಮಾದಿತ್ಯನು ಜೈನಮತವನ್ನು ಪೋಷಿಸಿದನು. ಮಧುರ, ಉಜ್ಜಯಿನಿ, ರಾಜಗೃಹ ಮುಂತಾದ ಸ್ಥಳಗಳಲ್ಲಿ ಈ ಕಾಲದ ಜೈನರ ಶಾಸನಗಳೂ, ತೀರ್ಥಂಕರರ ವಿಗ್ರಹಗಳೂ ಸಿಕ್ಕಿವೆ. ಇದೇ ಸಮಯದಲ್ಲಿ ಕಳಿಂಗರಾಜನಾದ ಖಾರವೇಲನು ಜೈನಮತಕ್ಕೆ ಪ್ರೋತ್ಸಾಹಕೊಟ್ಟನು.

ಕ್ರಿಸ್ತಶಕ ಒಂದನೆಯ ಶತಾಬ್ದದಲ್ಲಿ ಕುಂಡಕುಂದಾಚಾರ್ಯ ಮತ್ತು ಉಮಾಸ್ವಾತಿ (ಮಿ) ಪ್ರಕರಣ ಗ್ರಂಥಗಳನ್ನು ರಚಿಸಿದರು. ಕುಂಡಕುಂದಾಚಾರ್ಯನು ಗುಂತಕಲ್ ಬಳಿಯಲ್ಲಿರುವ ಕೊನಕೊಂಡ್ಲ ಎಂಬ ಸ್ಥಳದಲ್ಲಿ ತಪಸ್ಸು ಮಾಡಿದನೆಂದು ಕೆಲವು ಶಾಸನಗಳು ಹೇಳುವವು. ಈತನಿಗೆ ಏಲಾಚಾರ್ಯ, ಪದ್ಮನನ್ದಿ, ವಕ್ರಗ್ರೀವ, ಗೃದ್ಧ್ರಪಿಂಛ ಎಂಬ ಹೆಸರುಗಳೂ ಇದ್ದವು. ಈತನು ಪ್ರಾಭೃತಸಾರ, ಸಮಯಸಾರ, ರಯಣಸಾರ, ಪ್ರವಚನಸಾರ, ದ್ವಾದಶಾನುಪ್ರೇಕ್ಷೆ ಎಂಬ ಗ್ರಂಥಗಳನ್ನೂ ಪ್ರಾಕೃತ ಭಾಷೆಯಲ್ಲಿ ಶಾತವಾಹನ ರಾಜಪುತ್ರನಾದ ಶಕ್ತಿಶ್ರೀ ಎಂಬವನ ಬೋಧನೆಗಾಗಿ ರಚಿಸಿದನು. ಉಮಾಸ್ವಾಮಿಯು ಸಂಸ್ಕೃತದಲ್ಲಿ ತತ್ತ್ವಾರ್ಥಾಧಿಗಮ ಸೂತ್ರಗಳನ್ನು ರಚಿಸಿರುವನು.

ಈ ಸಮಯದಲ್ಲಿ ಆಚಾರಭೇದಗಳನ್ನನುಸರಿಸಿ ಜೈನರಲ್ಲಿ ಅನೇಕ ಪಂಗಡಗಳಾದುವು. ಅದುವರೆಗೂ ದಿಗಮ್ಬರ ಸಂಪ್ರದಾಯವೇ ಅಧಿಕವಾಗಿದ್ದಿತೆಂದು ಮಧುರಾಶಿಲ್ಪದಿಂದ ತಿಳಿಯಬಹುದು. ಆದರೆ ಶ್ವೇತಾಮ್ಬರರು ವೀರನಿರ್ವಾಣ ೬೦೯ ರಲ್ಲಿ ಶಿವಭೂತಿ ಸಹಸ್ರಮಲ್ಲನ ಶಿಷ್ಯರಾದ ಕೌಣ್ಡಿನ್ಯ, ಕಾಷ್ಟವೀರರೆಂಬುವರಿಂದ ದಿಗಮ್ಬರ ಪಂಥವು ಸ್ಪಷ್ಟವಾಯಿತೆಂದೂ ಅನಂತರ ಧರಸೇನ, ಭೂತಬಲಿ, ಪುಷ್ಪದನ್ತರು ವೀರನಿರ್ವಾಣ ಶಕೆ ೬೮೩ ರಲ್ಲಿ ಧವಳ, ಜಯಧವಳ,

ಮಹಾಧವಳವೆಂಬ ಗ್ರಂಥಗಳನ್ನು ರಚಿಸಿದರೆಂದೂ ಹೇಳುವರು. ಸ್ತ್ರೀಯರಿಗೆ ಆ ಜನ್ಮದಲ್ಲಿಯೇ ಮೋಕ್ಷವಿಲ್ಲವೆಂದು ದಿಗಮ್ಬರರು ನಂಬುವರು.

ಉತ್ತರದಲ್ಲಿ ಸ್ಥಾನಿಕವಾಸಿ, ಬೀಸ್‌ಪಂಥಿ, ಥೇರಾಪಂಥಿ ಮುಂತಾದ ಜೈನ ಪಂಗಡಗಳು ಉಂಟಾದವು. ವಲಭಿಯಲ್ಲಿ ಜೈನರ ಮಹಾ ಸಂಘವು ಸೇರಿ ಆಗಮಗಳನ್ನು ಲಿಖಿತರೂಪಕ್ಕೆ ತಂದಿತೆಂದು ದೇವರ್ಧಿಗಣಿಯು ಹೇಳುವನು. ವೀರನಿರ್ವಾಣಾನಂತರ ಸಾವಿರ ವರ್ಷ ಕಳೆದ ಮೇಲೆ ಕಲ್ಕಿಯು ಹುಟ್ಟಿ ಜೈನರನ್ನು ಹಿಂಸೆಮಾಡಿದನೆಂದೂ ಆದರೆ ಕಲ್ಕಿಯ ಮರಣಾನಂತರ ಅಜಿತಂಜಯನು ಜೈನಮತವನ್ನು ಪುನರುದ್ಧಾರ ಮಾಡಿದನೆಂದು ಜೈನ ಗ್ರಂಥಗಳು ಹೇಳುವವು. ಗುಪ್ತರ ಕಾಲದಲ್ಲಿ ಜೈನಮತವು ಪ್ರಬಲವಾಗಿದ್ದಿತು. ಅಣಹಿಲ್ಲ ಪಟ್ಟಣ, ಧಾರಾ ಮುಂತಾದ ಸ್ಥಳಗಳು ಮುಖ್ಯ ಕೇಂದ್ರಗಳಾಗಿದ್ದವು. ಹರ್ಷನ ಆಶ್ರಯದಲ್ಲಿ ಅನೇಕ ನಿರ್ಗ್ರಂಥರು ಇದ್ದರೆಂದು ಯುವಾನ್ ಚ್ವಾಂಗನು ಹೇಳುವನು. ಅಣಹಿಲ್ಲವಾಡ ರಾಜನಾದ ಕುಮಾರಪಾಲನು ಮಾಳವ ದೇಶವನ್ನು ಗೆದ್ದ ಮೇಲೆ ಅಶೋಕನಂತೆ ಅಹಿಂಸಾ ಧರ್ಮವನ್ನು ಪ್ರಚಾರ ಮಾಡಿದನು. ಅವನ ಸಾಮಂತನಾದ ಕಿರಾತರಾಜ್ಯದ ಅಲ್ಹಣನು ಶಿವರಾತ್ರಿ ಮತ್ತು ಇತರ ಕೆಲವು ದಿನಗಳಲ್ಲಿ ಪ್ರಾಣಿವಧೆ ಮಾಡಕೂಡದೆಂದು ಶಾಸಿಸಿದನು. ಈ "ಅಮಾರಿಧರ್ಮ"ವನ್ನು ಮೀರಿದವರಿಗೆ ಐದು ದ್ರಮ್ಮ ದಂಡವನ್ನು ವಿಧಿಸಿದನು. ಯಜ್ಞಗಳಲ್ಲಿಯೂ ಕೂಡ ದಕ್ಷಿಣಭಾರ್ಗವ ಮುಂತಾದ ಬ್ರಾಹ್ಮಣರು ಯವಪಿಷ್ಟಪಶುವನ್ನು ಅರ್ಪಿಸತೊಡಗಿದರು. ಕುಮಾರಪಾಲನ ಆಶ್ರಯದಲ್ಲಿ ಗೋವಿನ್ದಸೂರಿ, ಸೂರಾಚಾರ್ಯ, ವೀರಾಚಾರ್ಯ, ಅಭಯದೇವ, ಶಾನ್ತಿಸೂರಿ, ದೇವಸೂರಿ ಮುಂತಾದವರು ಗ್ರಂಥಗಳನ್ನು ರಚಿಸಿದರು. ದೇವಸೂರಿಯ ಶಿಷ್ಯ ಹೇಮಚನ್ದ್ರಾಚಾರ್ಯನು (ಕ್ರಿ.ಶ. ೧೦೮೯-೧೧೭೩). ಈತನು ಸ್ವತಃ ಶೈವನಾಗಿದ್ದರೂ ಅನೇಕ ಜೈನ ಗ್ರಂಥಗಳನ್ನು ರಚಿಸಿದನು. ಈತನ ಪ್ರತಿಭೆಯೂ ವಿದ್ವತ್ತೂ ಈತನ ಗ್ರಂಥಗಳಾದ ಸಿದ್ಧಹೇಮ, ಯೋಗಶಾಸ್ತ್ರ, ವೀತರಾಗಸ್ತುತಿ, ತ್ರಿಷಷ್ಟಿಶಲಾಕಾ ಪುರುಷಚರಿತ, ದ್ವ್ಯಾಶ್ರಯ, ಛನ್ದೋನುಶಾಸನ, ಕಾವ್ಯಾನುಶಾಸನ, ನಾಮಸಂಗ್ರಹ, ಪ್ರಮಾಣಮೀಮಾಂಸಾ ಇತ್ಯಾದಿ ಗ್ರಂಥಗಳಲ್ಲಿ ಕಂಡುಬರುವವು. ಈತನ ಸಮಕಾಲೀನನೂ ಜೈನನೂ ಆದ ಮಲಧಾರಿ ಹೇಮಚನ್ದ್ರನು ಜಯಸಿಂಹರ್ಜನಿಗೆ ಪ್ರೇರಣೆ ಮಾಡಿ ವರ್ಷದಲ್ಲಿ ೮೦ ದಿನ ಪ್ರಾಣಿವಧೆಯನ್ನು ನಿಲ್ಲಿಸಿದನು. ಮುಸ್ಲಿಮರ ಆಳಿಕೆಯಲ್ಲಿಯೂ ಜೈನ ಗುರುಗಳು ಪ್ರಾಣಿವಧೆಯನ್ನೂ ಜೈನ ದೇವಾಲಯಗಳ ನಾಶವನ್ನೂ ನಿಲ್ಲಿಸಲು ಯತ್ನಿಸಿದರು. ಅಕ್ಬರನ ಆಸ್ಥಾನದಲ್ಲಿ

ಆರು ಜೈನಮುನಿಗಳು ಧರ್ಮೋಪದೇಶಮಾಡಿದರು. ಇವರಲ್ಲಿ ಪ್ರಖ್ಯಾತನಾದ ಹೀರಾ ವಿಜಯಸೂರಿಯು ಕ್ರಿಸ್ತಶಕ ೧೫೮೪ ರಲ್ಲಿ ಜೈನರ ಪರ್ಯುಷಣ ಕಾಲದಲ್ಲಿ ಹನ್ನೆರಡು ದಿನ ಪ್ರಾಣಹಿಂಸೆಯನ್ನು ನಿಲ್ಲಿಸಬೇಕೆಂದೂ, ಕ್ರಿಸ್ತಶಕ ೧೫೯೧ ರಲ್ಲಿ ಶತ್ರುಂಜಯ ಮುಂತಾದ ಜೈನ ಕ್ಷೇತ್ರಗಳನ್ನು ಮೊಘಲ್ ಅಧಿಕಾರಿಗಳು ರಕ್ಷಿಸಬೇಕೆಂದೂ ಫರ್ಮಾನೆಗಳನ್ನು ಪಡೆದನು. ಕ್ರಿಸ್ತಶಕ ೧೬೦೧ ರಲ್ಲಿ ಅಕ್ಬರನೂ ಸಲೀಮನೂ ವರ್ಷದಲ್ಲಿ ಆರು ತಿಂಗಳು ಪ್ರಾಣಿವಧೆ ನಿಲ್ಲಿಸಬೇಕೆಂದೂ, ವಿಜಯಸೇನಸೂರಿ ಮುಂತಾದವರಿಗೆ ರಾಜಮರ್ಯಾದೆ ಸಲ್ಲತಕ್ಕದ್ದೆಂದೂ ಫರ್ಮಾನೆ ಕೊಟ್ಟಿರುವರು. ಕ್ರಿಸ್ತಶಕ ೧೬೦೪ ರಲ್ಲಿ ಖರಗತರ ಪಟ್ಟದ ಜಿನಚನ್ದ್ರನ ಪ್ರೇರಣೆಯಿಂದ ಇನ್ನೂ ಏಳು ದಿನ ಹೆಚ್ಚಾಗಿ ಪ್ರಾಣಿ ವಧೆ ನಿಲ್ಲಿಸಲ್ಪಟ್ಟಿತು. ಭಾನುಚನ್ದ್ರ, ಸಿದ್ಧಚನ್ದ್ರರ ಪ್ರೇರಣೆಯಿಂದ ಜಹಾಂಗೀರನು ಕ್ರಿಸ್ತಶಕ ೧೬೦೮ ರಲ್ಲಿ ಪುನಃ ಫರ್ಮಾನೆಗಳನ್ನು ಕೊಟ್ಟಿರುವನು. ಉತ್ತರ ಭಾರತದಲ್ಲಿ ಇಂತಹ ಮಹಾತ್ಮರಲ್ಲದೆ ಮೇರುತುಂಗ, ಅರಿಸಿಂಹ, ಸೋಮೇಶ್ವರ, ಜಯಸಿಂಹಸೂರಿ, ಬಾಲಚನ್ದ್ರಸೂರಿ, ಧನಪಾಲ, ಧನಂಜಯ, ಅಮಿತಗತಿ, ಆಶಾಧರ, ಜಿನಮಣ್ಡನ ಮುಂತಾದ ಉದ್ದಾಮ ಪಂಡಿತರು ಅಪಾರ ಗ್ರಂಥರಚನೆ ಮಾಡಿರುವರು. ಹದಿನಾಲ್ಕನೆಯ ಶತಮಾನದಿಂದ ಜೈನರು ಗುಜರಾತಿ, ಹಿಂದಿ ಮುಂತಾದ ದೇಶಭಾಷೆಗಳಲ್ಲಿ ಗ್ರಂಥರಚನೆ ಮಾಡಲು ಆರಂಭಿಸಿದರು.

ದಕ್ಷಿಣ ದೇಶದಲ್ಲಿ ಸಂಘಸಾಹಿತ್ಯದ ಕಾಲದಲ್ಲಿ ಜೈನಮತವು ಪ್ರಬಲವಾಗಿದ್ದಿತು. ಕುರಳ್ ಗ್ರಂಥಕರ್ತರಾದ ತಿರುವಳ್ಳುವರ್ ಜೈನರೆಂದೂ ಎಲಾಚಾರ್ಯರ ಶಿಷ್ಯರೆಂದೂ ಕೆಲವರು ಹೇಳುವರು. ಕಂಚಿ, ಮೈಲಾಪುರ, ಶಿತ್ತನ್ನಾವಾಶಲ್, ದಕ್ಷಿಣಮಧುರೆ, ಶ್ರವಣಬೆಳಗೊಳ, ಬೆಳಗಾಮಿ, ಕಲ್ಯಾಣಿ, ಬಾದಾಮಿ ಮುಂತಾದ ಸ್ಥಳಗಳು ಜೈನಮತದ ಕೇನ್ದ್ರಗಳಾಗಿದ್ದವು. ಸಿಂಹಸೂರಿಯು (ತ್ರಿಲೋಕ ಪ್ರಜ್ಞಪ್ತಿ) ಲೋಕವಿಭಾಗವೆಂಬ ಗ್ರಂಥವನ್ನು ಪಲ್ಲವ ಸಿಂಹವರ್ಮನ ಕಾಲದಲ್ಲಿ ರಚಿಸಿದನು. ಪಲ್ಲವ ಮಹೇನ್ದ್ರವರ್ಮನೂ ಕೂನಪಾಂಡ್ಯನೂ ಜೈನರಾಗಿದ್ದು ಅನಂತರ ಶೈವರಾದರೆಂದು ಹೇಳಲಾಗಿದೆ. ಸಮನ್ತಭದ್ರನು ನಾಗರ ಖಣ್ಡದ ಸೋ(ಉ)ರಗಪುರದ ರಾಜನ ಮಗನೆಂದೂ, ಪಾಟಲಿಪುತ್ರ, ಮಾಳವ, ಠಕ್ಕ, ಕಾಂಚೀ, ವಿದಿಶ, ಕರಹಾಟ, ದಶಪುರ, ಪುಣ್ಡ್ರ, ವಾರಾಣಸೀ ಮುಂತಾದ ಸ್ಥಳಗಳಲ್ಲಿ ವಾದಿಗಳನ್ನು ಗೆದ್ದು ಗನ್ಧಹಸ್ತಿಮಹಾಭಾಷ್ಯ, ಆಪ್ತಮೀಮಾಂಸಾ ಮುಂತಾದ ಗ್ರಂಥಗಳನ್ನು ರಚಿಸಿದನೆಂದೂ ತಿಳಿದುಬರುವದು. ದೇವನನ್ದಿ ಪೂಜ್ಯಪಾದನು ಗಂಗ ದುರ್ವಿ

ನೀತನಿಗೆ ಗುರುವಾಗಿದ್ದನೆಂದೂ, ಸರ್ವಾರ್ಥಸಿದ್ಧಿ, ಶಬ್ದಾವತಾರನ್ಯಾಸ, ವೈದ್ಯಸೂತ್ರ ಮತ್ತು ಸ್ತೋತ್ರಗಳನ್ನು ರಚಿಸಿದನೆಂದೂ ತಿಳಿದುಬರುವದು. ಪೂಜ್ಯಪಾದನ ಶಿಷ್ಯನಾದ ವಜ್ರನನ್ದಿಯು ಕ್ರಿಸ್ತಶಕ ೫೨೨ರಲ್ಲಿ ದಕ್ಷಿಣ ಮಧುರೆಗೆ ಹೋಗಿ ದ್ರಾವಿಡ ಸಂಘವನ್ನು ಸ್ಥಾಪಿಸಿದನು. ಶಿವಕೋಟಿ, ಸಿದ್ಧಸೇನ, ಜಟಾಸಿಂಹನನ್ದಿ, ಯಶೋಭದ್ರ, ಸುಮತಿ ಮುಂತಾದವರು ಕ್ರಿಸ್ತಶಕ ಆರು-ಏಳನೆಯ ಶತಾಬ್ದದಲ್ಲಿ ಗ್ರಂಥರಚನೆ ಮಾಡಿದರು.

ಕರ್ಣಾಟಕದಲ್ಲಿ ಕದಂಬರು, ಗಂಗರು, ಆಳುಪರೇ ಮುಂತಾದ ರಾಜವಂಶದವರು ತಾವು ಜೈನರಲ್ಲದಿದ್ದರೂ ಪುರಿಗೆರೆ ಮುಂತಾದ ಸ್ಥಳಗಳಲ್ಲಿದ್ದ ಜೈನ ವಿದ್ವಾಂಸರನ್ನು ಪೋಷಿಸಿ ದಾನಗಳನ್ನು ಕೊಟ್ಟಿರುವರು. ಬಾದಾಮಿ ಚಾಳುಕ್ಯರ ಸಾಮ್ರಾಜ್ಯದಲ್ಲಿ ಬಾದಾಮಿ, ಐಹೊಳೆ, ಪಟ್ಟದಕಲ್, ಪುರಿಗೆರ ಮುಂತಾದ ಸ್ಥಳಗಳಲ್ಲಿ ಜೈನ ಬಸದಿಗಳು ನಿರ್ಮಿತವಾದವು. ಇಮ್ಮಡಿ ಪುಲಿಕೇಶಿಯ ಆಶ್ರಯದಲ್ಲಿ ರವಿಕೀರ್ತಿಯೆಂಬ ಜೈನಕವಿಯು ಕಾಲಿದಾಸ ಭಾರವಿಗಳಿಗೆ ಸಮಾನನಾಗಿದ್ದನೆಂದು ಐಹೊಳೆ ಶಾಸನವು ಹೇಳುವದು.

ರಾಷ್ಟ್ರಕೂಟರ ಸಾಮ್ರಾಜ್ಯದಲ್ಲಿ ಅಕಲಂಕ ಭಟ್ಟಾರಕನು ಪ್ರಖ್ಯಾತನಾಗಿದ್ದು ಕ್ರಿಸ್ತಶಕ ೭೮೨ರಲ್ಲಿ ಬೌದ್ಧರನ್ನು ವಾದದಲ್ಲಿ ಸೋಲಿಸಿ ಅವರನ್ನು ಕಂಚಿಯಿಂದ ಸಿಂಹಳದ್ವೀಪಕ್ಕೆ ಹೊರಡಿಸಿದನು. ಈತನ ಅಷ್ಟಶತೀ, ಲಘೀಯಸ್ತ್ರಯ, ನ್ಯಾಯವಿನಿಶ್ಚಯ, ತತ್ತ್ವಾರ್ಥರಾಜವಾರ್ತಿಕ, ಸ್ವರೂಪಸಂಬೋಧನ ಮುಂತಾದ ಗ್ರಂಥಗಳಲ್ಲಿ ಪರಮತ ಖಂಡನೆಯು ಒಂದರೂ ಉದಾರ ಹೃದಯನಾಗಿದ್ದನೆಂದು ತಿಳಿದುಬರುವದು.[21] ಈತನ ನ್ಯಾಯಗ್ರಂಥಗಳನ್ನನುಸರಿಸಿ, ವಿದ್ಯಾನನ್ದಿ, ಮಾಣಿಕ್ಯನನ್ದಿ, ಪ್ರಭಾಚನ್ದ್ರ, ಮೊದಲನೆಯ ಜಿನಸೇನ, ವೀರಸೇನ ಮುಂತಾದವರು ರಾಷ್ಟ್ರಕೂಟರ ಆಶ್ರಯದಲ್ಲಿ ಜೈನಮತಾನುಸಾರವಾಗಿ ತರ್ಕಗ್ರಂಥಗಳನ್ನು ರಚಿಸಿರುವರು. ಕ್ರಿಸ್ತಶಕ ಒಂಬತ್ತ

21 ನಾಹಂಕಾರವಶೀಕೃತೇನಮನಸಾ ನ ದ್ವೇಷಿಣಾಕೇವಲಮ್ | ನೈರಾತ್ಮ್ಯಂಪ್ರತಿಪದ್ಯನಶ್ಯತಿಜನೇ ಕಾರುಣ್ಯಬುದ್ಧ್ಯಾಮಯಾ | ರಾಜ್ಞಃ ಶ್ರೀಹಿಮಶೀತಲಸ್ಯಸದಸಿ ಪ್ರಾಯೋವಿದಗ್ಧಾತ್ಮನಾಮ್ | ಬೌದ್ಧಾಘಾನ್‌ಸಹಸಾವಿಜಿತ್ಯಸಘುಟಃ ಪಾದೇನ ವಿಸ್ಫೋಟಿತಃ || ಯೋ ವಿಶ್ವಂವೇದವೇದ್ಯಂ ಜನನಜಲನಿಧೇರ್ಭಂಗಿನಃ ಪಾರದೃಶ್ವಾ | ಪೌರ್ವಾಪರ್ಯಾವಿರುದ್ಧಂ ವಚನಮನುಪಮಂ ನಿಷ್ಕಲಂಕಂಯದೀಯಮ್ | ತಂವಂದೇ ಸಾಧುವನ್ದ್ಯಂ ಸಕಲಗುಣನಿಧಿಂ ಧ್ವಸ್ತದೋಷಂದ್ವಿಷನ್ತಮ್ | ಬುದ್ಧಂವಾವರ್ಧಮಾನಂ ಶತದಳನಿಲಯಂವಾಕೇಶವಂವಾ ಶಿವಂವಾ ||

ಪ್ರಮಾಣಮಕಲಂಕಸ್ಯ ಪೂಜ್ಯಪಾದಸ್ಯಲಕ್ಷಣಮ್ | ದ್ವಿಸನ್ಧಾನಕವೇಃ ಕಾವ್ಯಂರತ್ನತ್ರಯಮಪಶ್ಚಿಮಮ್ ||

ನೆಯ ಶತಾಬ್ದದಲ್ಲಿ ಅಮೋಘವರ್ಷ ನೃಪತುಂಗನು ಬಾಲ್ಯದಲ್ಲಿ ಮಹಾವೀರಾಚಾರ್ಯರ ಶಿಷ್ಯನಾಗಿದ್ದು ಸ್ಯಾದ್ವಾದದಲ್ಲಿ ನಿಪುಣನಾಗಿದ್ದನು. ಮತ್ತು ಎರಡನೆಯ ಜಿನಸೇನನನ್ನು ಪರಮಗುರುವೆಂದು ಭಾವಿಸಿದ್ದನು. ಶಾಕಟಾಯನ, ಶ್ರೀವಿಜಯ, ಉಗ್ರಾದಿತ್ಯಪಣ್ಡಿತ ಮುಂತಾದ ವಿದ್ವಾಂಸರನ್ನೂ ಪೋಷಿಸಿದನು. ರಾಷ್ಟ್ರಕೂಟರ ಸಾಮನ್ತರಾದ ತಳಕಾಡಿನ ಬೂತುಗ, ಮರುಳ ಮತ್ತು ಮಾರಸಿಂಹರೂ ಜೈನರು. ಮುಮ್ಮಡಿ ಕೃಷ್ಣನ ಕಾಲದಲ್ಲಿ ಕಟಕಾಚಾರ್ಯನಾಗಿದ್ದ ವಾದಿಘಂಘಳಭಟ್ಟ ಮುಂಜಳಾರ್ಯನು ಕೃಷ್ಣನಿಗೂ ಮಾರಸಿಂಹನಿಗೂ ಗುರುವಾಗಿದ್ದನು. ಕೊನೆಗೆ ಮಾರಸಿಂಹನು ಬಂಕಾಪುರದ ಅಜಿತಸೇನರ ಬಳಿಯಲ್ಲಿ ಸನ್ಯಸನ ವಿಧಿಯಿಂದ ಸತ್ತನು. ಮಾರಸಿಂಹನ ದಂಡನಾಯಕನಾದ ಚಾವುಂಡರಾಯನು ಸಂಸ್ಕೃತ ಮತ್ತು ಕನ್ನಡದಲ್ಲಿ ಗ್ರಂಥಗಳನ್ನು ರಚಿಸಿ ಶ್ರವಣಬೆಳಗೊಳದಲ್ಲಿ ಗೊಮ್ಮಟೇಶ್ವರ ಪ್ರತಿಷ್ಠೆಮಾಡಿದನು. ಈ ಸಮಯದಲ್ಲಿ ಗುಣಭದ್ರಾಚಾರ್ಯ, ನೇಮಿಚನ್ದ್ರ, ಅಜಿತಸೇನ ಇತ್ಯಾದಿಗಳು ಉತ್ತರಪುರಾಣ, ಗೊಮ್ಮಟಸಾರ ಮುಂತಾದ ಗ್ರಂಥಗಳನ್ನು ರಚಿಸಿದರು. ಮುಮ್ಮಡಿ ಕೃಷ್ಣನ ಸಾಮನ್ತನಾದ ಚಾಳುಕ್ಯ ಅರಿಕೇಸರಿಯು ವಿಕ್ರಮಾರ್ಜುನವಿಜಯ ಮತ್ತು ಆದಿಪುರಾಣಗಳನ್ನು ರಚಿಸಿದ ಪಂಪನಿಗೆ ಆಶ್ರಯದಾತನಾಗಿದ್ದನು. ಮುಮ್ಮಡಿ ಕೃಷ್ಣನೇ ಶಾಂತಿಪುರಾಣವನ್ನು ಬರೆದ ಪೊನ್ನನಿಗೆ ಕವಿಚಕ್ರವರ್ತಿಯೆಂಬ ಬಿರುದನ್ನು ಕೊಟ್ಟನು. ಮತ್ತು ಯಶಸ್ತಿಲಕ ಚಂಪೂ ಗ್ರಂಥವನ್ನು ಬರೆದ ಸೋಮದೇವ, ನಿಘಂಟು ರಚಿಸಿದ ಹಲಾಯುಧ ಮುಂತಾದವರೂ ಕೃಷ್ಣನ ಆಶ್ರಯವನ್ನು ಪಡೆದಿದ್ದರು.

ರಾಷ್ಟ್ರಕೂಟರ ಅನಂತರ ಕಲ್ಯಾಣಿ ಚಾಳುಕ್ಯರು ಕೂಡ ಜೈನಮತವನ್ನು ಪೋಷಿಸಿದರು. ತೈಲಪ, ಇಱುವಬೆಡಂಗಸತ್ಯಾಶ್ರಯರು ರನ್ನನಿಗೆ ಕವಿಚಕ್ರವರ್ತಿ ಬಿರುದನ್ನು ಕೊಟ್ಟರು. ಅತ್ತಿಮಬ್ಬೆಯು ಮಹಾದಾನಿಯೆನಿಸಿಕೊಂಡಿದ್ದಳು. ಎರಡನೆಯ ಜಯಸಿಂಹನ ಕಟಕವು ವಾಗ್ವಧೂಜನ್ಮಭೂಮಿಯಾಗಿದ್ದಿತು. ಇವನ ಆಸ್ಥಾನದಲ್ಲಿ ವಾದಿರಾಜ, ವಾದೀಭಸಿಂಹ ಮುಂತಾದ ಕವಿಗಳಿದ್ದರು. ಈ ಸಮಯದಲ್ಲಿ ಶೈವ ಮತ್ತು ವೈಷ್ಣವಮತಗಳು ಪ್ರಬಲವಾಗುತ್ತಿದ್ದುದರಿಂದ ಬ್ರಹ್ಮಶಿವನ ಸಮಯ ಪರೀಕ್ಷೆಯಂತಹ ಪರಮತ ದೂಷಣೆ ಮಾಡುವ ಗ್ರಂಥಗಳ ರಚನೆಯು ಆರಂಭವಾಯಿತು. ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಅನೇಕ ಜೈನಕವಿಗಳೂ ವಿದ್ವಾಂಸರೂ ಇದ್ದರು. ಚಾಳುಕ್ಯರ ಅನಂತರ ಕಾಳಚೂರ್ಯರು ಶೈವರಾಗಿದ್ದರೂ ಜೈನಮತವನ್ನು ಪೋಷಿಸಿದರು. ಬಿಜ್ಜಳನು ಜೈನರಿಗೂ ಏಕಾನ್ತದ ರಾಮಯ್ಯನಿಗೂ ವಿವಾದ

ಉಂಟಾದಾಗ ಇಬ್ಬರೂ ಒಟ್ಟಿಗೆ ಸುಖವಾಗಿ ಬಾಳಿರಿಯೆಂದು ಉಪದೇಶ ಮಾಡಿ ಕಳುಹಿಸಿದನು.

ಹೊಯ್ಸಳ ರಾಜ್ಯಸ್ಥಾಪನೆಗೆ ಜೈನಗುರುವಾದ ವರ್ಧಮಾನ ಅಥವಾ ಸುದತ್ತನು ಕಾರಣನೆಂದು ಕೆಲವು ಶಾಸನಗಳು ಹೇಳುವವು. ಹೊಯ್ಸಳ ರಾಜರು ಜೈನರಾಗಿದ್ದರೆಂಬುದಕ್ಕೆ ಆಧಾರಗಳಿಲ್ಲ. ಕೆಲವು ಜೈನ ಗ್ರಂಥಗಳೂ ಶ್ರೀ ವೈಷ್ಣವ ಗ್ರಂಥಗಳೂ ವಿಷ್ಣುವರ್ಧನನು ರಾಮಾನುಜರ ಶಿಷ್ಯನಾಗಿ ಜೈನಮತವನ್ನು ತ್ಯಜಿಸಿ ಶ್ರೀವೈಷ್ಣವನಾದನೆಂದು ಹೇಳುವವು. ಆದರೆ ಹೊಯ್ಸಳರು ಯಾರೂ ಜೈನರಾಗಿಯೇ ಆಗಲಿ ಶ್ರೀವೈಷ್ಣವರೇ ಆಗಲಿ ಆಗಿರಲಿಲ್ಲ. ಜೈನ, ವೈಷ್ಣವ, ಶೈವ, ಬೌದ್ಧಮತಗಳನ್ನೆಲ್ಲ ನಿಷ್ಪಕ್ಷಪಾತವಾಗಿ ನೋಡುತ್ತಿದ್ದರು. ಜೈನರೊಡನೆ ವಿವಾಹಸಂಬಂಧವನ್ನೂ ಇಟ್ಟುಕೊಂಡಿದ್ದರು. ಜೈನ ಬಸದಿಗಳನ್ನು ಕಟ್ಟಿಸಿ ದಾನಗಳನ್ನು ಮಾಡಿ ಜೈನಪಂಡಿತರನ್ನೂ ಕವಿಗಳನ್ನೂ ಪೋಷಿಸಿದರು. ವಿಷ್ಣುವರ್ಧನನು ತನ್ನ ಅಂತ್ಯದಶೆಯಲ್ಲಿ ಕೂಡ ಜೈನ ದೇವಾಲಯಗಳ ಪ್ರಸಾದವನ್ನು ಸ್ವೀಕರಿಸುತ್ತಿದ್ದನೆಂದು ಶಾಸನಗಳಿಂದ ತಿಳಿದುಬರುವದು. ಇವನ ದಂಡನಾಯಕರಲ್ಲಿ ಮುಖ್ಯರಾದ "ಗರುಡರು" ಜೈನರು. ಇವನ ಪಟ್ಟಮಹಿಷಿಯಾದ ಶಾನ್ತಲೆಯು ಜೈನಳಾಗಿದ್ದು ಸನ್ಯಸನ ವಿಧಿಯಿಂದ ಶಿವಗಂಗೆಯಲ್ಲಿ ಸದ್ಗತಿ ಪಡೆದಳು. ಆದರೂ ಇವಳು ಚತುಸ್ಸಮಯಸಮುದ್ಧರಣೆ ಮತ್ತು ಕಪ್ಪೆಚೆನ್ನಿಗರಾಯ ದೇವಾಲಯ ಮುಂತಾದ ವಿಷ್ಣು ದೇವಾಲಯಗಳನ್ನೂ ನಿರ್ಮಿಸಿದಳು. ವಿಷ್ಣುವರ್ಧನನಂತರ ನರಸಿಂಹ, ಬಲ್ಲಾಳ ಮುಂತಾದವರೂ ಜೈನಮತವನ್ನು ಪೋಷಿಸಿ ಅನೇಕ ಜೈನಕವಿಗಳಿಗೆ ಆಶ್ರಯವನ್ನು ಕೊಟ್ಟರು. ಅಭಿನವ ಪಂಪ, ಕನ್ತಿ, ಕವಿಚಕ್ರವರ್ತಿ ಜನ್ನ ಇತ್ಯಾದಿ ಉದ್ದಾಮ ಕವಿಗಳು ಇಮ್ಮಡಿ ಬಲ್ಲಾಳ, ಇಮ್ಮಡಿ ನರಸಿಂಹರ ಆಸ್ಥಾನದಲ್ಲಿ ಪ್ರಸಿದ್ಧರಾಗಿದ್ದರು.

ಇತರ ಸಾಮನ್ತ ರಾಜರಾದ ಸೌನ್ದತ್ತಿಯರಟ್ಟರೂ, ಗೋವೆಯಕದಂಬರೂ, ಹುಮ್ಮದಸಾನ್ತರರೂ, ಕರಹಾಡದ ಶಿಲಾಹಾರರೂ, ಆಳುಪರೂ ಜೈನಮತವನ್ನು ಪೋಷಿಸಿದರು. ದೇವಗಿರಿ ಯಾದವರೂ, ಓರುಗಲ್ಲಿನ ಕಾಕತೀಯರೂ ಕೂಡ ಜೈನಕವಿಗಳಿಗೆ ಆಶ್ರಯವನ್ನು ಕೊಟ್ಟಿದ್ದರು.

ಅನಂತರ ವಿಜಯನಗರ ಸಾಮ್ರಾಜ್ಯದಲ್ಲಿಯೂ ಇರುಗಪ್ಪದಣ್ಣನಾಥ, ಮಧುರ, ನೇಮಿಚನ್ದ್ರ, ವಿದ್ಯಾನಂದ ಮುಂತಾದ ಅನೇಕ ಕವಿಗಳಿದ್ದರು. ವಿಜಯನಗರಕ್ಕೆ ಅಧೀನರಾಗಿದ್ದ ಕಾರ್ಕಳದ ಭೈರರಸರು, ಅಜಿಲರೂ, ಚೌಟರೂ ಜೈನಮತ ಪೋಷಕರಾಗಿದ್ದರು. ವಿಜಯನಗರ ಪತನವಾದ ಮೇಲೆ

ಸ್ವತಂತ್ರರಾದ ಬಿಳಗಿ, ಚಿತ್ರದುರ್ಗ, ಕೆಳದಿ ಪಾಳೆಯಗಾರರೂ ಮೈಸೂರು ಒಡೆಯರೂ ಜೈನಮತ ಮತ್ತು ವಿದ್ವಾಂಸರಿಗೆ ಪ್ರೋತ್ಸಾಹ ಕೊಟ್ಟರು.

**ಸಾಂಖ್ಯದರ್ಶನ:** ಸಾಂಖ್ಯಮತದ ತತ್ತ್ವಗಳು ಒಂದೊಂದು ರೂಪದಿಂದ ಭಾರತೀಯರ ದರ್ಶನಗಳೆಲ್ಲೆಲ್ಲ ವ್ಯಾಪಿಸಿವೆ. ನಿರೀಶ್ವರ ಸಾಂಖ್ಯವು ಪೂರ್ವ ಮೀಮಾಂಸಾ, ಬೌದ್ಧ, ಜೈನಮತಗಳಲ್ಲಿಯೂ ಸೇಶ್ವರ ಸಾಂಖ್ಯ (ಯೋಗ)ವು ಸಕಲ ದ್ವೈತ—ಭಕ್ತಿಮತಗಳಲ್ಲಿಯೂ ಪ್ರವೇಶಿಸಿವೆ. ವಿಷ್ಣುವಿನ ಅವತಾರ ವಾದ ದೇವಹೂತಿಯ ಮಗನಾದ ಕಪಿಲಮುನಿಯು ವೇದಸಮ್ಮತವಾದ ಸಾಂಖ್ಯಮತವನ್ನು ಬೋಧಿಸಿದನೆಂದೂ ಮತ್ತೊಬ್ಬ ಕಪಿಲನು ಕುತರ್ಕಗಳಿಂದ ಕೂಡಿದ ವೇದವಿರುದ್ಧವಾದ ನಾಸ್ತಿಕಮತವನ್ನು ಪ್ರಚಾರಮಾಡಿದನೆಂದೂ ಶ್ರೀ ಭಾಗವತದಲ್ಲಿ ಹೇಳಿದೆ. ಭಗವದ್ಗೀತೆಯು ಸಾಂಖ್ಯಯೋಗಮತಗಳ ಪ್ರಕೃತಿ ಮತ್ತು ಪುರುಷ ಎಂಬ ತತ್ತ್ವಗಳನ್ನು ಸ್ವೀಕರಿಸಿ ಅವೆರಡಕ್ಕೂ ಮಿಗಿಲಾದ ಪುರುಷೋತ್ತಮನಲ್ಲಿ ಭಕ್ತಿಯನ್ನು ಬೋಧಿಸುವುದು. ಸಾಂಖ್ಯವು ಜ್ಞಾನಮಾರ್ಗಕ್ಕೂ ಯೋಗವು ಭಕ್ತಿಮಾರ್ಗಕ್ಕೂ ಕಾರಣಗಳಾದವು. ಇಪ್ಪತ್ತೈದು ತತ್ತ್ವಗಳನ್ನು ಪ್ರತಿಪಾದಿಸುವುದರಿಂದ ಸಾಂಖ್ಯಯೆಂಬ ಹೆಸರಾಯಿತು. ಷಷ್ಠಿತಂತ್ರವೆಂಬ ಪ್ರಾಚೀನಗ್ರಂಥವನ್ನನುಸರಿಸಿ ಈಶ್ವರ ಕೃಷ್ಣನು ಕ್ರಿಸ್ತಪೂರ್ವ ಎರಡನೆಯ ಶತಮಾನದಲ್ಲಿ ಕಾರಿಕೆಗಳನ್ನು ರಚಿಸಿದನು. ಇದಕ್ಕೆ ಮಾಠರ ಮತ್ತು ಗೌಡಪಾದರು ವೃತ್ತಿಗಳನ್ನು ಬರೆದರು. ಸಾಂಖ್ಯ ಸೂತ್ರಗಳು ಕ್ರಿಸ್ತಶಕ ಮೂರನೆಯ ಶತಾಬ್ದದ ಅನಂತರ ರಚಿತವಾಯಿತೆಂದು ನಿರ್ಧರಿಸಿದೆ. ಶಾರೀರಕ ಸೂತ್ರಗಳಲ್ಲಿ ಸಾಂಖ್ಯಮತವನ್ನು ನಿರಾಕರಿಸಿದ್ದರೂ ವಾಚಸ್ಪತಿಮಿಶ್ರ, ವಿಜ್ಞಾನಭಿಕ್ಷು ಮುಂತಾದವರು ಸಾಂಖ್ಯಕ್ಕೂ ವೇದಾಂತಕ್ಕೂ ಸಮನ್ವಯಮಾಡಲು ಯತ್ನಿಸಿರುವರು.

**ಯೋಗದರ್ಶನ:** ಸೇಶ್ವರಸಾಂಖ್ಯ ಅಥವಾ ಯೋಗದರ್ಶನವು ಹಿರಣ್ಯಗರ್ಭಪ್ರಣೀತವೆಂದೂ ಪತಂಜಲಿಮಹರ್ಷಿಯು ಸೂತ್ರಕಾರನೆಂದೂ ವ್ಯಾಸರು ಭಾಷ್ಯಕಾರರೆಂದೂ ನಂಬಿಕೆಯಿದೆ. ಯೋಗ ಎಂದರೆ ಸೇರಿಸುವುದು ಎಂದು ಸಾಮಾನ್ಯವಾದ ಅರ್ಥ.[22] ಸಂಯಮ, ಸಮಾಧಿಯೆಂಬುದು ವಿಶೇಷಾರ್ಥ. ಈಗ ಪ್ರಚಾರದಲ್ಲಿರುವ ಯೋಗಶಾಸ್ತ್ರವು "ಯೋಗಶ್ಚಿತ್ತವೃತ್ತಿನಿರೋಧಃ"

---

[22] ಯುಜ್ಯತೇ ಏತದಿತಿ; ಯುಜ್ಯತೇ ಅನೇನ ಇತಿ (ಯೋಜಯತಿ); ಯುಜಿರ್-ಯುನಕ್ತಿ; ಯುಜ್ಯತೇ ತಸ್ಮಿನ್ ಇತಿ (ಸಮಾಪತ್ತಿ); ಯುಜ್-ಸಂಯಮನೇ; ಯುಜ್-ಸಮಾಧೌ; ಯುಜ್ ಸಮಾಧೌ ಇತ್ಯಸ್ಮಾತ್ ವ್ಯುತ್ಪನ್ನಂ ಸಮಾಧ್ಯರ್ಥಃ, ನತುಯುಜಿರ್. ಯೋಗೇ ಇತ್ಯಸ್ಮಾತ್ ಸಂಯೋಗಾರ್ಥ—ಇತ್ಯರ್ಥಃ|| ವಾಚಸ್ಪತಿ-ತತ್ತ್ವ ವೈಶಾರದೀ.

ಎಂದು ಆರಂಭವಾಗುವದು. ಇದಕ್ಕಿಂತಲೂ ಪ್ರಾಚೀನವಾದ ಮತ್ತೊಂದು ಯೋಗಶಾಸ್ತ್ರವಿದ್ದಿತೆಂದು ಶಾಂಕರಭಾಷ್ಯದಿಂದ ತಿಳಿದುಬರುವದು.[23]

ಕೆಲವರು ಯೋಗ ಎಂಬುದಕ್ಕೆ ಮೊದಲು ಸಂಬಂಧ, ಅಲಭ್ಯಲಾಭ, ಸಂಯಮವೆಂಬ ಅರ್ಥಗಳೇ ಇದ್ದುವೆಂದೂ ಸಮಾಧಿಯೆಂಬ ಅರ್ಥವು ಗೌತಮ ಬುದ್ಧನಿಗೆ ಹಿಂದೆ ಕಂಡುಬರುವದಿಲ್ಲವಾದುದರಿಂದ ಬೌದ್ಧಮತ ದಿಂದಲೇ ಪತಂಜಲಿಯು ಯೋಗತತ್ತ್ವಗಳನ್ನು ಗ್ರಹಿಸಿದನೆಂದೂ ಹೇಳುವರು. ಆದರೆ ಬೌದ್ಧಮತದಲ್ಲಿ ಏಕಾಗ್ರಚಿತ್ತವು ಬಾಹ್ಯಪ್ರಪಂಚದ ಕ್ಷಣಿಕತ್ವವನ್ನೂ ಶೂನ್ಯತ್ವವನ್ನೂ, ನೈರಾತ್ಮ್ಯವನ್ನೂ ಸಾಧಿಸುವದಕ್ಕಾಗಿ ಎಂದು ಭಾವಿಸಿದೆ. ಬುದ್ಧನಿಗೆ ಹಿಂದೆಯೇ ರಚಿತವಾದ ಗೀತೆಯಲ್ಲಿ ವೇದಸಮ್ಮತವಾದ ಯೋಗ ಶಾಸ್ತ್ರದ ತತ್ವಗಳು ಕಂಡುಬರುವವು.

ಮತ್ತೆ ಕೆಲವರು ಯೋಗಾಭ್ಯಾಸವು ಹರಪ್ಪಸಂಸ್ಕೃತಿಯಲ್ಲಿಯೂ ಕಂಡು ಬರುವದರಿಂದ, ಆರ್ಯರಿಗೆ ಮೊದಲು ಆತ್ಮವೆಂಬ ವಸ್ತುವೇ ತಿಳಿದಿರಲಿಲ್ಲ ವೆಂದೂ, ಬಹಳಕಾಲದ ಮೇಲೆ ಅನಾರ್ಯರಾದ ಯತಿ, ಮುನಿ, ಶ್ರಮಣ, ವ್ರಾತ್ಯ, ಮಸ್ಕರಿ, ವಾತರಶನ, ಪಾಣಿಪಾತ್ರ ಮುಂತಾದ ವೇದಬಾಹಿರರಾದ ಆತ್ಮಾಶ್ರಮಿಗಳಿಂದ ಯೋಗಾಭ್ಯಾಸ ಪದ್ಧತಿಗಳನ್ನು ಕಲಿತರೆಂದೂ ಹೇಳುವರು. ಇದು ಕೇವಲ ನಿರಾಧಾರವಾದ ಊಹೆ. ಋಗ್ವೇದದಲ್ಲಿಯೇ ಯೋಗವನ್ನು ಸೂಚಿಸಿದೆ.[24]

ಯೋಗಮಾರ್ಗಗಳಲ್ಲಿ ಹಠ, ಕರ್ಮ, ಜ್ಞಾನ, ಭಕ್ತಿ, ಮಂತ್ರ ಇತ್ಯಾದಿಯಾಗಿ ಅನೇಕವಿವೆ. ಹಠಯೋಗವು ಸ್ವಾತ್ಮಾರಾಮಮುನಿಯ ಹಟಯೋಗ ಪ್ರದೀಪಿಕೆ, ಘೇರಣ್ಡಸಂಹಿತಾ ಮುಂತಾದ ಗ್ರಂಥಗಳಲ್ಲಿ ವಿವರಿಸಲ್ಪಟ್ಟಿದೆ. ನಾಡೀಶುದ್ಧಿ, ಶರೀರ ಪಾಟವಕ್ಕಾಗಿ ಸ್ಥಿರಸುಖವಾದ ಆಸನಗಳು ಭಸ್ತ್ರಿಕ, ನೌಳಿ, ಧೌತಿ ಮುಂತಾದುವು, ಚಿತ್ತವೃತ್ತಿಯನ್ನು ನಿರೋಧಿಸುವದಕ್ಕಾಗಿಯೂ ಅಷ್ಟಸಿದ್ಧಿ ಗಳನ್ನು (ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವ) ಪಡೆಯುವದಕ್ಕಾಗಿಯೂ ಕೊನೆಯಲ್ಲಿ ಸಮಾಧಿಯನ್ನು ಸಾಧಿಸುವದಕ್ಕಾಗಿಯೂ ಅಷ್ಟಾಂಗಗಳು (ಯಮ, ನಿಯಮ, ಪ್ರಾಣಾ

---

[23] ಅಥ ತತ್ತ್ವದರ್ಶನೋಪಾಯೋ ಯೋಗಃ || ಶಾಂಕರ ಬ್ರಹ್ಮಸೂತ್ರಭಾಷ್ಯ II, ೩.

[24] ಯೋಗೇ ಯೋಗೇತವಸ್ತರಂ ವಾಜೇ ವಾಜೇಹವಾಮಹೇ | ಸಖಾಯ ಇನ್ದ್ರ ಮೂತಯೇ || ಋಗ್. I, ೬-೩೦, ೮.

ಯಸ್ಮಾದೃತೇನಸಿದ್ಧ್ಯತಿ ಯಜ್ಞೋ ವಿಪಶ್ಚಿತಶ್ಚನ | ಸ ಧೀನಾಂಯೋಗಮಿನ್ವತಿ || ಋಗ್. I, ೫—೧೯, ೮.

ಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ) ವಿಧಿಸಲ್ಪಟ್ಟಿವೆ. ಭಾರತೀಯ ಮತಗಳೆಲ್ಲವೂ ಈ ನಿಯಮಗಳನ್ನಂಗೀಕರಿಸಿವೆ. ಅದರಲ್ಲಿಯೂ ಕಣ್ಣಾಪಟಯೋಗಿಪಂಥದ ಗುರುಗಳಾದ ನಾಥರು (ಮತ್ಸ್ಯೇನ್ದ್ರ, ಮೀನ, ಗೋರಕ್ಷ, ಚೌರಂಗಿ, ಚರ್ಪಟಿ ಇತ್ಯಾದಿ) ಹಠಯೋಗದಿಂದ ಅನೇಕ ಅದ್ಭುತ ಸಿದ್ಧಿಗಳನ್ನು ಪಡೆಯಬಹುದೆಂದು ಬೋಧಿಸಿರುವರು. ಹಠಯೋಗಾಭ್ಯಾಸವು ಈಗ ವಿದೇಶಗಳಲ್ಲಿಯೂ ಪ್ರಚಾರಕ್ಕೆ ಬರುತ್ತಲಿದೆ.

**ನ್ಯಾಯ-ವೈಶೇಷಿಕ (ತಾರ್ಕಿಕ) ದರ್ಶನ:** ಅಕ್ಷಪಾದಗೋತಮರ ನ್ಯಾಯಸೂತ್ರಗಳೂ ಕಣಾದರ ವೈಶೇಷಿಕ ಸೂತ್ರಗಳೂ ವಿಜ್ಞಾನ-ಜ್ಞಾನಗಳಿಗೆ ಸಮನ್ವಯ ಕಲ್ಪಿಸಲು ಯತ್ನಿಸುವವು. ಈ ದರ್ಶನಗಳಲ್ಲಿ ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ, ಅಭಾವಗಳೆಂಬ ಸಪ್ತಪದಾರ್ಥಗಳ ವಿವೇಚನೆಯಿದೆ. "ದುಃಖ, ಜನ್ಮ, ಪ್ರವೃತ್ತಿ, ದೋಷ, ಮಿಥ್ಯಾಜ್ಞಾನಾನಾಂ ಉತ್ತರೋತ್ತರಾಪಾಯೇ ತದ ನನ್ತರಾಪಾಯಾದಪವರ್ಗಃ" ಎಂದು ದುಃಖಾಭಾವವೇ ಮೋಕ್ಷಸ್ವರೂಪವೆಂಬುದಾಗಿ ನಿರ್ಧರಿಸಿದೆ. ನ್ಯಾಯ ಮತ್ತು ವೈಶೇಷಿಕ ಸೂತ್ರಗಳಿಗೆ ಸುಮಾರು ಕ್ರಿಸ್ತಶಕ ಮೂರನೆಯ ಶತಮಾನದಲ್ಲಿ ವಾತ್ಸ್ಯಾಯನ, ಪ್ರಶಸ್ತಪಾದರು ಭಾಷ್ಯಗಳನ್ನು ಬರೆದರು. ಈ ದರ್ಶನಗಳೆರಡೂ ಬಹುಶಃ ಪಾಶುಪತ ಶೈವಮತವನ್ನು ಅನುಸರಿಸುವವು. ಇವುಗಳಿಂದ ಭಾರತೀಯ ತರ್ಕಶಾಸ್ತ್ರವು ಬೆಳೆಯಿತು. ವೈಶೇಷಿಕರು ಅಣುವಾದಿಗಳಾದುದರಿಂದ ಪ್ರಮೇಯಗಳಿಗೆ ಹೆಚ್ಚು ಗಮನ ಕೊಟ್ಟರು. ನೈಯಾಯಿಕರು ಪ್ರಮಾಣಶಾಸ್ತ್ರವನ್ನು ಬೆಳಸಿದರು. ತರ್ಕವು ಎಲ್ಲಾ ದರ್ಶನಗಳಿಗೂ ಅವಶ್ಯಕ. ಅಧ್ಯಾತ್ಮಿಕ ವಿವೇಚನೆಗೆ ಕೇವಲ ಭಾವನೆಗಳನ್ನೇ ಪ್ರಧಾನವೆಂದು ತಿಳಿದರೆ ಅನರ್ಥವುಂಟಾಗುವದರಿಂದ ಎಲ್ಲರೂ ತರ್ಕಪದ್ಧತಿಯನ್ನು ಅನುಸರಿಸಲೇಬೇಕು. ಶ್ರುತಿಗೆ ವಿರುದ್ಧವಲ್ಲದ ತರ್ಕವನ್ನು ಅನುಸರಿಸಿ ಪರಮತಖಂಡನೆಯನ್ನೂ ಸ್ವಮತಸ್ಥಾಪನೆಯನ್ನೂ ಎಲ್ಲ ದರ್ಶನಕಾರರೂ ಮಾಡಿರುವುದರಿಂದ ಭಾರತೀಯ ನ್ಯಾಯಶಾಸ್ತ್ರದ ಚರಿತ್ರೆಯನ್ನೂ ವೈಶಿಷ್ಟ್ಯವನ್ನೂ ಸ್ವಲ್ಪಮಟ್ಟಿಗೆ ವಿವರಿಸುವೆವು.

ನ್ಯಾಯವೆಂದರೆ ಜ್ಞಾನದ ಕಡೆಗೆ ಎಳೆದುಕೊಂಡು ಹೋಗುವ ರೀತಿ. ಯಾವುದರಿಂದ ಪದಾರ್ಥಜ್ಞಾನವು ಲಭಿಸುತ್ತದೋ ಅದಕ್ಕೆ ನ್ಯಾಯವೆಂದು ಹೆಸರು.[25] ಪ್ರತ್ಯಕ್ಷ, ಅನುಮಾನ, ಆಗಮವೆಂಬುವು ಮೂರು ಮುಖ್ಯ

---

[25] ನಿತರಾಂ ಈಯನ್ತೇ ಗಮ್ಯನ್ತೇ, ಗತಿ—ಜ್ಞಾನೇ, ಜ್ಞಾಯನ್ತೇ ಅರ್ಥಾ ಅನಿತ್ಯತ್ವಾದಯೋಽನೇನ ಇತಿ ನ್ಯಾಯಃ।

ಪ್ರಮಾಣಗಳು. ಅದುಷ್ಟೇನ್ದ್ರಿಯ ಸನ್ನಿಕರ್ಷದಿಂದ ಹುಟ್ಟಿದುದಕ್ಕೆ ಪ್ರತ್ಯಕ್ಷ ಜ್ಞಾನವೆಂದು ಹೆಸರು. ಅನುಮಾನವು ಪ್ರಮಾಣ ಜ್ಯೇಷ್ಠವಾದ ಪ್ರತ್ಯಕ್ಷ ವನ್ನು ಅನುಸರಿಸಿದರೂ ಅದಕ್ಕೆ ಸ್ವತಂತ್ರ ಸ್ಥಾನವಿದೆ. ಆಗಮ ಪ್ರಮಾಣ್ಯವು ಆಯಾ ಮತಗಳ ನಂಬಿಕೆಗನುಸಾರವಾಗಿರುತ್ತದೆ. ಬೌದ್ಧರೂ ಜೈನರೂ ಕೂಡ ಬುದ್ಧನ ಮತ್ತು ತೀರ್ಥಂಕರ ವಚನಗಳನ್ನು ಆಗಮಗಳೆಂದು ಅಂಗೀ ಕರಿಸುವರು.

ಇಲ್ಲಿ ಅನುಮಾನ ಪ್ರಕರಣವನ್ನು ಮಾತ್ರ ಸ್ವಲ್ಪವಾಗಿ ಉಲ್ಲೇಖಿಸಿ ಭಾರತೀಯ ತರ್ಕಶಾಸ್ತ್ರವು ವಿಕಾಸಹೊಂದಿದ ರೀತಿಯನ್ನು ಸೂಚಿಸುವೆವು. ಅನುಮಾನ (Inference) ವೆಂದರೆ ಉಪಪತ್ತಿ ಅಥವಾ ಲಿಂಗ (Mark) ದ ಸಹಾಯದಿಂದ ಅರ್ಥವನ್ನು ತಿಳಿಯುವದು.[26] ಸಾಹಚರ್ಯ (ವ್ಯಾಪ್ತಿ) ಬಲದಿಂದ ಅರ್ಥವನ್ನು ತೋರಿಸುವದು ಲಿಂಗ. ತಾರ್ಕಿಕರು ವ್ಯಾಪ್ತಿ ಮತ್ತು ಪಕ್ಷಧರ್ಮತಾ (ಸಮುಚಿತ ದೇಶಾದಿಸಿದ್ಧಿ) ಇವೆರಡೂ ಅನುಮಾನ ಸಾಮರ್ಥ್ಯಗಳೆಂದು ಹೇಳುವರು. ಕೆಲವರು ಪಕ್ಷಧರ್ಮತಾ ಅಷ್ಟು ಅವಶ್ಯಕ ವಲ್ಲವೆಂದು ಹೇಳುವರು.[27] ವ್ಯಾಪ್ತಿಯು ಅನ್ವಯ, ವ್ಯತಿರೇಕವೆಂದು ಎರಡು ಮುಖ್ಯ ವಿಧವಾಗಿದೆ. ನೈಯಾಯಿಕರು ಕೇವಲಾನ್ವಯೀ, ಕೇವಲವ್ಯತಿರೇಕೀ, ಅನ್ವಯವ್ಯತಿರೇಕೀ ಎಂಬ ಮೂರು ಭೇದಗಳನ್ನು ಅಂಗೀಕರಿಸಿರುವರು. ಇವು ಪಕ್ಷ, ಸಪಕ್ಷ, ವಿಪಕ್ಷಗಳನ್ನಾಶ್ರಯಿಸುವವು. ಸ್ವಾರ್ಥಾನುಮಾನ ವನ್ನು ಪೂರ್ವವತ್, ಶೇಷವತ್, ಸಾಮಾನ್ಯತೋದೃಷ್ಟವೆಂಬುದಾಗಿಯೂ ಅಥವಾ ಕಾರಣಾನುಮಾನ, ಕಾರ್ಯಾನುಮಾನ, ಸಾಮಾನ್ಯಾನುಮಾನ ವೆಂಬುದಾಗಿಯೂ ವಿಭಾಗಿಸಿರುವರು.

ಪರಾರ್ಥಾನುಮಾನಕ್ಕೆ (Syllogism) ಪ್ರತಿಜ್ಞಾ, ಹೇತು, ದೃಷ್ಟಾಂತ, ಉಪನಯ, ನಿಗಮನ, ಜಿಜ್ಞಾಸಾ, ಸಂಶಯ, ಶಕ್ಯಪ್ರಾಪ್ತಿ, ಪ್ರಯೋಜನ,

---

[26] "ಅನುಮಿತಿಕರಣಮನುಮಾನಮ್"; 'ತ್ರಿರೂಪಾಲ್ಲಿಂಗಾಲ್ಲಿಂಗಿನಿ ಜ್ಞಾನಮನು ಮಾನಮ್" (ಧರ್ಮೋತ್ತರ). "ಅನುಮಾನಂ ಲಿಂಗಾದರ್ಥದರ್ಶನಮ್' (ನ್ಯಾಯ ಪ್ರವೇಶ). "ಸ್ವಾರ್ಥಂ ತ್ರಿರೂಪಲ್ಲಿಂಗಾದ್ಯದನುಮೇಯೇ ಜ್ಞಾನಂ ತದನುಮಾನಮ್" (ಧರ್ಮಕೀರ್ತಿ). "ಆನನ್ತರಿಯಕಾರ್ಥದರ್ಶನಂ, ತದ್ವಿದೋऽನುಮಾನಮ್"(ವಸುಬನ್ಧು). "ಅನಾಸನ್ನಾತೀತಾನಾಗತ ವ್ಯವಹಿತಾರ್ಥಗೋಚರಮನುಮಾನಮ್"; "ಪ್ರಮಾಣಾಂತ ರಾನುಸಾರೇಣೈವ ಅರ್ಥಪ್ರಮಾಪಕಮನುಮಾನಮ್"; "ನಿರ್ದೋಷೋಪಪತ್ತಿರನು ಮಾನಮ್.'

[27] ಊರ್ಧ್ವದೇಶೋ ವೃಷ್ಟಿಮಾನ್, ಅಧೋದೇಶೇ ನದೀಪೂರಾತ್ ಇತ್ಯಾದಿಗಳಿಂದ.

ವ್ಯದಾಸಗಳೆಂಬ ಹತ್ತು ಅಂಗಗಳೆಂದು ಜರನ್ನೈಯಾಯಿಕರು ಹೇಳುವರು. ಪ್ರಶಸ್ತಪಾದ ಭಾಷ್ಯದಲ್ಲಿ ಪ್ರತಿಜ್ಞಾ, ಅಪದೇಶ, ನಿದರ್ಶನ, ಅನುಸನ್ಧಾನ ಪ್ರತ್ಯಾಮ್ನಾಯಗಳೆಂಬ ಐದನ್ನೂ, ವಾತ್ಸ್ಯಾಯನ ಭಾಷ್ಯದಲ್ಲಿ ಪ್ರತಿಜ್ಞಾ, ಹೇತು, ದೃಷ್ಟಾನ್ತ, ಉಪನಯ, ನಿಗಮನವೆಂಬ ಐದನ್ನೂ ಮುಖ್ಯವೆಂದು ಅಂಗೀಕರಿಸಿದೆ. ಭದ್ರಬಾಹುವಿನ ದಶವೈಕಾಲಿಕ ನಿರ್ಯುಕ್ತಿ ಮತ್ತು ಧರ್ಮ ಕೀರ್ತಿಯ ನ್ಯಾಯಬಿನ್ದು ಗ್ರಂಥಗಳಲ್ಲಿ ಜರನ್ನೈಯಾಯಿಕರ ಮತವು ಕಂಡು ಬರುವದು. ಬೌದ್ಧರ ತ್ರಿಲಕ್ಷಣಹೇತುವಾದ ಅಥವಾ ತ್ರಿರೂಪಲಿಂಗವಾದವು ಅಸಂಗ ವಸುಬನ್ಧುಗಳಿಂದ ಆರಂಭವಾಯಿತೆಂದೂ ದಿಙ್ನಾಗನಿಂದ ಪರಿಷ್ಕೃತ ವಾಗಿ ತಾರ್ಕಿಕ ಪ್ರಪಂಚದಲ್ಲಿ ಕ್ರಾಂತಿಯನ್ನುಂಟುಮಾಡಿತೆಂದೂ ದಿಙ್ನಾಗನ ಸಮಕಾಲೀನರಾದ ಪ್ರಶಸ್ತಪಾದರು ಬೌದ್ಧರಿಂದ ಅನೇಕ ಅಂಶಗಳನ್ನು ಗ್ರಹಿಸಿದರೆಂದೂ ಚೆರ್ಬಾಟ್ಸ್ಕಿಯ ಅಭಿಪ್ರಾಯ. ಆದರೆ ಪ್ರಶಸ್ತಪಾದರ "ಸಂಯೋಗ, ಶಬ್ದ, ಸಾಹಚರ್ಯ" ವಿಷಯಕವಾದ ವಾಕ್ಯಗಳನ್ನು ವಸು ಬನ್ಧು ದಿಙ್ನಾಗರು ತಮ್ಮ ಗ್ರಂಥಗಳಲ್ಲಿ ಉದ್ಧರಿಸಿರುವರು. ದಿಙ್ನಾಗನು ಭಾರತೀಯ ತರ್ಕಶಾಸ್ತ್ರದಲ್ಲಿ ಮುಖ್ಯ ಬದಲಾವಣೆ ಮಾಡಿದನೆಂದೂ ಆದುದ ರಿಂದ ಮಧ್ಯಯುಗೀನ ತರ್ಕಶಾಸ್ತ್ರದ ಜನಕನೆಂದೂ ಕೆಲವರು ಹೇಳುವರು. ದಿಙ್ನಾಗನು ಮೊದಲು ಕಾಂಚೀ ನಿವಾಸಿಯಾಗಿದ್ದನೆಂದೂ ಅನಂತರ ಉತ್ತರ ದೇಶಕ್ಕೆ ಹೋಗಿ ನಾಲಂದಾ ವಿಶ್ವವಿದ್ಯಾನಿಲಯಕ್ಕೆ ಅಧ್ಯಕ್ಷನಾದನೆಂದೂ, ಕಾಳಿದಾಸ, ನಿಚುಳರೊಡನೆ ವಾದಮಾಡಿದನೆಂದೂ, ಅನೇಕ ಯೋಗಾಚಾರ ಮತಗ್ರಂಥಗಳನ್ನು ರಚಿಸಿ ಬೋಧಿಸತ್ವನೆಂಬುದಾಗಿ ಗೌರವಿಸಲ್ಪಟ್ಟನೆಂದೂ ಆದುದರಿಂದ ಇತನ ಕಾಲವು ಕ್ರಿಸ್ತಶಕ ೪೦೦ ಎಂದೂ ಊಹಿಸಲಾಗಿದೆ. ದಿಙ್ನಾಗನು ಧೂಮಾದಗ್ನಿ ರೂಪಧರ್ಮಾಂತರಾನುಮಾನವನ್ನೂ ಅಗ್ನಿ— ದೇಶಸಂಬಂಧಾನುಮಾನವನ್ನೂ ದೂಷಿಸಿ, ಅಗ್ನಿವಿಶಿಷ್ಟ ದೇಶಾನುಮಾನವನ್ನು ಸಮರ್ಥಿಸಿದನೆಂದು ಕೆಲವರು ಹೇಳುವರು. ಆದರೆ ಇದು ದಿಙ್ನಾಗನಿಗಿಂತ ಬಹುಳ ಪ್ರಾಚೀನರಾದ ಪ್ರಶಸ್ತಪಾದ ಮತ್ತು ವಾತ್ಸ್ಯಾಯನರ ಭಾಷ್ಯಗಳಲ್ಲಿ ಕಂಡುಬರುವದು.[28] ದಿಙ್ನಾಗನು ಪಂಚಾವಯವಗಳನ್ನು ಮೊದಲು ನಿರಾಕರಿ

---

[28] ಸಾಧ್ಯಂಚದ್ವಿವಿಧಂ, ಧರ್ಮಿವಿಶಿಷ್ಟೋವಾಧರ್ಮಃ; ಶಬ್ದಸ್ಯಾನಿತ್ಯತ್ವಂ ಧರ್ಮ ವಿಶಿಷ್ಟೋವಾ ಧರ್ಮೀ ಅನಿತ್ಯಃ ಶಬ್ದಃ ಇತಿ|| ವಾತ್ಸ್ಯಾಯನಭಾಷ್ಯಂ

ಯದನುಮೇಯೇನ ಸಂಬದ್ಧಂ ಪ್ರಸಿದ್ಧಂಚ ತದನ್ವಿತೇ | ತದಭಾವೇಚನಾಸ್ತ್ಯೇವ ತಲ್ಲಿಂಗಮನುಮಾಪಕಮ್ || ವಿಪರೀತಮತೋಯತ್ ಸ್ಯಾದೇಕೇನದ್ವಿತಯೇನ ವಾ | ವಿರುದ್ಧಾಸಿದ್ಧ ಸಂದಿಗ್ಧಮಲಿಂಗಂ ಕಾಶ್ಯಪೋಬ್ರವೀತ್ ||—ಪ್ರಶಸ್ತಪಾದಭಾಷ್ಯ

ನಿದನೆಂದು ಹೇಳಲಾಗಿದೆ. ಆದರೆ ಅವನಿಗೆ ಪೂರ್ವದಲ್ಲಿ ವೈತ್ರೇಯನು ಸಾಧ್ಯವೆಂಬುದು ಆತ್ಮಸಂಬಂಧ ಪರಸಂಬಂಧಗಳೆಂಬ ಎರಡೇ ವಿಧವೆಂದೂ ವಸುಬನ್ಧುವು ಐದು ಅಥವಾ ಮೂರು ಅವಯವಗಳನ್ನೂ ಅಂಗೀಕರಿಸಿರುವರು. ದಿಜ್ಞಾಗನು ಪರಾರ್ಥಾನುಮಾನದಲ್ಲಿ ಉಪನಯ, ನಿಗಮನಗಳನ್ನು ಅನವಶ್ಯವೆಂದು ತ್ಯಜಿಸಿದುದು ಸಮರ್ಪಕವೆಂದು ಹೇಳಲಾಗದು. ಮತ್ತು ಪಕ್ಷಧರ್ಮತಾ, ಸಪಕ್ಷೇಸತ್ವ, ವಿಪಕ್ಷೇಚಾಸತ್ವ ಎಂದು ತ್ರೈರೂಪ್ಯ ಅಥವಾ ತ್ರಿಲಕ್ಷಣ ಕದರ್ಥನವನ್ನು ಕಂಡುಹಿಡಿದನೆಂದು ಹೇಳುವದೂ ಸಾಧುವಲ್ಲ. ಇದು ಪ್ರಶಸ್ತಪಾದ ಭಾಷ್ಯದಲ್ಲಿಯೇ ಕಂಡುಬರುವದು. ಪ್ರಶಸ್ತಪಾದರಿಂದ ಉಕ್ತವಾದ ಅನುಮೇಯವೇ ಪಕ್ಷಧರ್ಮತ್ವ.[29] ಅಲ್ಲದೆ ನ್ಯಾಯಸೂತ್ರಗಳಲ್ಲಿಯೇ ತ್ರೈರೂಪ್ಯವೂ ಸೂಚಿತವಾಗಿದೆ.[30] ಮತ್ತು ದಿಜ್ಞಾಗನು ವ್ಯಾಪ್ತಿಯನ್ನೇ ಮುಖ್ಯವೆಂದೂ ಉದಾಹರಣ ನಿಗಮನಗಳು ಅಮುಖ್ಯವೆಂದು ಮೊದಲು ತೀರ್ಮಾನಮಾಡಿದನೆಂದೂ ಹೇಳಲಾಗಿದೆ. ಆದರೆ ವ್ಯಾಪ್ತಿಯ ಆವಶ್ಯಕತೆಯನ್ನು ಪ್ರಶಸ್ತಪಾದರೇ ಅಂಗೀಕರಿಸಿರುವರು. ವೈಶೇಷಿಕರು ಬೌದ್ಧರಿಗೆ ಪ್ರತಿಯಾಗಿ ಅಲೌಕಿಕ ಸನ್ನಿಕರ್ಷ ಅಥವಾ ಸಾಮಾನ್ಯ ಲಕ್ಷಣಾ ಪ್ರತ್ಯಾಸತ್ತಿಯನ್ನು ಪ್ರತಿಪಾದಿಸಿರುವರು. ಎಷ್ಟೋ ಹಿಂದೆಯೇ ಯಾಸ್ಕ, ಔಪಮನ್ಯವರು ನಿಗಮನವು ಅವಶ್ಯಕವೆಂದು ನಿರ್ಧರಿಸಿದ್ದರು. ವಾತ್ಸ್ಯಾಯನರೂ ಅನ್ವಯವ್ಯಾಪ್ತಿ ವ್ಯತಿರೇಕ ವ್ಯಾಪ್ತಿಗಳನ್ನಂಗೀಕರಿಸಿರುವರು. ನ್ಯಾಯಸೂತ್ರಗಳಲ್ಲಿ ಜಾತಿಯೆಂಬ ಆಭಾಸವನ್ನು ಹೇಳಿರುವದನ್ನೇ ಬೌದ್ಧರು ವ್ಯಾಪ್ತ್ಯಾಭಾಸವೆಂದು ಹೇಳದೇ ದೃಷ್ಟಾನ್ತಾಭಾಸವೆಂದು ವ್ಯವಹರಿಸಿರುವರು. ಆದುದರಿಂದ ದಿಜ್ಞಾಗನೇ ವ್ಯಾಪ್ತಿಯ ಪ್ರಾಮುಖ್ಯವನ್ನು ಕಂಡುಹಿಡಿದನೆಂಬುದು ವಿಶ್ವಸನೀಯವಲ್ಲ. ದಿಜ್ಞಾಗನು ಪಕ್ಷಾಭಾಸ, ಹೇತ್ವಾಭಾಸ, ದೃಷ್ಟಾನ್ತಾಭಾಸಗಳನ್ನು ನಿರ್ಣಯಿಸಿದನೆಂಬುದು ಕೂಡ ಸಮರ್ಪಕವಲ್ಲ.

[29] ಸಾಧ್ಯೇ (ಸಿದ್ಧಿವಿಷಯಪಕ್ಷೇ) ನಿಶ್ಚಿತಮನ್ವಯೇನ ಘಟಿತಂ ಭಿಭ್ರತ್ ಸಪಕ್ಷೇಸ್ಥಿತಂ |
ವ್ಯಾವೃತ್ತಂಚ ವಿಪಕ್ಷತೋಭವತಿಯತ್ ತತ್ಸಾಧನಂ ಸಿದ್ಧಯೇ ||

ಪಾತ್ರಕೇಸರಿ, ಪ್ರಭಾಚನ್ದ್ರ ಮುಂತಾದ ಜೈನರೂ ತ್ರಿಲಕ್ಷಣಹೇತುವಾದವನ್ನು ನಿರಾಕರಿಸಿರುವರು.

ಅನ್ಯಥಾನನುಪಪನ್ನತ್ವಂ ಯತ್ರ ತತ್ರತ್ರಯೇಣಕಿಮ್ |
ನಾನ್ಯಥಾನನುಪಪನ್ನತ್ವಂ ಯತ್ರ ತತ್ರ ತ್ರಯೇಣ ಕಿಮ್ ||

[30] ನ್ಯಾಯಸೂತ್ರ, V—೩೪. ಸಾಧ್ಯೇ ಪ್ರತಿಸನ್ಧಾಯಧರ್ಮಂ = ಪಕ್ಷಧರ್ಮತ್ವಂ, ಉದಾಹರಣೇ ಚ ಪ್ರತಿಸನ್ಧಾಯ = ಸಪಕ್ಷೇ ಸತ್ವಂ, ಉದಾಹರಣವೈಧರ್ಮ್ಯಾಚ್ಚ = ವಿಪಕ್ಷೇಚಾಸತ್ವಮ್.

ದಿಙ್ನಾಗನ ಶಿಷ್ಯನಾದ ಶಂಕರಸ್ವಾಮಿಯು ನ್ಯಾಯಪ್ರವೇಶವೆಂಬ ಗ್ರಂಥವನ್ನು ರಚಿಸಿದನು. ಅನಂತರ ಧರ್ಮಕೀರ್ತಿಯು ದಿಙ್ನಾಗನ ವಾದಗಳನ್ನು ವಿಶೇಷವಾಗಿ ಸಮರ್ಥಿಸಿದನು. ಈ ಸಮಯದಲ್ಲಿ ಕುಮಾರಿಲ, ಪ್ರಭಾಕರ, ಶಾಲಿಕನಾಥ, ಅಕಲಂಕ, ವಿದ್ಯಾನನ್ದಿ, ಶಂಕರ, ಮಂಡನಮಿಶ್ರ ಭರ್ತೃಹರಿ ಮುಂತಾದವರು ಬೌದ್ಧರ ತರ್ಕ ರೀತಿಯನ್ನು ಖಂಡಿಸುವರು. ಅನಂತರ ಉದ್ಯೋತಕರ, ಉದಯನ, ವಾಚಸ್ಪತಿ, ಪಾರ್ಥಸಾರಥಿ ಪ್ರಭೃತಿಗಳು ಸಂದರ್ಭಾನುಸಾರವಾಗಿ ತರ್ಕಗ್ರಂಥಗಳನ್ನು ರಚಿಸುತ್ತಾ ಬಂದರು. ಸಪ್ತಪದಾರ್ಥೀ, ತರ್ಕಸಂಗ್ರಹ ಮುಂತಾದ ಪ್ರಕರಣ ಗ್ರಂಥಗಳೂ ಹುಟ್ಟಿದವು.

ನೈಯಾಯಿಕಮತವನ್ನು ಪುನಃ ಉದ್ಧರಿಸಲು ನವದ್ವೀಪದಲ್ಲಿ ನವೀನ ನ್ಯಾಯಪದ್ಧತಿಯು ಗಂಗೇಶೋಪಾಧ್ಯಾಯನಿಂದ ಆರಂಭವಾಯಿತು. ಗದಾಧರೀ, ತತ್ವಚಿಂತಾಮಣೀ ಮುಂತಾದ ಗ್ರಂಥಗಳು ಭರತಖಂಡದಲ್ಲೆಲ್ಲ ವ್ಯಾಪ್ತಿಹೊಂದಿ ನವದ್ವೀಪವು ನ್ಯಾಯಶಾಸ್ತ್ರಕ್ಕೆ ಕೇಂದ್ರವಾಯಿತು. ಸ್ಮಾರ್ತ, ಶೈವ, ವೀರಶೈವ, ವೈಷ್ಣವ, ಶ್ರೀವೈಷ್ಣವ, ಶುದ್ಧಾದ್ವೈತ ಇತ್ಯಾದಿ ಸಂಪ್ರದಾಯಗಳ ಗ್ರಂಥಕರ್ತರೂ ತಮ್ಮ ತಮ್ಮ ಮತಗಳ ಸಮರ್ಥನೆಗಾಗಿ ಅನೇಕ ತರ್ಕಗ್ರಂಥಗಳನ್ನೂ ರಚಿಸಿರುವರು.

ಭಾರತೀಯ ತರ್ಕಶಾಸ್ತ್ರವು ಮಾನಸಿಕ ವ್ಯಾಪಾರಗಳನ್ನು ಕೂಲಂಕಷವಾಗಿ ವಿಮರ್ಶಿಸಿ ತತ್ವನಿಶ್ಚಯಮಾಡುವದಕ್ಕೆ ಅತ್ಯುತ್ತಮ ಸಾಧನವೆಂದೂ, ಪಾಶ್ಚಾತ್ಯ ತಾರ್ಕಿಕರಾದ ಅರಿಸ್ಟೋಟಲ್, ಬೇಕನ್, ಲೀಬ್ನಿಟ್ಸ್, ಕ್ಯಾಂಟ್, ಸಿಗ್ವಾರ್ಟ್, ಬರ್ಟ್ರಾನ್ಡ್ ರಸ್ಸೆಲ್ ಮುಂತಾದವರ ಪದ್ಧತಿಗಳನ್ನು ವಿಮರ್ಶಿಸಿದರೆ ಭಾರತೀಯ ತರ್ಕಶಾಸ್ತ್ರವೇ ಎಷ್ಟೋ ಉತ್ತಮವೆಂಬದಾಗಿ ಡಾ. ಚೆರ್ಬಾಟ್ಸ್ಕಿ ಮುಂತಾದವರು ಒಪ್ಪಿಕೊಂಡಿರುವರು.[81]

**ಪೂರ್ವಮೀಮಾಂಸಾದರ್ಶನ:** ಮೀಮಾಂಸೆಯೆಂದರೆ ವಿಚಾರಣೆ.[82] ಮೀಮಾಂಸಾಶಾಸ್ತ್ರ ಧರ್ಮ, ದೇವತಾ ಮತ್ತು ಜ್ಞಾನಕಾಣ್ಡಗಳನ್ನೊಳಗೊಂಡ ಇಪ್ಪತ್ತು ಅಧ್ಯಾಯಗಳ ಶಾಸ್ತ್ರವೆಂದು ಕೆಲವರೂ, ಧರ್ಮಕ್ಕೂ ಜ್ಞಾನಕ್ಕೂ ಮಹದ್ವೈಲಕ್ಷಣ್ಯವಿರುವುದರಿಂದ ಒಂದೇ ಶಾಸ್ತ್ರವಲ್ಲವೆಂದು ಇತರರೂ ಹೇಳುವರು. ಜೈಮಿನಿಮಹರ್ಷಿಪ್ರಣೀತವಾದ ಪೂರ್ವಮೀಮಾಂಸಾ

[81] Tcherbatsky: *Buddhist Logic*, Vol. 2.

[82] ಮಾನ ಪೂಜಾಯಾಂ ಧಾತೋಸ್ಸನಿ ನಿಷ್ಪನ್ನೋಯಂ ವಿಚಾರವಾಚೀ ವಿಚಾರಾತ್ಮಿಕಾ ಮೀಮಾಂಸಾ. ನ್ಯಾಯರತ್ನಾಕರ: ಪು. ೭.

ಸೂತ್ರಗಳು ಕ್ರಿಸ್ತಪೂರ್ವ ಎರಡನೆಯ ಶತಾಬ್ದದಲ್ಲಿ ರಚಿತವಾಯಿತೆಂದು ಊಹಿಸಲಾಗಿದೆ. ಈ ಸೂತ್ರಗಳ ಮೇಲೆ ಈಗ ದೊರೆತಿರುವ ಭಾಷ್ಯಗಳಲ್ಲೆಲ್ಲ ಶಬರಸ್ವಾಮಿಗಳದೇ ಪ್ರಾಚೀನ. ಇದಕ್ಕೆ ಮುಂಚೆ ಕೆಲವರು ಭಾಷ್ಯಕಾರರು ಇದ್ದರೆಂದು ಊಹಿಸಲು ಅವಕಾಶವಿದೆ. "ವೃತ್ತಿಕಾರರು" (ಪ್ರಾಯಃ ಭಗವಾನ್ ಉಪವರ್ಷ) ಬೋಧಾಯನ, ಟಂಕ, ದ್ರವಿಡಾಚಾರ್ಯ ಭವದಾಸ, ಗುಹ, ಕಪರ್ದಿ, ಭರ್ತೃಮಿತ್ರ, ಭರ್ತೃಪ್ರಪಂಚ, ಹರಿ ಇತ್ಯಾದಿಗಳು ಶಂಕರಾಚಾರ್ಯರಿಗೆ ಪೂರ್ವದಲ್ಲಿಯೇ ಮೀಮಾಂಸಾಶಾಸ್ತ್ರದ ಮೇಲೆ ಭಾಷ್ಯಗಳನ್ನೂ ವೃತ್ತಿಗಳನ್ನೂ ರಚಿಸಿದ್ದರು. ಮಹಾಯಾನ ಬೌದ್ಧಮತವು ಪ್ರಬಲವಾಗಿ ವ್ಯಾಪಿಸುತ್ತಿದ್ದ ಕಾಲದಲ್ಲಿ ವೇದವಾದಿಗಳು ಕರ್ಮ, ಉಪಾಸನಾ, ಜ್ಞಾನಮಾರ್ಗಗಳನ್ನು ಬೋಧಿಸಿ ಆಸ್ತಿಕ ಮತವನ್ನು ಉದ್ಧಾರಮಾಡಲು ಆರಂಭಿಸಿದರೆಂದು ನಿರ್ಧರಿಸಬಹುದು.

ಪೂರ್ವಮೀಮಾಂಸಾಶಾಸ್ತ್ರದ ಉದ್ದೇಶವು ಅಭ್ಯುದಯ ನಿಃಶ್ರೇಯಸಗಳಿಗೆ ಕಾರಣವಾದ ಧರ್ಮವನ್ನು ನಿರ್ಧರಿಸುವದೇ ಆಗಿದೆ. ಇತರ ಮತದವರು ಧರ್ಮವೆಂಬ ಪದಕ್ಕೆ ವಿಧವಿಧವಾಗಿ ಅರ್ಥಮಾಡಿದ್ದರು.[83] ಆದರೆ ಕರ್ಮಮೀಮಾಂಸೆಯಲ್ಲಿ ಚೋದನಾಲಕ್ಷಣ (ಕಾರ್ಯ) ರೂಪವಾದುದು ಧರ್ಮ. ವೇದವೆಲ್ಲವೂ ಕಾರ್ಯ ಅಥವಾ ಸಾಧ್ಯರೂಪಾರ್ಥವಾಗಿದೆ. ಸಿದ್ಧರೂಪಾರ್ಥವಲ್ಲ. ಈ ಚೋದನೆಯ ಪರೀಕ್ಷೆಯಲ್ಲಿ ಪುರುಷನಿಗೆ ಸ್ವಾತಂತ್ರ್ಯವಿಲ್ಲ. ಧರ್ಮವನ್ನು ಪ್ರತ್ಯಕ್ಷಾದಿಗಳಿಂದ ತಿಳಿಯಲು ಸಾಧ್ಯವಲ್ಲ.[84] ವೇದವಿಧಿಯು ಸ್ವತಃ ಪ್ರಮಾಣ, ಜ್ಞಾನಕಾಲದಲ್ಲಿ ಇಲ್ಲದ ಸಾಧ್ಯವಸ್ತುವನ್ನು ಈ ಶಾಸ್ತ್ರವು ಬೋಧಿಸುವುದರಿಂದ ಸಾಪೇಕ್ಷತ್ವವಿಲ್ಲ. ವೇದದಲ್ಲಿ ನಿರರ್ಥಕವಾದ ವಾಕ್ಯವೊಂದೂ ಕಂಡುಬರುವದಿಲ್ಲ. ವೇದವು ಅಪೌರುಷೇಯವಾದುದರಿಂದ ನಿತ್ಯವಾದುದು, ನಿರ್ದೋಷವಾದುದು. ಈಶ್ವರನಿಗಿಂತಲೂ ಯಜ್ಞಕರ್ಮವೇ

---

[83] ಶ್ರೇಯೋ ಹಿ ಪುರುಷ ಪ್ರೀತಿಸ್ಸಾ ದ್ರವ್ಯಗುಣಕರ್ಮಭಿಃ। ಚೋದನಾಲಕ್ಷಣೈಸ್ಸಾಧ್ಯ ತಸ್ಮಾತ್ತೇಷ್ವೇವಧರ್ಮತಾ ॥ ಶ್ಲೋಕವಾರ್ತಿಕ.

ಸಾಂಖ್ಯಾ ಹ್ಯನ್ತಃಕರಣ ಸ್ಯ ಮನಸಃ ವೃತ್ತಿ ವಿಶೇಷಂ ಯೋಗಾದ್ಯನುಷ್ಠಾನಜನ್ಯಂ ಧರ್ಮಮಾಹುಃ। ಶಾಕ್ಯಾಸ್ತು ಚೇತಸೋ ಜ್ಞಾನಸ್ಯ ಜ್ಞಾನಾಂತರಜನ್ಯಾಂ ವಾಸನಾಮ್। ಆರ್ಹತಾಸ್ತು ಕಾಯಾರಮ್ಭಕಾನ್ ಪರಮಾಣೂನ್ ಪುದ್ಗಲಾಖ್ಯಾನ್। ವೈಶೇಷಿಕಾಸ್ತು ಆತ್ಮನೋ ವಿಶೇಷ ಗುಣಮ್। ಏಕದೇಶಿನಸ್ತು (ಪ್ರಾಭಾಕರಾಃ) ಅಪೂರ್ವಮ್ ॥

[84] ಸತ್ಸಂಪ್ರಯೋಗೇ ಪುರುಷಸ್ಯ ಇನ್ದ್ರಿಯಾಣಾಂ ಬುದ್ಧಿ ಜನ್ಮ। ತತ್ಪ್ರತ್ಯಕ್ಷಮನಿಮಿತ್ತಂ, ವಿದ್ಯಮಾನೋಪಾಲಮ್ಭನತ್ವಾತ್ ॥ ಸೂತ್ರ. I. ೪.

ಮುಖ್ಯವಾದುದು. ಯಜತಿಕರ್ಮವೇ ಅಪೂರ್ವ ಫಲವನ್ನು ಕೊಡುವದು; ದ್ರವ್ಯ ಮತ್ತು ದೇವತೆಗಳು ಸಿದ್ಧವಸ್ತುಗಳಾದುದರಿಂದ ಗೌಣ. ವೇದಮನ್ತ್ರಗಳಿಂದ ದೇವತೆಗಳಿಗೆ ಆಕಾರಗಳಿವೆಯೆಂದು ಹೇಳಲಾಗದು. ಹಾಗೆ ತೋರಬಹುದಾದ ಕೆಲವು ವಾಕ್ಯಗಳು ಅಸಂಬದ್ಧ ಅಥವಾ ಕಲ್ಪನೆ. ದೇವತೆಗಳಿಗೆ ಶರೀರವುಂಟೆಂದು ಹೇಳಿದರೆ ಆದಿಮತ್ತ್ವಾದಿದೋಷವು ಬರುವದು. ಆದುದರಿಂದ ಶಬ್ದವೇ ದೇವತೆ. ಶಬ್ದವು ಆತ್ಮ, ಜಗತ್ತು ಯಜ್ಞಸಾಧನ, ಸ್ವರ್ಗ, ನಿಃಶ್ರೇಯಸಗಳಂತೆಯೇ ನಿತ್ಯವಾದುದು. ಜಗತ್ತಿಗೆ ಆದಿಯೂ ಇಲ್ಲ ಅಂತವೂ ಇಲ್ಲ. (ನಹಿ ಕದಾಚಿದಪಿ ಅನೀದೃಶಂ ಜಗತ್). ಹಾಗೆಯೇ ಆತ್ಮವೂ ನಿತ್ಯವಾಗಿದ್ದು ಕರ್ತೃ ಮತ್ತು ಭೋಕ್ತೃವೂ ಆಗಿದೆ. ಇದರಿಂದ ಸುಖ ಮತ್ತು ದುಃಖ ತಾರತಮ್ಯಗಳು ಸ್ವರ್ಗ ನರಕಗಳಲ್ಲಿಯೂ ಇರುವವು ಎಂದು ಊಹಿಸಬಹುದು. ದೇಹಿಯು ವೈದಿಕ ಕರ್ಮಾನುಷ್ಠಾನದಿಂದ ಮೋಕ್ಷವನ್ನು ಪಡೆಯಬಹುದು. ಮೋಕ್ಷದಲ್ಲಿ ಮನಸ್ಸಂಬಂಧವಿಲ್ಲವಾದುದರಿಂದ ಆತ್ಮಜ್ಞಾನ, ಆನನ್ದಾನುಭವಗಳಿಲ್ಲ. ಅಶರೀರತ್ವವನ್ನು ಹೊಂದಿ ನೈಜರೂಪವಾದ ಜ್ಞಾನಶಕ್ತಿ ಮಾತ್ರವೇ ಇರುವುದರಿಂದ ಪುನರಾವೃತ್ತಿಯಿಲ್ಲ. ಹೀಗೆ ಮೋಕ್ಷದ ಸ್ವರೂಪವು ನಿಸ್ಸಂಬಂಧ ಮತ್ತು ನಿರಾನಂದವಾದುದು.

ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ಪ್ರಮಾಣ, ಕರ್ಮಭೇದ, ಶೇಷ, ಅರ್ಥಚಿನ್ತಾ, ಕ್ರಮ, ಅಧಿಕಾರ, ಅತಿದೇಶ (ಸಾಮಾನ್ಯ), ವಿಶೇಷಾತಿದೇಶ, ಊಹಾ, ಬಾಧ, ತನ್ತ್ರ-ಆವಾಪ, ಪ್ರಸಂಗಗಳೆಂಬ ಹನ್ನೆರಡು ಅಧ್ಯಾಯಗಳಿರುವುದರಿಂದ ದ್ವಾದಶಲಕ್ಷಣೀ ಎಂದೆನಿಸಿಕೊಂಡಿರುವುದು.[೮೬] ಸಂಕರ್ಷಣ ಅಥವಾ

[೮೬] ಪೂರ್ವಮೀಮಾಂಸೆಯಲ್ಲಿ ವೇದವನ್ನು ವಿಧಿ, ಮನ್ತ್ರ, ನಾಮಧೇಯ, ನಿಷೇಧ ಮತ್ತು ಅರ್ಥವಾದವೆಂಬುದಾಗಿ ವಿಭಾಗಿಸಿದೆ. ವಿಧಿಯನ್ನು ಅಪೂರ್ವ, ನಿಯಮ, ಪರಿಸಂಖ್ಯಾಯೆಂಬುದಾಗಿಯೂ ಉತ್ಪತ್ತಿ, ವಿನಿಯೋಗ, ಪ್ರಯೋಗ, ಅಧಿಕಾರ ಎಂಬುದಾಗಿಯೂ ವಿಭಜಿಸಬಹುದು. ವಿನಿಯೋಗ ವಿಧಿಯನ್ನು ನಿರ್ಣಯಿಸುವವಕ್ಕೆ ಶ್ರುತಿ, ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಾಮಾಖ್ಯಯೆಂಬುವು ಸಾಧನಗಳು. ಶ್ರುತಿ ವಾಕ್ಯಗಳು ವಿಧಾತ್ರೀ ಅಭಿಧಾತ್ರೀ, ವಿನಿಯೋಕ್ತ್ರೀ ಎಂದು ಮೂರು ವಿಧ. ಶ್ರುತಿಗೆ ಸಾಪೇಕ್ಷತ್ವವಿಲ್ಲ. ಲಿಂಗವು ಸಾಪೇಕ್ಷವೂ ನಿರಪೇಕ್ಷವೂ ಆಗಿರಬಹುದಾದುದರಿಂದ ಶ್ರುತಿಗಿಂತ ಬಲಹೀನವಾದುದು. ಹೀಗೆಯೇ ಮಿಕ್ಕ ವಾಕ್ಯ, ಪ್ರಕರಣ ಮುಂತಾದವೂ ಒಂದಕ್ಕಿಂತ ಮತ್ತೊಂದು ಬಲಹೀನ. ಪ್ರಯೋಗವು ಶ್ರುತಿ, ಅರ್ಥ, ಪಾಠ, ಸ್ಥಾನ, ಮುಖ್ಯ, ಪ್ರವೃತ್ತಿಗಳೆಂಬ ಆರು ಪ್ರಮಾಣಗಳಿಂದ ಕರ್ಮಗಳನ್ನು ನಿರ್ಣಯಿಸುವದು. ಅಧಿಕಾರವೆಂದರೆ ಪ್ರಧಾನ ಕರ್ಮಗಳಲ್ಲಿ ಸಾಮರ್ಥ್ಯಾನುಸಾರ, ಅಂಗಗಳಲ್ಲಿ ಯಥಾಶಕ್ತಿ ಕರ್ಮಮಾಡುವದು. ಮನ್ತ್ರವು ವೇದಗಳ ಸಂಹಿತಾಭಾಗ. ನಾಮಧೇಯವು ಮತ್ವರ್ಥ, ಲಕ್ಷಣಾಭಯ, ವಾಕ್ಯಭೇದ, ತತ್ಪ್ರಖ್ಯಶಾಸ್ತ್ರ, ತದ್ವ್ಯಪದೇಶ

ದೇವತಾ ಕಾಣ್ಡವೂ ಜೈಮಿನಿ ಪ್ರಣೀತವೆಂದು ಹೇಳಲಾಗಿದೆ,[36] ಪೂರ್ವ ಮೀಮಾಂಸಾ ಶಾಸ್ತ್ರದ ನ್ಯಾಯಗಳನ್ನು[37] ವೇದಾನ್ತ ವಿಚಾರದಲ್ಲಿ ಉಪಯೋಗಿಸಿಕೊಂಡಿರುವದರಿಂದ ಕರ್ಮಮೀಮಾಂಸೆಯನ್ನು ಅಧ್ಯಯನ ಮಾಡದಿದ್ದರೆ ಉತ್ತರ ಮೀಮಾಂಸಾ ಶಾಸ್ತ್ರವನ್ನು ತಿಳಿಯುವದು ಸುಲಭವಲ್ಲ.

ಪೂರ್ವಮೀಮಾಂಸಕರು ವೇದಪ್ರಾಮಾಣ್ಯವನ್ನು ಸ್ಥಾಪಿಸಿ, ನಾಸ್ತಿಕ ಮತಗಳನ್ನೂ ಕೇವಲ ಭಾವನಾ ಮೂಲಕವಾದ ಮತಗಳನ್ನೂ ಖಂಡಿಸಿ ಸನಾತನ ಧರ್ಮವನ್ನುದ್ಧಾರಮಾಡಿ ಭಾರತೀಯ ಸಂಸ್ಕೃತಿಯನ್ನು ರಕ್ಷಿಸಿದರು. ಇವರಲ್ಲಿ ಕುಮಾರಿಲ, ಪ್ರಭಾಕರ ಮತ್ತು ಮುರಾರಿ ಮಿಶ್ರರ ಮೂರು ಸಂಪ್ರದಾಯಗಳಿವೆ. ಕುಮಾರಿಲರು ಆನ್ಧ್ರರೆಂದೂ ಕ್ರಿಸ್ತಶಕ ಆರು-ಏಳನೆಯ ಶತಾಬ್ಧಗಳಲ್ಲಿದ್ದರೆಂದೂ ಪ್ರಭಾಕರ, ಉಂಬೇಕ, ಮಣ್ಡನಮಿಶ್ರ ಮುಂತಾದವರು ಶಿಷ್ಯರಾಗಿದ್ದರೆಂದು ತಿಳಿದುಬರುವದು.[38] ಕುಮಾರಿಲರ ಮತಕ್ಕೆ ಭಾಟ್ಟ ಸಂಪ್ರದಾಯವೆಂದೂ ಹೆಸರು. ಪ್ರಭಾಕರರು ಕೇರಳ ದೇಶದ ಕುತುಲ್ಲಿ ಮಾನಂ ಎಂಬ ನಂಬೂದಿರಿ ಕುಟುಂಬಕ್ಕೆ ಸೇರಿದವರೆಂದೂ, ಶ್ರೀಶಂಕರರಿಗೆ ಸಂಬಂಧಿಗಳೆಂದೂ ತಿಳಿದುಬರುವದು. ಆದರೆ ಕೆಲವರು ಪ್ರಭಾಕರರನ್ನು ದಕ್ಷಿಣ ಕೋಸಲೇಶ್ವರರ ಮಹಾಮಾತ್ಯನಾಗಿದ್ದ ವಿಭಾಕರ ಮಿಶ್ರನ ಆತ್ಮಜರೆಂದು

---

ಗಳಿಂದ ಅರ್ಥವನ್ನು ಸ್ಪಷ್ಟೀಕರಿಸುವುದು. ನಿಷೇಧವು ಎರಡು ವಿಧ. ನಙ್ ಪೂರ್ವಪದದೊಡನೆ ಸೇರಿದರೆ ಪರ್ಯುದಾಸವೆಂದೂ ಉತ್ತರ ಪದದೊಡನೆ ಸೇರಿದರೆ ಪ್ರತಿಷೇಧವೆಂದೂ ಹೆಸರು. ವಿಧಿಗಿಂತಲೂ ನಿಷೇಧವು ಬಲವಾದುದು. ಲಕ್ಷಣದಿಂದ ಅರ್ಥವಾದವನ್ನು ತಿಳಿಯಬಹುದು. ಪದಾರ್ಥವನ್ನು ವ್ಯಾಕರಣ ಪ್ರಯೋಗಗಳಿಂದ ತಿಳಿಯಬಹುದು. ವಾಕ್ಯಾರ್ಥವನ್ನು ಪದಮೂಲ, ವಾಕ್ಯಮೂಲ, ಪ್ರಕರಣ ಮೂಲ ಮತ್ತು ವಿವಕ್ಷೆಗಳಿಂದ ನಿಶ್ಚಯಿಸಬೇಕು. ವೇದದಲ್ಲಿ ಶಬ್ದವನ್ನು ಬದಲಾಯಿಸದೆಯೇ ಭಿನ್ನಾರ್ಥವು ಕಂಡು ಬರಬಹುದು. ಆಖ್ಯಾತತ್ವ ಮತ್ತು ಲಿಙತ್ವಗಳಿಂದ ಕರ್ಮಮಾಡಬೇಕೆಂಬ ಪ್ರೇರಣೆ ಉಂಟಾಗುವದು. ಇಂತಹ ಪ್ರೇರಣೆಯೆಂಬ ವ್ಯಾಪರವಿಶೇಷಕ್ಕೆ ಭಾವನಾ ಎಂದು ಹೆಸರು. ಇದು ಶಾಬ್ದೀ ಭಾವನಾ, ಆರ್ಥೀಭಾವನಾ ಎಂದು ಎರಡು ವಿಧ. ಲಿಙತ್ವದಿಂದ ಶಾಬ್ಧೀಭಾವನೆಯೂ ಆಖ್ಯಾತದಿಂದ ಆರ್ಥೀಭಾವನೆಯೂ ಉಂಟಾಗುವವು.

36 ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ (X-೮೩) ವ್ಯಾಸರು ಮೊದಲು ಮತ್ತು ಕೊನೆಯ ಸೂತ್ರಗಳನ್ನು ಬರೆದರೆಂದೂ, ಮಿಕ್ಕವನ್ನು ಪೈಲನು ಬರೆದನೆಂದೂ ಹೇಳಿದೆ.

67 ಪ್ರಧಾನಮಲ್ಲನಿಬರ್ಹಣ, ಪೂರ್ವೋಧಾವತಿ, ಗಾರ್ಹಪತ್ಯ, ಸತ್ರ, ದರ್ವೀಹೋಮ, ನಹಿ ನಿನ್ದಾ, ಋತುಲಿಂಗ, ಅನ್ಧಪರಂಪರಾ, ಆಮಿಕ್ಷಾ, ಶಾಲ್ಯರ್ಥಂಕುಲ್ಯಾಃ, ಅರ್ಧಜರತೀ- ಇತ್ಯಾದಿ ನ್ಯಾಯಗಳು.

38 ಉಂಬೇಕಃ ಕಾರಿಕಾಂವೇತ್ತಿ ತನ್ತ್ರಂವೇತ್ತಿ ಪ್ರಭಾಕರಃ| ಮಣ್ಡನಸ್ತು (ವಾಮನಸ್ತು) ಉಭಯಂವೇತ್ತಿನಂಕಿಂಚಿದಪಿ ರೇವಣಃ||

ಹೇಳುವರು. ಕುಮಾರಿಲ ಪ್ರಭಾಕರರು ಜಿಹ್ಲಣನೆಂಬ ಬೌದ್ಧರಾಜನನ್ನು ವೈದಿಕಮಾರ್ಗಕ್ಕೆ ತಂದರೆಂದೂ ಆ ಸಮಯದಲ್ಲಿ ಕುಮಾರಿಲರು ಮಹಿಮ್ನಾ ಸ್ತವವನ್ನೂ ಪ್ರಭಾಕರರು ಒಂದು ದಣ್ಡಕವನ್ನೂ ಶಿವಸ್ತುತಿಪರವಾಗಿ ರಚಿಸಿದರೆಂದೂ ಹೇಳಲಾಗಿದೆ. ಕುಮಾರಿಲರು ಒಂದು ಸಂದರ್ಭದಲ್ಲಿ ಈಶ್ವರ ನಿರಾಕರಣೆಮಾಡಬೇಕಾಗಿ ಬಂದರೂ, ಕೊನೆಯಲ್ಲಿ ಭಗವದಪಚಾರ ಮಾಡಿದುದಕ್ಕಾಗಿ ಪಶ್ಚಾತ್ತಾಪಪಟ್ಟು ಶಿವಸ್ತುತಿಯನ್ನು ಮಾಡಿರುವರು.[39] ಪ್ರಭಾಕರರು ತಮ್ಮ ಗುರುಗಳ ಅಭಿಪ್ರಾಯಗಳನ್ನು ಖಂಡಿಸಿ ಆಚಾರ್ಯಾಪರಾಧವನ್ನು ಮಾಡಿದುದಕ್ಕಾಗಿ ತುಷಾಗ್ನಿ ಪ್ರವೇಶಮಾಡಿದರೆಂದೂ, ಆದರೆ ಗುರುವಾಯೂರಿನ ಶ್ರೀಕೃಷ್ಣದೇವರನ್ನು ಸ್ತುತಿಸಿ ಕೃಷ್ಣವಿಲಾಸವನ್ನು ರಚಿಸಿ ಸುರಕ್ಷಿತರಾದರೆಂದೂ ಐತಿಹ್ಯವಿದೆ. ಇಂತಹ ಕಥೆಯು ಕುಮಾರಿಲರ ವಿಷಯವಾಗಿ ಶಂಕರವಿಜಯದಲ್ಲಿ ಕಂಡುಬರುವದು. ಗೃಹಸ್ಥಾಶ್ರಮವೇ ಉತ್ತಮವೆಂದು ವಾದಿಸುತ್ತಿದ್ದ ಕುಮಾರಿಲರೂ ಪ್ರಭಾಕರರೂ ಕೊನೆಯಲ್ಲಿ ಏಕದಣ್ಡಿ ಸನ್ಯಾಸವನ್ನು ಸ್ವೀಕರಿಸಿದರೆಂದು ಆನನ್ದಾನುಭವನ ನ್ಯಾಯರತ್ನ ದೀಪಾವಲೀ, ಜ್ಞಾನಾಮೃತದ, ನೈಷ್ಕರ್ಮ್ಯಸಿದ್ಧಿ ವ್ಯಾಖ್ಯಾ ಮುಂತಾದ ಗ್ರಂಥಗಳಿಂದ ತಿಳಿದುಬರುವದು. ಹೀಗೆಯೇ ಮಣ್ಡನಮಿಶ್ರರೂ ಕೂಡ ಶ್ರೀ ಶಂಕರರ ಶಿಷ್ಯರಾಗಿ ಸುರೇಶ್ವರಾಚಾರ್ಯರೆಂಬವರಾದರೆಂದೂ ಹೇಳುವರು.

ಕುಮಾರಿಲರು ಮೊದಲು ಶಾಬರಭಾಷ್ಯಕ್ಕೆ ಬೃಹಟ್ಟೀಕೆ, ಮಧ್ಯಮಟೀಕೆ ಮತ್ತು ಟುಪ್‌ಟೀಕೆಗಳನ್ನು ಬರೆದರೆಂದೂ, ಇವುಗಳನ್ನು ಖಂಡಿಸುವುದಕ್ಕಾಗಿ ಪ್ರಭಾಕರರು ವಿವರಣೆ (ಲಘ್ವೀ ಅಥವಾ ಭಾಷ್ಯ) ಯನ್ನು ರಚಿಸಿದರೆಂದೂ, ಅದನ್ನು ಪ್ರತಿಭಟಿಸಿ ಕುಮಾರಿಲರು ಶ್ಲೋಕವಾರ್ತಿಕ ಮತ್ತು ತನ್ತ್ರವಾರ್ತಿಕಗಳನ್ನು ಬರೆದರೆಂದೂ, ಇವಕ್ಕೆ ಖಂಡನರೂಪವಾಗಿ ಪ್ರಭಾಕರರು ಬೃಹತೀ ಅಥವಾ ನಿಬನ್ಧನವೆಂಬುದನ್ನು ಬರೆದರೆಂದೂ ಊಹಿಸಲಾಗಿದೆ. ಮಣ್ಡನಮಿಶ್ರರು ಭಾವನಾವಿವೇಕ, ಸ್ಫೋಟಸಿದ್ಧಿ ಮುಂತಾದ ಪೂರ್ವಮೀಮಾಂಸಾ ಗ್ರಂಥಗಳನ್ನೂ, ಸ್ವತನ್ತ್ರವಾಗಿ ಬ್ರಹ್ಮಸಿದ್ಧಿಯೆಂಬ ಅದ್ವೈತಗ್ರಂಥವನ್ನು ರಚಿಸಿರುವರು. ಈ ಬ್ರಹ್ಮಸಿದ್ಧಿ ಗ್ರಂಥದಲ್ಲಿ ಶಾಂಕರ ಭಾಷ್ಯದಿಂದ ವಾಕ್ಯಗಳನ್ನುದ್ಧರಿಸಿ ಪ್ರತಿಭಟಿಸಿರುವುದರಿಂದ ಮಣ್ಡನಮಿಶ್ರರು ಶ್ರೀ ಶಂಕರರ ಸಮಾಕಾಲೀನರೆಂದು ಸ್ಪಷ್ಟವಾಗಿ ತೋರುವದು. ಕುಮಾರಿಲರ ಶಿಷ್ಯನು ಮಣ್ಡನಮಿಶ್ರರ ಸಹಪಾಠಿಯೂ ಆದ ಉಂಬೇಕ ಅಥವಾ ಉಬ್ಬೇಯಕನು

[39] ವಿಶುದ್ಧಜ್ಞಾನದೇಹಾಯ ತ್ರಿವೇದೀಲೋಕ ಚಕ್ಷುಷೇ | ಶ್ರೇಯಃಪ್ರಾಪ್ತಿನಿಮಿತ್ತಾಯ ನಮಸ್ಸೋಮಾರ್ಧಧಾರಿಣೇ ||

ಮಣ್ಡನರ ಗ್ರಂಥಗಳಿಗೆ ಟೀಕೆಯನ್ನು ಬರೆದು ತನ್ನ ಸ್ವತನ್ತ್ರಾಭಿಪ್ರಾಯಗಳನ್ನು ವ್ಯಕ್ತಮಾಡಿರುವನು. ಆದುದರಿಂದ ಮಣ್ಡನಮಿಶ್ರರೂ ಉಂಬೇಕನೂ ಭಿನ್ನವ್ಯಕ್ತಿಗಳೆಂದೂ ಉಂಬೇಕ ಮತ್ತು ಭವಭೂತಿಯೆಂಬ ಹೆಸರುಗಳು ಪ್ರಸಿದ್ಧಕವಿಯೂ ಮೀಮಾಂಸಕನೂ ಆದ ಶ್ರೀಕಂಠನೆಂಬಾತನ ಬಿರುದುಗಳೆಂದೂ ಹೇಳಲಾಗಿದೆ. ಅಲ್ಲದೆ ಈ ಭವಭೂತಿಕವಿಗೆ ವಿಶ್ವರೂಪಾಚಾರ್ಯರೆಂಬ ಹೆಸರೂ ಇದ್ದಿತೆಂದೂ ಈ ಹೆಸರಿನಲ್ಲಿ ಯಾಜ್ಞವಲ್ಕ್ಯಸ್ಮೃತಿಗೆ ಬಾಲಕ್ರೀಡೆಯೆಂಬ ವ್ಯಾಖ್ಯಾನವನ್ನು ಬರೆದರೆಂದೂ ಅನಂತರ ಶಂಕರರಿಗೆ ಸುರೇಶ್ವರರೆಂಬ ಶಿಷ್ಯರಾದರೆಂದೂ ಕೆಲವರು ಊಹಿಸುವರು. ಭವಭೂತಿಯು ವಿದರ್ಭದೇಶದ ಪದ್ಮಪುರ ನಿವಾಸಿಯೆಂದೂ ಕಾಶ್ಮೀರದ ಲಲಿತಾಪೀಡ ಮತ್ತು ಯಶೋವರ್ಮರ ಆಶ್ರಯದಲ್ಲಿದ್ದನೆಂದೂ ತಿಳಿದುಬರುವದು. ಕೆಲವು ಶಂಕರವಿಜಯ ಗ್ರಂಥಗಳಲ್ಲಿ ಮಣ್ಡನಮಿಶ್ರರು ಬೀಡು (ಬಿಜ್ಜಲಬೀಡು) ನಿವಾಸಿಗಳೆಂದೂ ಅಲ್ಲಿಯೇ ಶ್ರೀಶಂಕರರೊಡನೆ ವಾದವಾಯಿತೆಂದೂ ಹೇಳಿದೆ.

ಹೀಗೆ ಭಾಟ್ಟ (ಕುಮಾರಿಲ) ಮತ್ತು ಗುರು (ಪ್ರಭಾಕರ) ಸಂಪ್ರದಾಯಗಳುಂಟಾದವು. ಇವುಗಳಲ್ಲಿ ಮುಖ್ಯವಾಗಿ ಇಪ್ಪತ್ತೈದು ಅಂಶಗಳಲ್ಲಿ ಭಿನ್ನಾಭಿಪ್ರಾಯಗಳು ಕಂಡುಬರುವವು.[40] ಮುರಾರಿಮಿಶ್ರರದು ಮೂರನೆಯ ಮಾರ್ಗ. ಪ್ರಭಾಕರಗುರುಗಳ ಶಿಷ್ಯನೂ ಗೌಡದೇಶದವನೂ ಆದ ಶಾಲಿಕನಾಥನು ಬೃಹತೀವ್ಯಾಖ್ಯಾ, ಋಜುವಿಮಲಪಂಜಿಕಾ, ವಿವರಣವ್ಯಾಖ್ಯಾ, ದೀಪಶಿಖಾ, ಪ್ರಕರಣಪಂಜಿಕಾ, ಭಾಷ್ಯಪರಿಶಿಷ್ಟ ಮುಂತಾದ ಗ್ರಂಥಗಳನ್ನು ರಚಿಸಿದನು. ಹತ್ತನೆಯ ಶತಾಬ್ದದಲ್ಲಿ ಭವನಾಥಮಿಶ್ರನು ನಯವಿವೇಕವನ್ನು ರಚಿಸಿದನು. ಇದಕ್ಕೆ ರವಿದೇವ, ವರದರಾಜ, ಶಂಕರಮಿಶ್ರ ದಾಮೋದರ ಮುಂತಾದವರು ವ್ಯಾಖ್ಯಾನಗಳನ್ನು ರಚಿಸಿರುವರು. ಪ್ರಾಭಾಕರ ಸಂಪ್ರದಾಯವೇ ದಕ್ಷಿಣದೇಶದಲ್ಲಿ ಹದಿನೆಂಟನೆಯ ಶತಮಾನದ ವರೆಗೂ ಪ್ರಬಲವಾಗಿದ್ದಂತೆ ತೋರುವದು. ಉತ್ತರದಲ್ಲಿ ಭಾಟ್ಟ ಸಂಪ್ರದಾಯವೇ ಮುಖ್ಯ. ಶ್ರೀಶಂಕರರು

[40] ಸಂವಿದೋಽಪ್ರಕಾಶತ್ವಂ ಅನ್ಯಥಾಖ್ಯಾತಿಸಂಶಯಾ | ಕರ್ಮಾದಿಕ್ಕಾಲವಿಯತಾಂ ಪ್ರತ್ಯಕ್ಷಜ್ಞಾನಗಮ್ಯತಾ || ಧ್ವನೇರ್ವಿಭುತ್ವದ್ರವ್ಯತ್ವೇ ಮನಸೋಽಸ್ಪನ್ದವೈಭವೇ | ಭಿನ್ನಾಭಿನ್ನತ್ವಮೇಕಸ್ಯ ಸಮವಾಯಸ್ಯವಾಸ್ತಿತಾ || ವಿಭುದ್ವಯಸ್ಯಸಂಯೋಗೋ ನಿತ್ಯತ್ವಂ ತಸ್ಯಚಾತ್ಮನಃ | ಜ್ಞೇಯತ್ವಂ ಮುಕ್ತಿವೇಲಾಯಾಂ ನಿತ್ಯಾನನ್ದಾನುಭಾವಿತಾ || ಅಭಾವಪ್ರಕಟತ್ವಂಚ ಶಕ್ತೇರನನುಮೇಯತಾ| ಗುಣತ್ವಮನ್ಧಕಾರಸ್ಯ ಪುಂಗಿರಾಂಸ್ವಾರ್ಥಮಾನತಾ|| ಪೃಥಿವೀತ್ವಾದಿ ಸಾಮಾನ್ಯಂ ರೂಪತ್ವಾದ್ಯಾಶ್ಚ ಜಾತಯಃ | ಅನನ್ವಿತಾಭಿಧಾನಂ ಚ ವೇದಸ್ಯಾಕಾರ್ಯಮಾನತಾ || ಶ್ರುತಾರ್ಥಾಪತ್ತಿರಿತ್ಯೇಷುಸ್ಥಲೇಷುಪ್ರತಿಯೋಗಿನಃ | ಪ್ರಾಭಾಕರಾ ನಿರಾಕಾರ್ಯಾ ಭಾಟ್ಟಮಾರ್ಗಾನುಸಾರಿಣಾ || —ಮಾನರತ್ನಾವಲೀ.

ಕುಮಾರಿಲರ ಮತಕ್ಕಿಂತ ಹೆಚ್ಚಾಗಿ ತಮ್ಮ ದೇಶದವರೇ ಬಂಧುಗಳೇ ಆದ ಪ್ರಭಾಕರರ ಅಭಿಪ್ರಾಯಗಳನ್ನು ತೀವ್ರವಾಗಿ ಖಂಡಿಸಿರುವರು. ಪ್ರಭಾಕರನು ಸಾಮವೇದಿಯಾದುದರಿಂದ ಕೇರಳ ದೇಶದಿಂದ ಹೊರಡಿಸಲ್ಪಟ್ಟನೆಂದು ಭೋಜ ರಾಜನು ಹೇಳುವನು (ಛಂದೋಗೋಽಯಮಿತಿಪ್ರಭಾಕರಗುರುರ್ದೇಶಾಚ್ಚ ನಿರ್ವಾಸಿತಃ). ಕುಮಾರಿಲ ಸಂಪ್ರದಾಯವನ್ನು ಕೇರಳ ದೇಶದ ಕೊಟ್ಟಾಯಂ ಸಂಸ್ಥಾನದ ಪುರಲಿರಾಜರು ಪೋಷಿಸಿದರು. ವಿಜಯನಗರದ ಕೃಷ್ಣದೇವ ರಾಯನ ಆಸ್ಥಾನಕವಿಯಾದ ಲೋಲ್ಲ ಲಕ್ಷ್ಮೀಧರನು ಪ್ರಭಾಕರ ಸಂಪ್ರ ದಾಯಾನುಸಾರವಾಗಿ ನಯವಿವೇಕ, ಭೂಷಣ ಇತ್ಯಾದಿ ಗ್ರಂಥಗಳನ್ನು ರಚಿಸಿದನು. ಇವನ ತಂದೆಯಾದ ವಿಶ್ವನಾಥನು ನಯವಿವೇಕ ದೀಪಿಕೆಯನ್ನು ರಚಿಸಿದನು. ಭಾರತೀತೀರ್ಥರು ಜೈಮಿನೀಯ ನ್ಯಾಯಮಾಲಾವಿಸ್ತರದಲ್ಲಿ ಮೀಮಾಂಸಾ ಶಾಸ್ತ್ರವನ್ನೆಲ್ಲ ಸಂಗ್ರಹಿಸಿರುವರು. ಅಪ್ಪಯ್ಯ ದೀಕ್ಷಿತರೇ ಮುಂತಾದವರೂ ಅನೇಕ ಪ್ರಕರಣ ಗ್ರಂಥಗಳನ್ನು ಬರೆದಿರುವರು.

ಈ ರೀತಿಯಲ್ಲಿ ಪೂರ್ವಮೀಮಾಂಸಕರು ಧರ್ಮ, ಕರ್ಮ, ವರ್ಣಾಶ್ರಮ ವ್ಯವಸ್ಥೆ, ವೇದಪ್ರಾಶಸ್ತ್ಯಗಳಿಗಾಗಿ ಹೋರಾಡಿ ಭಾರತೀಯ ಸಂಸ್ಕೃತಿಗೆ ಅಮೋಘವಾದ ಸೇವೆಯನ್ನು ಸಲ್ಲಿಸಿರುವರು.

**ವೇದಾಂತ :** ಶಾರೀರಕ ಮೀಮಾಂಸಾ ಅಥವಾ ವೇದಾಂತಸೂತ್ರಗಳು ಬಾದರಾಯಣರಿಂದ ರಚಿತವಾದವು. ವೇದಾಂತಸೂತ್ರಗಳಲ್ಲಿ ಸೌತ್ರಾಂತಿಕ, ವೈಭಾಷಿಕ ಮತ್ತು ಯೋಗಾಚಾರಮತಗಳ ಖಂಡನೆಯಿರುವುದರಿಂದ ಇವು ಕ್ರಿಸ್ತಶಕ ಎರಡನೆಯ ಶತಾಬ್ದದಲ್ಲಿ ರಚಿತವಾದುವೆಂದು ಊಹಿಸಿದೆ. ಭಗವದ್ಗೀತೆ ಯಲ್ಲಿ ಬ್ರಹ್ಮಸೂತ್ರದ ಉಲ್ಲೇಖನವಿರುವುದರಿಂದ (ಗೀತಾ. XIII, ೧೪) ಗೀತಾರಚನೆಗೆ ಹಿಂದೆಯೇ ಒಂದೊಂದು ವೇದಕ್ಕೂ ಬೇರೆಬೇರೆ ವೇದಾಂತ ಸೂತ್ರಗಳಿದ್ದವೆಂದೂ ಈಗಿರುವ ವೇದಾಂತಸೂತ್ರಗಳು ಹೆಚ್ಚಾಗಿ ಸಾಮ ಶಾಖೆಗೆ ಸೇರಿದವೆಂದೂ ಕೆಲವರು ಊಹಿಸುವರು. ವೇದಾಂತಸೂತ್ರಗಳಿಗೆ ಈಗ ಸಿಕ್ಕಿರುವ ಭಾಷ್ಯಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದ ಭಾಷ್ಯವು ಶ್ರೀಶಂಕರಾಚಾರ್ಯರದು. ಆದರೇ ಶಾಂಕರ ಭಾಷ್ಯದಲ್ಲಿಯೇ ಪೂರ್ವಭಾಷ್ಯ ಕಾರರ ಅಭಿಪ್ರಾಯಗಳು ಅನುವಾದಿಸಿರುವುದರಿಂದ ಹಿಂದೆ ಅನೇಕ ಭಾಷ್ಯ ಗಳಿದ್ದವು. ರಾಮಾನುಜಾಚಾರ್ಯರು "ಭಗವದ್ಬೋಧಾಯನಕೃತಾಂ ವಿಸ್ತೀರ್ಣಾಂ ಬ್ರಹ್ಮಸೂತ್ರವೃತ್ತಿಂ, ಪೂರ್ವಾಚಾರ್ಯಾಸ್ಸಂಕ್ಷಿಪುಃ" ಎಂದು ಹೇಳಿ ಅಲ್ಲಲ್ಲಿ ಬೋಧಾಯನ, ಟಂಕ, ಉಪವರ್ಷ, ದ್ರಮಿಡಾಚಾರ್ಯ, ಭರ್ತೃಪ್ರಪಂಚ ಮುಂತಾದವರ ಗ್ರಂಥಗಳನ್ನು ಅನುವಾದಮಾಡಿರುವರು.

ಮಧ್ವಾಚಾರ್ಯರು ತಮ್ಮ ಕಾಲದ ವರೆಗೆ ರಚಿತವಾದ ಬ್ರಹ್ಮಸೂತ್ರ ಭಾಷ್ಯಕಾರರ ಹೆಸರುಗಳನ್ನು ಹೇಳಿರುವರು.

ಶ್ರೀಶಂಕರಾಚಾರ್ಯರ ಜೀವನಚರಿತ್ರೆಗಳು ಅನೇಕವಾಗಿವೆ. ಅವರ ಕಾಲದ ವಿಷಯವಾಗಿಯೂ ಚರ್ಚೆಗಳು ನಡೆದಿವೆ. ಕೇರಳ ದೇಶದಲ್ಲಿ ಪ್ರಚಾರವಾಗಿರುವ ಜೀವನಚರಿತ್ರೆಯೇ ಹೆಚ್ಚು ಮಟ್ಟಿಗೆ ಚಾರಿತ್ರಕವೆಂದು ಕಂಡುಬರುವುದರಿಂದ ಅದನ್ನೇ ಇಲ್ಲಿ ಸೂಚಿಸುತ್ತೇವೆ.[41] ಶ್ರೀ ಶಂಕರರು ಶಿವಗುರು ಮತ್ತು ಆರ್ಯಾಮ್ಬಿಕೆಯೆಂಬ ದಂಪತಿಗಳಿಗೆ ಪುತ್ರರಾಗಿ ಅವತರಿಸಿದರು. ಶಿವಗುರುಗಳು ನಂಬೂದಿರಿ ಪನ್ನಿಯೂರ್‌ಗ್ರಾಮ ಎಂಬ ಕುಟುಂಬದವರು. ಇವರು ಪನ್ನಿಯೂರ್ ಗ್ರಾಮದಿಂದ ಬಂದು ಕಾಲಟಿಯಲ್ಲಿ ನೆಲಸಿದ್ದರು. ಅಲ್ಲಿಯೇ ಶಂಕರರು ಅವತರಿಸಿದರು. ಶ್ರೀ ಶಂಕರರು ತಮ್ಮ ಐದನೆಯ ವರ್ಷದಲ್ಲಿ ಪಿತೃವಿಯೋಗವನ್ನು ಹೊಂದಿ ನಂಬೂದಿರಿ ಸಂಪ್ರದಾಯದಂತೆ ಉಪನೀತರಲ್ಲದಿದ್ದರೂ ಪೈತೃಕ ಕರ್ಮಗಳನ್ನು ನೆರವೇರಿಸಿದರು. ಉಪನಯನವಾದನಂತರ ಹದಿನಾರನೆಯ ವರ್ಷದ ವರೆಗೂ ಶಾಸ್ತ್ರಾಭ್ಯಾಸಮಾಡಿ ಕಾಶಿಗೆ ಹೋಗಿ ಭಾಷ್ಯರಚನೆ ಮಾಡಿದರು. ಶ್ರೀ ಶಂಕರರ ಶಿಷ್ಯರಾದ ಪದ್ಮಪಾದರೆಂದೂ ನೃಸಿಂಹಾವತಾರವೆಂದೂ ಪ್ರಸಿದ್ಧರಾದ ವಿಷ್ಣುಶರ್ಮರು ಅಲತ್ತೂರು ಗ್ರಾಮದವರು. ಸುರೇಶ್ವರಾಚಾರ್ಯರು ಪಾಯ್ಯೂರುಗ್ರಾಮಕ್ಕೆ ಸೇರಿದವರು. ಶಂಕರಾಚಾರ್ಯರು ಗೌಡಪಾದರ ಶಿಷ್ಯರಾದ ಗೋವಿನ್ದ ಭಗವತ್ಪಾದರನ್ನು ನರ್ಮದಾ ಪ್ರಾಂತದಲ್ಲಿ ಶಿಷ್ಯವೃತ್ತಿಯಿಂದ ಸೇವಿಸಿ, ಗುರುಗಳ ಅನುಜ್ಞೆಯಂತೆ ಕಾಶ್ಮೀರದಿಂದ ಕನ್ಯಾಕುಮಾರಿ ವರೆಗೂ ಮೂರು ಸಲ ಪರ್ಯಟನಮಾಡಿ ಪರವಾದಿಗಳನ್ನು ಗೆದ್ದು ಶೃಂಗೇರಿ, ದ್ವಾರಕಾ, ಬದರಿ ಮತ್ತು ಜಗನ್ನಾಥ ಕ್ಷೇತ್ರಗಳಲ್ಲ ನಾಲ್ಕು ಮುಖ್ಯ ಮಠಗಳನ್ನು ಸ್ಥಾಪಿಸಿ, ಸುರೇಶ್ವರ, ಹಸ್ತಾಮಲಕ, ತ್ರೋಟಕ, ಪದ್ಮಪಾದರೆಂಬ ಶಿಷ್ಯರಿಗೆ ಅಲ್ಲಿ ಪಟ್ಟಕಟ್ಟಿ, ಷಣ್ಮತಗಳನ್ನು ಸ್ಥಾಪನೆಮಾಡಿ, ತಮ್ಮ ಮೂವತ್ತೆರಡನೆಯ ವಯಸ್ಸಿನಲ್ಲಿಯೇ ಬ್ರಹ್ಮೀಭೂತರಾದರು.

ಶ್ರೀ ಮಧ್ವಾಚಾರ್ಯರ ಸಮಯವನ್ನು ಅವರ ಗ್ರಂಥಗಳಿಂದಲೂ ಪರಮತೀಯರ ಗ್ರಂಥಗಳಿಂದಲೂ ನಿರ್ಧರಿಸಬಹುದು. ಭಾಷ್ಯಗಳಲ್ಲಿ ರಾಜವರ್ಮ, ಬಲವರ್ಮ, ಜಯಸಿಂಹ, ಕೃಷ್ಣಗುಪ್ತ ಎಂಬ ರಾಜರ ಹೆಸರುಗಳನ್ನು ಹೇಳಿರುವರು.[42] ಕೃಷ್ಣಗುಪ್ತನು ಮಗಧ ಗುಪ್ತವಂಶದ ಮೂಲಪುರುಷನು. ಪೂರ್ಣ

---

[41] *I. H. Q.* V. ೧೯೨೯.

[42] S. Śrikaṇtha Śāstri : *Sources of Karṇāṭaka History*, Vol. I.

ವರ್ಮನೆಂಬವನೂ ಗುಪ್ತವಂಶಕ್ಕೆ ಸೇರಿದ್ದನೆಂದೂ ಹರ್ಷ, ಶಶಾಂಕ, ಯುವಾನ್‌ಚ್ವಾಂಗರ ಕಾಲದಲ್ಲಿದ್ದನೆಂದೂ ತಿಳಿದುಬರುವದು. ರಾಜವರ್ಮನ ಹೆಸರು ದಂಡಿಯ ಕಾವ್ಯಾದರ್ಶದಲ್ಲಿ ಕಂಡುಬರುವದು. ಬಲವರ್ಮ ಮತ್ತು ಜಯಸಿಂಹರು ಕದಂಬ ಮತ್ತು ರಾಷ್ಟ್ರಕೂಟವಂಶದವರು. ಅಲ್ಲದೆ ಬ್ರಹ್ಮ ಸೂತ್ರಭಾಷ್ಯದಲ್ಲಿ ಬೌದ್ಧಮತವನ್ನು ಖಂಡಿಸುವಾಗ ದಿಙ್ನಾಗನ ಆಲಮ್ಬನ ಪರೀಕ್ಷಾ ಮತ್ತು ವಸುಬನ್ಧು, ಧರ್ಮಕೀರ್ತಿ ಮುಂತಾದವರ ಗ್ರಂಥಗಳಿಂದ ವಾಕ್ಯಗಳನ್ನು ಅನುವಾದಮಾಡಿರುವರು. ಮಣ್ಡನಮಿಶ್ರರು ತಮ್ಮ "ಬ್ರಹ್ಮ ಸಿದ್ಧಿ"ಯಲ್ಲಿ ಶಾಂಕರಭಾಷ್ಯದಿಂದ ವಾಕ್ಯಗಳನ್ನು ಉದ್ಧರಿಸಿ ಪ್ರತಿಭಟಿಸಿರು ವರು. ವಿದ್ಯಾನನ್ದಿ ಪಾತ್ರಕೇಸರಿ, ಪ್ರಭಾಚನ್ದ್ರ ಮುಂತಾದ ಜೈನರು ಸುರೇಶ್ವರರ ಬೃಹದಾರಣ್ಯವಾರ್ತಿಕೆಯಿಂದ ಕೆಲವು ವಾಕ್ಯಗಳನ್ನು ಉದಾಹರಿ ಸಿರುವರು. ಶಾಂತರಕ್ಷಿತನು (ಕ್ರಿ.ಶ. ೭೪೦), ಅವನ ಶಿಷ್ಯನಾದ ಕಮಲ ಶೀಲನು ಅದ್ವೈತಮತವನ್ನೂ ಉಬ್ಬೇಯಕ, ಕುಮಾರಿಲ ಮುಂತಾದವರ ಅಭಿಪ್ರಾಯಗಳನ್ನೂ ಸೂಚಿಸಿರುವರು. ತಾರಾನಾಥನು ನಾಲಂದಾ ವಿಶ್ವ ವಿದ್ಯಾಲಯದಲ್ಲಿಯೂ ಕಾಶಿಯಲ್ಲಿಯೂ ಶಂಕರಾಚಾರ್ಯರಿಗೂ ಧರ್ಮ ಕೀರ್ತಿಗೂ ವಿವಾದ ನಡೆಯಿತೆಂದು ಹೇಳುವನು. ಈ ಕಾರಣಗಳಿಂದ ಶಂಕರಾ ಚಾರ್ಯರು ಕ್ರಿಸ್ತಶಕ ಆರನೆಯ ಶತಾಬ್ದದ ಅಂತ್ಯದಲ್ಲಿಯೂ ಏಳನೆಯ ಶತಾಬ್ದದ ಪೂರ್ವಭಾಗದಲ್ಲಿಯೂ (ಕ್ರಿ.ಶ. ೫೮೦-೬೨೦) ಇದ್ದಂತೆ ನಿರ್ಧರಿಸ ಬಹುದು.

ಭಗವತ್ಪಾದರ ಕಾಲವನ್ನು ಭಾರತೀಯರ ಅಧ್ಯಾತ್ಮಿಕ ಚರಿತ್ರೆಯಲ್ಲಿ ಸುವರ್ಣಯುಗವೆಂದು ಹೇಳಬಹುದು.[18] ಮೀಮಾಂಸಾ, ನ್ಯಾಯ, ವೈಶೇಷಿಕ, ಜೈನ, ಬೌದ್ಧ, ವ್ಯಾಕರಣ, ಜ್ಯೋತಿಷ, ಸಾಹಿತ್ಯ ಮುಂತಾದ ಶಾಸ್ತ್ರಗಳಲ್ಲಿ ಉದ್ದಂಡ ಪಂಡಿತರೂ ಪ್ರತಿಭಾಶಾಲಿಗಳೂ ಆದ ಆಚಾರ್ಯರು ಪರಸ್ಪರ ಸ್ಪರ್ಧೆಯಿಂದ ಖಣ್ಡನ ಮಣ್ಡನಮಾಡುತ್ತ ಅನೇಕ ಗ್ರಂಥಗಳನ್ನು ರಚಿ ಸಿರುವರು.

ಶ್ರೀ ಶಂಕರಾಚಾರ್ಯರು ಜ್ಞಾನಮಾರ್ಗೋಪದೇಶಕ್ಕಾಗಿ ಉಪನಿಷತ್ತು, ಗೀತೆ, ಬ್ರಹ್ಮಸೂತ್ರಗಳು ಸನತ್ಸುಜಾತೀಯಗಳಿಗೆ ಭಾಷ್ಯಗಳನ್ನೂ ಉಪದೇಶ ಸಾಹಸ್ರೀ ಎಂಬ ಪ್ರಕರಣಗ್ರಂಥವನ್ನೂ, ಭಕ್ತಿಮಾರ್ಗವನ್ನು ಬೋಧಿಸು ವುದಕ್ಕಾಗಿ ವಿಷ್ಣುಸಹಸ್ರನಾಮಭಾಷ್ಯ ಮುಂತಾದುವನ್ನೂ, ಶ್ರೀವಿದ್ಯಾ

[18] S. Śrikantha Śāstri: *The Age of Śankara. Proceedings.* VIII. *Cr. Conference*, Mysore. ೧೯೩೫.

| ಬೌದ್ಧ | ಜೈನ | ಮೀಮಾಂಸಾ | ವೇದಾನ್ತ | ವೈಯಾಕರಣ | ಸಾಹಿತ್ಯ | ಜ್ಯೋತಿಷ | ಭಕ್ತಿಮಾರ್ಗ |
|---|---|---|---|---|---|---|---|
| ಚಂದ್ರಕೀರ್ತಿ | ಪೂಜ್ಯಪಾದ | | | | | | |
| ಗುಣಮತಿ | ಶಿವಕೋಟಿ | | | | ಬಾಣ | ವರಾಹಮಿಹಿರ | ವೈಷ್ಣವ ಆಳ್ವಾರರು |
| ಸ್ಥಿರಮತಿ | ಸಮನ್ತಭದ್ರ | ಕುಮಾರಿಲ | ಗೋವಿನ್ದಭಗವತ್ಪಾದ | ಭರ್ತೃಹರಿ | ಮಯೂರ | | ಶೈವನಾಯನಾರರು |
| ಪ್ರಭಾಮಿತ್ರ | ಅಕಲಂಕ | ಮಣ್ಡನ | ಶಂಕರ | ವಾಮನ | ದಣ್ಡಿನ್ | | ಶಾಕ್ತರು. ಇತ್ಯಾದಿ |
| ಜನಮಿತ್ರ | ಜಟಾಸಿಂಹ | ಉಂಬೇಕ | ಪದ್ಮಪಾದ | ಜಯಾದಿತ್ಯ | ಹರ್ಷ | | |
| ಧರ್ಮಪಾಲ | ಮಾಣಿಕ್ಯನನ್ದಿ | ವಾಮನ | ಸುರೇಶ್ವರ | ಚನ್ದ್ರಗೋಮಿ | ಧಾವಕ | ಬ್ರಹ್ಮಗುಪ್ತ ಇತ್ಯಾದಿ | |
| ಧರ್ಮಕೀರ್ತಿ | ವಿದ್ಯಾನನ್ದಿ | ಮುರಾರಿ | ಹಸ್ತಾಮಲಕ | ಜಿನೇನ್ದ್ರಬುದ್ಧಿ | ಶಕ್ತಿಭದ್ರ | | |
| ಶೀಲಭದ್ರ | ಪದ್ಮನನ್ದಿ | ಪ್ರಭಾಕರ | ತ್ರೋಟಕ | | ಭರ್ತೃಮೇಂಠ | | |
| ಶಾನ್ತಿದೇವ | ಪ್ರಭಾಚನ್ದ್ರ | ಶಾಲಿಕನಾಥ | ಮಣ್ಡನ | | ಭವಭೂತಿ | | |
| ಶಾನ್ತರಕ್ಷಿತ | ಕುಮಾರಸೇನ | ಋಷಿಪುತ್ರಪರಮೇಶ್ವರ | ಪರಮೇಶ್ವರ | | | | |
| ಕಮಲಶೀಲ | ಸಿದ್ಧಸೇನದಿವಾಕರ | | | | | | |

ಪರವಾಗಿ ಪ್ರಪಂಚಸಾರ, ಸೌನ್ದರ್ಯಲಹರೀ, ಆನನ್ದಲಹರೀ, ಮನ್ತ್ರ ಮಾತೃಕಾಕ್ಷರಮಾಲಾಸ್ತೋತ್ರ, ಲಲಿತಾತ್ರಿಶತೀಭಾಷ್ಯ, ವೇದಪಾದಸ್ತವ ಮುಂತಾದುವನ್ನೂ ಷಣ್ಮತಗಳ ಸ್ಥಾಪನೆಗಾಗಿ ಶಿವ, ವಿಷ್ಣು, ದೇವೀ, ಕುಮಾರ, ಗಣಪತಿ, ಸೂರ್ಯದೇವತೆಗಳ ಪರವಾಗಿ ನೂರಾರು ಸ್ತೋತ್ರಗಳನ್ನೂ ವೇದಾನ್ತತತ್ವವನ್ನು ಸಂಗ್ರಹವಾಗಿ ಬೋಧಿಸುವುದಕ್ಕಾಗಿ ಭಜಗೋವಿನ್ದಸ್ತೋತ್ರ, ದಶಶ್ಲೋಕೀ, ಏಕಶ್ಲೋಕೀ, ಮನೀಷಾ ಪಂಚಕ, ಕೌಪೀನ ಪಂಚಕ ಇತ್ಯಾದಿ ಸಣ್ಣ ಗ್ರಂಥಗಳನ್ನೂ ರಚಿಸಿರುವರು. ಅನ್ಯಕೃತಾನೇಕ ಗ್ರಂಥಗಳು ಶ್ರೀ ಶಂಕರರ ಹೆಸರಿನಲ್ಲಿವೆ.

ಆಚಾರ್ಯಪಾದರು ಕೇವಲ ಜ್ಞಾನಮಾರ್ಗವನ್ನೇ ಬೋಧಿಸಿದರೆಂದೂ ಪಾಮರರಿಗೆ ಅದು ಅಸಾಧ್ಯವಾದುದರಿಂದ ಭಕ್ತಿ ಪಂಥವು ಹುಟ್ಟಿತೆಂದೂ ಕೆಲವರು ಅಪಪ್ರಚಾರಮಾಡಿರುವರು. ಆದರೆ ನಿಜವಾಗಿ ಶಂಕರರು ಜ್ಞಾನ, ಕರ್ಮ, ಭಕ್ತಿಯೆಂಬ ಮೂರು ಮಾರ್ಗಗಳನ್ನೂ ಉದ್ಧರಿಸಿದರು. ಸ್ವರಾತ್ಮ್ಯವಾದ ನಿರೀಶ್ವರವಾದಗಳನ್ನು ನಿರ್ಮೂಲಮಾಡಿ ವೈದಿಕಮತವನ್ನು ಪುನಃ ಉದ್ಧಾರಮಾಡಿದರು. ಷಣ್ಮತಗಳಲ್ಲಿ ಸೇರಿಕೊಂಡಿದ್ದ ನಿಷಿದ್ಧವಾದ ಆಚಾರಗಳನ್ನು ಖಂಡಿಸಿ ಅವುಗಳಿಗೆ ವೈದಿಕ ಬಲವನ್ನು ಕೊಟ್ಟು ಮಂದಾಧಿಕಾರಿಗಳಿಗೆ ಸುಲಭಮಾರ್ಗವನ್ನು ತೋರಿಸಿ ಷಣ್ಮತಸ್ಥಾಪನಾಚಾರ್ಯರೆಂಬ ಬಿರುದನ್ನು ಪಡೆದರು. ಶಂಕರರು ಹೇಗೆ ಜ್ಞಾನಿಗಳಲ್ಲಿ ಅಗ್ರೇಸರರೋ ಹಾಗೆಯೇ ಭಕ್ತಾಗ್ರಣಿಗಳೂ ಆಗಿದ್ದರು. ಶಂಕರರು ಭಕ್ತಾಗ್ರೇಸರರೆಂದೂ ಅವರ ನಿಜಾಭಿಪ್ರಾಯವು ವೈಷ್ಣವಮತವೇ ಎಂದೂ ವೇದಾನ್ತ ದೇಶಿಕರೇ ಮುಂತಾದ ಶ್ರೀ ವೈಷ್ಣವಚಾರ್ಯರೂ ಹೇಳಿರುವರು. ಹಾಗೆಯೇ ಶೈವರೂ, ಶಾಕ್ತರೂ ಕೂಡ ಶಂಕರರನ್ನು ತಮ್ಮ ತಮ್ಮ ಮತದವರೆಂದೇ ಹೇಳಿಕೊಂಡಿರುವರು. ವೈರಾಗ್ಯವನ್ನೂ ಶೃಂಗಾರವನ್ನೂ ಸಮನ್ವಯ ಮಾಡಲು ಶ್ರೀ ಶಂಕರರಿಗೇ ಸಾಧ್ಯ. ಸೌನ್ದರ್ಯ ಮತ್ತು ಆನನ್ದಲಹರಿಗಳು ಅದ್ವೈತದ ಸತ್ಯಸಮುದ್ರದಲ್ಲಿ ಮಿಳಿತವಾಗಿ ನಿರ್ಗುಣಬ್ರಹ್ಮಾನುಭವದಲ್ಲಿ ಪರಿಣಮಿಸಿವೆ. ಹೇಗೆ ಆಧ್ಯಾತ್ಮಿಕ ವಿಷಯಗಳಲ್ಲಿ ಅದ್ವೈತಭಾವನೆಯಿಂದ ಭೇದಜನ್ಯವಾದ ಭಯ, ದುಃಖ, ತಾರತಮ್ಯಗಳು ನಿವಾರಿಸಲ್ಪಟ್ಟವೋ ಹಾಗೆಯೇ ಐಹಿಕ ವಿಷಯಗಳಲ್ಲಿಯೂ ಪೂಜ್ಯಚರಣರು ಆತ್ಮಸ್ವಾತನ್ತ್ರ್ಯ ಸಂದೇಶವನ್ನು ಅನುಗ್ರಹಿಸಿರುವರು. ಜ್ಞಾನಿಯಾದ ಚಣ್ಡಾಲನೂ ಕೂಡ ಗುರುವೆಂದು ಅಂಗೀಕರಿಸಿದರು. ಶಂಕರಸಂಹಿತಾ ಮುಂತಾದ ಧರ್ಮಶಾಸ್ತ್ರಗಳನ್ನು ರಚಿಸಿ ಸಮಾಜ ಸುಧಾರಣೆ ಮಾಡಿದರು. ಇವರ ಶಿಷ್ಯ ಪ್ರಶಿಷ್ಯರು ಕ್ಯಾಂಬೋಡಿಯ ಮುಂತಾದ ದ್ವೀಪಾಂತರಗಳಿಗೆ

ಹೋಗಿ ರಾಜಗುರುಗಳಾಗಿದ್ದು ಭಾರತೀಯ ಸಂಸ್ಕೃತಿಯನ್ನು ವಿಸ್ತರಿಸಿದರು. ಕ್ರಿಸ್ತಶಕ ಒಂಬತ್ತನೆಯ ಶತಾಬ್ದದ ವರೆಗೂ ಶ್ರೀ ಶಂಕರರ ಆತ್ಮಸ್ವಾತಂತ್ರ್ಯ ಉಪದೇಶದಿಂದ ಭರತಖಂಡವು ಪರಾಧೀನವಾಗದೆ ಪ್ರಪಂಚದಲ್ಲೆಲ್ಲ ಅಗ್ರಸ್ಥಾನ ವನ್ನು ಪಡೆದಿದ್ದಿತು. ಅನಂತರ ಮುಸ್ಲಿಮರ ದಾಳಿ ಆರಂಭವಾಗ ಜಾತಿಕಲಹ, ಮತಕಲಹಗಳಿಗೆ ಅವಕಾಶ ಉಂಟಾದುದರಿಂದ ದ್ವೈತಮತಗಳು ಸ್ವಾಮಿ—ಭೃತ್ಯಭಾವ, ದಾಸ್ಯಭಾವಗಳಿಗೆ ಆಸ್ಪದ ಕೊಟ್ಟು ಭರತಖಂಡವನ್ನು ಪರದೇಶೀ ಯರ ವಶಮಾಡಿದವು. ಆದರೂ ಉತ್ಕಟಸ್ಥಿತಿಗೆ ಬಂದಾಗ ಪ್ರಪಂಚವು ಮಿಥ್ಯೆಯೆಂದು ಹೇಳುವ ಅದ್ವೈತಾಚಾರ್ಯರೇ ಭಾರತೀಯ ಸಂಸ್ಕೃತಿ ರಕ್ಷಣೆ ಮಾಡಿದರು. ಶ್ರೀ ವಿದ್ಯಾಶಂಕರ, ವಿದ್ಯಾರಣ್ಯ, ಸಾಯಣರು ಹದಿ ನಾಲ್ಕನೆಯ ಶತಮಾನದಲ್ಲೂ, ಅಕ್ಬರನ ಕಾಲದಲ್ಲಿ ತುಲಸೀದಾಸ, ಮಧು ಸೂದನ ಸರಸ್ವತಿಗಳೂ, ಪೇಶ್ವೆಗಳ ಕಾಲದಲ್ಲಿ ಬ್ರಹ್ಮಾನಂದ ಸ್ವಾಮಿಗಳೂ, ಹತ್ತೊಂಬತ್ತನೆಯ ಶತಮಾನದಲ್ಲಿ ಶ್ರೀ ರಾಮಕೃಷ್ಣಪರಮಹಂಸ, ವಿವೇಕಾ ನಂದರೂ ಭಾರತೀಯರ ಧರ್ಮಕ್ಕಾಗಿಯೂ ಸ್ವಾತಂತ್ರ್ಯಕ್ಕಾಗಿಯೂ ಹೋರಾಡುವದರಲ್ಲಿ ಯಾಜಮಾನ್ಯವನ್ನು ವಹಿಸಿದ್ದರು. ಈಗಿನ ವಿಜ್ಞಾನ ಯುಗದಲ್ಲಿ ಭಯ ಮತ್ತು ಭೇದಗಳ ಮೂಲಕ ಆತ್ಮತತ್ವದಲ್ಲಿ ಜನರಿಗೆ ನಂಬಿಕೆ ಯನ್ನುಂಟುಮಾಡುವದಕ್ಕಾಗದು. ಕೇವಲ ಪುರುಷಾಕಾರದ ಮತ್ತು ಸಂಸಾರಿ ಗಳಾದ ದೇವತೆಗಳಲ್ಲಿ (Anthropomorphic deities) ಈಗಿನ ಜನರಿಗೆ ನಂಬಿಕೆಯಿಲ್ಲ. ವಿಶ್ವಶಾಂತಿ ಮತ್ತು ಸಮತಾಭಾವಗಳು ಉಂಟಾಗಬೇಕಾದರೆ ಅದ್ವೈತವೇ ಗತಿ. ಇಂತಹ ಸ್ವಾತಂತ್ರ್ಯ ಮತ್ತು ಆತ್ಮೈಕತ್ವ ಸಂದೇಶವನ್ನು ಪ್ರಪಂಚಕ್ಕೆ ಕೊಟ್ಟು ಪತಿತೋದ್ಧಾರಮಾಡಿದ ಪರಮ ಕಾರುಣಿಕರಾದ ಶಂಕರ ಭಗವತ್ಪಾದರು ಪ್ರಪಂಚದ ಚರಿತ್ರೆಯಲ್ಲೆಲ್ಲ ಅಗ್ರಸ್ಥಾನಾರ್ಹರಾಗಿರುವರು.

ಮಂಡನಮಿಶ್ರರು ತಮ್ಮ "ಬ್ರಹ್ಮಸಿದ್ಧಿ" ಗ್ರಂಥದಲ್ಲಿ ಶಬ್ದಬ್ರಹ್ಮಾದ್ವೈತ ಭಾವಾದ್ವೈತಗಳನ್ನು ಸಮರ್ಥಿಸಿರುವರು. ಇವರ ಮತವನ್ನನುಸರಿಸಿ ವಾಚ ಸ್ಪತಿಮಿಶ್ರರು ಭಾಮತೀ ಪ್ರಸ್ಥಾನವನ್ನು ಪ್ರಚಾರಕ್ಕೆ ತಂದರು. ಆದರೂ ವಾಚಸ್ಪತಿಗಳು ಶಂಕರರ ಮತ್ತು ಮಂಡರ ಅಭಿಪ್ರಾಯಗಳಿಗೆ ಸಮನ್ವಯ ಮಾಡಲು ಯತ್ನಿಸಿದರು. ಶಂಕರರ ಶಿಷ್ಯರಾದ ಪದ್ಮಪಾದರು ಪಂಚಪಾದಿಕಾ ಮತ್ತು ವಿಜ್ಞಾನದೀಪಿಕಾ, ಸುರೇಶ್ವರರು ಬೃಹದಾರಣ್ಯ ಭಾಷ್ಯವಾರ್ತಿಕಾ ಮತ್ತು ನೈಷ್ಕರ್ಮ್ಯಸಿದ್ಧಿ, ತೋಟಕ ಮತ್ತು ಹಸ್ತಾಮಲಕರು ವೇದಭಾಷ್ಯ ಗಳನ್ನೂ ರಚಿಸಿದರು. ಹತ್ತನೆಯ ಶತಾಬ್ದದಲ್ಲಿ ವಿಮುಕ್ತಾತ್ಮರು ಇಷ್ಟಸಿದ್ಧಿ ಯನ್ನೂ ಸರ್ವಜ್ಞಾತ್ಮರು ಸಂಕ್ಷೇಪ ಶಾರೀರಕವನ್ನೂ ಬರೆದರು. ಹರ್ಷ

ಚಿತ್ಸುಖ, ಆನಂದಗಿರಿ, ಆನಂದಾನುಭವ, ಅನುಭೂತಿಸ್ವರೂಪಾಚಾರ್ಯ, ಸುಖಪ್ರಕಾಶ ಮುಂತಾದವರು ಪಂಚಪಾದಿಕಾ (ವಿವರಣ) ಪ್ರಸ್ಥಾನವನ್ನು ಬೆಳಸಿಕೊಂಡು ಬಂದರು. ಅಮಲಾನಂದರು ದೇವಗಿರಿ ಯಾದವರಾಜರ ಕಾಲ ದಲ್ಲಿ ಕಲ್ಪತರುವೆಂಬ ಗ್ರಂಥವನ್ನು ರಚಿಸಿದರು. ಜ್ಞಾನೇಶ್ವರನು ಮರಾಠಿ ಭಾಷೆಯಲ್ಲಿ ಅದ್ವೈತಪರವಾಗಿ ಗೀತೆಗೆ ವ್ಯಾಖ್ಯಾನವನ್ನು ಬರೆದನು. ಹದಿನಾಲ್ಕನೆಯ ಶತಾಬ್ದದಲ್ಲಿ ಶ್ರೀವಿದ್ಯಾಶಂಕರ, ಶಂಕರಾನಂದ, ವಿದ್ಯಾರಣ್ಯ, ಸಾಯಣನ ಮಗ ಮಾಧವ, ಭಾರತೀ ಕೃಷ್ಣತೀರ್ಥ, ಶ್ರೀಕಂಠ, ಸರ್ವಜ್ಞ ವಿಷ್ಣು ಮುಂತಾದ ಮಹಾಮಹಿಮರು ಪ್ರಕರಣ ಗ್ರಂಥಗಳನ್ನು ರಚಿಸಿರು ವರು. ಹದಿನೈದನೆಯ ಶತಮಾನದಲ್ಲಿ ಲಕ್ಷ್ಮೀಧರ, ವಿಜಯನಗರದ ಇಮ್ಮಡಿ ದೇವರಾಯ ಮುಂತಾದವರು ವೃತ್ತಿಗಳನ್ನೂ ವ್ಯಾಖ್ಯಾನಗಳನ್ನು ರಚಿಸಿರು ವರು. ಹದಿನಾರನೆಯ ಶತಾಬ್ದದಲ್ಲಿ ಉತ್ತರದೇಶದಲ್ಲಿ ಮಧುಸೂದನ ಸರಸ್ವತೀ ಮಾಧವ ಸರಸ್ವತೀ, ಗೌಡಬ್ರಹ್ಮಾನನ್ದ ಮುಂತಾದವರೂ, ದಕ್ಷಿಣದಲ್ಲಿ ವಾಸುದೇವಸಾರ್ವಭೌಮ, ನೃಸಿಂಹಾಶ್ರಮಿ, ಅಪ್ಪಯದೀಕ್ಷಿತ ಮುಂತಾದ ವರೂ ಪರಮತ ಖಂಡನರೂಪವಾದ ಗ್ರಂಥಗಳನ್ನು ಬರೆದರು. ಹದಿನೇಳು ಮತ್ತು ಹದಿನೆಂಟನೆಯ ಶತಾಬ್ದಗಳಲ್ಲಿ ಧರ್ಮರಾಜಾಧ್ವರೀ, ನೀಲಕಂಠ ದೀಕ್ಷಿತ, ಭಟ್ಟೋಜೀ ದೀಕ್ಷಿತ, ಗೋವಿಂದ ದೀಕ್ಷಿತ ಇತ್ಯಾದಿಗಳು ಅದ್ವೈತ ಗ್ರಂಥಗಳನ್ನೂ ಬರೆದಿರುವರು. ಹತ್ತೊಂಬತ್ತನೆಯ ಶತಾಬ್ದದಲ್ಲಿ ಶ್ರೀರಾಮ ಕೃಷ್ಣಪರಮಹಂಸರ ಸಂದೇಶದಿಂದ ಅದ್ವೈತಮತವನ್ನು ವಿವೇಕಾನಂದರೂ, ರಾಮತೀರ್ಥರೇ ಮುಂತಾದವರೂ ಯೂರೋಪ್, ಅಮೆರಿಕಾ ಖಂಡಗಳ ಲ್ಲಿಯೂ ಪ್ರಚಾರಮಾಡಿ ಮಾನವಜಾತಿಯನ್ನೇ ಉದ್ಧಾರಮಾಡಿರುವರು.

**ಮತಗಳು :** ಈಶ್ವರಪರ (Theistic) ವಾದ ಶ್ವೇತಾಶ್ವತರ, ಮಹಾ ನಾರಾಯಣ, ಅಥರ್ವಶಿರ ಮುಂತಾದ ಆಧುನಿಕ ಉಪನಿಷತ್ತುಗಳು ಭಕ್ತಿಮತ ಗಳಿಗೆ ಮೂಲ. ಈ ಉಪನಿಷತ್ತುಗಳಲ್ಲಿ ಪ್ರಾಸಂಗಿಕವಾಗಿ ಸ್ವ-ಸ್ವಾಮಿಭಾವ, ಭೇದಭಾವ, ಶೇಷ-ಶೇಷಿಭಾವಪರವಾದ ಮತ್ತು ಏಕದೇವತೋತ್ಕೃಷ್ಟತ್ವವನ್ನು ಹೇಳುವ (ಏಕ ಏವರುದ್ರೋನದ್ವಿತೀಯಾಯ ತಸ್ಥುಃ; ದೇವ ಏಕೋ ನಾರಾಯಣಃ ; ಏಕೋದೇವಃ ಸರ್ವಭೂತೇಷುಗೂಢಃ—ಇತ್ಯಾದಿ) ವಾಕ್ಯ ಗಳು ಶೈವ, ವೈಷ್ಣವ, ಶಾಕ್ತ, ಕೌಮಾರ, ಗಾಣಪತ್ಯಮತಗಳಿಗೆ ಆಧಾರ ಗಳಾದವು. "ಭಗ" ಎಂಬುದಕ್ಕೆ ಶ್ರೀ, ಶಕ್ತಿ, ಕಾಮ, ಯೋನಿ, ಮಾಹಾತ್ಮ್ಯ, ಸೂರ್ಯ ಇತ್ಯಾದಿ ಅರ್ಥಗಳಿರುವುದರಿಂದ ಭಾಗವತ ಎಂಬುದು ಸರ್ವಮತೀಯರಿಗೂ ಅನ್ವಯಿಸುವದು. ಪತಂಜಲಿಯು, ತ್ರಿಶೂಲಧಾರಿ

ಗಳಾದ ಶೈವಭಾಗವತರ ಉಲ್ಲೇಖನೆ ಮಾಡಿರುವನು. ಬೌದ್ಧರು ಇಸ್ಸಿರಿಯ, ಧರ್ಮ, ಸಿರೀ, ಕಾಮ, ಪಯತನ, ಯಸ ಎಂಬ ಷಡ್ಗುಣಗಳುಳ್ಳ ಬುದ್ಧನನ್ನು ಭಗವಾನ್ ಎಂದು ಕರೆಯುವರು. ಶಾಕ್ತರು ಜಗದ್ಯೋನಿಯಾದ ಆದಿಶಕ್ತಿಯನ್ನು ಭಗವತೀ ಎಂದು ಕರೆಯುವರು. ವೇದಯುಗದ ಶ್ರದ್ಧಾ ಮತ್ತು ಉಪಾಸನೆಗಳೇ ಪುರಾಣಯುಗದಲ್ಲಿ ಭಕ್ತಿ ಎಂದೆನಿಸಿಕೊಂಡವೇ ವಿನಾ ಭಾರತೀಯರ ಭಕ್ತಿಪಂಥಗಳು ವಿದೇಶೀಯರ ಸಂಪರ್ಕದಿಂದ ಬರಲಿಲ್ಲ. ಭಕ್ತಿಪಂಥಗಳು ಪುರುಷ ತನ್ತ್ರಗಳು ಮತ್ತು ಭಾವನಾ ಪ್ರಧಾನಗಳಾದುದರಿಂದ ಷಣ್ಮತಗಳಲ್ಲಿಯೂ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ದ್ವೈತಾದ್ವೈತ, ಶುದ್ಧಾದ್ವೈತ ವಿಶೇಷಾದ್ವೈತ, ಭಾವಾದ್ವೈತ, ಅಚಿನ್ತ್ಯಭೇದಾಭೇದ ತತ್ವಗಳು ಸೇರಿಕೊಂಡು ಅನೇಕ ಶಾಖೆಗಳುಂಟಾಗಿವೆ. ಇವುಗಳ ಚರಿತ್ರೆಯನ್ನು ಅತಿ ಸಂಕ್ಷೇಪವಾಗಿ ವಿವರಿಸುವೆವು.

**ಶೈವಮತ:** ಶೈವರಲ್ಲಿ ಪ್ರತ್ಯಭಿಜ್ಞಾ ಅಥವಾ ಕಾಶ್ಮೀರ ಶೈವಮತದವರು ಅದ್ವೈತಿಗಳು. ಶುದ್ಧ ಶೈವರು ದ್ವೈತಿಗಳು. ಲಾಕುಳ-ಕಾಳಾಮುಖರೂ, ಶ್ರೀಕಣ್ಠಶಿವಸಂಪ್ರದಾಯದವರೂ ವಿಶಿಷ್ಟಾದ್ವೈತಿಗಳು. ಶ್ರೀಪತಿಪಣ್ಡಿತನು ವೀರಶೈವ ಮತವನ್ನು ವಿಶೇಷಾದ್ವೈತ, ಭೇದಾಭೇದ, ಶಕ್ತಿವಿಶಿಷ್ಟಾದ್ವೈತವೆಂದು ಹೇಳುವನು.

ಶಿವನು ಅನಾರ್ಯದೇವತೆಯೆಂದೂ ವೈದಿಕ ದೇವತೆಯಾದ ರುದ್ರನೊಡನೆ ಸೇರಿ ಪೌರಾಣಿಕ ಶೈವಮತವು ಹುಟ್ಟಿತೆಂದೂ ಕೆಲವರು ಊಹಿಸುವರು. ಈ ಅಭಿಪ್ರಾಯವು ನಿರಾಧಾರವೆಂದು ಹಿಂದೆಯೇ ಸೂಚಿಸಿರುವೆವು. ಷಣ್ಮತಗಳೂ ವೈದಿಕಯಜ್ಞಕರ್ಮಗಳಿಂದ ಹುಟ್ಟಿವೆ. ವೇದದಲ್ಲಿ ಅಗ್ನಿಯ ಕ್ರೂರ ರೂಪಕ್ಕೆ ರುದ್ರನೆಂದೂ ಸೌಮ್ಯರೂಪಕ್ಕೆ ಶಿವನೆಂದೂ ಹೇಳಿದೆ.[47] ಈ ಯಜ್ಞೇಶ್ವರನ ಕಿಡಿಗಳೇ[48] ಕಾಳೀ, ಕರಾಳೀ ಮುಂತಾದ ದೇವಿಯರು. ಬ್ರಾಹ್ಮಣರಿಗೆ

---

47 ತ್ವಮಗ್ನೇ ರುದ್ರೋ ಅಸುರೋ ಮಹೋದಿವಃ ||
ಆವೋರಾಜಾನಮಧ್ವರಸ್ಯ ರುದ್ರಂಹೋತಾರಂ ||
ತ್ವಮಗ್ನೇ ಪ್ರಥಮೋ ಅಂಗಿರಾಋಷಿ ರ್ದೇವೋ ದೇವಾನಾಮಭವಃ ಶಿವಃ ಸಖಾ |
ತವವ್ರತೇ ಕವಯೋ ವಿದ್ಮನಾಪಸೋಽಜಾಯನ್ತ ಮರುತೋ ಭ್ರಾಜದೃಷ್ಟಯಃ ||
ಋಗ್. I. ೭-೩೧. ೧.

48 ಕಾಳೀ ಕರಾಳೀಚ ಮನೋಜವಾಚ ಸುಲೋಹಿತಾಯಾಚ ಸುಧೂಮ್ರವರ್ಣಾ |
ಸ್ಫುಲಿಂಗಿನೀ ವಿಶ್ವರೂಪೀಚ ದೇವೀ ಲೇಲಾಯಮಾನಾ ಇತಿಸಪ್ತಜಿಹ್ವಾಃ ||
ಮುಣ್ಡಕೋಪನಿಷತ್. I. ೨-೪.

ಅಗ್ನಿಯೇ ಗುರುವು.[49] ಅಗ್ನಿರೂಪನಾದ ಶಿವನು ದೇವತೆಗಳಲ್ಲಿ ಬ್ರಾಹ್ಮಣನಾದುದರಿಂದ ಬ್ರಾಹ್ಮಣರಿಗೆ ಶಿವನೇ ದೈವವು.[50] ಶಿವಲಿಂಗವು ಉತ್ತರಾರಿಣಿ ಅಥವಾ ಯೂಪದ ಪ್ರತೀಕ. ಶೈವಚಿಹ್ನೆಯಾದ ಭಸ್ಮವು ಯಜ್ಞಾವಶೇಷವಾದ ರಕ್ಷೆ. ಶೈವಮತಗಳಲ್ಲಿ ವರ್ಣಾಶ್ರಮನಿಯಮಗಳಿರಲಿಲ್ಲವೆಂಬುದಕ್ಕೆ ಆಧಾರವಿಲ್ಲ. ಪಾಶುಪತ ಸೂತ್ರಗಳಲ್ಲಿ ಸ್ತ್ರೀ ಶೂದ್ರರಿಗೆ ಪಾಶುಪತ ದೀಕ್ಷಾಧಿಕಾರವಿಲ್ಲವೆಂದು ಸ್ಪಷ್ಟವಾಗಿ ಹೇಳಿದೆ.[51] ಈ ಸೂತ್ರಗಳಿಗೆ ಭಾಷ್ಯವನ್ನು ಬರೆದ ಕೌಣ್ಡಿನ್ಯನು ಲಕುಳೀಶ್ವರನು ಬ್ರಾಹ್ಮಣಶರೀರದಿಂದ ಕಾಯಾವತರಣಕ್ಷೇತ್ರದಲ್ಲಿ ಅವತರಿಸಿ ಉಜ್ಜಯಿನಿಗೆ ಬಂದು, ಅಲ್ಲಿ ತನ್ನ ಜಾತಿ ಗೋತ್ರ ಶ್ರುತ ಅನೃಣತ್ವವನ್ನು ನಿವೇದಿಸಿಕೊಂಡು ಶಿಷ್ಯನನ್ನಾಗಿ ಪರಿಗ್ರಹಿಸಬೇಕೆಂದು ಕೇಳಿಕೊಂಡ ಕುಶಿಕನಿಗೆ ಪಾಶುಪತ ದೀಕ್ಷೆಯನ್ನು ಅನುಗ್ರಹಿಸಿದನೆಂದು ಹೇಳಿರುವನು. ಆದುದರಿಂದ ಋಣತ್ರಯಗಳನ್ನು ವೇದಮಾರ್ಗದಲ್ಲಿ ಪರಿಹರಿಸಿಕೊಂಡ ಬ್ರಾಹ್ಮಣರೇ ಅತ್ಯಾಶ್ರಮಕ್ಕೆ ಅರ್ಹರೆಂದು ಸೂಚಿಸಿದೆ. ಶೈವಮತಗಳಲ್ಲಿ ಜಾತಿ ಗೋತ್ರ ನಿಬನ್ಧನೆಗಳಿರಲಿಲ್ಲವೆಂದೂ ಇದು ಅನಾರ್ಯಮತವೆಂದೂ ಹೇಳುವದು ಅತಿವಾದ.

**ಲಾಕುಳ-ಪಾಶುಪತ-ಕಾಳಾಮುಖಮತ:** ವಾಯುಪುರಾಣ (ಅ. ೨೩), ಲಿಂಗಪುರಾಣ (ಅ. ೨೪) ಗಳಲ್ಲಿ ವಿಷ್ಣುವು ವಾಸುದೇವಾವತಾರ ಮಾಡಿದ ಸಮಯದಲ್ಲಿಯೇ ಪರಮೇಶ್ವರನು ಲಗುಡಹಸ್ತನಾಗಿ ಕಾಯಾವರೋಹಣ ಕ್ಷೇತ್ರದಲ್ಲಿ ಬ್ರಾಹ್ಮಣನ ಶರೀರವನ್ನು ಪ್ರವೇಶಿಸಿದನೆಂದು ಹೇಳಿದೆ. ಕೌಣ್ಡಿನ್ಯ ಭಾಷ್ಯದಲ್ಲಿ ಕುಶಿಕ (ಕೌಶಿಕ), ಗರ್ಗ, ಮಿತ್ರ, ಕಾರುಣ್ಯರೆಂಬವರು ಲಕುಳೀಶ್ವರನ ಪ್ರಥಮ ಶಿಷ್ಯರಾದರೆಂದೂ, ಪಾಂಚರಾತ್ರಮತಕ್ಕೆ ಪ್ರತಿಯಾಗಿ ಪಂಚಾರ್ಥವಿದ್ಯೆಯು ಪ್ರತಿಪಾದಿತವಾಯಿತೆಂದೂ ಹೇಳಿದೆ.

---

[49] ಗುರುರಗ್ನಿರ್ದ್ವಿಜಾತೀನಾಂ ವರ್ಣಾನಾಂ ಬ್ರಾಹ್ಮಣೋಗುರುಃ || ಪಾದ್ಮ, ೫೧—V, ೫೧.

ಅಗ್ನಿರ್ದೇವೋದ್ವಿಜಾತೀನಾಮ್ ||

[50] ತ್ವಂದೇವೇಷು ಬ್ರಾಹ್ಮಣೋಽಸ್ಯಹಂ ಮನುಷ್ಯೇಷು ಬ್ರಾಹ್ಮಣೋ ವೈ ಬ್ರಾಹ್ಮಣಮುಪಧಾವತಿ ಉಪ ತ್ವಾಧಾವಾಮಿ || ಮನ್ತ್ರ ಬ್ರಾಹ್ಮಣ. II. ೪—೬.

[51] ಮೂತ್ರ ಪುರೀಷಂ ನಾವೇಕ್ಷೇತ್ | ಸ್ತ್ರೀ ಶೂದ್ರಂ ನಾಭಿಭಾಷೇತ್ | ಯದ್ಯವೇಕ್ಷೇತ್ ಯದ್ಯಭಿ ಭಾಷೇತ್ | ಉಪಸ್ಪೃಶ್ಯ | ಪ್ರಾಣಾಯಾಮಂ ಕೃತ್ವಾ | ರೌದ್ರೀಂ ಗಾಯತ್ರೀಂ ಬಹುರೂಪೀಂ ವಾಜಪೇತ್ || I—೧೩, ೧೪. *Tr. Skt. Series No.* ೧೪೩.

ಕಾರ್ಯ, ಕಾರಣ, ಯೋಗ, ವಿಧಿ, ದುಃಖಾನ್ತ ಎಂಬುವು ಪಂಚಪದಾರ್ಥಗಳು. ಪಶು, ವಿದ್ಯೆ ಮತ್ತು ಕಳೆ ಕಾರ್ಯವೆನಿಸಿಕೊಳ್ಳುವವು. ಸಿದ್ಧೇಶ್ವರರನ್ನು ವರ್ಜಿಸಿ ಇತರ ಸರ್ವಚೇತನಾವಸ್ತುರೂ ಪಶುಗಳು (ಪಶ್ಯನಾತ್ ಪಾಶನಾಚ್ಚ ಪಶವಃ). ಪಶುಗಳಲ್ಲಿ ದೇವ, ಮನುಷ್ಯ, ಮತ್ತು ತಿರ್ಯಗ್ಜನ್ತುಗಳೆಂಬ ಭೇದಗಳಿವೆ. ವಿದ್ಯೆಯೆಂದರೆ ಉತ್ಪಾದ್ಯ, ಅನುಗ್ರಾಹ್ಯ, ತಿರೋಭಾವ್ಯ, ಕಾಲ್ಪ್ಯ, ವಿಕಾರ್ಯ, ಅಸ್ಪಂದ ಮುಂತಾದುವನ್ನು ಬೋಧಿಸಿ ಮಾಡುವದು. ಕಲೆಯು ಕಾರ್ಯಕಲಾ (ಪಾಶ), ಕರಣಕಲೆಯೆಂದು ಎರಡು ವಿಧ. ಕಾರ್ಯಕಲೆಗಳು ಪೃಥಿವೀ ಮುಂತಾದುವು. ಕರಣಕಲೆಗಳು ಬುದ್ಧಿ ಮುಂತಾದುವು. ಕಾರಣ ಪದಾರ್ಥವು ಪತಿ (ಆಪ್ತಿ ಪಾತಿ ಚ ತಾನ್ಪಶೂನ್ ಇತಿ ಪತಿಃ). ದುಃಖಾನ್ತವೆಂಬ ಮೋಕ್ಷವು ಜ್ಞಾನ, ವೈರಾಗ್ಯ, ಧರ್ಮ, ಐಶ್ವರ್ಯ, ತ್ಯಾಗ ಮುಂತಾದವುಗಳಿಂದ ಲಭಿಸಲಾರದು, ಪಶುಪತಿಯ ಪ್ರಸಾದವೇ ಮುಖ್ಯಕಾರಣ. ಯೋಗವೆಂದರೆ ಆತ್ಮಕ್ಕೂ ಈಶ್ವರನಿಗೂ ಸಂಯೋಗ. ಇದು ಸಮಾಧಿ ಲಕ್ಷಣ. ವಿಧಿಯೆಂದರೆ ವಿಧಾಯಕವಾದ ಉಪಾಯಗಳು. (ಕ್ರಾಥನ, ಸ್ಪನ್ದನ, ಮಣ್ಟನ, ಶೃಂಗಾರಣ, ಅವಿತತ್ಕರಣ, ಅವಿತದ್ಭಾಷಣ—ಇವು ದ್ವಾರಗಳು; ಹಸಿತ, ಗೀತ, ನೃತ್ತ, ಹುಡುಕ್ಕಾರ, ನಮಸ್ಕಾರ, ಜಪ್ಯೋಪಹಾರ ಮುಂತಾದವು ವ್ರತಗಳು). ಇವುಗಳಿಂದ ಪಾಶುಪತವ್ರತಿಯು ಮಹಾದೇವನ ಗಣಗಳಿಗೆ ಪತಿಯಾಗುವನು. ಸಾಯುಜ್ಯವೆಂಬ ದುಃಖಾನ್ತವನ್ನು ಹೊಂದುವನು.[52]

ಹರಪ್ಪ ಸಂಸ್ಕೃತಿಯಲ್ಲಿ ಪಶುಪತಿ ಪೂಜೆಯು ಕಂಡುಬರುವದು. ಉಪನಿಷತ್ತುಗಳಲ್ಲಿ ಇದಕ್ಕೆ ಶಿರೋವ್ರತ, ಮಹಾವ್ರತ ಎಂದು ಹೆಸರು.[53] ನ್ಯಾಯ

---

[52] ಶ್ಮಶಾನವಾಸೀ ಧರ್ಮಾತ್ಮಾ ಯಥಾಲಬ್ಧೋಪಜೀವಕಃ| ಲಭತೇ ರುದ್ರಸಾಯುಜ್ಯಂ ಸದಾರುದ್ರಮನುಸ್ಮರೇತ್ || ಛಿತ್ವಾದೋಷಾಣಾಂ ಹೇತುಜಾಲಸ್ಯಮೂಲಂ ಬುದ್ಧ್ಯಾ ಸಂಚಿತ್ತಂ ಸ್ಥಾಪಯಿತ್ವಾ ಚರುದ್ರೇ| ಏಕಃಕ್ಷೇಮೀ ಸನ್ ವೀತಶೋಕಃ ಅಪ್ರಮಾದೀ ಗಚ್ಛೇದ್ದುಃಖಾನಾಮನ್ತಮೀಶಪ್ರಸಾದಾತ್ ||

ಪಾಶುಪತ ಸೂತ್ರ.

[53] ಕ್ರಿಯಾವನ್ತಃ ಶ್ರೋತ್ರಿಯಾಬ್ರಹ್ಮನಿಷ್ಠಾಃ ಸ್ವಯಂಜುಹ್ವತ ಏಕರ್ಷಿಂಶ್ರದ್ಧಯನ್ತಃ| ತೇಷಾಮೇವೈತಾಂ ಬ್ರಹ್ಮವಿದ್ಯಾಂವದೇತ ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಮ್ || ತದೇತತ್ಸತ್ಯಮೃಷಿರಂಗಿರಾಃ ಪುರೋವಾಚ ನೈತದಚೀರ್ಣವ್ರತೋಽಧೀತೇ ||

ಮುಣ್ಡಕ, III 2-10. 11.

ವ್ರತಮೇತತ್ಪಾಶುಪತಮ್ | . . . ತಸ್ಮಾದ್ವ್ರತಮೇತತ್ಪಾಶುಪತಮ್ ಪಶುಪಾಶ ವಿಮೋಕ್ಷಾಯ | ಯೋಽಥರ್ವಶಿರಂ ಬ್ರಾಹ್ಮಣೋಽಧೀತೇ ಸೋಽಗ್ನಿಪೂತೋಭವತಿ ||

—ಅಥರ್ವಶಿರೋಪನಿಷತ್.

ಮತ್ತು ವೈಶೇಷಿಕ ದರ್ಶನಗಳ ಸೂತ್ರಕಾರರಾದ ಅಕ್ಷಪಾದ ಮತ್ತು ಕಣಾದ ಮಹರ್ಷಿಗಳು ಪಾಶುಪತ-ಮಾಹೇಶ್ವರರಾಗಿದ್ದರು. ಪಾಶುಪತರು ರಕ್ತವಸ್ತ್ರಗಳನ್ನು ಧರಿಸುತ್ತಿದ್ದರೆಂದು ಬಾಣನು ಹೇಳಿರುವನು. ಪಾಶುಪತರು ಉಜ್ಜಯಿನಿ ಮಹಾಕಾಳ ಪೂಜಕರಾಗಿದ್ದುದರಿಂದ ಕಾಳಾಮುಖರೆಂದೂ, ಲಕುಳೀಶ್ವರ ಸಂಪ್ರದಾಯದವರಾದುದರಿಂದ ಲಾಕುಳರೆಂದೂ ಎನಿಸಿಕೊಂಡರು. ಕಾಳಾಮುಖ ಪಾಶುಪತ ಮತವು ಭರತಖಂಡದಲ್ಲಿಯೇ ಅಲ್ಲದೆ ಕ್ಯಾಂಬೋಡಿಯ, ಬೋರ್ನಿಯೋ ಜಾವ ಮುಂತಾದ ದ್ವೀಪಾಂತರಗಳಲ್ಲಿಯೂ ವ್ಯಾಪಿಸಿತು. ಆನ್ಧ್ರ ಮತ್ತು ಕರ್ಣಾಟಕ ದೇಶಗಳಲ್ಲಿ ಬೆಳಗಾಮಿ, ಹೂಲಿ, ಶ್ರೀಶೈಲ, ನಂದಿ, ಓರುಗಲ್ಲು, ಕಾಳಹಸ್ತಿ ಮುಂತಾದ ಅನೇಕ ಕೇನ್ದ್ರಗಳಿದ್ದವು. ಕಾಳಾಮುಖಾಚಾರ್ಯರು ರಾಜಗುರುಗಳಾಗಿದ್ದರು. ಇವರಿಗೆ ದೇವ, ಪಣ್ಡಿತ, ರಾಶಿ, ಶಕ್ತಿ, ಜೀಯ, ಶಿವ, ಗೊರವ, ವ್ರತಿ, ಮುನಿ ಮುಂತಾದ ಉಪನಾಮಗಳಿದ್ದವು. ಇವರು "ಸ್ನಾನ ಜಪ ಹೋಮ, ನಿಯಮ, ಧ್ಯಾನಾನುಷ್ಠಾನಶೀಲತತ್ಪರರೂ, ವ್ಯಾಸ, ಅಗಸ್ತ್ಯ, ದುರ್ವಾಸ, ವಿಶ್ವಾಮಿತ್ರ, ನಾರದಾದಿ ದಿವ್ಯ ಮುನಿ ಚಾರಿತ್ರರೂ, ಕೌಪೀನ ಮೌಂಜೀಧರರೂ, ರುದ್ರಾಕ್ಷಾಲಂಕೃತರೂ, ಜಂಗಮ ಲಿಂಗಾವತಾರರೂ, ಲಾಕುಳಾಗಮ ಸಮಯ ಸಮುದ್ಧಾರರೂ" ಎಂದು ಶಾಸನಗಳು ಹೇಳುವವು.[54] ಕರ್ಣಾಟಕದಲ್ಲಿ ಶಾತವಾಹನರು, ಕದಂಬರು, ಗಂಗರು, ಚಾಳುಕ್ಯರು, ರಾಷ್ಟ್ರಕೂಟರು, ಕಾಲಚೂರ್ಯರು, ಹೊಯ್ಸಳರು, ವಿಜಯನಗರದ ಸಂಗಮ ವಂಶದವರೂ ಕಾಳಾಮುಖರಿಗೆ ಅನೇಕ ದಾನಗಳನ್ನು ಮಾಡಿರುವರು. ಅನೇಕ ರಾಜರೂ ಪಾಶುಪತ ಶೈವರಾಗಿದ್ದರು. ಆನ್ಧ್ರ ದೇಶದಲ್ಲಿ ಕಾಕತೀಯ ರಾಜರು ಗೋಳಕೀಮಠದ ಪಾಶುಪತಾಚಾರ್ಯರ ಶಿಷ್ಯರಾಗಿದ್ದರು. ಉತ್ತರದಲ್ಲಿ ಸೌರಾಷ್ಟ್ರದ ಸೋಮನಾಥ, ಕಾಶಿಯ ವಿಶ್ವನಾಥ, ನೇಪಾಳದ ಪಶುಪತಿನಾಥ, ಉಜ್ಜಯಿನಿಯ ಮಹಾಕಾಳ ಮುಂತಾದ ಪ್ರಸಿದ್ಧ ದೇವಾಲಯಗಳೆಲ್ಲವೂ ಪಾಶುಪತರ ಅಧೀನದಲ್ಲಿದ್ದವು. ಶ್ರೀಪತಿ ಪಣ್ಡಿತನು ವೀರಶೈವ ಮತವು ನಿಗಮಾಗಮ ಉಭಯ ಸಮ್ಮತವಾದ ಪಾಶುಪತ ಮತವೆಂದು ಹೇಳಿರುವನು.

**ಶುದ್ಧಶೈವಸಿದ್ಧಾನ್ತ:** ಸರ್ವದರ್ಶನಸಂಗ್ರಹದ ಪ್ರಕಾರ ಶೈವರಲ್ಲಿ ಲಕುಳೀಶ ಪಾಶುಪತ, ಪ್ರತ್ಯಭಿಜ್ಞಾ ಮತ್ತು ರಸೇಶ್ವರ ಎಂಬ ಮೂರು ಪ್ರಭೇದಗಳಿವೆ. ಕಾರಣಾಗಮದಲ್ಲಿ ಶೈವ, ಪಾಶುಪತ, ಸೋಮ, ಲಾಕುಳ ಎಂಬ ನಾಲ್ಕು, ಕೂರ್ಮಪುರಾಣದಲ್ಲಿ ಕಾಪಾಲ, ನಾಕುಲ, ವಾಮ,

[54] *J. B. B. R. A. S.* XII. etc.

ಭೈರವ, ಪಾಶುಪತ ಎಂಬ ಐದೂ, ಆನನ್ದಗಿರಿ ವಾಚಸ್ಪತಿಗಳ ಪ್ರಕಾರ ಶೈವ, ಪಾಶುಪತ, ಕಾರುಕ (ಕಾರುಣಿಕ) ಸಿದ್ಧಾನ್ತಿ, ಕಾಪಾಲಿಕ ಎಂಬ ನಾಲ್ಕು ಭೇದಗಳಿವೆ. ರಾಮಾನುಜಾಚಾರ್ಯರು ಶ್ರೀ ಭಾಷ್ಯದಲ್ಲಿ ಮಹಾಭಾರತ ಶ್ಲೋಕಗಳನ್ನನುಸರಿಸಿ ಕಾಪಾಲಿಕರೇ ಕಾಳಾಮುಖರೆಂದು ಹೇಳಿದ್ದರೂ ಕರ್ಣಾಟಕ ಶಾಸನಗಳಿಂದ ಕಾಳಾಮುಖರು ಕಪಾಲಧಾರಿಗಳಾಗಿದ್ದರೆಂದು ತಿಳಿದುಬರುವದಿಲ್ಲ. ಕಾಪಾಲಿಕ, ಅಘೋರಪಂಥಿ, ಭೈರವ ಮುಂತಾದವರು ಲಾಕುಳ—ಕಾಳಾಮುಖರಿಗಿಂತ ಭಿನ್ನರು.

ಶುದ್ಧಶೈವಸಿದ್ಧಾಂತದಲ್ಲಿ ವಿದ್ಯಾಪಾದ, ಕ್ರಿಯಾಪಾದ, ಯೋಗಪಾದ ಗಳೆಂಬ ಮೂರು ಭಾಗಗಳಿವೆ. ವಿದ್ಯಾಪಾದದಲ್ಲಿ ಪತಿ, ಪಶು, ಪಾಶಗಳ ನಿರೂಪಣೆಯಿದೆ. ಪತಿಯಾದ ಶಿವನು ಸೃಷ್ಟಿ, ಸ್ಥಿತಿ, ಲಯ, ಮೋಕ್ಷ, ಗೋಪನಗಳೆಂಬ ಪಂಚಶಕ್ತಿಗಳನ್ನು ಹೊಂದಿರುವನು. ಈಶ್ವರನು ಪ್ರಪಂಚಕ್ಕೆ ನಿಮಿತ್ತಕಾರಣನು ಮಾತ್ರ. ಪಶುವಾದ ಜೀವವು ಅಣುರೂಪವಾಗಿ ಕ್ಷೇತ್ರಜ್ಞ ನೆಂದೆನಿಸಿಕೊಳ್ಳುವದು. ಜೀವಗಳಲ್ಲಿ ವಿಜ್ಞಾನಾಕಲ, ಪ್ರಳಯಾಕಲ ಮತ್ತು ಸಕಲ ಎಂದು ಮೂರು ವಿಧ. ಪಾಶಗಳು ಮಲ, ಕರ್ಮ, ಮಾಯಾ, ರೋಧ ಶಕ್ತಿ ಎಂಬುವು. ಕ್ರಿಯಾಪಾದದಲ್ಲಿ ಮನ್ತ್ರ, ಜಪ, ಹೋಮ, ದೀಕ್ಷೆ ಮುಂತಾದವುಗಳ ನಿರೂಪಣೆಯಿದೆ. ಯೋಗಪಾದದಲ್ಲಿ ಮೂವತ್ತಾರು ತತ್ತ್ವಗಳು, ಅಣಿಮಾದಿಸಿದ್ಧಿಗಳು ಇತ್ಯಾದಿಗಳು ನಿರೂಪಿತವಾಗಿವೆ, ಈ ಮತಕ್ಕೆ ಹತ್ತು ಶೈವ, ಮತ್ತು ಹದಿನೆಂಟು ರೌದ್ರ ಆಗಮಗಳು ಪ್ರಮಾಣಗಳು.[54]

ದ್ರಾವಿಡದೇಶದಲ್ಲಿ ತಿರುನಾವಕ್ಕರಸು (ಅಪ್ಪರ್), ತಿರುಜ್ಞಾನಸಂಬಂಧರು, ಸುನ್ದರಮೂರ್ತಿನಾಯನಾರರು ಕ್ರಿ.ಶ. ೭ ನೆಯ ಶತಾಬ್ದದಲ್ಲಿ ಶೈವಮತವನ್ನು ಪ್ರಚಾರಮಾಡಿದರು. ಪಲ್ಲವಮಹೇನ್ದ್ರವರ್ಮನೂ ಮಾರವರ್ಮಕೂನು

---

[54] ಶೈವಾಃ ಕಾಮಿಕ ಯೋಗಜಾಜಿತ ಮಥೋಽಚಿನ್ತ್ಯಂಚ ದೀಪ್ತಾಹ್ವಯಂ |
ಸೂಕ್ಷ್ಮಃ ಕಾರಣಮಂಶುಮಾಂಶ್ಚ ದಶಧಾ ಸಾಹಸ್ರಕಂ ಸುಪ್ರಭಂ |
ರೌದ್ರಾಸ್ತೇ ವಿಜಯಂ ಚ ರೌರವಮಥೋ ನಿಶ್ವಾಸಮಾಗ್ನೇಯಕಂ |
ಸನ್ತಾನಂ ಕಿರಣಾಖ್ಯ ಸಿದ್ಧ ವಿಮಲಂ ಶ್ರೀ ಚನ್ದ್ರಹಾಸಂ ಪರಂ (ವಾತೂಲಂ) ||
ಉದ್ಗೀತಂ ಲಲಿತಂ ಚ ಮಾಕುಟ ಮಥೋ ಶ್ರೀನಾರಸಿಹ್ಮಂ ತಥಾ |
ಶ್ರೀಸ್ವಾಯಮ್ಭುವ ಪಾರಮೇಶಮುಖಯುಕ್ ಬಿಂಬಾನಿ ಚನ್ದ್ರಾಹ್ವಯಂ |
ತೇನಾಷ್ಟಾದಶಸಂಖ್ಯಯೋರ್ಧ್ವಮುಖತಃ ಸಾಕ್ಷಾತ್ತದೇಶೇನ ತೇ |
ಪ್ರೋಕ್ತಾಸ್ತೋಽಪಿ ಪರಾಸ್ತ ಏವ ನಿಖಿಲೋತ್ತೀರ್ಣಾಖಿಲಜ್ಞಾನವಾನ್ ||

ಸಿದ್ಧಾನ್ತಸಾರಾವಲೀ, ೧೨೮.

ಪಾಣ್ಡ್ಯನೂ ಇವರ ಬೋಧನೆಯಿಂದ ಜೈನಮತವನ್ನು ಬಿಟ್ಟು ಶೈವರಾದರು. ತಿರುನೀಲಕಂಠರು, ಕರೈಕ್ಕಾಲಮ್ಮ, ಮಾಣಿಕ್ಯವಾಚಕ ಮುಂತಾದ ಶಿವಭಕ್ತರು ಅನೇಕ ಸ್ತೋತ್ರಗಳನ್ನು ರಚಿಸಿರುವರು. ಇವರಿಗೆ ಅರುವತ್ತುಮೂವರು ಪುರಾತನರೆಂದು ಹೆಸರು. ಇವರ ಚರಿತ್ರೆಗಳು ಕ್ರಿ.ಶ. ೧೧ ನೆಯ ಶತಾಬ್ದದಲ್ಲಿ ರಾಜರಾಜ, ರಾಜೇನ್ದ್ರಚೋಳರ ಆಶ್ರಯದಲ್ಲಿ ರಚಿತವಾದ ಪೆರಿಯ ಪುರಾಣ ದಲ್ಲಿ ಕಂಡುಬರುವದು. ಕನ್ನಡದಲ್ಲಿ ಹರಿಹರ, ಷಡಕ್ಷರಿ ಮುಂತಾದ ವೀರಶೈವ ಕವಿಗಳು ಈ ಪುರಾತನರ ಚರಿತ್ರೆಗಳನ್ನು ಬರೆದಿರುವರು. ಸುಮಾರು ಕ್ರಿ.ಶ. ೧೩ ನೆಯ ಶತಾಬ್ದದಲ್ಲಿ ಮೆಯ್ಕಂಡದೇವರು ಶಿವಜ್ಞಾನಬೋಧಂ ಎಂಬ ಸೂತ್ರಗಳನ್ನು ರಚಿಸಿರುವರು. ಇದನ್ನು ಅನುಸರಿಸಿ ಅರುಳ್‌ನಂದಿ, ಅಘೋರ ಶಿವಾಚಾರ್ಯ, ಈಶಾನ ಶಿವಾಚಾರ್ಯ ಮುಂತಾದವರು ಪ್ರಕರಣ ಗ್ರಂಥ ಗಳನ್ನೂ ವ್ಯಾಖ್ಯಾನಗಳನ್ನೂ ರಚಿಸಿದರು. ಹದಿನಾರನೆಯ ಶತಮಾನದಲ್ಲಿ ಡಿಂಡಿಮ ಕವಿಯು ತಿರುಪ್ಪುಗಳ್ ಎಂಬ ಸ್ತೋತ್ರಗಳನ್ನು ಬರೆದನು. ತಮಿಳು ದೇಶದ ಶೈವರು ತಮಿಳು ಸಾಹಿತ್ಯಕ್ಕೆ ಮಹೋಪಕಾರವನ್ನು ಮಾಡಿರುವರು.

**ಕಾಶ್ಮೀರ ಶೈವಮತ ಅಥವಾ ಪ್ರತ್ಯಭಿಜ್ಞಾ ಶಾಸ್ತ್ರ:** ಈ ಮತದಲ್ಲಿ ಪರಮೇಶ್ವರನು ಪ್ರಪಂಚವನ್ನು ತನ್ನ ಇಚ್ಛಾಶಕ್ತಿಯಿಂದ ಪ್ರತಿಬಿಂಬದಂತೆ ವ್ಯಕ್ತಪಡಿಸುವದರಿಂದ ಕಾರಣ, ಕಾರ್ಯಪದಾರ್ಥಗಳಿಗೆ ತಾತ್ವಿಕವಾಗಿ ಅಭೇದವಿದೆ. ಆದರೆ ಜೀವನು ಆಣವ, ಕಾರ್ಯ ಮತ್ತು ಮಾಯಿಕವೆಂಬ ಮಲತ್ರಯಗಳಿಗೆ ಅಧೀನನಾಗಿ ಈ ಅಭೇದಜ್ಞಾನವನ್ನು ಮರೆಯುವನು. ಶಿವನೂ ಶಕ್ತಿಯೂ ವಾಕ್ಕು ಅರ್ಥಗಳಂತೆ ಒಂದೇ ಆದರೂ ಸೃಷ್ಟಿಯ ಆರಂಭದಲ್ಲಿ ಸ್ಪಂದನವುಂಟಾಗಿ ನಾದವು ಹುಟ್ಟುವದು. ನಾದದಿಂದ ಶಬ್ದವೂ ಶಬ್ದದಿಂದ ಮಲವೂ ಉಂಟಾಗಿ ಸಂಸಾರಬಂಧನದಲ್ಲಿ ಪರಿಣಮಿಸುವುದು. ಕೊನೆಗೆ ಯೋಗಶಕ್ತಿಯಿಂದ ಜೀವನು ಮಲಗಳನ್ನು ಕಳೆದುಕೊಂಡು ತನ್ನ ನಿಜರೂಪವಾದ ಶಿವತ್ವವನ್ನು ಪಡೆದು ಐಕ್ಯವನ್ನು ಹೊಂದುವನು. ಈ ಮತಕ್ಕೆ ವಸುಗುಪ್ತ ಮತ್ತು ಕಲ್ಲಟರು ಕ್ರಿ.ಶ. ೮೫೫ ರಲ್ಲಿ "ಶಿವಸೂತ್ರ"ಗಳನ್ನು ರಚಿಸಿದರು. ಅನಂತರ ಸೋಮಾನನ್ದನು "ಶಿವದೃಷ್ಟಿ"ಯನ್ನು ಬರೆದನು. ಅಭಿನವ ಗುಪ್ತಾಚಾರ್ಯ (ಕ್ರಿ.ಶ. ೯೯೩-೧೦೧೫) ಉದಯಾಕರ ಮುಂತಾದವರು ಈ ಶಾಸ್ತ್ರವನ್ನು ಬೆಳಸಿಕೊಂಡು ಬಂದರು. ಕರ್ಣಾಟಕದಲ್ಲಿಯೂ ಈ ಮತವು ವ್ಯಾಪಿಸಿದ್ದಂತೆ ತೋರುವದು. ವಿಜಯನಗರದ ಸಂಗಮವಂಶಕ್ಕೆ ಕುಲಗುರು ಗಳಾದ ಕಾಶೀವಿಲಾಸ ಕ್ರಿಯಾಶಕ್ತಿ, ತ್ರಿಯಂಬಕ ಕ್ರಿಯಾಶಕ್ತಿ, ಚನ್ದ್ರ ಭೂಷಣ ಕ್ರಿಯಾಶಕ್ತಿ, ವಿದ್ಯಾಶಂಕರ ಮುಂತಾದವರು ಹದಿನಾಲ್ಕು

ಹದಿನೈದನೆಯ ಶತಾಬ್ದಗಳಲ್ಲಿ ಪಾಶುಪತ ಮತ್ತು ಪ್ರತ್ಯಭಿಜ್ಞಾಶೈವ ಮತಾವಲಂಬಿಗಳಾಗಿದ್ದರು. ಇವರ ಶಿಷ್ಯನಾದ ಮಾಧವ ಮಂತ್ರಿಯು ಸೂತಸಂಹಿತೆಗೆ ವ್ಯಾಖ್ಯಾನವನ್ನು ಬರೆದನು. ಕಾಲಿದಾಸನೂ ಪ್ರತ್ಯಭಿಜ್ಞಾಶೈವಮತಕ್ಕೆ ಸೇರಿದವನೆಂದೂ ಈ ಮತದ ತತ್ವಗಳನ್ನೇ "ಅಭಿಜ್ಞಾನ ಶಾಕುನ್ತಲ"ದಲ್ಲಿ ಅಡಕಮಾಡಿರುವನೆಂದೂ ಕೆಲವರು ಊಹಿಸುವರು. ಗೋರಕ್ಷನಾಥ ಮುಂತಾದ ನಾಥಪಂಥಿಗಳೂ ಈ ಮತದ ಅನೇಕಾಂಶಗಳನ್ನು ಗ್ರಹಿಸಿರುವರು.

**ಶೈವ ವಿಶಿಷ್ಟಾದ್ವೈತ ಮತಗಳು:** ಶಕ್ತಿ ವಿಶಿಷ್ಟವಾದ ಶಿವನೇ ಪರವಸ್ತುವೆಂಬ ಮೂಲತತ್ವವು ಕೆಲವು ಶೈವಮತ ಪ್ರಭೇದಗಳಲ್ಲಿಯೂ ಶಾಕ್ತ ಮತಗಳಲ್ಲಿಯೂ ಸಾಮಾನ್ಯವಾಗಿ ಕಂಡುಬರುವದು. ಆದರೆ ಶಾಕ್ತಮತಗಳಲ್ಲಿ ಶಕ್ತಿಯಿಲ್ಲದ ಶಿವನು ಶವವೆಂದೂ ಶಕ್ತಿಯನ್ನೇ ಮುಖ್ಯವೆಂದು ಗಣಿಸಿದೆ. ಪುರುಷನು ಸ್ತ್ರೀಗಿಂತಲೂ ಸಹಜವಾಗಿ ಉತ್ತಮನೆಂದು ಇತರರು ಪುರುಷ ದೇವತೆಗೆ ಪ್ರಾಧಾನ್ಯವನ್ನು ಕೊಟ್ಟರು. ಶ್ವೇತಾಚಾರ್ಯ ಮುಂತಾದ ಪಾಶುಪತಾಚಾರ್ಯರ ಸಂಪ್ರದಾಯಕ್ಕೆ ಸೇರಿದ ಶ್ರೀಕಣ್ಠಶಿವಾಚಾರ್ಯರು ವಿಕ್ರಮಚೋಳನ (ಕ್ರಿ.ಶ. ೧೧೧೮-೩೫) ಕಾಲದಲ್ಲಿ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸಿದರು. ಇವರ ಶಿಷ್ಯರಾದ ಹರದತ್ತಶಿವಾಚಾರ್ಯರು ಚತುರ್ವೇದ ವೇದಾನ್ತ ತಾತ್ಪರ್ಯಸಂಗ್ರಹ ಮುಂತಾದ ಗ್ರಂಥಗಳನ್ನು ರಚಿಸಿ ಚೋಳರಾಜನ ಆಸ್ಥಾನದಲ್ಲಿ ರಾಮಾನುಜರ ಶಿಷ್ಯರಾದ ಕೂರೇಶರೊಡನೆ ವಾದಮಾಡಿ ಶಿವಸರ್ವೋತ್ತಮತ್ವವನ್ನು ಸ್ಥಾಪಿಸಿದರೆಂದು ಒಂದು ಐತಿಹ್ಯವಿದೆ. ಈ ಮತದ ಪ್ರಕಾರ ಶಿವನು ಜಗತ್ತಿಗೆ ನಿಮಿತ್ತಕಾರಣನೂ ಉಪಾದಾನಕಾರಣನೂ ಆಗಿರುವನು. ಶಿವನಲ್ಲಿಯೇ ಮಾಯಾಶಕ್ತಿ ಅಥವಾ ಪ್ರಧಾನವು ಬೇರೆಯಾಗಿರುವುದರಿಂದ ಶಿವನು ಶಕ್ತಿವಿಶಿಷ್ಟನು. ಚಿದಚಿದ್ವಸ್ತುಗಳು ಶಾರೀರಕ ಭಾವದಿಂದ ಶಿವನಲ್ಲಿಯೇ ಇರುವವು. ಮುಕ್ತಜೀವರು ಅಣುಸ್ವರೂಪರಾಗಿಯೇ ಇದ್ದು ಸಾಮರಸ್ಯ ಹೊಂದುವರು. ಈ ಶೈವವಿಶಿಷ್ಟಾದ್ವೈತಕ್ಕೂ ವೈಷ್ಣವರ ವಿಶಿಷ್ಟಾದ್ವೈತಕ್ಕೂ ಹತ್ತಿರ ಸಂಬಂಧವಿದೆ. ಶ್ರೀಕಂಠ ಭಾಷ್ಯಕ್ಕೆ ಹದಿನಾರನೆಯ ಶತಮಾನದಲ್ಲಿ ಅಪ್ಪಯ್ಯ ದೀಕ್ಷಿತರು ಶಿವಾರ್ಕಮಣಿ ದೀಪಿಕಾ ಎಂಬ ವ್ಯಾಖ್ಯಾನವನ್ನು ಬರೆದಿರುವರು. ಹದಿನೆಂಟನೆಯ ಶತಮಾನದಲ್ಲಿ ಅನೇಕ ಕನ್ನಡ, ಸಂಸ್ಕೃತ ಮತ್ತು ತೆಲುಗು ಗ್ರಂಥಗಳನ್ನು ರಚಿಸಿದ ದಳವಾಯಿ ಕಳಲೆ ಸಂಜರಾಜನು ಶ್ರೀಕಂಠದೇಶಿಕರ ಮತದವನೆಂದು ಹೇಳಿಕೊಂಡಿರುವನು.

**ಶೈವ ವಿಶೇಷಾದ್ವೈತ:** ಶುದ್ಧಶೈವ, ಕಾಶ್ಮೀರಶೈವ, ಕಾಳಾಮುಖ-ಪಾಶುಪತ, ನಾಥಪಂಥ, ಶ್ರೀಕಣ್ಠಶಿವರ ಶಕ್ತಿ ವಿಶಿಷ್ಟಾದ್ವೈತ ಮುಂತಾದ ಶೈವಮತಗಳೆಲ್ಲವೂ ಆನ್ಧ್ರ ಕರ್ಣಾಟಕ ದೇಶಗಳಲ್ಲಿ ಪ್ರಚಾರದಲ್ಲಿದ್ದು ವೀರಶೈವ ಮತಕ್ಕೆ ಪೀಠಿಕೆ ಹಾಕಿದವು. ರೇಣುಕಾಚಾರ್ಯ (ರೇವಣಸಿದ್ಧ), ಮರುಳಸಿದ್ಧ, ಏಕೋರಾಮ, ವಿಶ್ವೇಶ್ವರ ಮತ್ತು ಪಣ್ಡಿತಾರಾಧ್ಯರೆಂಬ ಪಂಚಾಚಾರ್ಯರು ಕ್ರಿ.ಶ. ೧೧-೧೨ನೆಯ ಶತಮಾನಗಳಲ್ಲಿ ರಾಜೇನ್ದ್ರಚೋಳ, ಆರನೆಯ ವಿಕ್ರಮಾದಿತ್ಯ, ಬಿಜ್ಜಳ, ಗೋರಕ್ಷನಾಥ ಮುಂತಾದವರ ಸಮಕಾಲೀನ ರಾಗಿದ್ದರೆಂದು ನಿರ್ಧರಿಸಲು ಅವಕಾಶವಿದೆ. ಈ ಪಂಚಾಚಾರ್ಯರು ಪರಶಿವನ ಪಂಚಮುಖಗಳಿಂದ ಸಮುದ್ಭವಿಸಿದರೆಂದೂ ರೇಣುಕರು (ರೇವಣ) ರಂಭಾ ಪುರಿಯ ವೀರಸಿಂಹಾಸನವನ್ನೂ, ದಾರುಕ (ಮರುಳಸಿದ್ಧ)ರು ಉಜ್ಜಯನೀ ಧರ್ಮಸಿಂಹಾಸನವನ್ನೂ, ಏಕೋರಾಮರು ಹಿಮವತ್ಕೇದಾರದ ವೈರಾಗ್ಯ ಸಿಂಹಾಸನವನ್ನೂ, ಪಂಡಿತಾರಾಧ್ಯರು ಶ್ರೀಶೈಲದ ಸೂರ್ಯಸಿಂಹಾಸನ ವನ್ನೂ ವಿಶ್ವಾರಾಧ್ಯರು ಕಾಶಿಯ ಜ್ಞಾನಸಿಂಹಾಸನವನ್ನೂ ಸ್ಥಾಪಿಸಿದರೆಂದು ಹೇಳಲಾಗಿದೆ. ಅಗಸ್ತ್ಯ ಮತ್ತು ದುರ್ವಾಸರು ಬ್ರಹ್ಮಸೂತ್ರಗಳಿಗೆ ವೃತ್ತಿ ಗಳನ್ನು ಬರೆದರು. ಶ್ರೀಪತಿ ಪಣ್ಡಿತನು ಶ್ರೀಕರ ಭಾಷ್ಯದಲ್ಲಿ ವೀರಶೈವಮತದ ತತ್ವಗಳನ್ನು ಸಂಕ್ಷೇಪವಾಗಿ ಹೀಗೆ ಸೂಚಿಸಿರುವನು:

> "ತಾನ್ತ್ರಿಕ ತಪ್ತಲಿಂಗ ಶೂಲಡಮರುಕ ಶಂಖಚಂಕ್ರಾಂಕ ನಿಷೇಧಪೂರ್ವಕ, ಶ್ರೌತ ಭಸ್ಮರುದ್ರಾಕ್ಷಧಾರಣಪೂರ್ವಕ . . . ನಿಗಮಾಗಮೋಭಯ ವೇದಾನ್ತ ಪ್ರತಿಪಾದಿತ ಭಕ್ತಿ ಕ್ರಿಯಾಜ್ಞಾನಕಾಣ್ಡತ್ರಯವಿಹಿತ ಸ್ಥೂಲಸೂಕ್ಷ್ಮ ಚಿದಚಿತ್ಪಂಚಪ್ರಕಾಶ ಷಟ್‌ಸ್ಥಲ ಪರಶಿವ ಸಾಕ್ಷಾತ್ಕಾರ ಕಾರಣ, ಬಹುಜನ್ಮಕೃತ ಶಿವಾರ್ಪಿತ ಯಜನಯಾಜನ ತಪೋಧ್ಯಾನಾಧ್ಯನೇಕ ಪುಣ್ಯಪೂರ್ವಫಲಕ ಶರೀರ ತ್ರಯಗತಮಲಧ್ವಂಸಕ ಕಾರುಣ್ಯ ಕಲ್ಯಾಣ ಕೈವಲ್ಯವಿಭೂತಿತ್ರಯಪ್ರದಾಯಕ ಅಷ್ಟಾವರಣ ಪಂಚಾಚಾರ್ಯ ಸದ್ಗುರು ಕರುಣಾಕಟಾಕ್ಷಲಬ್ಧಶಕ್ತಿ ಪಾತಾದ್ಭವ ಚ್ಛಿನ್ನ ಪರಶಿವೇಷ್ಟಲಿಂಗಧಾರಣಾತ್ಮಕ ಪಾಶುಪತ ದೀಕ್ಷಾ."

ಶ್ರೀಪತಿ ಪಣ್ಡಿತನು ದ್ವೈತಾದ್ವೈತ ಅಥವಾ ಭೇದಾಭೇದ ವಾದವನ್ನಂಗೀ ಕರಿಸಿ ಮಾಯಾವಾದ ಮುಂತಾದವುಗಳನ್ನು ನಿರಾಕರಿಸಿದನು. ಶ್ರೀಪತಿ ಪಂಡಿತನು ಆರನೆಯ ವಿಕ್ರಮಾದಿತ್ಯನ ದಂಡನಾಯಕನಾದ ಅನಂತಪಾಲನು ಬೆಜವಾಡದಲ್ಲಿ ಆಳುತ್ತಿದ್ದ ಕಾಲದಲ್ಲಿ (ಕ್ರಿ.ಶ. ೧೧೨೦) ಪವಾಡಗಳನ್ನು ತೋರಿ ಸಿದನೆಂದು ಪಲ್ಲಿಕೇತನ ಶಾಸನಗಳಿಂದ ತಿಳಿದುಬರುವದರಿಂದ ರಾಮಾನುಜಾ ಚಾರ್ಯರ ಸಮಕಾಲೀನನು. ಶ್ರೀಪತಿಗೆ ಹಿಂದೆ ಮಂಚಣ್ಣಪಂಡಿತನೂ

ಅನಂತರ ಮಲ್ಲಿಕಾರ್ಜುನಪಂಡಿತನೂ ಅನೇಕ ಗ್ರಂಥಗಳನ್ನು ರಚಿಸಿದಂತೆ ಕಂಡುಬರುವದು. ಮಲ್ಲಿಕಾರ್ಜುನಪಂಡಿತನು ಬಸವೇಶ್ವರನ ಸಮಕಾಲೀನನಾಗಿದ್ದು ತೆಲುಗಿನಲ್ಲಿ ಶಿವತತ್ವಸಾರವನ್ನೂ, ಕನ್ನಡದಲ್ಲಿ ಸ್ತೋತ್ರಗಳನ್ನೂ ರಚಿಸಿದನು. ಆರಾಧ್ಯ ಸಂಪ್ರದಾಯದಲ್ಲಿ ಸ್ಮಾರ್ತಮಾರ್ಗ, ಭಕ್ತಿಮಾರ್ಗಗಳೆರಡೂ ಪ್ರಧಾನವಾಗಿವೆ. ಕಾಳಹಸ್ತಿ ಪಣ್ಡಿತ, ಸೋಸಲೆ ರೇವಣಾರಾಧ್ಯ, ಸನ್ನಿಕೇಶ್ವರ ಶಿವಾಚಾರ್ಯ, ನಿಜಗುಣಾರಾಧ್ಯ, ಭವಾನೀಶಂಕರಾರಾಧ್ಯ ಮುಂತಾದವರು ಈ ಆರಾಧ್ಯ ಸಂಪ್ರದಾಯ ಗ್ರಂಥಗಳನ್ನು ರಚಿಸಿರುವರು.

ಕ್ರಿಸ್ತಶಕ ಹನ್ನೆರಡನೆಯ ಶತಮಾನದಲ್ಲಿ ಬಸವೇಶ್ವರ ಮೊದಲಾದ ಶರಣರು ವೀರಶೈವಮತಕ್ಕೆ ಹೊಸರೂಪವನ್ನು ಕೊಟ್ಟರು. ಹನ್ನೊಂದನೆಯ ಶತಾಬ್ದದಲ್ಲಿಯೇ ಚಾಳುಕ್ಯ ಇಮ್ಮಡಿ ಜಯಸಿಂಹನ ಕಾಲದಲ್ಲಿ ಶಂಕರದಾಸಿಮಯ್ಯ, ಜೇಡರದಾಸಿಮಯ್ಯ, ಸುಗ್ಗಲದೇವಿ ಮುಂತಾದವರು ಪೊಟ್ಟಲಕೆರೆಯಲ್ಲಿ ಪ್ರಸಿದ್ಧರಾಗಿದ್ದರು. ಬಸವೇಶ್ವರನ ಚರಿತ್ರೆಯು ಹರಿಹರನ ಬಸವರಾಜರಗಳೆ, ಪಾಲ್ಕುರಿಕೆ ಸೋಮನಾಥನ ಬಸವಪುರಾಣ ಮತ್ತು ಸಿಂಗಿರಾಜಪುರಾಣಗಳಲ್ಲಿ ಬೇರೆ ಬೇರೆ ವಿಧವಾಗಿ ಕಂಡುಬರುವದು. ವೀರಶೈವರ ಪ್ರತಿಕಕ್ಷಿಗಳಾದ ಜೈನರೂ ತಮ್ಮ ಗ್ರಂಥಗಳಲ್ಲಿ ಕೆಲವು ವಿಷಯಗಳನ್ನು ಹೇಳಿಕೊಂಡಿರುವರು. ಕಮ್ಮೆಕುಲದ ಮಾದಿರಾಜನೆಂಬ ಶಿವಬ್ರಾಹ್ಮಣರಿಗೆ ಬಸವೇಶ್ವರನು ಅವತರಿಸಿ, ಅಜ್ಜಿಯ ಪೋಷಣೆಯಲ್ಲಿ ಬೆಳೆದು ಮಾವನಾದ ಸಿದ್ಧ ಅಥವಾ ಬಲದೇವನೆಂಬ ದಂಡನಾಯಕನ ಸಹಾಯದಿಂದ ಮಂಗಳವೇಡೆಯ ಬಿಜ್ಜಲರಾಯನ ಭಂಡಾರದಲ್ಲಿ ಕರಣಿಕನಾಗಿ ಅನಂತರ ಭಂಡಾರದ ಸರ್ವಾಧಿಕಾರಿಯಾದನು. ಈತನ ಭಕ್ತ್ಯತಿಶಯವು ನಾನಾದೇಶಗಳ ಶಿವಭಕ್ತರನ್ನು ಆಕರ್ಷಿಸಿತು. ಸ್ವಲ್ಪಕಾಲದ ಮೇಲೆ ಬಿಜ್ಜಳನು ಶರಣರಿಗೆ ಅನ್ಯಾಯಮಾಡಿದನೆಂದು ಬಸವೇಶ್ವರನು ಕೋಪಗೊಂಡು ಕಲ್ಯಾಣಕಟಕವು ಹಾಳಾಗಬೇಕೆಂದೂ ಚಾಳುಕ್ಯರಾಜ್ಯವು ನಾಶವಾಗಬೇಕೆಂದೂ ಶಾಪವನ್ನಿತ್ತು ಕೂಡಲಸಂಗಮಕ್ಕೆ ಹೋಗಿ ಲಿಂಗೈಕ್ಯನಾದನೆಂದು ಹೇಳಲಾಗಿದೆ. ಬಸವೇಶ್ವರನ ಸಮಕಾಲೀನರೂ ವಚನಕಾರರೂ ಆದ ಕೊಂಡಗೂಳಿ ಕೇಶಿರಾಜ, ಸಿದ್ಧರಾಮ, ವರದಾನಿಗುಡ್ಡಮ್ಮ, ಏಕಾಂತದ ರಾಮಯ್ಯ, ಮಲ್ಲಿಕಾರ್ಜುನ ಪಂಡಿತರ ಸಂಬಂಧವಾದ ಶಾಸನಗಳು ಕಂಡುಬರುವವು. ಇದು ವೀರಶೈವಮತದ ಪ್ರಥಮ ಘಟ್ಟ. ಹದಿಮೂರನೆಯ ಶತಾಬ್ದದಲ್ಲಿ ಪಾಲ್ಕುರಿಕೆ ಸೋಮನಾಥ, ಹರಿಹರ, ರಾಘವಾಂಕ, ಕೆರೆಯ ಪದ್ಮರಸ ಮುಂತಾದವರು ಹೊಯ್ಸಳ—ಕಾಕತೀಯ ಸಾಮ್ರಾಜ್ಯಗಳಲ್ಲಿ ವೀರಶೈವಮತವನ್ನು ಪ್ರಚಾರಮಾಡಿದರು. ಹದಿನೈದನೆಯ ಶತಾಬ್ದವು

ವೀರಶೈವಚರಿತ್ರೆಯಲ್ಲಿ ಎರಡನೆಯ ಘಟ್ಟ, ಇಮ್ಮಡಿ ದೇವರಾಯನ ಆಸ್ಥಾನದಲ್ಲಿ ನೂತನರೆಂದೆನಿಸಿಕೊಂಡ ಲಕ್ಕಣ್ಣ, ಜಕ್ಕಣ್ಣ, ಚಾಮರಸ, ಕುಮಾರ ಬಂಕನಾಥ, ಮಗ್ಗೆಯ ಮಾಯಿದೇವ ಮುಂತಾದವರು ಕನ್ನಡ ಮತ್ತು ಸಂಸ್ಕೃತ ಗ್ರಂಥಗಳನ್ನು ರಚಿಸಿರುವರು. ಅನಂತರ ೧೬-೧೭ ಶತಾಬ್ದಗಳಲ್ಲಿ ವೀರಶೈವಮತದ ಮೂರನೆಯ ಘಟ್ಟವು ಕಂಡುಬರುವದು. ಈ ಸಮಯದಲ್ಲಿ ತೋಂಟದ ಸಿದ್ಧೇಶ್ವರರೂ ಅವರ ಶಿಷ್ಯರಾದ ಬೋಳಬಸವೇಶ, ಚೆನ್ನಂಜೆದೇವ, ವಿರಕ್ತ ತೋಂಟದಾರ್ಯ, ಗುಮ್ಮಳಾಪುರದ ಸಿದ್ಧವೀರ, ಗುಬ್ಬಿ ಮಲ್ಲಣಾರ್ಯ, ಹಂಪೆಯ ವಿರೂಪಾಕ್ಷಪಂಡಿತ ಮುಂತಾದವರು ದಕ್ಷಿಣದೇಶದಲ್ಲೆಲ್ಲ ವೀರಶೈವಮತವನ್ನು ಪ್ರಚಾರಮಾಡಿದರು. ಕೆಳದಿ, ಚಿತ್ರದುರ್ಗ, ಎಳಂದೂರು, ಪುಂಗನೂರು, ಮಾಗಡಿ ಮುಂತಾದ ಪಾಳೆಯಗಾರರು ವೀರಶೈವಮತವನ್ನು ಪ್ರೋತ್ಸಾಹಿಸಿದರು. ಮೈಸೂರು ಅರಸರೂ ಕೂಡ ಅದೇ ರೀತಿಯಾಗಿ ಪೋಷಿಸುತ್ತಿರುವರು.

ವೀರಶೈವಮತದಲ್ಲಿ ಕಂಡುಬರುವ ವೈಶಿಷ್ಟ್ಯವೇನೆಂದರೆ—ಜಾತಿ ಮತ್ತು ವರ್ಣಾಶ್ರಮ ತಾರತಮ್ಯ ವ್ಯತ್ಯಾಸಗಳಿಗೆ ಅವಕಾಶವಿಲ್ಲದಿರುವುದು; ಭಕ್ತಿ ಪ್ರಾಧಾನ್ಯ; ಸ್ತ್ರೀಸ್ವಾತಂತ್ರ್ಯ, ಕಾಯಕದ ಮಹತ್ವ; ಜಾತಾಶೌಚ ಮೃತಾಶೌಚ ಸ್ಪೃಷ್ಟಾಸ್ಪೃಷ್ಟಭಾವಗಳನ್ನು ನಿರಾಕರಿಸಿ ಹರಿಜನೋದ್ಧಾರ ಮಾಡಿದುದು; ದೇಶಭಾಷೆಗಳಾದ ಕನ್ನಡ ತೆಲುಗು ಮುಂತಾದವುಗಳಲ್ಲಿ ಸುಲಭಶೈಲಿಯಲ್ಲಿ ಪಾಮರರಿಗೂ ನೀತಿಬೋಧೆ ಮಾಡುವದಕ್ಕಾಗಿ ನೂತನ ಸಾಹಿತ್ಯವನ್ನು ಸೃಷ್ಟಿಸಿದುದು.

**ವೈಷ್ಣವಮತ :** ಋಕ್ಸಂಹಿತೆಯಲ್ಲಿ ಐದು ಅನುವಾಕಗಳು ಮಾತ್ರ ವಿಷ್ಣುದೇವತಾಕಗಳಾಗಿವೆ. ಆದುದರಿಂದ ಕೆಲವರು ವಿಷ್ಣುವು "ಪಿಶನ್" ಎಂಬ ಸುಮೇರಿಯ ಸಂಸ್ಕೃತಿಯ ಮತ್ಸ್ಯದೇವತೆಯೆಂದೂ, ನಾರಾಯಣನು ನೀರಿನ ಸಂಬಂಧ ಉಳ್ಳವನಾದುದರಿಂದ ಸಮುದ್ರಯಾನಪನ್ನರಿತಿದ್ದ ದ್ರಾವಿಡರ ದೇವತೆಯೆಂದೂ ಆದುದರಿಂದ ವೈಷ್ಣವಮತವು ಅನಾರ್ಯವೆಂದೂ ಊಹಿಸುವರು. ಆದರೆ ವೇದದಲ್ಲಿ ವಿಷ್ಣುವು ಉಪೇನ್ದ್ರನು, ಇನ್ದ್ರನ ಸಖನು, ಆದಿತ್ಯರಲ್ಲೊಬ್ಬನಾದ ಭಗನಿಗೆ ಸಂಬಂಧ ಹೊಂದಿರುವನು. ಬ್ರಾಹ್ಮಣಗಳಲ್ಲಿ ವಿಷ್ಣುವು ಆದಿತ್ಯ ಮತ್ತು ಯಜ್ಞದೇವತೆ. ಅರಣ್ಯಕ ಮತ್ತು ಕೆಲವು ಉಪನಿಷತ್ತುಗಳಲ್ಲಿ ಪಾಂಚರಾತ್ರಮತವನ್ನು ಪ್ರಚಾರಮಾಡಿದ ನಾರಾಯಣ ಗೋತ್ರದವನಾದ ನಾರಾಯಣನೆಂಬ ಋಷಿಯು ವಿಷ್ಣುವಿನ ಅಂಶವೆಂದು ಹೇಳಿದೆ. ಮಹಾಭಾರತದಲ್ಲಿ ಈ ನಾರಾಯಣ ಋಷಿಯು ತನ್ನ ಶಿಷ್ಯರಾದ

ನರ, ಉಪರಿಚರವಸು, ಚಿತ್ರಶಿಖಣ್ಡಿ ಎಂಬವರಿಗೆ ಸಾಂಖ್ಯಯೋಗತತ್ವಗಳನ್ನೊಳಗೊಂಡ ಪಾಂಚರಾತ್ರಮತವನ್ನು ಬೋಧಿಸಿದನೆಂದು ಕಂಡುಬರುವದು. ಪಾಂಚರಾತ್ರಮತವು ವೈದಿಕವೇ ಎಂಬ ವಿಷಯದಲ್ಲಿ ಬಹುಕಾಲದಿಂದಲೂ ಚರ್ಚೆ ನಡೆಯುತ್ತಿದೆ. ಬ್ರಹ್ಮಸೂತ್ರಗಳ ತರ್ಕಪಾದದಲ್ಲಿ ಪಾಂಚರಾತ್ರಮತ ನಿರಾಕರಣೆಯಿರುವುದೆಂದು ಕೆಲವರು ಅಭಿಪ್ರಾಯಪಡುವರು. ಇತರರು ಪಾಂಚರಾತ್ರಮತವೇ ಬಾದರಾಯಣರಿಗೆ ಸಮ್ಮತವೆಂದು ಹೇಳುವರು.[೫೫]

ಈ ಪಾಂಚರಾತ್ರಮತವನ್ನು ಸಾತ್ವತ—ವೃಷ್ಣಿಕುಲದ ವಾಸುದೇವ—ಕೃಷ್ಣನೂ ಹೆಚ್ಚಾಗಿ ಪ್ರಚಾರಮಾಡಿದನು. ವಾಸುದೇವ—ಕೃಷ್ಣನ ಅಣ್ಣನಾದ ಸಂಕರ್ಷಣ, ಮಗಮೊಮ್ಮಕ್ಕಳಾದ ಪ್ರದ್ಯುಮ್ನ, ಅನಿರುದ್ಧರು ಚತುರ್ವ್ಯೂಹಗಳೆಂದು ಗಣಿಸಿ ಕ್ರಿ.ಶ. ೪ ನೆಯ ಶತಾಬ್ದದ ವರೆಗೂ ಚತುರ್ವ್ಯೂಹಗಳ ಪೂಜೆಯೇ ಭರತಖಂಡದಲ್ಲಿ ವ್ಯಾಪಿಸಿದ್ದಿತು. ಅನಂತರ ಅವತಾರಗಳು ಮುಖ್ಯವಾದುವು. ಕ್ರಿ.ಶ. ೬ ನೆಯ ಶತಾಬ್ದದ ವರೆಗೂ ಶ್ರೀರಾಮನನ್ನು ವಿಷ್ಣುವಿನ ಅವತಾರವೆಂದು ಗಣಿಸಿರಲಿಲ್ಲ. ಹರಿವಂಶದಲ್ಲಿ ಆರು, ಮಹಾಭಾರತದಲ್ಲಿ ಆರು ಅಥವಾ ಹತ್ತು, ವಾಯುಪುರಾಣದಲ್ಲಿ ಹನ್ನೆರಡು, ಶ್ರೀಭಾಗವತದಲ್ಲಿ ಇಪ್ಪತ್ತೆರಡು ಅವತಾರಗಳು ಉಕ್ತವಾಗಿವೆ. ಈ ಅವತಾರ ಕಥೆಗಳಿಗೆಲ್ಲ ಯಜ್ಞಸಂಬಂಧವಾದ ವೇದಮಂತ್ರಗಳೇ ಮೂಲ. ಪತಂಜಲಿಯ ಮಹಾಭಾಷ್ಯ, ಬೌದ್ಧರ ಜಾತಕಕಥೆಗಳು ಮತ್ತು ಜೈನಪುರಾಣಗಳೂ ಕಂಸವಧಾ, ಯಾದವ ಕುಲನಾಶ ಮುಂತಾದ ಕಥೆಗಳನ್ನು ಸೂಚಿಸಿವೆ. ಕ್ರಿ.ಪೂ. ೨ ನೆಯ ಶತಾಬ್ದದ ಬೆಸ್ನಗರ್ ಶಾಸನ, ಘೋಸುಂಡಿಶಾಸನಗಳಿಂದ ಗ್ರೀಕರು ಕೂಡ ಭಾಗವತ

---

[೫೫] ಆಗ್ನೇಯಂ ಪಾಂಚರಾತ್ರಂತು ದೀಕ್ಷಾಯುಕ್ತಂಚ ತಾನ್ತ್ರಿಕಮ್ | ಅವೈದಿಕತ್ವಾತ್ತನ್ತ್ರಂತತೋ ವೈಖಾನಸೇನತು | ಸೌಮ್ಯೇನವೈದಿಕೇನೈವ ದೇವದೇವಂಸಮರ್ಚಯೇತ್ || ಶೈವಂಪಾಶುಪತಂಚೈವ ಬೌದ್ಧಮಪ್ಯಾರ್ಹತಂತಥಾ | ಕಾಪಾಲಂ ಪಾಂಚರಾತ್ರಂ ಚೇತ್ಯೇವಂ ಪಾಷಣ್ಡ ಶಾಸ್ತ್ರತಃ || ವೈದಿಕಂ ತಾನ್ತ್ರಿಕಂಚೇತಿ ವಿಭಾಗಶರಣಾದಪಿ | ಗಮ್ಯತೇಪಾಂಚರಾತ್ರಸ್ಯ ವೇದಬಾಹ್ಯತ್ವನಿಶ್ಚಯಃ || ಶೈವಂ ಪಾಶುಪತಂಸೌಮ್ಯಂ ಲಾಗುಡಂಚ ಚತುರ್ವಿಧಮ್ | ತನ್ತ್ರಭೇದಸ್ಸಮುದ್ದಿಷ್ಟಃ ಸಂಕರಂ ನ ಸಮಾಚರೇತ್ || ಭಾಕ್ತಂಭಾಗವತಂಚೈವ ಸಾತ್ವತಂಚತ್ರಿಧಾಸ್ಮೃತಮ್ | ಇತ್ಯೇವಂ ತನ್ತ್ರಭೇದೋಕ್ತಿಃ ಪಾಂಚರಾತ್ರೇಽವಿದೃಶ್ಯತೇ || ಶ್ರುತಿಸ್ಮೃತಿಪ್ರತಿಕ್ಷಿಪ್ತ ಜೀವಜನ್ಮಾದಿಗೋಚರಮ್ | ನ್ಯಾಯಹೀನಂ ವಚಸ್ತಥ್ಯಮಿತಿ ಹಾಸಮಿದಂಮಹತ್ || ...ಶ್ರುತಿಮೂರ್ಧ್ನಿ ಪ್ರಸಿದ್ಧೇನ ವಾಸುದೇವೇನಭಾಷಿತಮ್ ! ತನ್ತ್ರಂ ಮಿಥ್ಯೇತಿ ವಕ್ತುಂನಃ ಕಥಂಜಿಹ್ವಾಪ್ರವರ್ತತೇ || . . . ಶ್ರೀಮತ್ಯುತ್ತಾಗಿರೇರ್ಮೂರ್ಧ್ನಿ ಶ್ರೀಮತ್ಯಾಯತನೇ ಹರಿಃ | ಶಾಣ್ಡಿಲ್ಯಮೃಷಿಮಾಸೀನಂ ಪ್ರಣಮ್ಯ ಮುನಯೋಽಬ್ರುವನ್ ||—ಇತ್ಯಾದಿ.

ಮತವನ್ನು ಸ್ವೀಕರಿಸಿದರೆಂದು ತಿಳಿದುಬರುವದು. ಗುಪ್ತವಂಶದವರು ಪರಮ ಭಾಗವತರಾಗಿದ್ದರು. ಬಾಣನೂ ವರಾಹಮಿಹಿರನೂ ಪಾಂಚರಾತ್ರ—ಭಾಗವತರ ಉಲ್ಲೇಖನೆ ಮಾಡಿರುವರು. ಕ್ರಿ.ಶ. ೮-೯ ನೆಯ ಶತಾಬ್ದಗಳಲ್ಲಿ ಅಹಿರ್ಬುಧ್ನ್ಯ ಸಂಹಿತಾ, ಸಾತ್ವತ ಸಂಹಿತಾ, ನಾರದ ಪಾಂಚರಾತ್ರ, ಪೌಷ್ಕರ ಸಂಹಿತಾ, ಜಯಾಖ್ಯ ಸಂಹಿತಾ, ನಾರದಭಕ್ತಿಸೂತ್ರ, ಶಾಣ್ಡಿಲ್ಯಸೂತ್ರ ಮುಂತಾದ ಪಾಂಚರಾತ್ರಗ್ರಂಥಗಳೂ ಅನೇಕ ವೈಷ್ಣವೋಪನಿಷತ್ತುಗಳೂ ಹುಟ್ಟಿದವು.

ವೈಷ್ಣವ ಮತಾನುಯಾಯಿಗಳಲ್ಲಿ ಸ್ಮಾರ್ತಭಾಗವತರು ಅದ್ವೈತಿಗಳು. ಶ್ರೀ ವೈಷ್ಣವರು ವಿಶಿಷ್ಟಾದ್ವೈತಿಗಳು. ಸದ್ವೈಷ್ಣವರು ದ್ವೈತಿಗಳು. ನಿಂಬಾರ್ಕ ಮತದವರು ಭೇದಾಭೇದವಾದಿಗಳು. ವಲ್ಲಭಾಚಾರ್ಯಮತದವರು ಶುದ್ಧಾದ್ವೈತಿಗಳು. ಚೈತನ್ಯಮತದವರು ಅಚಿನ್ತ್ಯ ಭೇದಾಭೇದವಾದಿಗಳು ಅಥವಾ ಭಾವಾದ್ವೈತಿಗಳು.

**ಸ್ಮಾರ್ತಭಾಗವತ ಸಂಪ್ರದಾಯ :** ಷಣ್ಮತಸ್ಥಾಪನಾಚಾರ್ಯರಾದ ಶ್ರೀ ಶಂಕರರು ಪರಮವೈಷ್ಣವರೂ ಆಗಿದ್ದರೆಂದು ಹಿಂದೆಯೇ ಹೇಳಿದೆ. ಶ್ರೀ ಶಂಕರರ ಪ್ರಿಯಶಿಷ್ಯರಾದ ಪದ್ಮಪಾದಾಚಾರ್ಯರೇ ಈ ಸಂಪ್ರದಾಯ ಪ್ರವರ್ತಕರು. ಅನಂತರ ಪ್ರಸಿದ್ಧರಾದ ಅಗ್ನಿಮೂರ್ಧ ಕೃಷ್ಣಾನನ್ದರು ತಳಕಾಡು ಮುಳುಬಾಗಿಲು, ತೀರ್ಥಹಳ್ಳಿ ಮುಂತಾದ ಸ್ಥಳಗಳಲ್ಲಿ ಮಠಗಳನ್ನು ಸ್ಥಾಪಿಸಿದರೆಂದು ಶಾಸನಗಳಿಂದ ತಿಳಿದುಬರುವದು. ಈ ಮತದ ಪ್ರಕಾರ ಬ್ರಹ್ಮಸೂತ್ರಗಳಿಗೂ ಶ್ರೀ ಭಾಗವತಕ್ಕೂ ಶ್ರೀ ಶುಕಾಚಾರ್ಯರ ಭಾಷ್ಯಗಳಿವೆ. ಕನ್ನಡಕವಿಗಳಾದ ರುದ್ರಭಟ್ಟ, ಲಕ್ಷ್ಮೀಶ, ಕುಮಾರವ್ಯಾಸ, ನಿತ್ಯಾತ್ಮ ಶುಕಯೋಗಿಗಳು ಸ್ಮಾರ್ತಭಾಗವತರಾಗಿದ್ದರು. ಸುಮಾರು ಕ್ರಿ.ಶ. ೯ ನೆಯ ಶತಾಬ್ಧದಲ್ಲಿ ಅಚಲಾನನ್ದ ದಾಸರೆಂಬುವರು ಹರಿದಾಸಕೂಟವನ್ನು ಆರಂಭಿಸಿದರು.

**ವೈಷ್ಣವ ವಿಶಿಷ್ಟಾದ್ವೈತ :** ಸುಮಾರು ಕ್ರಿ.ಶ. ೬ ನೆಯ ಶತಾಬ್ದದಿಂದ ತಮಿಳುದೇಶದ ಆಳ್ವಾರರೆಂಬ ವಿಷ್ಣುಭಕ್ತರು ಭಾಗವತಮತವನ್ನು ಪ್ರಚಾರ ಮಾಡಲು ಆರಂಭಿಸಿದರು. ಇವರಲ್ಲಿ ಕೆಲವರು ಬ್ರಾಹ್ಮಣೇತರರು. ಪೂದತ್ತಾಳ್ವಾರ್, ಪೆಯ್ಯಾಳ್ವಾರ್, ಪೊಯ್ಗೈ ಆಳ್ವಾರರು ಮೊದಲಿನ ಆಳ್ವಾರರು. ಎಂಟನೆಯ ಶತಾಬ್ದದಲ್ಲಿ ತಿರುಪ್ಪಾಣ, ತಿರುಮೊಟಿಶೈ, ತಿರುಮಂಗೈ, ಕುಲಶೇಖರ, ತೊಣ್ಡರಡಿಪ್ಪೊಡಿ, ಮಧುರಕವಿ, ಪೆರಿಯಾಳ್ವಾರ್, ಆಣ್ಡಾಳ್ ಅಥವಾ ಗೋದಾದೇವಿಯೆಂಬುವರಿದ್ದರು. ಒಂಬತ್ತು ಹತ್ತನೆಯ ಶತಾಬ್ದಗಳಲ್ಲಿ ನಮ್ಮಾಳ್ವಾರ್, ನಾಥಮುನಿ, ಉಯ್ಯಕೊಂಡಾರ್, ಆಳವಂದಾರರೂ,

ಹನ್ನೊಂದನೆಯ ಶತಾಬ್ದದಲ್ಲಿ ಪೆರಿಯನಂಬಿ, ಮೊದಲಿಯಾಂಡಾನ್, ಮಣಕ್ಕಾಲನಂಬಿ, ತಿರುಕ್ಕೋಟಿಯೂರ್‌ನಂಬಿ ಮುಂತಾದವರು ಶ್ರೀರಾಮಾನುಜರ ಸಮಕಾಲೀನರಾಗಿದ್ದರು. ತಿರುಮೊಟಿಶೈ ಆಳ್ವಾರರ ನಾನ್ಮುಖನ್ ತಿರುವಂದಾದಿ, ತಿರುಚ್ಛಂದವಿರುತ್ತಂ, ನಮ್ಮಾಳ್ವಾರರ ಚತುರ್ವೇದಗಳ ಸಾರರೂಪವಾದ ತಿರುವಾಯ್ಮೊಟಿ, ಕುಲಶೇಖರರ ಪೆರುಮಾಳ್ ತಿರುಮೊಟಿ, ಮುಕುನ್ದಮಾಲಾ, ವಿಷ್ಣುಚಿತ್ತರ ತಿರುಪ್ಪಲ್ಲಾಂಡು, ಗೋದಾದೇವಿಯ ಗೀತೆಗಳು, ತಿರುಮಂಗೈ ಆಳ್ವಾರರ ಪೆರಿಯತಿರುಮೊಟಿ ಮುಂತಾದ ಗ್ರಂಥಗಳಿಗೆ ದ್ರಾವಿಡವೇದವೆಂಬ ಹೆಸರು ಬಂದಿದೆ.

ಆಳ್ವಾರರ ಅನಂತರ ಆಚಾರ್ಯ ಪರಂಪರೆಯು ನಾಥಮುನಿಗಳಿಂದ ಆರಂಭವಾಯಿತು. ಇವರ ಪೌತ್ರರಾದ ಯಾಮುನಾಚಾರ್ಯರು (ಆಳವಂದಾರ್) ಸಿದ್ಧಿತ್ರಯ, ಆಗಮಪ್ರಾಮಾಣ್ಯ, ಗೀತಾರ್ಥಸಂಗ್ರಹ, ಮಹಾ ಪುರುಷನಿರ್ಣಯ ಮುಂತಾದ ಗ್ರಂಥಗಳನ್ನು ರಚಿಸಿದರು. ಇವರ ಮೊಮ್ಮಗಳಾದ ಭೂದೇವಿಯು ಕೇಶವ ಸೋಮಯಾಜಿಗಳ ಪತ್ನಿಯಾದಳು. ಈ ದಂಪತಿಗಳಿಗೆ ಕ್ರಿ.ಶ. ೧೦೧೭ ರಲ್ಲಿ ರಾಮಾನುಜಾಚಾರ್ಯರು ಜನಿಸಿದರು. ರಾಮಾನುಜರು ಸ್ವತನ್ತ್ರ ಭೇದಾಭೇದವಾದಿಗಳೂ ವೈಜಯನ್ತೀ ನಿಘಣ್ಟುಕಾರರೂ ಆದ ಕಂಚಿಯ ಯಾದವಪ್ರಕಾಶರ ಶಿಷ್ಯರಾಗಿದ್ದು ಅನಂತರ ಗುರುಶಿಷ್ಯರಿಗೆ ಭಿನ್ನಾಭಿಪ್ರಾಯಗಳು ಉಂಟಾದುದರಿಂದ ರಾಮಾನುಜರು ಮಹಾಪೂರ್ಣ, ಗೋಷ್ಠೀಪೂರ್ಣ ತಿರುಮಲೆನಂಬಿ ಮುಂತಾದವರಿಂದ ಮನ್ತ್ರದೀಕ್ಷೆಯನ್ನು ಪಡೆದು ದ್ರಾವಿಡ ಪ್ರಬಂಧಗಳ ರಹಸ್ಯಗಳನ್ನು ತಿಳಿದುಕೊಂಡರು. ಅನಂತರ ಸನ್ಯಾಸವನ್ನು ಸ್ವೀಕರಿಸಿ ಯಾಮುನಾಚಾರ್ಯರ ಇಚ್ಛೆಯಂತೆ ಗ್ರಂಥರಚನೆ ಮಾಡಲು ಆರಂಭಿಸಿದರು. ಇವರ ಗ್ರಂಥಗಳ ಮಂಗಳಶ್ಲೋಕಗಳಿಂದ ಶ್ರೀಭಾಷ್ಯವನ್ನು ತಿರುಪತಿಯಲ್ಲೂ, ವೇದಾರ್ಥಸಂಗ್ರಹ ಗದ್ಯತ್ರಯ ಮುಂತಾದುವನ್ನು ಶ್ರೀರಂಗದಲ್ಲಿಯೂ ರಚಿಸಿದಂತೆ ಊಹಿಸಬಹುದು. ಗುರುಪರಂಪರೆ, ಎಂಬೆರುಮಾನಾರ್ ವೈಭವಂ, ಪ್ರಪನ್ನಾಮೃತಂ ಮುಂತಾದ ಗ್ರಂಥಗಳು ಚೋಳರಾಜನಾದ "ಕ್ರಿಮಿಕಣ್ಠ"ನೆಂಬವನು ಶ್ರೀವೈಷ್ಣವರನ್ನು ಹಿಂಸೆ ಮಾಡಿದನೆಂದೂ, ಆದುದರಿಂದ ಶ್ರೀರಾಮಾನುಜರು ಜೈನನಾದ ಬಿಟ್ಟಿದೇವನೆಂಬವನ ರಾಜ್ಯಕ್ಕೆ ಬಂದು ಪರವಾದಿಗಳನ್ನು ಗೆದ್ದು, ರಾಜನನ್ನು ಶ್ರೀವೈಷ್ಣವನನ್ನಾಗಿ ಮಾಡಿ, ಉತ್ತರದೇಶದಿಂದ ಅಪ್ರಮೇಯ ವಿಗ್ರಹವನ್ನು ತಂದು ಮೇಲ್ಕೋಟೆಯಲ್ಲಿ ಪ್ರತಿಷ್ಠೆಮಾಡಿದರೆಂದೂ, ಆ ಸಮಯದಲ್ಲಿ ಸಹಾಯಮಾಡಿದ ಹರಿಜನರಿಗೆ ಕೆಲವು ಹಕ್ಕುಗಳನ್ನು ದಯಪಾಲಿಸಿದರೆಂದೂ,

ಸುಮಾರು ಇಪ್ಪತ್ತು ವರ್ಷ ಮೈಸೂರು ಪ್ರಾಂತದಲ್ಲಿದ್ದು ಶ್ರೀರಂಗಕ್ಕೆ ಹಿಂತಿರುಗಿ ತಮ್ಮ ೧೨೦ ನೆಯ ವರ್ಷದಲ್ಲಿ ಪರಮಪದವಿಯನ್ನು ಪಡೆದರೆಂದೂ ಹೇಳುವವು. ಆದರೆ ಚಾರಿತ್ರಿಕ ದೃಷ್ಟಿಯಿಂದ ಪರಿಶೀಲಿಸಿದರೆ ಈ ಸಮಯ ದಲ್ಲಿ ಆಳುತ್ತಿದ್ದ ವಿಕ್ರಮಚೋಳ ಮತ್ತು ಮೂರುಕುಲೋತ್ತುಂಗರಲ್ಲಿ ಒಬ್ಬರಾದರೂ ಶ್ರೀವೈಷ್ಣವರಿಗೆ ಹಿಂಸೆಮಾಡಿದರೆಂಬುದಕ್ಕೆ ಯಾವ ಶಾಸನದ ಆಧಾರವೂ ಸಿಕ್ಕುವದಿಲ್ಲ. ಹೊಯ್ಸಳ ವಿಷ್ಣುವರ್ಧನನು ಜೈನನಾಗಿದ್ದು ಶ್ರೀವೈಷ್ಣವನಾದಮೇಲೆ ಜೈನರನ್ನು ಹಿಂಸೆಮಾಡಿದನೆಂಬುದಕ್ಕೂ ಶಾಸನಗಳ ಆಧಾರವಿಲ್ಲವೆಂದು ಹಿಂದೆಯೇ ಹೇಳಿದೆ. ಬೇಲೂರು ಶಾಸನವೂ ಕೂಡ ಮಂಗಳಶ್ಲೋಕದಲ್ಲಿ ಶಿವಕೇಶವರಿಗೆ ಅಭೇದವನ್ನು ಸೂಚಿಸುತ್ತದೆ. ಡಿಲ್ಲಿಯಲ್ಲಿ ಈ ಕಾಲದಲ್ಲಿ ಯಾವ ಸುಲ್ತಾನನೂ ಇರಲಿಲ್ಲ. ರಾಮಾನುಜರಿಗೆ ಹಿಂದೆಯೇ ಚೋಳರ ಆಳಿಕೆಯಲ್ಲಿದ್ದ ಮೈಸೂರಿನ ಪೂರ್ವಭಾಗದಲ್ಲಿ ಶ್ರೀವೈಷ್ಣವರಿದ್ದ ರೆಂದು ಮಾರೇಹಳ್ಳಿ, ತಡಿಮಾಲಂಗಿ ಮುಂತಾದ ಶಾಸನಗಳಿಂದ ತಿಳಿದು ಬರುವದು. ಆದುದರಿಂದ ರಾಮಾನುಜರು ಚೋಳರ ಹಿಂಸೆಯನ್ನು ತಪ್ಪಿಸಿ ಕೊಳ್ಳಲು ಮೈಸೂರು ಪ್ರಾಂತಕ್ಕೆ ಬರಲಿಲ್ಲವೆಂದೂ, ಇಲ್ಲಿದ್ದ ಶ್ರೀವೈಷ್ಣವ ಮತವನ್ನು ಮತ್ತಷ್ಟು ಪ್ರಬಲಮಾಡಲು ಬಂದರೆಂದು ಊಹಿಸುವುದು ಸೂಕ್ತವಾಗಿದೆ. ರಾಮಾನುಜಾಚಾರ್ಯರು ಹರಿಜನರಿಗೆ ನಿಯಮಿತಕಾಲದಲ್ಲಿ ಕೆಲವು ಹಕ್ಕುಗಳನ್ನು ಕೊಟ್ಟರೂ, ಶೂದ್ರರೂ ಕೂಡ ಪ್ರಪತ್ತಿಮಾರ್ಗದಿಂದ ಮುಕ್ತಿ ಪಡೆಯಬಹುದೆಂದು ಘೋಷಿಸಿದರೂ, ತಮ್ಮ ಗ್ರಂಥಗಳಲ್ಲಿ ದ್ರಾವಿಡ ಪ್ರಬಂಧಗಳನ್ನೆಲ್ಲೂ ಪ್ರಮಾಣವಾಗಿ ಉದಾಹರಿಸಿಲ್ಲ ಮತ್ತು ವರ್ಣಾಶ್ರಮ ವ್ಯವಸ್ಥೆಯನ್ನು ನಿರ್ಮೂಲವಮಾಡುವದಕ್ಕೂ ಯತ್ನಿಸಲಿಲ್ಲ. ಶ್ರೀಭಾಷ್ಯದಲ್ಲಿ— ಅದ್ವೈತಿಗಳು ಶೂದ್ರರಿಗೆ ಬ್ರಹ್ಮವಿದ್ಯಾಧಿಕಾರವನ್ನು ನಿರಾಕರಿಸಲು ಸಾಧ್ಯ ವಲ್ಲ. ಆದರೆ ಸಗುಣಬ್ರಹ್ಮವಾದಿಗಳು ಶೂದ್ರರಿಗೆ ಬ್ರಹ್ಮವಿದ್ಯಾಧಿಕಾರವಿಲ್ಲ ವೆಂದು ಸ್ಪಷ್ಟವಾಗಿಯೇ ಹೇಳುವರು—ಎಂದು ಹೇಳಿರುವರು.[56] ಭರತಖಂಡದ ಆಸ್ತಿಕಮತಗಳ ಆಚಾರ್ಯರೆಲ್ಲರೂ ಪರಮಕೃಪಾಳುಗಳಾಗಿದ್ದರೂ, ಸಮಾಜ ದಲ್ಲಿ ಎಂತಹ ಮಾರ್ಪಾಟನ್ನಾದರೂ ಮಾಡಲೂ ಶಕ್ತರಾಗಿದ್ದರೂ ಸಮಾಜ

---

[56] ಯೇ ತು ನಿರ್ವಿಶೇಷ ಚಿನ್ಮಾತ್ರಂ ಬ್ರಹ್ಮೈವ ಪರಮಾರ್ಥಃ, ಅನ್ಯತ್ಸರ್ವಂ ಮಿಥ್ಯಾ ಭೂತಂ . . . ಇತಿವದನ್ತಿ, ತೈಃ ಬ್ರಹ್ಮಜ್ಞಾನೇ ಶೂದ್ರಾದೇಃ ಅನಧಿಕಾರೋ ವಕ್ತುಂ ನಶಕ್ಯತೇ | . . . ಜಗದಧ್ಯಸ್ತಮಿತಿ ನಿಶ್ಚಿತ್ಯ . . . ಶೂದ್ರಾದಯೋಽಪಿ ವಿಮೋಕ್ಷ್ಯನ್ತ ಇತಿ ಶೂದ್ರಾದೀನಾಮೇವ ಬ್ರಹ್ಮವಿದ್ಯಾಯಾಮಧಿಕಾರಸ್ಸುಶೋಭನಃ ||

ಶ್ರೀ ಭಾಷ್ಯ—ಅಪಶೂದ್ರಾಧಿಕರಣ.

ವ್ಯವಸ್ಥೆಯೇ ಧರ್ಮಕ್ಕೆ ಮೂಲವಾದುದರಿಂದ ವರ್ಣಸಾಂಕರ್ಯವನ್ನು ಮಾಡಲು ಯತ್ನಿಸಲಿಲ್ಲ.

ಶ್ರೀರಾಮಾನುಜರ ಅನಂತರ ಹದಿನಾಲ್ಕನೆಯ ಶತಾಬ್ದದಲ್ಲಿ ಭಕ್ತಿ ಪ್ರಪತ್ತಿ, ವೇದಪ್ರಬಂಧಗಳ ಪ್ರಾಧಾನ್ಯಗಳಿಗನುಸಾರವಾಗಿ ಉತ್ತರ (ವಡಗಲೆ) ದಕ್ಷಿಣ (ತೆಂಗಲೆ) ಎಂಬ ಪಂಗಡಗಳುಂಟಾದುವು. ವೇದಾಂತ ದೇಶಿಕರೆಂದೆನಿಸಿದ ವೇಂಕಟನಾಥರು ನೂರೆಂಟು ಗ್ರಂಥಗಳನ್ನು ರಚಿಸಿದರು. ಪಿಳ್ಳೈಲೋಕಾಚಾರ್ಯರು ಪ್ರಪತ್ತಿ ಮಾರ್ಗವನ್ನು ಬೋಧಿಸುವ ತತ್ವತ್ರಯ, ಮುಮುಕ್ಷುಪ್ಪಡಿ, ಅರ್ಥಪಂಚಕ ಇತ್ಯಾದಿ ಗ್ರಂಥಗಳನ್ನು ರಚಿಸಿರುವರು. ವಿಜಯನಗರದ ಸಾಳ್ವ, ತುಳುವ ಮತ್ತು ಆರವೀಡುವಂಶದ ಅರಸರು ಶ್ರೀ ವೈಷ್ಣವ ಮತಾಭಿಮಾನಿಗಳಾಗಿದ್ದರು. ಕೃಷ್ಣದೇವರಾಯನು ಶ್ರೀವೈಷ್ಣವ ಮತಾನುಸಾರ ಆಮುಕ್ತಮಾಲ್ಯದ ಎಂಬ ಗೋದಾದೇವಿಯ ಚರಿತ್ರೆಯನ್ನು ತೆಲುಗಿನಲ್ಲಿ ರಚಿಸಿದರೂ ಸಕಲ ಕಥಾಸಾರ ಸಂಗ್ರಹವೆಂಬ ತನ್ನ ಸಂಸ್ಕೃತ ಗ್ರಂಥದಲ್ಲಿ ತಾನು ವ್ಯಾಸರಾಯರ ಶಿಷ್ಯರೆಂದು ಹೇಳಿಕೊಂಡಿರುವನು. ಆರವೀಡು ವಂಶದ ರಾಮರಾಜ, ತಿರುಮಲ, ವೆಂಕಟಪತಿ ಮುಂತಾದವರೂ ಅನಂತರ ಮೈಸೂರಿನ ರಾಜ ಒಡೆಯರು ಚಿಕ್ಕದೇವರಾಯ ಇಮ್ಮಡಿ ದೇವರಾಜ ಒಡೆಯರ್, ಮುಮ್ಮಡಿ ಕೃಷ್ಣರಾಜ ಒಡೆಯರೇ ಮುಂತಾದವರೂ ಈ ಮತಕ್ಕೆ ಪ್ರೋತ್ಸಾಹಕೊಟ್ಟರು.

**ವೈಷ್ಣವ ದ್ವೈತಾದ್ವೈತಮತ:** ಶ್ರೀ ರಾಮಾನುಜರ ಸಮಕಾಲೀನನಾದ ನಿಂಬಾರ್ಕಾಚಾರ್ಯನು ಹಂಪೆ ಬಳಿಯಲ್ಲಿರುವ ನಿಂಬಾಪುರದ ವಾಸ್ತವ್ಯನಾಗಿದ್ದು ರಾಧಾಕೃಷ್ಣೋಪಾಸನೆಯನ್ನು ಪ್ರಚಾರಮಾಡಿದನು. ಈ ಭೇದಾಭೇದಮತಕ್ಕೆ ಸನಕಸಂಪ್ರದಾಯವೆಂದು ಹೆಸರು. ನಿಂಬಾರ್ಕಾಚಾರ್ಯನು ಭಾಗವತ ಜಗನ್ನಾಥ ಮತ್ತು ಸರಸ್ವತೀ ಎಂಬ ದಂಪತಿಗಳ ಮಗನು. ವೇದಾಂತ ಪಾರಿಜಾತಸೌರಭ, ಸಿದ್ಧಾಂತರತ್ನ (ದಶಶ್ಲೋಕೀ) ಎಂಬ ಗ್ರಂಥಗಳನ್ನು ರಚಿಸಿರುವನು. ಈತನ ಶಿಷ್ಯನಾದ ಶ್ರೀನಿವಾಸನು ವೇದಾಂತ ಸೌರಭಕ್ಕೆ ಭಾಷ್ಯವನ್ನು ಬರೆದನು. ಈ ಪರಂಪರೆಯಲ್ಲಿ ದೇವಾಚಾರ್ಯನು ಸಿದ್ಧಾಂತಜಾಹ್ನವೀ, ಸುಂದರಭಟ್ಟನು ಸೇತು ಎಂಬ ಟೀಕೆ, ಕೇಶವಕಾಶ್ಮೀರಿಯು ಬ್ರಹ್ಮಸೂತ್ರಗಳಿಗೆ ಭಾಷ್ಯ, ಹರಿವ್ಯಾಸನು ದಶಶ್ಲೋಕೀಭಾಷ್ಯ ಮುಂತಾದ ಗ್ರಂಥಗಳನ್ನು ರಚಿಸಿರುವರು.

**ವೈಷ್ಣವ ದ್ವೈತಮತ:** ಶಿವರೂಪ್ಯಗ್ರಾಮದ ಮಧ್ಯಗೇಹಭಟ್ಟ (ನಡ್ಯಂತಿಲ್ಲಾಯ) ರೆಂಬವರಿಗೆ ವಾಸುದೇವನೆಂಬ ಪುತ್ರನು ಕ್ರಿ.ಶ. ೧೧೯೯

(ಕಲಿ ೪೩೦೦) ರಲ್ಲಿ ಜನಿಸಿದನು. ಬಾಲ್ಯದಲ್ಲಿಯೇ ಮಹಾಪ್ರಜ್ಞೆಯನ್ನು ಪ್ರಕಟಿಸಿ ಸನ್ಯಾಸವನ್ನು ಸ್ವೀಕರಿಸಿ ಆನನ್ದತೀರ್ಥ, ಪೂರ್ಣಪ್ರಜ್ಞ, ಮಧ್ವಾಚಾರ್ಯರೆಂಬ ಹೆಸರಿನಿಂದ ಪ್ರಖ್ಯಾತರಾದರು. ತಾವು ಹನುಮ, ಭೀಮರ ಅನಂತರ ವಾಯುದೇವರ ಮೂರನೆಯ ಅವತಾರವೆಂದೂ, ತಮ್ಮ ಅವತಾರವು ಋಗ್ವೇದದಲ್ಲಿಯೇ ಸೂಚಿಸಿದೆಯೆಂದೂ,[57] ಮೋಹಕಶಾಸ್ತ್ರಪ್ರವರ್ತಕರ ನಿಗ್ರಹಕ್ಕಾಗಿಯೂ ಸದ್ವೈಷ್ಣವರನ್ನು ಉದ್ಧಾರಮಾಡುವದಕ್ಕಾಗಿಯೂ[58] ಕಲಿಯುಗದಲ್ಲಿ ಹುಟ್ಟಿದರೆಂದೂ, ತಮಗೆ ಸಾಕ್ಷಾತ್ ಬಾದರಾಯಣರೇ ಗುರುಗಳೆಂದೂ, ವ್ಯಾಸಾಜ್ಞೆಯಿಂದಲೇ ಭಾಷ್ಯಗಳನ್ನೂ ಪ್ರಕರಣಗ್ರಂಥಗಳನ್ನೂ ರಚಿಸಿದರೆಂದೂ ಹೇಳಿಕೊಂಡಿರುವರು. ಪ್ರಸ್ಥಾನತ್ರಯೀಭಾಷ್ಯ, ಮಹಾಭಾರತ ಮತ್ತು ಶ್ರೀ ಭಾಗವತ ತಾತ್ಪರ್ಯನಿರ್ಣಯ, ಅನುಭಾಷ್ಯ, ತತ್ವಸಂಖ್ಯಾನ, ಪ್ರಮಾಣಲಕ್ಷಣ, ಅನುವ್ಯಾಖ್ಯಾನ ಮುಂತಾದ ಗ್ರಂಥಗಳನ್ನು ರಚಿಸಿರುವರು. ಇವರ ಶಿಷ್ಯರಾದ ಪದ್ಮನಾಭ, ನರಹರಿ, ಮಾಧವ ಮತ್ತು ಅಕ್ಷೋಭ್ಯರೆಂಬುವರು ವಿದ್ಯಾರಣ್ಯರ ಸಮಕಾಲೀನರಾಗಿದ್ದರು. ಜಯತೀರ್ಥರು ಆಚಾರ್ಯರ ಗ್ರಂಥಗಳಿಗೆ ಟೀಕೆಗಳನ್ನು ರಚಿಸಿರುವರು. ನರಹರಿತೀರ್ಥರು ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿ ಮಾಧ್ವದಾಸಕೂಟವನ್ನು ಆರಂಭಿಸಿದರು. ಹದಿನೈದು ಹದಿನಾರನೆಯ ಶತಾಬ್ದಗಳಲ್ಲಿ ವ್ಯಾಸರಾಯರು ವಿಜಯನಗರದ ಸಾಳ್ವ, ತುಳುವ ಮತ್ತು ಆರವೀಡು ವಂಶದ ರಾಜರಿಗೆ ಗುರುಗಳಾಗಿದ್ದು ನ್ಯಾಯಾಮೃತ, ತರ್ಕತಾಣ್ಡವ ಗ್ರಂಥಗಳನ್ನು ರಚಿಸಿರುವರು. ಅವರ ಕಾಲದಲ್ಲಿ ಕನಕದಾಸರೂ, ಪುರನ್ದರದಾಸರೂ ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿದರು.

---

[57] ಬಳಿತ್ಥಾ '—ಋಗ್. I, ೨೧, ೧೪-೧ ; ಭೂಷನ್ನಯೋಽಧಿ ಬಭ್ರೂಷು ನಮ್ನತೇ ವೃಷೇವ ಪತ್ನೀರಭ್ಯೇತಿರೋರುವತ್ | ಓಜಾಯಮಾನಸ್ತನ್ವಶ್ಚ ಶುಮ್ಭತೇ ಭೀಮೋನ ಶೃಂಗಾದವಿಧಾವ ದುಃಗೃಭಿಃ || ತಾಂಸುತೇಕೀರ್ತಿಂ ಮಘವನ್ ಮಹಿತ್ವಾಯತ್ತ್ವಾಭೀತೇ ರೋದಸೀ ಅಹ್ವಯೇತಾಮ್ | ಪ್ರಾವೋದೇವಾಂ ಆತಿರೋದಾಸಮೋಜಃ ಪ್ರಜಾಯೈತ್ವಸ್ಯೈ ಯದಶಿಕ್ಷ ಇನ್ದ್ರ ||

[58] ಚತುಸ್ಸಹಸ್ರೇ ತ್ರಿಶತೋತ್ತರೇ ಗತೇ ಸಂವತ್ಸರಾಣಾಂತು ಕಲೌಪೃಥಿವ್ಯಾಮ್ | ಜಾತಃ ಪುನರ್ವಿಪ್ರತನುಃ ಸಭೀಮೋ ದೈತ್ಯೈರ್ನಿಗೂಢಂ ಹರಿತತ್ವಮಾಹ || . . . ತೇಷಾಂ ಪ್ರಪಾತಾಯ ಸತಾಂವಿಮುಕ್ತ್ಯೈ ಜನ್ಮಾ ಸಭೀಮಸ್ಯಯದುಕ್ತಮತ್ರ | ದುರ್ಗಾ ಪುನರ್ವಿಪ್ರಕುಲೇಽವತೀರ್ಣಾ ಹನಿಷ್ಯತಿ ವ್ರಾತಮಥಾಸುರಾಣಾಮ್|| ಆನನ್ದತೀ ರ್ಥಾಖ್ಯಮುನಿಃಸು ಪೂರ್ಣಪ್ರಜ್ಞಾಭಿಧೋಗ್ರನ್ಥಮಿಮಂ ಚಕಾರ | ನಾರಾಯಣೇನಾಭಿಹಿತೋ ಬದರ್ಯಾಂ ತಸ್ಯೈವ ಶಿಷ್ಯೋ ಜಗದೇಕಭರ್ತುಃ || . . . ವ್ಯಾಸಾಜ್ಞಯಾ ಭಾಷ್ಯವರಂವಿಧಾಂಸು . . . || ಮಹಾಭಾರತ ತಾತ್ಪರ್ಯನಿರ್ಣಯ.

ಹದಿನೇಳು-ಹದಿನೆಂಟನೆಯ ಶತಾಬ್ದಗಳಲ್ಲಿ ರಾಘವೇನ್ದ್ರ, ವಿಜಯೀನ್ದ್ರ, ವಾದಿರಾಜ ಮುಂತಾದವರು ಈ ಸಂಪ್ರದಾಯವನ್ನು ಪೋಷಿಸಿಕೊಂಡು ಬಂದರು.

ಮಹಾರಾಷ್ಟ್ರದಲ್ಲಿ ನಾಮದೇವ, ತುಕಾರಾಮ ಮುಂತಾದ ಪಂಡರಾಪುರ ವಿಠ್ಠಲನ ಭಕ್ತರು ಅಭಂಗಗಳನ್ನು ರಚಿಸಿ ವಿಷ್ಣುಭಕ್ತಿಯನ್ನು ಹರಡಿದರು. ಆನ್ಧ್ರದೇಶದಲ್ಲಿಯೂ ಬಹಮನಿ ಸುಲ್ತಾನರ ಕಾಲದಲ್ಲಿ ಭದ್ರಾದ್ರಿ ರಾಮದಾಸನೇ ಮುಂತಾದವರೂ ಭಾಗವತ ಮತವನ್ನು ಪ್ರಚಾರಮಾಡಿದರು.

**ವೈಷ್ಣವ ಶುದ್ಧಾದ್ವೈತಮತ:** ಆನ್ಧ್ರಬ್ರಾಹ್ಮಣರಾದ ವಲ್ಲಭಾಚಾರ್ಯರು ಹದಿನಾರನೆಯ ಶತಾಬ್ದದಲ್ಲಿ ವಿಷ್ಣುಸ್ವಾಮಿಯ ಪ್ರಾಚೀನ ಸಂಪ್ರದಾಯದ ಪ್ರಕಾರ ಶುದ್ಧಾದ್ವೈತಮತವನ್ನು ಪ್ರಚಾರಮಾಡಿದರು. ವಲ್ಲಭರು ಅಗ್ನಿದೇವರ ಅವತಾರವೆಂದು ನಂಬಿಕೆಯಿದೆ. ಇವರು ಕಾಶಿಯಲ್ಲಿ ಸ್ವಲ್ಪಕಾಲವಿದ್ದು ಬೃನ್ದಾವನದಲ್ಲಿ ನೆಲಸಿದರು. ಅಲ್ಲಿ ದಿವ್ಯಕ್ಷೇತ್ರಗಳನ್ನು ಉದ್ಧಾರಮಾಡಿಸಿ ಪುನಃ ಕಾಶಿಗೆ ಹೋಗಿ ತ್ರಿದಣ್ಡಿ ಸನ್ಯಾಸವನ್ನು ಸ್ವೀಕರಿಸಿ ಕ್ರಿ.ಶ. ೧೫೩೧ ರಲ್ಲಿ ಮುಕ್ತರಾದರು. ಇವರ ಮತದ ಪ್ರಕಾರ ಪರಬ್ರಹ್ಮನಾದ ಕೃಷ್ಣನು ಶಕ್ತಿರೂಪಿಯಾದ ರಾಧೆಯೊಡನೆ ಕೂಡಿರುವನು. ಶ್ರೀಕೃಷ್ಣನು ತನ್ನ ಚಿತ್ ಮತ್ತು ಆನಂದಾಂಶಗಳನ್ನು ತಿರೋಹಿತ ಮಾಡಿಕೊಂಡಾಗ ಅಚಿತ್ ಪ್ರಪಂಚದ ಸೃಷ್ಟಿಯಾಗುವದು. ಆನನ್ದಾಂಶವನ್ನು ಮಾತ್ರ ತಿರೋಹಿತ ಮಾಡಿಕೊಂಡಾಗ ಜೀವಗಳು ಹುಟ್ಟುವವು. ಆದುದರಿಂದ ಮಾಯೆಯೆಂದರೆ ಪರಬ್ರಹ್ಮನ ಶಕ್ತಿ. ಹೀಗೆ ಪರಬ್ರಹ್ಮನು ನಿತ್ಯಶುದ್ಧನಾದುದರಿಂದ ಈ ಮತಕ್ಕೆ ಶುದ್ಧಾದ್ವೈತವೆಂಬ ಹೆಸರು ಬಂದಿತು. ಶ್ರೀಕೃಷ್ಣನು ಕೇವಲ ಚಾರಿತ್ರಿಕ ವ್ಯಕ್ತಿಯಲ್ಲ. ಭಕ್ತರು ಸರ್ವವನ್ನೂ ಕೃಷ್ಣಾರ್ಪಣೆಮಾಡಿ ಶರಣಾಗತರಾದರೆ, ಭಗವನ್ತನು "ಪುಷ್ಟಿ"ಯನ್ನು ಉಂಟುಮಾಡುವನು. ಇದಕ್ಕೆ ಪುಷ್ಟಿ ಮಾರ್ಗವೆಂದು ಹೆಸರು. ವಲ್ಲಭಾಚಾರ್ಯರು ಅಣುಭಾಷ್ಯ, ಸನ್ಯಾಸ ನಿರ್ಣಯ, ಅನ್ತಃಕರಣಪ್ರಬೋಧ, ಶಿಕ್ಷಾಸಾರ್ಧತ್ರಯೀಶ್ಲೋಕೀ ಎಂಬ ಗ್ರಂಥಗಳನ್ನು ರಚಿಸಿದರು. ಇವಕ್ಕೆ ವಲ್ಲಭರ ಪುತ್ರರಾದ ಗೋಪೀನಾಥ ವಿಠಲನಾಥರೆಂಬುವರೂ, ಶಿಷ್ಯರಾದ ದಾಮೋದರದಾಸ ಮುಂತಾದವರೂ ವ್ಯಾಖ್ಯಾನಗಳನ್ನು ಬರೆದಿರುವರು. ಯದುನಾಥನೆಂಬುವನು ವಲ್ಲಭ ದಿಗ್ವಿಜಯ ವೆಂಬ ಆಚಾರ್ಯರ ಚರಿತ್ರೆಯನ್ನು ಬರೆದಿರುವನು. ಇವರ ಮತವು ಗುಜರಾತ ಪ್ರಾನ್ತ್ಯದಲ್ಲಿ ವಿಶೇಷವಾಗಿ ಪ್ರಚಾರವಾಯಿತು. ಗುಜರಾತಿ ಭಾಷೆಯಲ್ಲಿ ನರಸಿಂಹಮೆಹ್ತಾ, ಮೀರಾಬಾಯಿ ಮುಂತಾದವರು ಕೀರ್ತನೆಗಳನ್ನು ರಚಿಸಿರುವರು.

ಅಸ್ಸಾಂ ಪ್ರಾಂತದಲ್ಲಿ ಹದಿನಾರನೆಯ ಶತಾಬ್ದದಲ್ಲಿ ಸ್ಮಾರ್ತಭಾಗವತ ಸಂಪ್ರದಾಯದ ಶಂಕರದೇವನೆಂಬಾತನು ಶಾಕ್ತರನ್ನು ಎದುರಿಸಿ ಒಂದು ಹೊಸ ವೈಷ್ಣವಪಂಥವನ್ನು ಸ್ಥಾಪಿಸಿ ಶ್ರೀ ಭಾಗವತಕ್ಕೆ ವ್ಯಾಖ್ಯಾನವನ್ನು ಬರೆದನು. ಇದರಿಂದ ಅಸ್ಸಾಮಿ ಭಾಷೆಯಲ್ಲಿ ಹೊಸ ಸಾಹಿತ್ಯವು ಉಂಟಾಯಿತು.

**ವೈಷ್ಣವ ಅಚಿನ್ತ್ಯ ಭೇದಾಭೇದ (ಭಾವಾದ್ವೈತ) ಮತ:** ಕರ್ಣಾಟಕ ರಾಜವಂಶದವರು ಬಂಗಾಳ ನೇಪಾಳ ದೇಶಗಳಲ್ಲಿ ರಾಜ್ಯಗಳನ್ನು ಸ್ಥಾಪಿಸಿದ ಫಲವಾಗಿ ಭಾವಪ್ರಧಾನವಾದ ಸ್ಮಾರ್ತಭಾಗವತಮತವು ಅಲ್ಲಿ ಹರಡಿತು. ಕರ್ಣಾಟಕ ಕ್ಷತ್ರಿಯ ವಂಶದ ಲಕ್ಷ್ಮಣಸೇನನ ಕಾಲದಲ್ಲಿ ಜಯದೇವನು ಬ್ರಹ್ಮವೈವರ್ತಪುರಾಣದ ಆಧಾರದ ಮೇಲೆ "ಗೀತಗೋವಿನ್ದ"ವನ್ನು ರಚಿಸಿದನು. ಬಿಲ್ವಮಂಗಳಸ್ವಾಮಿಯಾದ ಕೃಷ್ಣಲೀಲಾಶುಕನು ಕೃಷ್ಣಕರ್ಣಾಮೃತವನ್ನು ಅದ್ವೈತ ಸಂಪ್ರದಾಯವನ್ನನುಸರಿಸಿ ರಚಿಸಿದನು.[59] ಶ್ರೀ ಭಾಗವತಕ್ಕೆ ಶ್ರೀಧರಸ್ವಾಮಿಯು ಅದ್ವೈತಪರವಾದ ವ್ಯಾಖ್ಯಾನವನ್ನು ಹದಿಮೂರನೆಯ ಶತಾಬ್ದದಲ್ಲಿ ರಚಿಸಿದನು. ನಿಂಬಾರ್ಕ, ರಾಮಾನುಜ, ಮಧ್ವರ ವೈಷ್ಣವ ಮತಪ್ರಚಾರಫಲವಾಗಿ ಉತ್ತರದೇಶದಲ್ಲಿ ಭಕ್ತಿಪಂಥಗಳುಂಟಾದುವೆಂದು ಕೆಲವರು ಹೇಳಿರುವದಕ್ಕೆ ಯಾವ ಆಧಾರವೂ ಇಲ್ಲ. ಶ್ರೀ ಶಂಕರರ ವೈಷ್ಣವ ಸಂಪ್ರದಾಯವನ್ನೇ ಅನುಸರಿಸಿ ಚೈತನ್ಯ, ರಾಮಾನನ್ದ, ಕಬೀರ ಮುಂತಾದವರು ತಮ್ಮತಮ್ಮ ಮತಗಳನ್ನು ಪ್ರಚಾರಮಾಡಿದರು. ಕವಿಕರ್ಣಪೂರನ ಚೈತನ್ಯ ಚನ್ದ್ರೋದಯ ಮತ್ತು ಚೈತನ್ಯ ಚರಿತಾಮೃತ ಮುಂತಾದ ಗ್ರಂಥಗಳಿಂದ ಚೈತನ್ಯರು ಅದ್ವೈತಿಗಳೆಂದೇ ತಿಳಿದುಬರುವದು.[60] ಚೈತನ್ಯರು ಶ್ರೀಧರಸ್ವಾಮಿಯ ಗೀತಾವ್ಯಾಖ್ಯಾನವನ್ನು ಮೆಚ್ಚಿ ವಲ್ಲಭಭಟ್ಟನ ವ್ಯಾಖ್ಯಾನವನ್ನು ಖಂಡಿಸಿದರು. ದಕ್ಷಿಣದೇಶಕ್ಕೆ ಬಂದಾಗ ಮಾಧ್ವರಾದ ವ್ಯಾಸರಾಯರನ್ನೂ ಉಡುಪಿಯ ಯತಿಗಳನ್ನೂ ಮಾಧ್ವಸಿದ್ಧಾನ್ತವನ್ನೂ ಕಟುತರವಾಗಿ ಖಂಡಿಸಿ

---

[59] ಶೈವಾವಯಂ ನಖಲುತತ್ರವಿಚಾರಣೀಯಮ್ | ಪಂಚಾಕ್ಷರೀ ಜಪಪರಾನಿತರಾಂ ತಥಾಪಿ | ಚೇತೋಮದೀಯಮತಸೀಕುಸುಮಾವಭಾಸಂ | ಸ್ಮೇರಾನನಂ ಸ್ಮರತಿ ಗೋಪವಧೂಕಿಶೋರಮ್ ||

[60] ಭೋಽದ್ವೈತ ! ಸ್ಮರಕಿಮುವಯಂ ಹನ್ತ ನಾದ್ವೈತಭಾಜೋ | ಭೇದಸ್ತಸ್ಮಿನ್‌ತ್ವಯಿ ಚಯದಿ ಯಾನ್‌ರೂಪತೋಲಿಂಗತಶ್ಚ ||-ಚೈತನ್ಯಚರಿತಾಮೃತ. ಅಂಕ. ೫, ಕೆಯನ್ತ್ಯೇವ ವೈಷ್ಣವಾಧೃಷ್ಯಾಃ ; ತೇಽಪಿನಾರಾಯಣೋಪಾಸಕಾಏವ ; ಅಪರೇ ತತ್ತ್ವವಾದಿನಃ, ತೇ ತಥಾವಿಧಾಏವ ; ನಿರವದ್ಯಂನಭವತಿತೇಷಾಂಮತಮ್—ಚೈತನ್ಯಚರಿತಾಮೃತ. ಅಂಕ. ೮.

ದರು.[61] ಚೈತನ್ಯರ ಗುರುಗಳಾದ ಮಾಧವೇನ್ದ್ರಪುರೀ, ಅದ್ವೈತಪುರೀ, ಈಶ್ವರ ಪುರೀ, ಕೇಶವ ಭಾರತೀಸ್ವಾಮಿಗಳು ಅದ್ವೈತ ಸಂಪ್ರದಾಯದವರು. ಶ್ರೀಧರ ಸ್ವಾಮಿಗಳನ್ನನುಸರಿಸಿ ಭಾಗವತ, ಭಗವದ್ಗೀತೆ, ವಿಷ್ಣುಪುರಾಣಗಳಿಗೆ ವ್ಯಾಖ್ಯಾನವನ್ನು ರಚಿಸಿರುವರು. ಚೈತನ್ಯರ ಶಿಷ್ಯರಾದ ಜೀವಗೋಸ್ವಾಮಿ ಗಳು ಶ್ರೀ ಶಂಕರ ಭಾಗವತ್ಪಾದರ ನಿಜಾಭಿಪ್ರಾಯವು ಭಾಗವತದ ಆಧಾರದ ಮೇಲೆ ತಾವು ರಚಿಸಿದ ಗೋವಿನ್ದಾಷ್ಟಕದಲ್ಲಿ ಅಡಕವಾಗಿದೆಯೆಂದೂ ಮಧ್ವಾ ಚಾರ್ಯರು ಕೂಡ ಶ್ರೀ ಶಂಕರರ ಸಾಕ್ಷಾತ್ ಶಿಷ್ಯರೆಂದೂ ಹೇಳಿರುವರು.[62] ಚೈತನ್ಯರ ಮತದಲ್ಲಿ ರಾಧೆಗೆ ಪ್ರಾಶಸ್ತ್ಯ. ಮಧ್ವಸಿದ್ಧಾನ್ತದಲ್ಲಿ ರಾಧೆಯ ಹೆಸರೇ ಇಲ್ಲ. ಹೀಗೆ ಚೈತನ್ಯರ ನಿಜಾಭಿಪ್ರಾಯವು ಅದ್ವೈತವೆ. ಹತ್ತೊಂಬತ್ತನೆಯ ಶತಾಬ್ದದಲ್ಲಿ ಜಗನ್ನಾಥ ಕ್ಷೇತ್ರದ ಬಲದೇವ ವಿದ್ಯಾಭೂಷಣನೆಂಬುವನು ತನ್ನ ಗೋವಿನ್ದಭಾಷ್ಯ, ಪ್ರಮೇಯರತ್ನಾವಲೀ ಮುಂತಾದ ಗ್ರನ್ಥಗಳಲ್ಲಿ ಕೆಲವು ಮಾಧ್ವಗುರುಗಳ ಹೆಸರುಗಳನ್ನು ಸೇರಿಸಿ ನಿರಾಧಾರವಾದ ಒಂದು ಪಟ್ಟಾವಳಿ ಯನ್ನು ಸೃಷ್ಟಿಸಿದನು. ಇವನಿಗೆ ಹಿಂದೆಯಿದ್ದ ಜೀವಗೋಸ್ವಾಮಿ ರೂಪಗೋ ಸ್ವಾಮಿ ಮುಂತಾದವರು ವ್ಯಾಸತೀರ್ಥ, ವಿಜಯಧ್ವಜ ಮುಂತಾದ ಮಾಧ್ವರ ಹೆಸರುಗಳನ್ನು ಹೇಳಿದ್ದರೂ ಅವರು ಚೈತನ್ಯರ ಗುರುಪರಂಪರೆಯವರೆಂದು ಹೇಳಿಲ್ಲ. ಆದುದರಿಂದ ಚೈತನ್ಯಮತವು ಮಧ್ವಸಂಪ್ರದಾಯದಿಂದ ಹುಟ್ಟಿತೆಂಬ ವಾದವು ನಿರಾಧಾರವಾದುದು.[63] ಚೈತನ್ಯರ ಮತವು ಬಂಗಾಳ, ಬಿಹಾರ, ಒರಿಸ್ಸ, ಅಸ್ಸಾಂ ಪ್ರಾಂತಗಳಲ್ಲಿ ವಿಶೇಷವಾಗಿ ಹರಡಿತು. ಮಧುರ-ಬೃನ್ದಾವನ ದಲ್ಲಿ ನೆಲಸಿದ ಜೀವಗೋಸ್ವಾಮಿ, ರೂಪಗೋಸ್ವಾಮಿ, ಸನಾತನ ಮುಂತಾದ ಗೋಸ್ವಾಮಿಗಳೂ ಕವಿಕರ್ಣಪೂರ ವೃನ್ದಾವನದಾಸ ಮುಂತಾದವರೂ ಅನೇಕ ಗ್ರಂಥಗಳನ್ನು ರಚಿಸಿರುವರು.

ಮಧ್ಯ ಇಂಡಿಯ ಪ್ರಾಂತದಲ್ಲಿ ಅದ್ವೈತಿಗಳಾದ ರಾಮಾನನ್ದರೂ. ಮಧುಸೂದನ ಸರಸ್ವತಿಗಳ ಸ್ನೇಹಿತರಾದ ತುಳಸೀದಾಸರೂ, ಸೂರದಾಸರೂ ಹದಿನೈದು ಹದಿನಾರನೆಯ ಶತಾಬ್ದಗಳಲ್ಲಿ ರಾಮೋಪಾಸನೆಯನ್ನು ಪ್ರಚಾರ ಮಾಡಿದರು. ರಾಮಾನನ್ದರು ಅದ್ವೈತತತ್ವಗಳನ್ನೂ ರಾಮಭಕ್ತಿಯನ್ನೂ ಕಬೀರರಿಗೆ ಬೋಧಿಸಿದರು. ಸಿಕಾನ್ದರ್ ಲೋದಿಯ ಕಾಲದಲ್ಲಿ ಕಬೀರರು

---

[61] ಚೈತನ್ಯಚರಿತಾಮೃತ. ಮಧ್ಯ xi. ೨೫೪-೨೭೭.

[62] ತತ್ತ್ವಸನ್ದರ್ಭ—ಸಾಕ್ಷಾತ್‌ಚ್ಛಿಷ್ಯತಾಂಪ್ರಾಪ್ತೈಃ.

[63] S. K. De. *Festschrift Moriz Winternitz*, p. 194. *Early History of the Vaiṣṇava Faith and Movement in Bengal*, 1942.

ಹಿಂದೂ ಮುಸ್ಲಿಮರಿಗೆ ಐಕಮತ್ಯವನ್ನುಂಟುಮಾಡಲು ಯತ್ನಿಸಿದರು. ಹೀಗೆ ಕಬೀರಪನ್ಥವು ಹುಟ್ಟಿತು. ಪಶ್ಚಿಮ ಪ್ರಾಂತದಲ್ಲಿ ಗುರುನಾನಕರು ಸಿಖ್‌ಮತವನ್ನು ಸ್ಥಾಪಿಸಿ ಅದೇ ಪ್ರಯತ್ನ ಮಾಡಿದರು. ಆದರೆ ಮುಸ್ಲಿಮ್ ಚಕ್ರವರ್ತಿಗಳು ಸಿಖ್ಖರ ಗುರುಗಳಿಗೆ ಹಿಂಸೆ ಮಾಡಿದುದರಿಂದ ಸಿಖ್ಖರು ಮುಸ್ಲಿಮರನ್ನು ಎದುರಿಸಿ ಪ್ರತ್ಯೇಕರಾದರು.

**ಶಾಕ್ತಮತ:** ಭರತಖಂಡದಲ್ಲಿ ಶಕ್ತಿಪೂಜೆಯು ಅನಾದಿಯಾಗಿಯೂ ವೇದಮೂಲವಾಗಿಯೂ ಬಂದಿದೆ. ಮಾತೃದೇವತಾಪೂಜೆಯು ಅನಾರ್ಯರದೆಂದೂ ಪರದೇಶಗಳಿಂದ ಬಂದುದೆಂದೂ ಕೆಲವರು ಹೇಳುವರು. ಆದರೆ ಭಾರತೀಯ ಮಾತೃದೇವತಾಪೂಜೆಗೂ ಸುಮೇರಿಯ, ಅಸ್ಸಿರಿಯ, ಫ್ರಿಜಿಯ, ಈಜಿಪ್ಟ್, ಸಿರಿಯದೇಶಗಳ ಐಸಿಸ್, ಸೈಬಿಲೆ, ಮಾ, ಅಮಾ, ಅಸ್ಟಾರ್ಟೆ, ಇಸ್ತಾರ್, ಇತ್ಯಾದಿ ಮಾತೃದೇವತೆಗಳಿಗೂ ಬಹಳ ವ್ಯತ್ಯಾಸವಿದೆ. ಭಾರತೀಯ ತಾನ್ತ್ರಿಕ ಗ್ರಂಥಗಳೆಲ್ಲವೂ ವೇದಪ್ರಾಮಾಣ್ಯವನ್ನು ಅಂಗೀಕರಿಸಿವೆ. ವಿದೇಶೀಯ ಮಾತೃದೇವತಾಪೂಜೆಯಲ್ಲಿ ದ್ವೈತಭಾವಗಳೂ, ದೇಹದ ಪುನರುತ್ಥಾನ (Resurrection) ತತ್ತ್ವವೂ ಇರುವುದರಿಂದಲೂ ಶಾಕ್ತಮತದಲ್ಲಿ ಕರ್ಮ, ಪುನರ್ಜನ್ಮ, ಧರ್ಮ, ಅದ್ವೈತ ತತ್ತ್ವಗಳಿರುವುದರಿಂದಲೂ ಶಾಕ್ತಮತವು ಭಾರತೀಯ ಸಂಸ್ಕೃತಿಯಿಂದಲೇ ಕೂಡಿದೆ. ವೇದವಾಙ್ಮಯದಲ್ಲೂ ತಾನ್ತ್ರಿಕ ಗ್ರಂಥಗಳಲ್ಲೂ ಶ್ರೀಚಕ್ರ, ಯನ್ತ್ರ, ಮನ್ತ್ರ, ನ್ಯಾಸ, ದೀಕ್ಷೆ ಮುಂತಾದವುಗಳ ವರ್ಣನೆಯು ಕಂಡುಬರುವದು. ಶ್ರೀಚಕ್ರಯನ್ತ್ರದ ಮಧ್ಯದಲ್ಲಿರುವ ಬಿನ್ದುಮಣ್ಡಲವನ್ನು ಓಡ್ಯಾಣ ಪೀಠವೆಂದೂ, ತ್ರಿಕೋಣಾಗ್ರಗಳಲ್ಲಿರುವ ಸ್ಥಾನಗಳಿಗೆ ಪೂರ್ಣಗಿರಿ, ಜಾಲನ್ಧರ ಮತ್ತು ಕಾಮೇಶ್ವರೀ ಪೀಠಗಳೆಂದೂ ಹೆಸರು. ಭೌತಿಕ ಸೃಷ್ಟಿಯಲ್ಲಿ ಓಡ್ಯಾಣ ಪೀಠವು ವಾಯವ್ಯ ಪ್ರಾಂತದಲ್ಲಿರುವ ಸ್ವಾತಿಕಣಿವೆ ಒಳಿಯ ಒಡ್ಯಾನ್ ಅಥವಾ ಉದ್ಯಾನವೆಂಬ ಸ್ಥಳ. ಇಲ್ಲಿ ಯುವಾನ್‌ಚ್ವಾಂಗನ ಕಾಲದಲ್ಲಿ ಅನೇಕ ಶಾಕ್ತರಿದ್ದರು. ಪೂರ್ಣಗಿರಿ ಪೀಠವು ಉತ್ತರಬದರಿ. ಜಾಲನ್ಧರ ಪೀಠವು ಪಂಜಾಬಿನ ಜಲನ್ಧರ್ ಡಿಸ್ಟ್ರಿಕ್ಟ್. ಕಾಮೇಶ್ವರೀ ಪೀಠವು ಕಾಮಾಖ್ಯ (ಅಸ್ಸಾಮಿನ ಗೌಹತಿ). ಹೀಗೆ ಪಶ್ಚಿಮದಲ್ಲಿ ಅಫ್ಘನಿಸ್ತಾನದಿಂದ ಪೂರ್ವದಲ್ಲಿ ಅಸ್ಸಾಮಿನ ವರೆಗೂ ಉತ್ತರದಲ್ಲಿ ಬದರಿ ಕೇದಾರದಿಂದ ಜಲನ್ಧರದ ವರೆಗೂ ಇರುವ ಉತ್ತರ ಹಿಂದೂಸ್ಥಾನವೇ ಶಾಕ್ತಮತದ ಮೂಲದೇಶ. ಇಡಾ, ಪಿಂಗಳಾ, ಸುಷುಮ್ನಾ ಎಂದೆನಿಸಿದ ಗಂಗಾ, ಯಮುನಾ, ಸರಸ್ವತೀ ನದಿಗಳು ಪ್ರವಹಿಸುವ ಆರ್ಯಾವರ್ತವು ಹೇಗೆ ವೇದಗಳಿಗೆ ಮೂಲವೋ ಹಾಗೆಯೇ ತನ್ತ್ರಗಳಿಗೂ ಮೂಲ.

ಕ್ರಿ.ಶ. ೬ನೆಯ ಶತಮಾನದನಂತರ ಚೀನಾಚಾರ ಮುಂತಾದ ವಿದೇಶೀಯ ತಾಂತ್ರಿಕಾಚಾರಗಳು ವೈದಿಕವಾದ ಶಾಕ್ತಮತದಲ್ಲಿ ಸೇರಿಸಿಕೊಂಡವು. ತಂತ್ರಗಳನ್ನು ವಿಷ್ಣುಕ್ರಾಂತ, ರಥಕ್ರಾಂತ, ಅಶ್ವಕ್ರಾಂತ ಎಂದು ಮೂರು ಭಾಗಗಳಾಗಿ ವಿಂಗಡಿಸಿದೆ. ವಿಷ್ಣುಕ್ರಾಂತ ತಂತ್ರಗಳು ವಿಂಧ್ಯಪ್ರಾಂತದಿಂದ ಚಟ್ಟಲಾ (Chittagong) ವರೆಗೆ ಪ್ರಚಾರದಲ್ಲಿವೆ. ಅಶ್ವಕ್ರಾಂತ ತಂತ್ರಗಳು ವಿಂಧ್ಯಯಿಂದ ಮಹಾ ಚೀಣದ ವರೆಗೂ, ರಥಕ್ರಾಂತ ತಂತ್ರಗಳು ವಿಂಧ್ಯಯಿಂದ ಜಾವ, ಕ್ಯಾಂಬೋಡಿಯ, ಮುಂತಾದ ದ್ವೀಪಾಂತರಗಳ ವರೆಗೂ ಪ್ರಚಾರವಾದವು. ಒಂದೊಂದು ಕ್ರಾಂತದಲ್ಲಿಯೂ ೬೪ ಮುಖ್ಯ ತಂತ್ರಗಳಿವೆ. ಶ್ರೀವಿದ್ಯೆಯಲ್ಲಿ ಕಾದಿ (ಅಗಸ್ತ್ಯ), ಹಾದಿ (ಲೋಪಾಮುದ್ರಾ) ಮತ್ತು ಕಹಾದಿ ಎಂಬ ಸಂಪ್ರದಾಯಗಳಿವೆ. ಕಾದಿವಿದ್ಯೆಗೆ ಸಮಯಮಾರ್ಗವೆಂದೂ ಹಾದಿವಿದ್ಯೆಗೆ ಕೌಲಮಾರ್ಗವೆಂದೂ ಹೆಸರು. ಎರಡರಲ್ಲಿಯೂ ಅಭೇದಚಿಂತನೆಯೇ ಮುಖ್ಯ.[64] ವೈದಿಕಮತಕ್ಕೂ ತಾಂತ್ರಿಕಮತಕ್ಕೂ ಉಪಾಸನಾಕ್ರಮದಲ್ಲಿ ವ್ಯತ್ಯಾಸವೇ ವಿನಾ ಮೂಲತತ್ತ್ವವು ಒಂದೇ. ಅಜ್ಞರು ತಾಂತ್ರಿಕಾಚಾರಗಳು ಅವೈದಿಕವೆಂದೂ ಅಶ್ಲೀಲವೆಂದೂ ಹೇಳುವದಕ್ಕೆ ಅವರ ಅನಭಿಜ್ಞತೆಯೇ ಕಾರಣ.

ಶಾಕ್ತತಂತ್ರಗಳು ಭಾರತೀಯ ಸಂಸ್ಕೃತಿಯ ಸಮಸ್ತ ರೂಪಗಳಲ್ಲಿಯೂ ಅಡಕವಾಗಿವೆ. ನಿರ್ಗುಣಬ್ರಹ್ಮವಾದಿಗಳಾದ ಶ್ರೀ ಶಂಕರಾಚಾರ್ಯರೇ ಶ್ರೀ ವಿದ್ಯಾಉಪಾಸಕರಾಗಿದ್ದು ಪ್ರಪಂಚಸಾರ, ಆನಂದಲಹರೀ, ಸೌಂದರ್ಯ ಲಹರೀ, ಲಲಿತಾತ್ರಿಶತೀಭಾಷ್ಯ ಮುಂತಾದ ಗ್ರಂಥಗಳನ್ನು ರಚಿಸಿರುವರು. ಮುಖ್ಯಪೀಠಗಳಲ್ಲಿ ಶ್ರೀ ಚಕ್ರಯಂತ್ರ ಸ್ಥಾಪನೆಮಾಡಿರುವರು. ಅವರ ಪರಮ ಗುರುಗಳಾದ ಗೌಡಪಾದರು ಶಕ್ತಿಸೂತ್ರಗಳನ್ನೂ ಸುಭಗೋದಯ ಮುಂತಾದ ಗ್ರಂಥಗಳನ್ನೂ ರಚಿಸಿರುವರು. ಗುರುಗಳಾದ ಗೋವಿಂದ ಭಗವತ್ಪಾದರು

[64] ಅಹಂ ದೇವಿ! ನಚಾನ್ಯೋಸ್ಮಿ ಬ್ರಹ್ಮೈವಾಹಂ ನಶೋಕಭಾಕ್ | ಸಚ್ಚಿದಾನಂದ ರೂಪೋಽಹಂ ನಿತ್ಯಮುಕ್ತಸ್ವಭಾವವಾನ್ || ತ್ವಮೇವಾಹಂ ಅಹಂತ್ವಂಚ ಸಂವಿನ್ಮಾತ್ರಾ ವಪುಸ್ತ್ವವ | ಉಭಯೋರಂತರಂ ದೇವಿ! ನಶಿತಾಜ್ಞಾಬಲಾತ್ತತಃ ||

ಶ್ರೀ ವಿದ್ಯಾರ್ಣವತಂತ್ರ I. ಪು. ೯೪.

ಕ್ಷಣಂ ಬ್ರಹ್ಮಾಹಮಸ್ಮೀತಿಯಃ ಕುರ್ಯಾದಾತ್ಮಚಿಂತನಂ | ಸಸರ್ವಪಾತಕಂ ಹನ್ಯಾತ್ ತಮಃ ಸೂರ್ಯೋದಯೋ ಯಥಾ || ಅದ್ವೈತಂ ಭಾವಯೇನ್ನಿತ್ಯಂ ನದ್ವೈತಂ ಗುರುಣಾ ಸಹ | ಆತ್ಮವತ್ಸರ್ವಭೂತೇಷು ಪೋಷಿತಂ ಕುರ್ಯಾತ್ ಕುಲೇಶ್ವರಿ ||

ಕುಲಾರ್ಣವತಂತ್ರ IX. ೨೨. XII. ೬೩.

ರಸೇಶ್ವರಮತಪರವಾದ ರಸಹೃದಯವೆಂಬ ಗ್ರಂಥವನ್ನು ಬರೆದಿರುವರು. ಪದ್ಮಪಾದರು ಶಂಕರರ ಪ್ರಪಂಚಸಾರಕ್ಕೆ ವ್ಯಾಖ್ಯಾನವನ್ನು ಬರೆದಿರುವರು. ದೇವೀಭಾಗವತ, ಬ್ರಹ್ಮಾಂಡಪುರಾಣ, ಕಾಳಿಕಾಪುರಾಣ ಮುಂತಾದ ಶಾಕ್ತಪುರಾಣಗಳಲ್ಲೇ ಅಲ್ಲದೆ ಸಮಸ್ತ ಶೈವ, ವೈಷ್ಣವ, ಸೌರ, ಗಾಣಪತ್ಯ, ಕೌಮಾರಮತಗಳ ಪುರಾಣಗಳಲ್ಲಿಯೂ ಜೈನ, ಬೌದ್ಧಮತಗಳಲ್ಲಿಯೂ ಶ್ರೀವಿದ್ಯೋಪಾಸನೆ, ಮಾತೃಕಾಪೂಜೆ, ಯಂತ್ರನಿರ್ಮಾಣ ಮುಂತಾದ ವಿಷಯಗಳು ಕಂಡುಬರುವವು. ಜಾವದ್ವೀಪದಲ್ಲಿ ಅತ್ಯದ್ಭುತವಾದ ಬೋರೋಬುದುರ್ ಎಂಬ ದೇವಾಲಯವು ಶ್ರೀಶೈಲೇನ್ದ್ರರಾಜರಿಂದ ಶ್ರೀಚಕ್ರಪ್ರಸ್ತಾರವನ್ನನುಸರಿಸಿ ನಿರ್ಮಿತವಾಗಿದೆ. ಶ್ರೀ ವಿದ್ಯಾಶಂಕರ, ಶ್ರೀ ವಿದ್ಯಾರಣ್ಯರು ಇದೇ ರೀತಿಯಲ್ಲಿ ಶ್ರೀ ವಿದ್ಯಾನಗರವನ್ನೂ ಶ್ರೀಗಿರಿ (ಶೃಂಗೇರಿ)ಯಲ್ಲಿ ಶ್ರೀ ವಿದ್ಯಾಶಂಕರರ ಬೃಂದಾವನ ಮತ್ತು ದೇವಾಲಯಗಳನ್ನು ನಿರ್ಮಿಸಿದರು. ಶಂಕರಾಚಾರ್ಯರ ಶಿಷ್ಯರಾದ ಲಕ್ಷ್ಮಣದೇಶಿಕರು ಶಾರದಾತಿಲಕವೆಂಬ ಗ್ರಂಥವನ್ನು ರಚಿಸಿದರು. ಇದಕ್ಕೆ ರಾಘವಭಟ್ಟನು ಕ್ರಿ.ಶ. ೧೪೯೪ರಲ್ಲಿ ವ್ಯಾಖ್ಯಾನವನ್ನು ಬರೆದನು. ಈತನ ಸಮಕಾಲೀನನಾದ ಕೃಷ್ಣಾನಂದ ಆಗಮವಾಗೀಶನು ತನ್ತ್ರಸಾರವನ್ನು ರಚಿಸಿ ವಂಗದೇಶದಲ್ಲಿ ಶಾಕ್ತಮತವನ್ನು ಪ್ರಚಲನಮಾಡಿದನು. ಚಣ್ಡೀದಾಸ, ರಾಮಚರಣ ಮುಂತಾದ ಶಾಕ್ತರು ಬಂಗಾಳೀ ಭಾಷೆಯಲ್ಲಿ ಅನೇಕ ಕೀರ್ತನೆಗಳನ್ನು ರಚಿಸಿದರು. ದಕ್ಷಿಣದೇಶದಲ್ಲಿ ಲಲಿತಾತ್ರಿಪುರಸುನ್ದರೀ, ರಾಜರಾಜೇಶ್ವರೀ ಉಪಾಸನೆಯು ವಿಶೇಷವಾಗಿದೆ. ಕೃಷ್ಣದೇವರಾಯನ ಕಾಲದಲ್ಲಿ ಕೋಲ್ಲಲಕ್ಷ್ಮೀಧರ, ಡಿಂಡಿಮ ಕವಿಗಳು ಸೌನ್ದರ್ಯಲಹರಿಗೆ ವ್ಯಾಖ್ಯಾನಗಳನ್ನು ಬರೆದು ತಮ್ಮ ಸ್ವಂತ ಅನುಭವಗಳನ್ನೂ ಸೂಚಿಸಿರುವರು. ಪೇಶ್ವೆಗಳ ಕಾಲದಲ್ಲಿ ಭಾಸ್ಕರರಾಯನು (ಕ್ರಿ.ಶ. ೧೭೩೩) ಸೇತುಬನ್ಧ, ಲಲಿತಾ ಸಹಸ್ರನಾಮಭಾಷ್ಯ ಇತ್ಯಾದಿ ಗ್ರಂಥಗಳನ್ನೂ ಉಮಾನನ್ದನಾಥನು ಪರಶುರಾಮ ಕಲ್ಪಸೂತ್ರಗಳಿಗೆ ವ್ಯಾಖ್ಯಾನವನ್ನೂ ರಚಿಸಿರುವನು. ಈಗ ಅನೇಕ ಸ್ಥಳಗಳಲ್ಲಿ ನಡೆಯುವ ಕರಗ ಉತ್ಸವವು ಶಕ್ತಿಪೂಜೆಯ ಚಿಹ್ನೆ. ಮಾತೃದೇವತಾಪೂಜೆಯಿಂದ ಬ್ರಾಹ್ಮೀಲಿಪಿ, ದೇವನಾಗರೀಲಿಪಿ, ಸಾಹಿತ್ಯ, ಛಂದಸ್ಸು, ಭರತನಾಟ್ಯ ಮುಂತಾದ ಲಲಿತಕಲೆಗಳು ಹುಟ್ಟಿರುವವು.

**ಸೌರಮತ:** ವೇದವಾಙ್ಮಯದಲ್ಲಿ ಭಗ, ಅರ್ಯಮ, ಸೂರ್ಯ, ಸವಿತೃ, ಆದಿತ್ಯ, ಸೂರ್ಯಾ, ಉಷಸ್ ಇತ್ಯಾದಿ ದೇವತೆಗಳು ಸೂರ್ಯಮಣ್ಡಲಾಭಿಮಾನಿಗಳು. ಗಾಯತ್ರಿಯು ಸೂರ್ಯದೇವತಾಕವಾದುದು. ಬ್ರಾಹ್ಮಣ ಉಪನಿಷತ್ತು ಆರಣ್ಯಕಗಳಲ್ಲಿ ಆದಿತ್ಯನೇ ಬ್ರಹ್ಮ, ಮುಕ್ತಜೀವರಿಗೆ ಆದಿತ್ಯ

ಮಣ್ಡಲವೇ ದ್ವಾರವು ಎಂಬುದಾಗಿ ಆದಿತ್ಯೋಪಾಸನೆಯು ಉಕ್ತವಾಗಿದೆ.[65] ಪುರಾಣಗಳ ಕಾಲದಲ್ಲಿ ಆದಿತ್ಯಮಂಡಲಾಭಿಮಾನಿಯಾದ ದೇವತೆಯನ್ನು ವೈಷ್ಣವರು ವಿಷ್ಣುವೆಂದೂ, ಶೈವರು ಸಾಂಬನೆಂದೂ, ಶಾಕ್ತರು ಮಾರ್ತಂಡ ಭೈರವನೆಂದೂ ಹೇಳುತ್ತ ಬಂದರು. ಸೂರ್ಯನು ಆರೋಗ್ಯಪ್ರದಾಯಕನೂ ಗ್ರಹಾಧಿಪತಿಯೂ ಆದುದರಿಂದ ಸೂರ್ಯನಮಸ್ಕಾರ, ಗ್ರಹಪೂಜೆ ಅರ್ಕವಾರ ವ್ರತ ಮುಂತಾದ ಆಚಾರಗಳು ಉಂಟಾದುವ. ಶ್ರೀರಾಮನು ರಾವಣ ವಧೆಗೆ ಮುಂಚೆ ಆದಿತ್ಯಹೃದಯವೆಂಬ ಸೂರ್ಯಸ್ತೋತ್ರವನ್ನು ಮಾಡಿದನೆಂದು ಕೆಲವು ರಾಮಾಯಣಗಳು ಹೇಳುವವು. ಮಹಾಭಾರತದಲ್ಲಿ ಆದಿತ್ಯ ಸ್ತೋತ್ರಗಳಿವೆ. ಆದಿತ್ಯೋಪಾಸನೆಯಿಂದ ಜ್ಯೋತಿಷಶಾಸ್ತ್ರವು ಬೆಳೆಯಿತು. ಆರ್ಯಭಟ, ವರಾಹಮಿಹಿರ, ಬ್ರಹ್ಮಗುಪ್ತ, ಭಾಸ್ಕರಾಚಾರ್ಯ ಮುಂತಾದ ಜ್ಯೋತಿಷ್ಕರು ಸೂರ್ಯಸ್ತುತಿ ಮಾಡಿರುವರು. ವರಾಹಮಿಹಿರನು ಆದಿತ್ಯ ದೇವಾಲಯಗಳಲ್ಲಿ ಮಗಬ್ರಾಹ್ಮಣರು ಅರ್ಚಕರಾಗಿರಬೇಕೆಂದು ಹೇಳಿರುವನು. ಭವಿಷ್ಯಪುರಾಣದಲ್ಲಿ ಶ್ರೀ ಕೃಷ್ಣನ ಮಗನಾದ ಸಾಂಬನು ಶಾಪ ವಿಮೋಚನೆಗಾಗಿ ಶಿವಾಲಯಗಳನ್ನು ನಿರ್ಮಿಸಿದನೆಂದೂ ಶಕದ್ವೀಪದಿಂದ ಮಗಬ್ರಾಹ್ಮಣರನ್ನು ಕರೆಸಿದನೆಂದೂ, ಇವರು ಯಾದವವಂಗಡವಾದ ಭೋಜರೊಡನೆ ಸಂಬಂಧ ಬೆಳೆಸಿದುದರಿಂದ ಇವರಿಗೆ ಭೋಜಕರೆಂಬ ಹೆಸರಾಯಿತೆಂದೂ, ಜ್ಯೋತಿಷದಿಂದ ಜೀವನಮಾಡುತ್ತಿದ್ದರೆಂದೂ ಹೇಳಿದೆ. ಅದೇ ಪುರಾಣದಲ್ಲಿ ಮಿಹಿರಗೋತ್ರದ ಸುಜಿಹ್ವ ಎಂಬ ಬ್ರಾಹ್ಮಣನಿಗೂ ನಿಕ್ಷುಭಾ ಎಂಬ ಆತನ ಪತ್ನಿಗೂ ಜರಶಬ್ದ ಅಥವಾ ಜರದಸ್ತ (Zoroaster) ಎಂಬ ಮಗನು ಹುಟ್ಟಿದನೆಂದೂ ಇವನ ವಂಶದವರು ಮಗಬ್ರಾಹ್ಮಣರೆಂದೂ, ನಡುವಿಗೆ ಅವ್ಯಂಗವನ್ನು ಕಟ್ಟಿಕೊಳ್ಳುತ್ತಿದ್ದರೆಂದೂ ಹೇಳಿದೆ. ವರಾಹಮಿಹಿರನು ಸೂರ್ಯವಿಗ್ರಹದಲ್ಲಿ ಮೊಣಕಾಲು ವರೆಗೆ ಪಾದರಕ್ಷೆಗಳನ್ನೂ ಸೊಂಟದಲ್ಲಿ ಅವ್ಯಂಗವನ್ನೂ ಕೆತ್ತಿ ತೋರಿಸಬೇಕೆಂದು ಹೇಳಿರುವನು.[66] ದಕ್ಷಿಣ ದೇಶದ ಸೂರ್ಯವಿಗ್ರಹಗಳಿಗೆ ಈ ನಿಯಮವಿಲ್ಲ. ಮತ್ತು ಸೂರ್ಯನ ಪಾದಗಳನ್ನು ತೋರಿಸಕೂಡದು. ಸೂರ್ಯನೇ ಪ್ರಧಾನದೇವತೆಯಾದ ದೇವಾಲಯಗಳು ಭರತಖಂಡದಲ್ಲಿ ಅತಿ ವಿರಳ. ಕಾಶ್ಮೀರದಲ್ಲಿ ಮಾರ್ತಂಡ, ಪಶ್ಚಿಮ

---

65 ಅಸಾವಾದಿತ್ಯೋ ಬ್ರಹ್ಮ — ಶ. ಬ್ರಾ. X-೩೫, ಯ ಏಷೋऽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ... ತಸ್ಯ ಉದಿತಿ ನಾಮ | ಛಾಂ. ಉಪ. I—೬—೬—೭, ಪಾರಸ್ಕರ ಗೃಹ್ಯ ಸೂತ್ರ. IV—೧—೧೪. ೩೯.

66 ಬೃಹತ್ಸಂಹಿತಾ. ೬೦-೧೯; ಭವಿಷ್ಯ ಪುರಾಣ ಅ. ೧೩೯; ೮ ೪೯.

ತೀರದಲ್ಲಿ ಮೊಢೇರಾ, ಪೂರ್ವತೀರದಲ್ಲಿ ಕೋಣಾರ್ಕ, ದಕ್ಷಿಣದಲ್ಲಿ ಸೂರ್ಯನಾರಾಯಣ ಕೋಯಿಲ್ ಎಂಬವು ಬಹಳ ಪ್ರಸಿದ್ಧವಾಗಿದ್ದವು. ಸೌರಮತದಲ್ಲಿ ತಪ್ತಚಕ್ರಾಂಕನ ಮುಂತಾದ ವಾಮಾಚಾರಗಳಿದ್ದವೆಂದು ಶಂಕರವಿಜಯ, ಮತ್ತು ಯವನಾಚಾರ್ಯಂಗನ ಗ್ರಂಥಗಳಿಂದ ತಿಳಿದುಬರುವದು. ಸೌರಪುರಾಣ ಮುಂತಾದುವು ಸೌರಮತಪರವಾಗಿವೆ.

**ಗಾಣಾಪತ್ಯಮತ:** ವೇದದಲ್ಲಿ ಗಣ, ವ್ರಾತ, ಸಮಿತಿ, ಸಭಾ, ಯೂಥ ಮುಂತಾದ ಪದಗಳಿಂದ ಸಮಾಜಗಳೂ, ಆರ್ಥಿಕ ಮತ್ತು ರಾಜಕೀಯ ಸಂಘಗಳು ನಿರ್ದಿಷ್ಟವಾಗಿವೆ. ಮರುದ್ಗಣಗಳಿಗೆ ಪತಿಯೂ ಪಿತೃವೂ ರುದ್ರನು. ಮರುತ್ತುಗಳೂ, ರುದ್ರನೂ ಆಕಾಶದೇವತೆಗಳಾದುದರಿಂದ ಆಕಾಶದೇವತೆಯಾದ ಬೃಹಸ್ಪತಿ ಅಥವಾ ಬ್ರಹ್ಮಣಸ್ಪತಿಯೇ ಗಣಪತಿಯೆಂದು ಹೇಳಿದೆ.[67] ಗಣರಾಜ್ಯಗಳು ಪ್ರಜಾಪ್ರಭುತ್ವವನ್ನು ಹೊಂದಿದ್ದವು. ಇವುಗಳ ಅಧ್ಯಕ್ಷನು ಗಣಪತಿ. ಪುರಾಣಗಳಲ್ಲಿ ಗಣಪತಿಯು ರುದ್ರನ ಮಗನೂ, ಕುಮಾರನಂತೆ ಸೇನಾಪತಿ (ವಿಷ್ವಕ್ಸೇನ)ಯಾದನು. ಗಣಪತಿಯು ಗಜವದನನಾಗಲು ಕಾರಣಗಳು ಪುರಾಣಗಳಲ್ಲಿ ಅನೇಕ ವಿಧವಾಗಿವೆ.[68] ಐತರೇಯೋಪನಿಷತ್ತಿನಲ್ಲಿ ರುದ್ರನೇ ವಿನಾಯಕನೆಂದು ಹೇಳಿದೆ. ಇತರ ಗ್ರಂಥಗಳಲ್ಲಿ ಗಣೇಶಪ್ರಭೇದಗಳು ಉಕ್ತವಾಗಿವೆ.[69] ಮಹಾಭಾರತವನ್ನು ಗಣಪತಿಯು ಲೇಖಿಸಿದನೆಂಬ ಕಥೆಯು

[67] ನಮೋ ವ್ರಾತೇಭ್ಯೋ ವ್ರಾತಪತಿಭ್ಯಶ್ಚ ವೋ ನಮೋ ನಮೋ ಗಣೇಭ್ಯೋ ಗಣಪತಿಭ್ಯಶ್ಚ - ಶ್ರೀರುದ್ರ. ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವಸ್ತಮಂ | ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆ ನಃ ಶೃಣ್ವನ್ನೂತಿಭಿಸ್ಸೀದ ಸಾದನಮ್ ||

[68] ಅಗ್ನಿ ಪು. ಅ. ೭೧; ಲಿಂಗಪುರಾಣ ೧೦೫; ಶಿವಪುರಾಣ—ಕುಮಾರಖಂಡ ೧೩-೨೦; ವರಾಹ ಪುರಾಣ. ಅ ೨೩; ಸ್ಕಾಂದ, ಮುದ್ಗಲಪುರಾಣ, ಗಣೇಶಪುರಾಣ ಇತ್ಯಾದಿ.

[69] ಬೌ.ಗೃ.ಸೂ. III—೬—೭೦೦ ಗಣಾನ್ ಪಶ್ಯತಿ ಗಣಾಧಿಪತಿಂ ಪಶ್ಯತಿ; ವಿಘ್ನ, ವಿನಾಯಕ, ಸ್ಥೂಲ, ವರದ, ಹಸ್ತಿಮುಖ ವಕ್ರತುಣ್ಡ, ಏಕದಂತ, ಲಂಬೋದರ—ಬೌ.ಗೃ.ಸೂ. II—೫—೨೧; ವಿನಾಯಕಃ ಕರ್ಮವಿಘ್ನಸಿದ್ಧ್ಯರ್ಥಂ ವಿನಿಯೋಜಿತಃ | ಗಣಾನಾಮಾಧಿಪತ್ಯೇ ಚ ರುದ್ರೇಣ ಬ್ರಹ್ಮಣಾ ತಥಾ || ಮಿತಶ್ಚ ಸಮ್ಮಿತಶ್ಚೈವ ತಥಾ ಸಾಲಕಟಂಕಟಃ | ಕೂಷ್ಮಾಂಡೋ ರಾಜಪುತ್ರಶ್ಚ ಜಪೇತ್ ಸ್ವಾಹಾ ಸಮನ್ವಿತಾನ್ || ಯಾಜ್ಞವಲ್ಕ್ಯಸ್ಮೃತಿ, I-೨೭೭, ೨೮೧. ಪ್ರಾಕ್ ಕೃತಾಶುಭಕರ್ಮನಿಚಯೋ ವಿನಾಯಕ ಶಬ್ದವಾಚ್ಯಃ | ಸೋऽಪಿ ಸ್ವಸತೋತ್ಪಾದ ಪ್ರವರ್ತ್ಯ ವಿವಿಧಂ ಮನುಷ್ಯಾನ್ ನಯನ್ ವಿನಾಯಕ ಏವ |—ವ್ಯಾಖ್ಯಾ. ಮಾನವ ಮತ್ತು ಬೈಜವಾಪಗೃಹ್ಯಸೂತ್ರಗಳಲ್ಲಿ ಸಾಲಕಟಂಕಟ, ಕೂಷ್ಮಾಂಡ, ರಾಜಪುತ್ರ, ಉಸ್ಮಿತ, ದೇವಯಜನರೆಂಬ ವಿನಾಯಕರು ಭೂತಗಳೆಂದು ಹೇಳಿದೆ.

ಆದಿಪರ್ವದಲ್ಲಿ ಈಚೆಗೆ ಸೇರಿದುದೆಂದು ನಿಶ್ಚಿತವಾಗಿದೆ.[70] ಬೌದ್ಧರಲ್ಲಿಯೂ,[71] ಜೈನರಲ್ಲಿಯೂ,[72] ಶಾಕ್ತರಲ್ಲಿಯೂ[73] ಗಣಪತಿ ಪೂಜೆಯು ಪ್ರಚಾರದಲ್ಲಿದೆ. ತನ್ತ್ರಗಳಲ್ಲಿ ಗಣಪತಿಯು ಮೂಲಾಧಾರಚಕ್ರಕ್ಕೆ ಅಭಿಮಾನದೇವತೆ, ತ್ರಿಕೋಣಮಧ್ಯದಲ್ಲಿರುವನು. ಪರಾವಾಕ್ ಸ್ವರೂಪನು. ಸೊಂಟದಲ್ಲಿರುವ ಹಾವು ಕುಣ್ಡಲಿನೀ ಶಕ್ತಿಸೂಚಕವಾದುದು. ಮೂಷಕವು ಬ್ರಹ್ಮಜ್ಞಾನವನ್ನು ಅಪಹರಿಸುವ ಅಜ್ಞಾನದ ಚಿಹ್ನೆ. ಸೊಂಡಿಲು ಪ್ರಣವಾಕಾರವಾದುದು. ತನ್ತ್ರಗಳಲ್ಲಿ ಹರಿದ್ರಾಗಣಪತಿ, ಶಕ್ತಿಗಣಪತಿ, ಉಚ್ಛಿಷ್ಟಗಣಪತಿ ಮುಂತಾದ ಅನೇಕ ವಿಧ ಗಣಪತಿಗಳ ಉಪಾಸನಾಕ್ರಮವು ಉಕ್ತವಾಗಿದೆ. ಬೃಹದ್ಭಾರತದಲ್ಲಿಯೂ ಗಣಪತಿಯು ಇಷ್ಟದೇವತೆಯಾಗಿದ್ದಿತು. ಕ್ರಿ.ಶ. ೫ನೆಯ ಶತಾಬ್ದದ ನಾಣ್ಯಗಳ ಮೇಲೆ ಗಣೇಶ ವಿಗ್ರಹವು ಕಂಡುಬರುವದು. ಗಣಪತ್ಯಥರ್ವಶೀರ್ಷೋಪನಿಷತ್ತು, ಗಣೇಶಪುರಾಣ, ಮುದ್ಗಲಪುರಾಣ ಮುಂತಾದುವು ಗಣೇಶನೇ ಸರ್ವೋತ್ತಮದೈವವೆಂದು ಪ್ರತಿಪಾದಿಸುವವು. ಈಚೆಗೆ ಮನಃಶಾಸ್ತ್ರಜ್ಞರು (*Psychoanalysis*) ಗಣಪತಿ ಉಪಾಸನೆಯ ಮೂಲತತ್ವಗಳನ್ನು ತಿಳಿದು ಮನೋದಾರ್ಢ್ಯವಿಲ್ಲದವರಿಗೆ ಫ್ರಾನ್ಸ್, ರಷ್ಯಾ, ಜರ್ಮನಿ ದೇಶಗಳಲ್ಲಿ ಗಣಪತಿ ಉಪಾಸನೆಯನ್ನು ಬೋಧಿಸುತ್ತಿರುವರು.

**ಕೌಮಾರಮತ:** ಗುಡ್ಡಗಳ ಮೇಲೆ ನೆಲಸಿ, ವೇಲ್ ಎಂಬ ಶೂಲವನ್ನೂ ಕುಕ್ಕುಟವಾಹನವನ್ನೂ ಹೊಂದಿದ ಮುರುಗನ್ ಎಂಬ ದ್ರಾವಿಡ ದೇವತೆಯೇ ಕುಮಾರಸ್ವಾಮಿಯಾದನೆಂದು ಕೆಲವರು ಹೇಳುವರು. ಆದರೆ ತ್ರಿಶೂಲ, ಶಿಖಿ (ಕೋಳಿ ಅಥವಾ ನವಿಲು, ಅಗ್ನಿ) ಯಜ್ಞೇಶ್ವರನ ಚಿಹ್ನೆಗಳು. ಕೃತ್ತಿಕಾ ನಕ್ಷತ್ರದಲ್ಲಿ ಅಗ್ನ್ಯಾಧಾನಮಾಡಬೇಕೆಂದು ಬ್ರಾಹ್ಮಣಗಳಲ್ಲಿ ಹೇಳಿದೆ.[74] ಆದುದರಿಂದ ಯಜ್ಞೇಶ್ವರನು ಕಾರ್ತಿಕೇಯನಾದನು. ಮತ್ತು ಯಜ್ಞಗಳಲ್ಲಿ ಸುಬ್ರಹ್ಮಣ್ಯಾ ಎಂಬ ಋತ್ವಿಜನು ವಾಕ್‌ಸ್ವರೂಪ,[75] ಉಪಸದನಂತರ ಉತ್ಕರದ ಬಳಿಯಲ್ಲಿ ಸ್ತ್ರೀವೇಷವನ್ನು ಧರಿಸಿದ ವೃದ್ಧನು ಸುಬ್ರಹ್ಮಣ್ಯಾ ಮನ್ತ್ರದಿಂದ ಇನ್ದ್ರನನ್ನು

---

70 ಮಹಾಭಾರತ. ಆದಿಪರ್ವ, ಅನುಶಾಸನಪರ್ವ ೧೫೧-೨೬.

71 Getty. *Ganeśa* ೯೭.

72 ಆಚಾರದಿನಕರ ಪು. ೨೧೦ ; *J. I. H* XVIII. ೧೯೩೯. p. ೧೫೮.

73 ಬ್ರಹ್ಮಾಣ್ಡಪುರಾಣ—ಲಲಿತೋಪಾಖ್ಯಾನ.

74 ಕೃತ್ತಿಕಾಸ್ವಗ್ನಿಮಾದಧೀತ—ತೈ. ಬ್ರಾ.

75 ವಾಗೇವಾಂ ಸುಬ್ರಹ್ಮಣ್ಯಾಸೀತ್ | ಛನ್ದೋಯೋಗಾನ್ವಿಜಾನತಿ || ತೈ. ಬ್ರಾ ; ಶತ ಬ್ರಾ III—೪-೧೭-೨೦ ; ಐ. ಬ್ರಾ. ೨೬—೩. ಷಾಣ್ಡಿ. I—೭-೩೭, ೩೮.

ಆಹ್ವಾನಿಸಬೇಕು.[76] ಪುರಾಣಗಳಲ್ಲಿಯೂ ಈ ಯಜ್ಞಸಂಬಂಧವು ಸ್ಪಷ್ಟವಾಗಿ ತೋರುವದು. ರಾಮಾಯಣದ ಪ್ರಕಾರ ಕಾರ್ತಿಕೇಯನು ಅಗ್ನಿ-ಗಂಗಾ ಪುತ್ರನು. ಮಹಾಭಾರತದಲ್ಲಿ[77] ಶಿವರೂಪನಾದ ಅಗ್ನಿಗೂ ಕೃತ್ತಿಕಾರೂಪಳಾದ ಸ್ವಾಹಾದೇವಿಗೂ ಕಾರ್ತಿಕೇಯನು ಜನಿಸಿದನೆಂದು ಹೇಳಿದೆ. ಪತಂಜಲಿಯ ಮಹಾಭಾಷ್ಯದಲ್ಲಿ ಶಿವ, ಸ್ಕಂದ, ವಿಶಾಖರು ಬೇರೆ ಬೇರೆ ದೇವತೆಗಳೆಂದು ಹೇಳಿದೆ. ಛಾಂದೋಗ್ಯೋಪನಿಷತ್ತಿನ ಪ್ರಕಾರ ಸ್ಕಂದನು ಸನತ್ಕುಮಾರನು. ಇಂದ್ರನು ತನ್ನ ವಜ್ರಾಯುಧದಿಂದ ಸ್ಕಂದನನ್ನು ಹೊಡೆಯಲು ಸ್ಕಂದನ ಬಲಭಾಗದಿಂದ ವಿಶಾಖನು ಹುಟ್ಟಿದನೆಂದು ಮಹಾಭಾರತದಲ್ಲಿದೆ.[78] ಕನಿಷ್ಕನ ನಾಣ್ಯಗಳ ಮೇಲೆ ಸ್ಕಂದ, ಮಹಾಸೇನ, ಕುಮಾರ, ವಿಶಾಖರು ಬೇರೆಬೇರೆ ರೂಪಗಳಿಂದ ಚಿತ್ರಿತರಾಗಿರುವದು ಅಮರಸಿಂಹನ ನಾಮಲಿಂಗಾನುಶಾಸನದಲ್ಲಿಯೂ ಸೂಚಿತವಾಗಿದೆ.[79] ಗುಪ್ತರ ಸಾಮ್ರಾಜ್ಯದಲ್ಲಿ ಕಾರ್ತಿಕೇಯ ಪೂಜೆಯು ಪ್ರಬಲವಾಗಿದ್ದಿತೆಂದು ರಾಜರ ಹೆಸರುಗಳಿಂದಲೂ (ಕುಮಾರಗುಪ್ತ, ಸ್ಕಂದಗುಪ್ತ), ಕಾಲಿದಾಸನ ಕುಮಾರಸಂಭವದಂತಹ ಕಾವ್ಯಗಳಿಂದಲೂ, ಗುಪ್ತರ ನಾಣ್ಯಗಳಿಂದಲೂ ಶಾಸನಗಳಿಂದಲೂ ತಿಳಿದುಬರುವದು. ಈ ನಾಣ್ಯಗಳ ಮೇಲೆ ಕುಕ್ಕುಟಕ್ಕೆ ಬದುಲಾಗಿ ನವಿಲು ಇದೆ. ಗುಪ್ತರ ಕಾಲದಲ್ಲಿ ಬಿಲ್ಸಾಡಿನ ಧ್ರುವಶರ್ಮನೆಂಬುವನು ಕ್ರಿ.ಶ. ೪೧೪ ರಲ್ಲಿ ಸ್ವಾಮಿ ಮಹಾಸೇನ ದೇವಾಲಯಕ್ಕೆ ಪ್ರತೋಳಿಯನ್ನು ಕಟ್ಟಿಸಿದನು.[80] ಕರ್ಣಾಟಕದಲ್ಲಿ ಕದಂಬರೂ ಚಾಳುಕ್ಯರೂ ಸ್ವಾಮಿ ಮಹಾಸೇನ ಪಾದಾನುಧ್ಯಾತರೂ ಮಾತೃಗಣ ಪರಿರಕ್ಷಿತರೂ ಎಂದು ಹೇಳಿಕೊಂಡಿರುವರು. ತಂತ್ರಗಳಲ್ಲಿ ಕುಮಾರಸ್ವಾಮಿಯ ಉಪಾಸನಾವಿಧಾನಗಳನ್ನು ವಿಸ್ತಾರವಾಗಿ ವರ್ಣಿಸಿದೆ. ಈ ತಾಂತ್ರಿಕ ಕೌಮಾರಮತವು ಅನೇಕ ದೇಶಗಳಲ್ಲಿ ವ್ಯಾಪಿಸಿದ್ದಿತೆಂದು ಆನಂದಗಿರಿಯ ಶಂಕರವಿಜಯದಿಂದ ತಿಳಿದುಬರುವದು. ಕರ್ಣಾಟಕದಲ್ಲಿ ಬಳ್ಳಾರಿ ಜಿಲ್ಲೆಯಲ್ಲಿರುವ ಸೊಂಡೂರು ಒಂದು ಪುಣ್ಯಸ್ಥಳವಾಗಿದ್ದಿತೆಂದು ರಾಷ್ಟ್ರ

[76] ಸುಬ್ರಹ್ಮಣ್ಯೋಂ | ಸುಬ್ರಹ್ಮಣ್ಯೋಂ | ಸುಬ್ರಹ್ಮಣ್ಯೋಂ | ಇಂದ್ರಾಗಚ್ಛ | ಹರಿವ ಆಗಚ್ಛ |

[77] ವನಪರ್ವ. ಅ. ೧೨೯.

[78] ಮಹಾಭಾರತ. ವನಪರ್ವ. ಅ. ೧೨೯.

[79] **ಕಾರ್ತಿಕೇಯೋ** ಮಹಾಸೇನಃ ಶರಜನ್ಮಾ ಷಡಾನನಃ | ಪಾರ್ವತೀನನ್ದನಃ **ಸ್ಕನ್ದೋ** ಸೇನಾನೀರಗ್ನಿಭೂರ್ಗುಹಃ | ಬಾಹುಲೇಯಸ್ತಾರಕಜಿತ್ **ವಿಶಾಖಃ** ಶಿಖಿವಾಹನಃ | ಷಾಣ್ಮಾತುರಃ ಶಕ್ತಿಧರಃ **ಕುಮಾರಃ** ಕ್ರೌಂಚದಾರಣಃ ||

[80] *J. B. B. R. A. S.* XX. p. 385.

ಕೂಟರ ಶಾಸನಗಳಿಂದ ತಿಳಿದುಬರುವದು.[81] ತಿರುಪತಿಯ ದೇವರು ಬಾಲಾಜಿ (ಬಾಲಸುಬ್ರಹ್ಮಣ್ಯ) ಅಥವಾ ಕುಮಾರಸ್ವಾಮಿಯೆಂದು ಕೆಲವರು ಊಹಿಸುವರು.[82] ಘಾಟೀಸುಬ್ರಹ್ಮಣ್ಯ, ಸೊಂಡೂರು, ಪಳಿನಿ ಮುಂತಾದ ಸ್ಥಳಗಳು ಈಗಲೂ ಕುಮಾರಸ್ವಾಮಿ ಕ್ಷೇತ್ರಗಳಾಗಿವೆ.

**ವಿದೇಶೀಯಮತಗಳು. ಇಸ್ಲಾಂಮತ:** ಇಸ್ಲಾಂ ಎಂದರೆ ಶರಣಾಗತಿ, ಪ್ರಪತ್ತಿ. ದೇವರು ಒಬ್ಬನು, ಶಾಶ್ವತನು. ದೇವರಿಗೆ ಅವತಾರಗಳಿಲ್ಲ. ಎಂತಹ ಘೋರಪಾತಕಗಳನ್ನಾದರೂ ಕ್ಷಮಿಸುವನು. ಆದರೆ ತನ್ನೊಡನೆ ಸಾಮ್ಯವನ್ನು ಮಾತ್ರ ಸಹಿಸುವದಿಲ್ಲ. ಆದುದರಿಂದ ವಿಗ್ರಹಾರಾಧನೆಯನ್ನು ಮಾಡಕೂಡದು. ಆತ್ಮವು (ರೂಹ್ ಅಥವಾ ನಫ್ಸ್) ಅನಾದಿಯಲ್ಲ. ಆತ್ಮಕ್ಕೆ ಸ್ವಾತಂತ್ರ್ಯವಿದ್ದರೂ ದೇವರಿಗೆ ಅಧೀನವಾಗಿರಬೇಕು. ಹಾಗಿದ್ದರೆ ಆತ್ಮವು ದೇವರ ಸಾಮೀಪ್ಯವನ್ನು ಪಡೆಯಬಹುದು. ಆತ್ಮದ ಪ್ರಗತಿಯಲ್ಲಿ ಐದು ಘಟ್ಟಗಳಿವೆ. ಅಮ್ಮರಾಹ್ ಎಂಬುದು ಪಶುಸ್ಥಿತಿ, ಲವ್ವಾಯಹ್ ಎಂಬುದು ಪಶ್ಚಾತ್ತಾಪಪಡುವದು. ಮುಲ್ಹಾಮ ಎಂಬುದು ಸ್ಫೂರ್ತಿ (Inspiration) ಪಡೆದ ಆತ್ಮದ ಸ್ಥಿತಿ. ಮುತಾಮಿನಹ್ ಎಂಬುದು ಪ್ರಶಾಂತವಾದ ಆತ್ಮ. ರಜಿಯಾ ಎಂಬುದು ಸಂತುಷ್ಟಿಪಡೆದ ಆತ್ಮ. ಮರ್ಜಿಯಹ್ ಎಂಬುದು ದೇವರಿಗೆ ಪ್ರೀತಿಯಾದ ಆತ್ಮ. ಎಲ್ಲಕ್ಕೂ ಉತ್ತಮವಾದುದು ಕಾಮಿಲಹ್ ಎಂಬ ಆತ್ಮವು ದೇವರೊಡನೆ ಸಂಪೂರ್ಣ ಸಾಮರಸ್ಯಹೊಂದಿದುದು. ಜೀವನದ ಧ್ಯೇಯವು ಪಶುಸ್ವಭಾವವನ್ನು ನಿರ್ಮೂಲಮಾಡಿಕೊಂಡು ಭಗವತ್ಕೈಂಕರ್ಯಮಾಡುವದೇ ಆಗಿದೆ. ಪ್ರಳಯದಲ್ಲಿ ಪುನರುತ್ಥಾನ (Reserrection) ವಾಗುವದು. ಪಶುಪಕ್ಷಿಗಳಿಗೂ ಈ ಪುನರುತ್ಥಾನವಿದೆ. ಮನುಷ್ಯನ ಅದೃಷ್ಟವು (ತಕ್ದೀರ್—ಅಳೆಯುವದು) ಪೂರ್ವದಲ್ಲಿಯೇ ನಿರ್ಧರಿಸಿದೆ. ಮಾನವನಿಗೆ ಸ್ವಲ್ಪ ಸ್ವಾತಂತ್ರ್ಯವಿದ್ದರೂ ದೇವರ ಚಿತ್ತಕ್ಕೆ ಅಧೀನವಾಗಿರಬೇಕು. ಏಕದೇವತೆಯಲ್ಲಿ, ಅಂತ್ಯನ್ಯಾಯ ತೀರ್ಮಾನದಲ್ಲಿ (Day of Judgment),

[81] *S. I. I.* XI pt I.

[82] ಶ್ರೀಪತಿಪಂಡಿತನು ಇದು ವೀರೇಶ್ವರಮೂರ್ತಿಯೆಂದೂ ರಾಮಾನುಜರಿಂದ ವಿಷ್ಣುಮೂರ್ತಿಯಾಗಿ ಪರಿವರ್ತಿಸಲ್ಪಟ್ಟಿತೆಂದು ಹೇಳುವನು (ಶ್ರೀಕರಭಾಷ್ಯ). ಶಂಕರಾಚಾರ್ಯರ ದ್ವಾದಶಲಿಂಗಸ್ತೋತ್ರದಲ್ಲಿ ಶ್ರೀಶೈಲದಲ್ಲೂ ಶೇಷಾದ್ರಿಯಲ್ಲೂ ಮಲ್ಲಿಕಾರ್ಜುನನಿರುವನೆಂದು ಹೇಳಿದೆ. ಮಂಜುಶ್ರೀ ಮೂಲಕಲ್ಪದಲ್ಲಿ ಮಂಜುನಾಥನೆಂದೂ, ಜೈನರ ಗ್ರಂಥಗಳಲ್ಲಿ ಋಷಭಾದ್ರಿಯ ಮೇಲೆ ಋಷಭನಿರುವನೆಂದು ಹೇಳಿದೆ. ಹರಿಹರಮೂರ್ತಿಯೆಂದು ಕೆಲವರು ಊಹಿಸುವರು.

ಮತ್ತು ಸತ್ಕರ್ಮಗಳಲ್ಲಿ ದೃಢವಾದ ನಂಬಿಕೆಯನ್ನಿಡಬೇಕು. "ಇಸ್ಲಾಮಿನಲ್ಲಿ ನಂಬಿಕೆ ಉಳ್ಳವರೂ, ಯಹೂದ್ಯರೂ, ಕ್ರೈಸ್ತರೂ, ಸೇಬಿಯನ್ ಜನರೂ, ಯಾರಾದರೂ ಆಗಲಿ ದೇವರನ್ನೂ, ಅಂತ್ಯನ್ಯಾಯವನ್ನೂ, ಸತ್ಕರ್ಮಗಳನ್ನೂ ನಂಬುವರೋ ಅವರೆಲ್ಲರ ಮೇಲೂ ದೇವರ ಅನುಗ್ರಹವಿದೆ. ಅವರು ಭಯಪಡ ಬೇಕಾಗಿಲ್ಲ. ಅವರು ದುಃಖಿಪಡುವದಿಲ್ಲ" (ಪವಿತ್ರ ಕೊರಾನ್ II, ೬೨). ದಿನಕ್ಕೆ ಐದುಸಲ ಪ್ರಾರ್ಥನೆ, ಉಪವಾಸಗಳು, ಮೆಕ್ಕಾಯಾತ್ರೆ, ಬಡವರಿಗೆ ದಾನಧರ್ಮ, ಸತ್ಯವಚನ, ತಾಳ್ಮೆ, ರಮ್ಜಾನ್ ಆಚರಣೆ ಇವು ಮುಸ್ಲಿಮರ ಕರ್ತವ್ಯಗಳು.

ಇಸ್ಲಾಂಮತದಲ್ಲಿ ಸುನ್ನಾತ್—ಜಮಾತ್ ಅಥವಾ ಸೂನ್ನಿ ಪಂಗಡದ ವರು ಸೋಮಾನ್, ಮುಹಮ್ಮದ್ ಬಿನ್ ಇದ್ರೀಸಿ, ಮಾಲಿಕ್, ಅಹ್ಮದ್ ಬಿನ್ ಹಂಸ್ಬಲ್ ಎಂಬ ಇಮಾಮರನ್ನೂ ಅವರ ತತ್ವಗಳನ್ನೂ ಅಂಗೀ ಕರಿಸುವರು. ಷಿಯಾ ಪಂಗಡದವರೂ ಸೊತಾಸ್ತರಿ ತತ್ತ್ವಗಳನ್ನೂ ಅಲೀ, ಹಸನ್, ಹುಸೇನ್, ಅಲೀ, ಮುಹಮ್ಮದ್, ಜಾಫರ್, ಮೂಸ, ಅಲೀ, ಮುಹಮ್ಮದ್, ಅಲೀ, ಹಸನ್, ಮುಹಮ್ಮದ್ ಎಂಬ ಹನ್ನೆರಡು ಇಮಾಮ ರನ್ನೂ ಅಂಗೀಕರಿಸುವರು. ಕೊನೆಯ ಇಮಾಮನಾದ ಮುಹಮ್ಮದನು ಏಸು ಕ್ರಿಸ್ತನೊಡನೆ ಅವತರಿಸಿ ಜಗತ್ತಿಗೆ ನ್ಯಾಯಶಾಂತಿ ತರುವನೆಂದು ನಂಬಿಕೆಯಿದೆ. ಇವರಲ್ಲಿ ಬೊಹ್ರ, ಖೋಜ ಪಂಗಡದವರು ಏಳು ಜನ ಇಮಾ ಮರನ್ನು ಮಾತ್ರ ಅಂಗೀಕರಿಸಿದುವರು. ಇವರಲ್ಲದೆ ವಹಾಬಿ, ಷೇಕಿ, ಮಹ್ದಾ ವಿಯ ಎಂಬ ಪಂಗಡಗಳೂ ಇರುವವು. ಮಹ್ದಾವಿಯ ಪಂಗಡದವರು ಗುಜರಾತಿನಲ್ಲಿ ಕ್ರಿ.ಶ. ೧೫೦೫ರಲ್ಲಿ ಅವತರಿಸಿದ ಜಾನುಪುರದ ಸೈಯದ್ ಮುಹಮ್ಮದ್ ಎಂಬಾತನೇ ಹನ್ನೆರಡನೆಯ ಇಮಾಮನೆಂದು ನಂಬುವರು. ಮೈಸೂರಿನಲ್ಲಿ ಚೆನ್ನಪಟ್ಣ, ಬನ್ನೂರು, ಕಿರಿಗಾವಲ್ ಮುಂತಾದ ಸ್ಥಳಗಳಲ್ಲಿ ನೆಲಸಿರುವ ದೈರೆಹ್ ಪಂಗಡದವರು ಅಕ್ಬರನ ಕಾಲದಲ್ಲಿ ಉತ್ತರದೇಶದಿಂದ ಬಂದರೆಂದು ತಿಳಿದುಬರುವದು.

**ಸೂಫಿ ಮತ :** ಪೈಗಂಬರರೂ ಅಲಿಯೂ ಪ್ರಥಮ ಸೂಫಿಗಳೆಂದು ಹೇಳುವರು. ಇರಾನಿನಲ್ಲಿ ಹಬೀಬ್ ಅಜಮಿ, ಇಬ್ರಹೀಂ ಆಧಂ, ಫೂಸೈಲ್ ಬಿನ್ ಅಯಾಸ್, ಬಾಲ್ಖ್ ದೇಶದ ಅಹ್ಮದ್, ಅಬು ಅಲೀನಖೀಬ್ ಎಂಬವರು ಈ ಮತವನ್ನು ವಿಸ್ತರಿಸಿದರು. ಹುಸೇನ್ ಹಲ್ಲಾಸ್ (ಕ್ರಿ.ಶ. ೮೫೮-೯೨೨) ಎಂಬಾತನು ಗುಜರಾತ್ ಪ್ರಾಂತದಲ್ಲಿ ಪ್ರವಾಸಮಾಡಿ ಅದ್ವೈತ ವೇದಾಂತ

ವನ್ನು ಹೋಲುವ ಸೂಫಿಮತವನ್ನೂ ಪ್ರಚಾರಮಾಡಿದನು. "ಅನ್ ಅಲ್ ಹಕ್" (ನಾನೇ ಆಪರಮಸತ್ಯ). ನಿತ್ಯಶುದ್ಧವಾದ ಪರಮಾತ್ಮವು ಪಶುರೂಪವಾದ ಜೀವಾತ್ಮಕ್ಕಿಂತ ಬೇರೆಯಾದಂತೆ ತೋರುವದು. ಪರಮಾತ್ಮನು ವಾಗತೀತನು, ಸಾದೃಶ್ಯರಹಿತನು. ಕರ್ಮಭೋಗದಿಂದ ಜೀವಾತ್ಮವು ಪರಿಶುದ್ಧವಾಗಿ ಪರಮಾತ್ಮನೊಡನೆ ಸಾಯುಜ್ಯ ಪಡೆಯಬಹುದು. ಸತ್ಕರ್ಮಗಳು ಪ್ರಾರ್ಥನೆಗಳಿಗಿಂತಲೂ ಉತ್ತಮ. ಸತ್ಯಸ್ವರೂಪವನ್ನು ವಿಶ್ವದೃಷ್ಟಿ, ನಿಜಜ್ಞಾನ, ಶಾಶ್ವತಜ್ಯೋತಿ, ಅನುಪಮವಾದ ಸೌಂದರ್ಯ, ವಾಙ್ಮನೋತೀತ, ನಿರ್ಗುಣ ಎಂದು ನಿರ್ದೇಶಿಸಬಹುದು. ಪ್ರಪಂಚವು ಮಿಥ್ಯೆ, ಅಸತ್ಯ, ಅಭಾವ ಮತ್ತು ಭ್ರಾಂತಿಮೂಲ. ನಾನಾತ್ವವು ಏಕತ್ವದ ಒಂದು ವಿಕಾರ, ಪರಮಾತ್ಮನು ಸೌಂದರ್ಯದ ರಾಶಿ. ಆದುದರಿಂದ ಪ್ರೀತಿಯು ಮುಖ್ಯ. ಮನುಷ್ಯನಿಗೆ ಕಾಮ, ಚಿತ್ತ, ಮತ್ತು ಆಧ್ಯಾತ್ಮಿಕ ಎಂಬ ಮೂರು ಗುಣಗಳಿವೆ. ಮುಕ್ತಿಗೆ ಪರಮಾತ್ಮನ ಅನುಗ್ರಹವು ಅವಶ್ಯಕ. ಮುಕ್ತಿಯೆಂದರೆ ಜೀವನು ಪರಮಾತ್ಮನಲ್ಲಿ ಲಯ (ಫನಾಫಿಲ್ಲಾಹ್) ವಾಗಿ ಐಕ್ಯವನ್ನು (ಹಖೀಖತ್) ಪಡೆಯುವದು. ಇವು ಸೂಫಿಮತದ ಮುಖ್ಯ ತತ್ವಗಳು.

ಇಸ್ಲಾಮ್ ಮತವು ಭರತಖಂಡದ ಪಶ್ಚಿಮ ಸರಹದ್ದಿಗೆ ಏಳನೆಯ ಶತಮಾನದ ಅಂತ್ಯದಲ್ಲೇ ಬಂದರೂ ಆರುನೂರು ವರ್ಷಗಳು ಕಳೆಯುವ ವರೆಗೂ ವ್ಯಾಪಿಸಲು ಶಕ್ತವಾಗಿರಲಿಲ್ಲ. ಸುಲೇಮಾನ್, ಇದ್ರೀಸಿ ಮುಂತಾದ ಅರಬ್ಬೀ ವರ್ತಕರು ಪ್ರವಾಸಮಾಡಿ ಅಮೋಘವರ್ಷ ನೃಪತುಂಗನ ಕಾಲದಲ್ಲಿದ್ದ ಸ್ಥಿತಿಯನ್ನು ವರ್ಣಿಸಿರುವರು. ಭರತಖಂಡದಲ್ಲಿ ಈ ವಿದೇಶೀ ಮತಕ್ಕೆ ಆತಿಥ್ಯವು ಸಿಕ್ಕಿದರೂ ಜನರಿಗೆ ಅಭಿರುಚಿ ಹುಟ್ಟಲಿಲ್ಲ. ಇಸ್ಲಾಂ ಮತವು ಕೇವಲ ಸೌಮ್ಯಮಾರ್ಗದಿಂದಲೇ ಹರಡಿತೆಂದು ಕೆಲವರು ಹೇಳುವದು ಸತ್ಯ ದೂರವಾದುದು. ಮುಸ್ಲಿಮ್ ಚರಿತ್ರಕಾರರಾದ ಬಡೌನಿ, ಫಿರಿಷ್ಟಾ, ಅಮೀರ್‌ಖುಸ್ರು, ಕೀರ್ಮಾನಿ ಮುಂತಾದವರ ಗ್ರಂಥಗಳೇ ಭರತಖಂಡದ ಐಶ್ವರ್ಯವನ್ನು ಲೂಟಿಮಾಡುವದು, ವಿಗ್ರಹಾರಾಧಕರಾದವರನ್ನು ನಾಶಮಾಡಿ ದೇವರ ಮೆಚ್ಚುಗೆಯನ್ನು ಪಡೆಯುವದೇ (ಘಾಸ್ಸಿ) ಮುಸ್ಲಿಮ್ ದಾಳಿಗಾರರ ಉದ್ದೇಶಗಳಾಗಿದ್ದವೆಂದು ಸ್ಪಷ್ಟವಾಗಿ ಹೇಳುತ್ತಿರುವಾಗ, ಭರತಖಂಡದಲ್ಲಿದ್ದ ಮತಗಳಿಗಿಂತಲೂ ಇಸ್ಲಾಮ್‌ಮತವು ಹೇಗೋ ಉತ್ತಮವೆಂದು ಭಾವಿಸಿದುದರಿಂದ ಭಾರತೀಯರಲ್ಲಿ ಕೆಲವರು ಇಸ್ಲಾಂ ಮತವನ್ನು ಸ್ವೀಕರಿಸಿದರೆಂಬ ಪ್ರಚಾರವು ಚರಿತ್ರೆಗೆ ವಿರುದ್ಧವಾಗಿದೆ. ಭರತಖಂಡದಲ್ಲೆಲ್ಲಾ ಮುಸ್ಲಿಮ್ ರಾಜ್ಯಭಾರವಿದ್ದಿತೆಂದೂ, ಅನಂತರ ಯೂರೋಪಿನ

ಜನಾಂಗಗಳು ಮುಸ್ಲಿಮರಿಂದ ರಾಜ್ಯವನ್ನು ಪಡೆದರೆಂಬುದೂ ಅಪಪ್ರಚಾರವಾಗಿದೆ. ಮುಘಲ್ ಸಾಮ್ರಾಜ್ಯವೂ ಕೂಡ ಭರತಖಂಡದಲ್ಲೆಲ್ಲ ವ್ಯಾಪಿಸಿರಲಿಲ್ಲ. ಸಿಕ್ಖರು, ರಾಜಪುತ್ರರು, ದಕ್ಷಿಣದೇಶದ ರಾಜರು ಸ್ವತಂತ್ರರಾಗಿಯೇ ಇದ್ದರು. ಮರಾಟರ ಸಾಮ್ರಾಜ್ಯವು ಮುಸ್ಲಿಮರ ರಾಜ್ಯಗಳನ್ನು ನಾಶಮಾಡಿತು. ಭರತಖಂಡದ ಮುಸ್ಲಿಮರೆಲ್ಲರೂ ಒಗ್ಗಟ್ಟಾಗಿ ಸಹೋದರಭಾವದಿಂದ ಇದ್ದರೆಂಬುದೂ ಪ್ರಜಾಪ್ರಭುತ್ವವನ್ನು ಹೊಂದಿದ್ದರೆಂಬುದೂ ಸತ್ಯದೂರವಾದುದು. ಮೊಘಲರಿಗೂ ಷಿಯಾಮತದವರಾದ ಬಹಮನೀರಾಜರಿಗೂ ಬದ್ಧದ್ವೇಷವಿದ್ದಿತು. ಅಕ್ಬರನಂತಹ ಕೆಲವರು ಪರಮತ ಸಹಿಷ್ಣುಗಳಾಗಿದ್ದುದಕ್ಕೆ ಅವರ ಆಡಳಿತವನ್ನು ಕಾಪಾಡಿಕೊಳ್ಳಬೇಕೆಂಬ ಧ್ಯೇಯವೇ ಮುಖ್ಯಕಾರಣ. ಆದುದರಿಂದ ಗುರುನಾನಕ್, ಕಬೀರ್ ಮುಂತಾದವರ ಪ್ರಯತ್ನಗಳೆಲ್ಲವೂ ವಿಫಲವಾದವು.

ಆದರೂ ಅರಬ್ಬೀಯರ ಸಂಪರ್ಕದಿಂದ ಭಾರತೀಯ ವಿಜ್ಞಾನವು ಯೂರೋಪ್ ಖಂಡಕ್ಕೆ ವ್ಯಾಪಿಸಿ ಯೂರೋಪಿನಲ್ಲಿ ನವಯುಗಕ್ಕೆ ಕಾರಣವಾಯಿತು. ಸಂಖ್ಯೆ, ಗಣಿತ, ಕಾಮಶಾಸ್ತ್ರ, ವೈದ್ಯ, ಜ್ಯೋತಿಷ, ಪಂಚತಂತ್ರದ ಕಥೆಗಳೇ ಮುಂತಾದುವು ಸ್ಪೈನ್ ಮೂಲಕ ಯೂರೋಪಿಯನ್ ಜನಾಂಗಗಳಿಗೆ ತಿಳಿದುಬಂದವು. ಅಲ್ಬೆರೂನಿ, ಫೈಸ್ಸಿ, ಅಬುಲ್ ಫಸ್ಲಲ್ ಮುಂತಾದವರು ಹಿಂದುಗಳ ಶಾಸ್ತ್ರಗಳನ್ನೂ ರಾಮಾಯಣ, ಮಹಾಭಾರತ, ಗೀತೆ ಮುಂತಾದ ಗ್ರಂಥಗಳನ್ನೂ ಪಾರ್ಸಿ ಭಾಷೆಗೆ ತರ್ಜುಮೆಮಾಡಿದರು. ಹಿಂದೂ ಮುಸ್ಲಿಮರ ಸಂಪರ್ಕದಿಂದ ಹಿಂದುಸ್ಥಾನಿ (ಉರ್ದು) ಭಾಷೆಯು ಹುಟ್ಟಿತು. ಕಲೆಗಳಲ್ಲಿ ಮೊಘಲ್ ಚಿತ್ರಕಲಾರೀತಿಯೂ, ವಾಸ್ತುಶಿಲ್ಪದಲ್ಲಿ ತಾಜ್‌ಮಹಲಿನಂತಹ ಜಗದ್ವಿಖ್ಯಾತವಾದ ಕಟ್ಟಡಗಳೂ ಉಂಟಾದವು.

**ಪಾರಸೀಮತ:** ಇರಾನ್ ದೇಶವನ್ನು ಅರಬ್ಬೀಯರು ಗೆದ್ದು ತಮ್ಮ ಮತವನ್ನು ಪ್ರಚಾರಮಾಡಿದುದರಿಂದ ಪಾರ್ಸಿಮತದವರು ಓಡಿಬಂದು ಭಾರತೀಯರ ಆಶ್ರಯವನ್ನು ಪಡೆದರು. ರಾಷ್ಟ್ರಕೂಟರೂ ಗುಜರಾತಿನ ಚಾಳುಕ್ಯಸಾಮಂತರು ಇವರಿಗೆ ನೆಲೆಯನ್ನು ಕೊಟ್ಟರು. ಅಕ್ಬರನ ಕಾಲದಲ್ಲಿ ಪಾರಸೀ ಪದ್ಧತಿಗಳಾದ ನೌರೋಸ್ ಮುಂತಾದವು ಪ್ರಚಾರಕ್ಕೆ ಬಂದವು. ಪರ್ಷಿಯನ್ ಭಾಷೆಯು ರಾಜಭಾಷೆಯಾಯಿತು. ಆದರೇ ಪಾರಸೀಮತವು ವಿಶೇಷವಾಗಿ ವ್ಯಾಪಿಸಲಿಲ್ಲ. ಪಾರಸಿಗಳು ಗುಜರಾತಿ ಭಾಷೆಗೆ ಉಪಕಾರ ಮಾಡಿರುವರು. ಈಚೆಗೆ ಒಂದೇ ಆರ್ಯಜನಾಂಗಕ್ಕೆ ಸೇರಿದ ಪಾರ್ಸಿಗಳಿಗೂ ಹಿಂದುಗಳಿಗೂ ಬಹುಕಾಲ ತಪ್ಪಿಹೋಗಿದ್ದ ಸಂಬಂಧವು ಪುನಃ ಬೆಳೆಯುತ್ತಿದೆ.

**ಕ್ರೈಸ್ತಮತ:** ಯೇಸು ಕ್ರಿಸ್ತನ ಶಿಷ್ಯನಾದ ಥಾಮಸ್ ಎಂಬವನು ಕ್ರಿ.ಶ. ೧ನೆಯ ಶತಾಬ್ದದಲ್ಲಿ ಭರತಖಂಡಕ್ಕೆ ಬಂದು ಮಲಬಾರ್ ಮತ್ತು ವಾಯುವ್ಯಪ್ರಾಂತಗಳಲ್ಲಿ ಕ್ರೈಸ್ತಮತವನ್ನು ಪ್ರಚಾರಮಾಡಿ ಮೈಲಾಪುರದಲ್ಲಿ ಮರಣಹೊಂದಿದನೆಂದೂ, ಅನಂತರ ಶಾತವಾಹನರ ಕಾಲದಲ್ಲಿ ಬಾರ್ಥೊಲೋಮಿಯೊ ಎಂಬವನೂ ಹೀಗೆಯೇ ಸಿರಿಯನ್ ಕ್ರಿಶ್ಚಿಯನ್ ಮತವನ್ನು ಹರಡಿ ಮರಣಹೊಂದಿದನೆಂದೂ ಐತಿಹ್ಯಗಳಿವೆ. ಆದುದರಿಂದ ಭರತಖಂಡದಲ್ಲಿ ಕ್ರೈಸ್ತಮತವು ೧೭೦೦ ವರ್ಷಗಳಿಂದಲೂ ಇದೆಯೆಂದು ಹೇಳಬಹುದು. ಹದಿನೈದನೆಯ ಶತಾಬ್ದದ ವರೆಗೂ ಕ್ರೈಸ್ತಮತವು ಹರಡಲು ಅವಕಾಶ ಸಿಕ್ಕಲಿಲ್ಲ. ಪೋರ್ಚುಗೀಸರು ಕೇರಳದ ಸಾಮೋರಿನ್ (ಚೇರಮಾನ್) ರಾಜರನ್ನೂ ವಿಜಯನಗರದ ಚಕ್ರವರ್ತಿಗಳನ್ನೂ ಆಶ್ರಯಿಸಿ ಸ್ವಲ್ಪ ಸ್ಥಳ ಪಡೆದು, "ಇನ್‌ಕ್ವಿಸಿಷನ್" ಎಂಬ ಸಂಸ್ಥೆಯ ಮೂಲಕ ಬಲವಂತದಿಂದ ಕ್ಯಾಥೊಲಿಕ್ ಮತವನ್ನು ಪ್ರಚಾರಮಾಡಿದರು. ಕ್ಸೇವಿಯರ್, ಬೆಸ್ಕಿ, ನೊಬಿಲಿ ಮುಂತಾದ ಜೆಸೂಟ್ ಪಾದ್ರಿಗಳು ಬ್ರಾಹ್ಮಣ ಸನ್ಯಾಸಿಗಳ ವೇಷಗಳನ್ನು ಧರಿಸಿ ಜನರನ್ನು ತಮ್ಮ ಮತಕ್ಕೆ ಸೆಳೆಯಲು ಯತ್ನಿಸಿದರು. ಇವರು ರಾಜಕೀಯ ವಿಷಯಗಳಲ್ಲೂ ಕೈಹಾಕುತ್ತಿದ್ದದರಿಂದ ವಿಜಯನಗರದ ರಾಮರಾಯ ಮುಂತಾದವರು ಇವರನ್ನು ಶಿಕ್ಷಿಸಿದರು. ಹದಿನೇಳನೆಯ ಶತಮಾನದಿಂದ ಪ್ರಾಟೆಸ್ಟೆಂಟ್ ಮತದ ಅನೇಕ ಪಂಗಡಗಳು ತಮ್ಮ ತಮ್ಮ ಮತಬೋಧನೆಗಾಗಿ ದೇಶಭಾಷೆಗಳಲ್ಲಿ ಮುದ್ರಣವಿಧಾನ, ಪುಸ್ತಕ ರಚನೆ, ವಾರ್ತಾಪತ್ರಿಕೆಗಳು ಮುಂತಾದವನ್ನು ಪ್ರಚಾರಮಾಡಿದರು. ಅದೇ ಉದ್ದೇಶದಿಂದ ವಿದ್ಯಾಶಾಲೆಗಳನ್ನೂ ಆರೋಗ್ಯಶಾಲೆಗಳನ್ನೂ ಸ್ಥಾಪಿಸಿದರು. ಇದರ ಫಲವಾಗಿ ಭಾರತೀಯರಲ್ಲಿ ಜಾಗೃತಿಯುಂಟಾಯಿತು.

**ಹತ್ತೊಂಬತ್ತನೆಯ ಶತಾಬ್ದದಲ್ಲಿ ಚಲುವಳಿಗಳು:** ಹಿಂದೂ ಸಮಾಜದ ಕೆಲವು ನ್ಯೂನತೆಗಳನ್ನು ಸರಿಪಡಿಸಿ ಸಮಾಜಸೇವೆ ಮಾಡುವದಕ್ಕಾಗಿ ರಾಮಮೋಹನರಾಯ, ಕೇಶವಚಂದ್ರಸೇನ, ಶಿವನಾಥಶಾಸ್ತ್ರಿ, ದೇವೇಂದ್ರನಾಥ ಠಾಕೂರ ಮುಂತಾದವರು ಬ್ರಹ್ಮಸಮಾಜವನ್ನು ಸ್ಥಾಪಿಸಿದರು. ಆದರೆ ಕೇಶವಚಂದ್ರನು ತನ್ನ ಬೋಧನೆಗೆ ವಿರುದ್ಧವಾಗಿ ಅಪ್ರಾಪ್ತವಯಸ್ಕಳಾದ ತನ್ನ ಮಗಳನ್ನು ಕುಚ್‌ಬಿಹಾರಿನ ರಾಜಪುತ್ರನಿಗೆ ವಿವಾಹ ಮಾಡಿದುದರಿಂದ ಬ್ರಹ್ಮಸಮಾಜದಲ್ಲಿ ಒಡಕುಹುಟ್ಟಿ ಜನರಿಗೆ ಗೌರವವು ಹೋಯಿತು. ಮ್ಯಾಡಾಮ್‌ಬ್ಲಾವಟ್ಸ್ಕಿ, ಕರ್ನಲ್ ಆಲ್ಕಾಟ್ ಎಂಬುವರು ದಿವ್ಯಜ್ಞಾನಸಮಾಜ (Theosophy) ವನ್ನು ಆರಂಭಿಸಿದರು. ಇದರಲ್ಲೂ

ಒಡಕುಹುಟ್ಟಿ ಒಂದು ಸಂಸ್ಥೆಯು ಲಾಸ್ ಆಂಜಿಲೀಸಿನಲ್ಲೂ ಮತ್ತೊಂದು ಆನಿಬಿಸೆಂಟರ ನೇತೃತ್ವದಲ್ಲಿ ಮದರಾಸಿನ ಬಳಿ ಅಡೆಯಾರಿನಲ್ಲೂ ಸ್ಥಾಪಿತವಾದವು. ವಾಯುವ್ಯಭಾಗದಲ್ಲಿ ಸ್ವಾಮಿ ದಯಾನಂದರು ವೈದಿಕಮತವನ್ನು ಉದ್ಧಾರಮಾಡುವದಕ್ಕೂ ಅನ್ಯಮತಗಳನ್ನು ಖಂಡಿಸುವದಕ್ಕೂ ಆರ್ಯಸಮಾಜವನ್ನು ಸ್ಥಾಪಿಸಿ, "ಸತ್ಯಾರ್ಥಪ್ರಕಾಶ" ಮುಂತಾದ ಗ್ರಂಥಗಳನ್ನು ರಚಿಸಿದರು. ಮಹಾರಾಷ್ಟ್ರದಲ್ಲಿ ರಾನಡೆ, ಭಂಡಾರ್ಕರ್ ಮುಂತಾದವರು ಬ್ರಹ್ಮಸಮಾಜದಂತೆ ಪ್ರಾರ್ಥನಾಸಮಾಜವನ್ನು ಸ್ಥಾಪಿಸಿ ಸಮಾಜ ಸುಧಾರಣೆಗೆ ಯತ್ನಿಸಿದರು. ಆದರೆ ರಾನಡೆಯವರೇ ತಮ್ಮ ತಂದೆಯ ಆಜ್ಞೆಯನ್ನು ಮೀರಲಾರದೆ ಎರಡನೆಯ ಸಲ ಕನ್ಯಾವಿವಾಹವನ್ನು ಮಾಡಿಕೊಂಡುದರಿಂದ ಈ ಸಮಾಜವೂ ಜನರ ಗೌರವವನ್ನು ಪಡೆಯಲಿಲ್ಲ. ಈ ಎಲ್ಲ ಪ್ರಯತ್ನಗಳಿಗಿಂತಲೂ ಯಶಸ್ವಿಯಾದುದು ರಾಮಕೃಷ್ಣ-ವಿವೇಕಾನಂದರ ಚಳುವಳಿ. ಶ್ರೀ ರಾಮಕೃಷ್ಣ ಪರಮಹಂಸರು ಶೈವ, ವೈಷ್ಣವ, ಶಾಕ್ತ, ಬೌದ್ಧ, ಇಸ್ಲಾಂ, ಕ್ರೈಸ್ತಮತಗಳನ್ನೆಲ್ಲ ಅನುಭವಕ್ಕೆ ತಂದುಕೊಂಡು ಅದ್ವೈತದ ಪ್ರಭಾವಕ್ಕೆ ನಿದರ್ಶನರಾದರು. ಶ್ರೀ ರಾಮಕೃಷ್ಣರ ಪ್ರಿಯ ಶಿಷ್ಯರಾದ ವಿವೇಕಾನನ್ದರು ಅದ್ವೈತ ತತ್ವಗಳನ್ನು ಜಗತ್ತಿಗೆಲ್ಲ ಘೋಷಿಸಿ ಭಾರತೀಯ ಸಂಸ್ಕೃತಿಯ ಮೂಲತತ್ವವನ್ನು ಸಂರಕ್ಷಿಸಿದರು.[೬೩]

[63] D. S. Sarına: *Renaissance o Hinduism*, Benares. 1943.

# ೭. ಸಾಮಾಜಿಕ ಸ್ಥಿತಿ

ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿಹಸ್ತಿನಿ |
ಶುನಿಚೈವ ಶ್ವಪಾಕೇ ಚ ಪಂಡಿತಾಸ್ಸಮದರ್ಶಿನಃ || —ಗೀತಾ.

ಬ್ರಾಹ್ಮಣೇ ಪುಲ್ಕಸೇಸ್ತೇನೇ ಬ್ರಹ್ಮಣ್ಯರ್ಕೇ ಸ್ಫುಲಿಂಗಕೇ |
ಅಕ್ರೂರೇ ಕ್ರೂರಕೇಚೈವ ಸಮದೃಕ್ಪಂಡಿತೋಮತಃ ||
ನರೇಷ್ವಭೀಕ್ಷ್ಣಂ ಮದ್ಭಾವಂ ಪುಂಸೋ ಭಾವಯತೋಽಚಿರಾತ್ |
ಸ್ಪರ್ಧಾಸೂಯಾ ತಿರಸ್ಕಾರಾ ಸಾಹಂಕಾರಾ ವಿಯನ್ತಿಹಿ ||

ಶ್ರೀ ಭಾಗವತ.

ಭರತಖಂಡದ ಸಮಾಜವ್ಯವಸ್ಥೆಗೆ ಸಾಮ್ಯವು ಪ್ರಪಂಚದ ಸುತ್ತಾವ ದೇಶದಲ್ಲಿಯೂ ಕಂಡುಬರುವದಿಲ್ಲ. ಭಾರತೀಯ ಸಮಾಜವು ಆಧ್ಯಾತ್ಮಿಕ ತತ್ವಗಳಿಗನುಸಾರವಾಗಿ ನಿರ್ಮಿತವಾದ ವರ್ಣಾಶ್ರಮದ ವಿಭಜನೆಯ ಮೇಲೆ ನಿಂತಿದೆ. ವರ್ಣವ್ಯವಸ್ಥೆಯ ಗುಣಾವಗುಣಗಳ ವಿಮರ್ಶೆಯೂ, ಸಮಾಜ ಸುಧಾರಣೆ ಪ್ರಯತ್ನಗಳೂ ಸಾವಿರಾರು ವರ್ಷಗಳಿಂದ ನಡೆಯುತ್ತ ಬಂದಿವೆ. ವೈದಿಕ ವಾಙ್ಮಯದಲ್ಲಿ ಅತ್ಯಾಶ್ರಮಿಗಳಿಗೆ ಯಾವ ನಿಯಮವೂ ಇಲ್ಲವೆಂದು ಕೆಲವು ಕಡೆ ಹೇಳಿದೆ. ವರ್ಣಗಳು ಗುಣ, ಕರ್ಮ, ವೃತ್ತಿ, ಮತ, ಭಾಷೆ, ದೇಶ ಮುಂತಾದುವುಗಳನ್ನನುಸರಿಸಿರುವವೇ ವಿನಾ ಮನುಷ್ಯವರ್ಗ (Race) ಗಳ ನ್ನನುಸರಿಸಿಲ್ಲ. ಒಂದೇ ಗೋತ್ರದಲ್ಲಿಯೇ ಬ್ರಾಹ್ಮಣ ಕ್ಷತ್ರಿಯ ವೈಶ್ಯರೂ ಇರಬಹುದು. ಬ್ರಾಹ್ಮಣರಲ್ಲಿಯೇ ೧೮೦೦ ಪಂಗಡಗಳಿವೆಯೆಂದೂ ಹಿಂದೂ ಸಮಾಜದಲ್ಲೆಲ್ಲ ಸುಮಾರು ೩೦೦೦ ಪಂಗಡಗಳಿವೆಯೆಂದೂ ಲೆಕ್ಕಿಸಿದೆ. ಕಾಶ್ಮೀರಬ್ರಾಹ್ಮಣನೂ ದ್ರಾವಿಡಬ್ರಾಹ್ಮಣನು ಒಂದೇ ಮಾನವವರ್ಗಕ್ಕೆ ಸೇರಿದವರೆಂದು ಹೇಳಲಾಗದು. ಕೀಳುಜಾತಿಗಳೆಂದೆನಿಸಿದ ಮೋಚಿ, ಮಹಾರ್ ಮುಂತಾದವರಲ್ಲಿ ಮಾನವ ಶರೀರಶಾಸ್ತ್ರದ ಪ್ರಕಾರ ಕೆಲವರು ಬ್ರಾಹ್ಮಣರಿ ಗಿಂತಲೂ ಹೆಚ್ಚಾಗಿ "ನಾರ್ಡಿಕ್" ಲಕ್ಷಣಗಳು ಕಂಡುಬರುವವು. ಆದು ದರಿಂದ ವರ್ಣವಿಭಾಗವು ಮಾನವವರ್ಗಗಳನ್ನನುಸರಿಸದೇ ಗುಣಕರ್ಮಗಳ ನ್ನನುಸರಿಸಿ ಏರ್ಪಾಟಾಗಿದೆ. ಪುರುಷಸೂಕ್ತದಲ್ಲಿ ವರ್ಣಗಳು ವೃತ್ತಿಭೇದಗಳಿ ಗನುಸಾರವಾಗಿ ಹುಟ್ಟಿದವೆಂದು ಸೂಚಿಸಿರುವದರಿಂದ ಉಚ್ಚನೀಚಭಾವಗಳಿಗೆ ಅವಕಾಶವಿಲ್ಲ. ಸಮಾಜವೆಂಬ ಸಜೀವಪುರುಷನಿಗೆ ಅಂಗಗಳಂತೆ ಎಲ್ಲವೂ ಅವಶ್ಯಕ.

ವರ್ಣವಿಭಾಗವು ಬೀಜರೂಪದಲ್ಲಿ ಇತರ ದೇಶಗಳಲ್ಲಿಯೂ ಇದ್ದಿತೆಂದು ಕಂಡುಬರುವದು. ಇರಾಸಿನಲ್ಲಿ ಸ್ಪರತ್ರೂಷ್ಟ್ರ ಅಥವಾ ಯಿಮಸು ಆರ್ಯರ ಮೂಲಸ್ಥಾನವಾದ ಐರ್ಯವೈಜೊ (ಆರ್ಯಬೀಜ) ಎಂಬ ದೇಶದಲ್ಲಿ ಅಥರ್ವನ್ (ಬ್ರಾಹ್ಮಣ), ರಥೇಷ್ಟರ್ (ಕ್ಷತ್ರಿಯ), ವಾಸ್ತ್ರಿಯ (ಕೃಷಕ) ಎಂಬ ಮೂರು ವರ್ಣಗಳನ್ನು ನಿರ್ಮಿಸಿದನೆಂದು ಅವೆಸ್ಟ ಮತ್ತು ಸಾಹ್‌ನಾಮ ಎಂಬ ಗ್ರಂಥಗಳಿಂದ ತಿಳಿದುಬರುವದು. ಇರಾನಿನ ಬುಂದಾಹ್ಸಿನ್, ಪ್ಲೇಟೋಗೆ ಹಿಂದೆ ರಚಿತವಾದ ಗ್ರೀಕರ ವೈದ್ಯಗ್ರಂಥಗಳು, ಅರ್ಫಿಕ್ ಸ್ತೋತ್ರಗಳು, ಬೈಬಲಿನ ಇಸೋಕ್ ಪುಸ್ತಕ, ಜರ್ಮನ್ನರ ಯಿಮಿರ್ ಕಥೆಗಳು, ಹಳೆಯ ರಷ್ಯನ್ ಭಾಷೆಯಲ್ಲಿರುವ "ಪಾರಿವಾಳದ ಪುಸ್ತಕ" ಇವೆಲ್ಲ ಪುರುಷಸೂಕ್ತವನ್ನನುಸರಿಸಿ ವರ್ಣವಿಭಾಗಗಳನ್ನು ಹೇಳಿವೆ. ಪ್ಲೇಟೋ ಕೂಡ ಈ ವರ್ಣವಿಧಾನವನ್ನಂಗೀಕರಿಸಿರುವನು. ಆದುದರಿಂದ ವರ್ಣವಿಭಜನೆಯು ಪ್ರಕೃತಿ ಸಹಜವಾದುದು. ಸತ್ವ, ರಜಸ್ ಮತ್ತು ತಮೋಗುಣಗಳನ್ನೂ ಕರ್ಮಗಳನ್ನೂ ಅನುಸರಿಸಿ ಹುಟ್ಟಿದೆ. ಕೇವಲ ಜಾತಿಯೆಂಬ ದುರಹಂಕಾರ ವೈಷಮ್ಯಗಳಿಂದ ಉತ್ಪನ್ನವಾದುದಲ್ಲ. ಹಾಗಿದ್ದಪಕ್ಷದಲ್ಲಿ ಎಂತಹ ಅಜ್ಞರೂ ಕೂಡ ಸಾವಿರಾರು ವರ್ಷಗಳಿಂದ ಸುಮ್ಮನೆ ಅನ್ಯಾಯವನ್ನು ಸಹಿಸುತ್ತಿರಲಿಲ್ಲ. ಈಗಲೂ ಕೂಡ ಎಚ್. ಜಿ. ವೆಲ್ಸ್, ಗೆರಾಲ್ಡ್ ಹರ್ಡ್ ಮುಂತಾದ ಸಮಾಜ ಸುಧಾರಕರು ಮಾನವವರ್ಗದಲ್ಲಿ ಸ್ಥೈರ್ಯ, ಶಾಂತಿ, ಸೌಖ್ಯಗಳುಂಟಾಗಬೇಕಾದರೆ "ನವೀನ ಬ್ರಾಹ್ಮಣರೂ" (Neo-Brahmins), ಯಾವುದಾದರೂ ಒಂದು ವಿಧವಾದ ವರ್ಣವ್ಯವಸ್ಥೆಯೂ ಅತ್ಯವಶ್ಯಕವೆಂದು ಒಪ್ಪಿಕೊಂಡಿರುವರು. ಕೆಲವರು ಚರಿತ್ರಕಾರರು ಜೈನ ಮತ್ತು ಬೌದ್ಧಮತಗಳು ವರ್ಣವಿಭಾಗಗಳನ್ನು ನಿರ್ಮೂಲಮಾಡಲು ಯತ್ನಿಸಿದವೆಂದು ಹೇಳಿರುವರು. ಇದು ತಪ್ಪು. ಗೌತಮಬುದ್ಧನು ಕೆಲವು ದುರಾಚಾರಗಳನ್ನು ಮಾತ್ರ ಖಂಡಿಸಿದನು. ಸನ್ಯಾಸಿಯಾದವನಿಗೆ ಮಾತ್ರ ಯಾವ ವರ್ಣವೂ ಇಲ್ಲವೆಂದೂ, ತಾನೇ ಆದರ್ಶಬ್ರಾಹ್ಮಣನೆಂದೂ ಹೇಳಿಕೊಂಡಿರುವನು. ಭರತಖಂಡಕ್ಕೆ ರಾಜ್ಯಗಳನ್ನು ಕಟ್ಟಲು ಬಂದ ಶಕ, ಯವನ, ಚೀಣ, ಹೂಣ ಮುಂತಾದವರೂ ವರ್ಣಾಶ್ರಮಪದ್ಧತಿಯನ್ನು ನಿರ್ಮೂಲಮಾಡಲೂ ಯತ್ನಿಸಲಿಲ್ಲ. ಅಷ್ಟೇ ಅಲ್ಲದೆ ಕ್ಷತ್ರಿಯ ಅಥವಾ ಶೂದ್ರವರ್ಣಕ್ಕೆ ಸೇರಿಕೊಂಡು ಬ್ರಾಹ್ಮಣರ ಧಾರ್ಮಿಕ ವ್ಯವಸ್ಥೆಯನ್ನಂಗೀಕರಿಸಿ ಸಂತುಷ್ಟರಾದರು.

ಕೆಲವರು ವರ್ಣಾಶ್ರಮ ವಿಧಾನವು ಕೇವಲ ವಂಶಾನುಕ್ರಮವನ್ನೇ ಅನುಸರಿಸಿ ಬರುತ್ತಿರುವುದರಿಂದ ರಾಷ್ಟ್ರೀಯ ಭಾವವು ಹುಟ್ಟಲಾರದೆಂದೂ,

ಆದುದರಿಂದ ಪರದೇಶೀಯರ ದಾಳಿಯನ್ನು ಎದುರಿಸಲು ಭಾರತೀಯರಲ್ಲಿ ಒಗ್ಗಟ್ಟು ಇಲ್ಲದೆಹೋಯಿತೆಂದೂ, ನಿಜವಾದ ಪ್ರಜಾಪ್ರಭುತ್ವವು ವರ್ಣಗಳು ಇರುವ ವರೆಗೂ ಸಿದ್ಧಿಸಲಾರದೆಂದೂ, ಎಲ್ಲರಿಗೂ ಸಮವಾದ ನ್ಯಾಯ ದೊರಕಲಾರದೆಂದೂ, ದುರಹಂಕಾರಕ್ಕೆ ಅವಕಾಶವಿದೆಯೆಂದೂ, ಸಮಾಜದಲ್ಲಿ ಐಕಮತ್ಯವಿಲ್ಲವೆಂದೂ ಆದುದರಿಂದ ವರ್ಣವ್ಯವಸ್ಥೆಯನ್ನು ಎಷ್ಟು ಬೇಗ ನಿರ್ಮೂಲಮಾಡಿದರೆ ಅಷ್ಟು ಕ್ಷೇಮವೆಂದೂ ಆಧುನಿಕರೇ ಅಲ್ಲದೆ ಹಿಂದಿನವರೂ ಆಕ್ರೋಶಮಾಡಿದರು. ಆದರೆ ಭರತಖಂಡದಲ್ಲಿ ನೆಲಸಿದ ವಿದೇಶೀಯರೂ ಕೂಡ ಯಾವುದೋ ಒಂದು ವಿಧವಾಗಿ ವರ್ಣವ್ಯವಸ್ಥೆಯನ್ನಂಗೀಕರಿಸಿರುವರು. ಇಂಡಿಯನ್ ಕ್ರಿಶ್ಚಿಯನ್, ಪಾರಸೀ, ಮುಸ್ಲಿಂ ಮತ್ತು ಬೌದ್ಧ ಮತದವರೂ ವರ್ಣಭೇದಗಳನ್ನು ಹೊಂದಿರುವರೆಂಬುದಕ್ಕೆ ಸಾಕಾದಷ್ಟು ನಿದರ್ಶನಗಳಿವೆ. ರಾಜಕೀಯ ದೃಷ್ಟಿಯಿಂದಲೂ ಆರ್ಥಿಕ ದೃಷ್ಟಿಯಿಂದಲೂ ಕೆಲವರು ಕಾರಲ್‌ಮಾರ್ಕ್ಸ್ ತತ್ವಗಳನ್ನು ನಂಬಿ ಭಾರತೀಯರ ಚರಿತ್ರೆಯು ವರ್ಣಸ್ಪರ್ಧೆಗೆ (Class Conflict) ನಿದರ್ಶನವಾಗಿದೆಯೆಂದು ಹೇಳುವರು. ವೇದಯುಗದಲ್ಲಿ ರಾಜಕೀಯ ಬಲವು ಬ್ರಾಹ್ಮಣರ ಕೈಲಿದ್ದಿತೆಂದೂ, ಅನಂತರ ಬುದ್ಧ ಮಹಾವೀರರ ಕಾಲದಲ್ಲಿ ಕ್ಷತ್ರಿಯರು ಆಳಿದರೆಂದೂ, ಅನಂತರ ಶೈಶುನಾಗವಂಶವನ್ನು ನಾಶಮಾಡಿದ ನಂದರು ಶೂದ್ರರಾದುದರಿಂದ ಶೂದ್ರವರ್ಣದ ಆಳಿಕೆ ನಡೆಯಿತೆಂದೂ, ಮೌರ್ಯರ ಅನಂತರ ಶುಂಗ, ಕಾಣ್ವ, ಶಾತವಾಹನ, ಕದಂಬ, ಪಲ್ಲವ ಮುಂತಾದವರು ಬ್ರಾಹ್ಮಣರಾದುದರಿಂದ ಪುನಃ ಬ್ರಾಹ್ಮಣರು ಆಳಿದರೆಂದೂ, ನಾಲ್ಕನೆಯ ಶತಮಾನದಿಂದ ಗುಪ್ತರೂ ಹರ್ಷನೂ ವೈಶ್ಯರಾದುದರಿಂದ ವೈಶ್ಯವರ್ಣದ ಆಳಿಕೆ ನಡೆಯಿತೆಂದೂ ಕಲ್ಪಿಸಿರುವರು. ಇದು ಸತ್ಯದೂರವಾದುದು. ಕೆಲವರು ವೈಶ್ಯರೂ, ಬ್ರಾಹ್ಮಣರೂ, ಶೂದ್ರರೂ, ರಾಜ್ಯಗಳನ್ನು ಕಟ್ಟಿದರೂ ರಾಜಕೀಯ ಬಲವು ವ್ಯಕ್ತಿಗತವಾಗಿದ್ದಿತೇ ವಿನಾ ಆಯಾ ವರ್ಣದವರಲ್ಲೆಲ್ಲಾ ಇರಲಿಲ್ಲ. ಮತ್ತು ಸಾಮಾನ್ಯವಾಗಿ ಕ್ಷತ್ರಿಯರೂ ಬ್ರಹ್ಮ-ಕ್ಷತ್ರಿಯರೇ ರಾಜರಾಗಿದ್ದರು. ಬ್ರಾಹ್ಮಣರು ಪುರೋಹಿತ, ಅಮಾತ್ಯ ನಿಯೋಗಿ ಕರಣಿಕ ಮುಂತಾದ ಅಧಿಕಾರಗಳಿಂದಲೇ ತೃಪ್ತರಾಗಿದ್ದರು. ಕೌಟಿಲ್ಯ, ವಿದ್ಯಾರಣ್ಯರಂತಹವರು ಸಾಮ್ರಾಜ್ಯ ಸ್ಥಾಪನೆ ಮಾಡಿದರೂ ಅನ್ಯವರ್ಣದವರನ್ನೇ ರಾಜರನ್ನಾಗಿ ಮಾಡಿದರು. ಈ ರಾಜರು ಬ್ರಾಹ್ಮಣರ ಗೊಂಬೆಗಳಂತಿರಲಿಲ್ಲ. ಆದುದರಿಂದ ವರ್ಣವ್ಯವಸ್ಥೆಯು ದೇಶದ ಪರಾಧೀನತೆಗೆ ಕಾರಣವೆಂದು ಹೇಳುವುದು ತಪ್ಪು. ಪರದೇಶಗಳಿಂದ ಬಂದ ಶಕ, ಕ್ಷತ್ರಪ, ಪಾರ್ಥಿವ ಮುಂತಾದ ರಾಜರು ಕೂಡ ಶಿಥಿಲವಾಗುತ್ತಿದ್ದ ಧರ್ಮವರ್ಣಾಶ್ರಮಗಳನ್ನು

ಪುನರುದ್ಧಾರಮಾಡಿದೆವೆಂದು ಹೆಮ್ಮೆಯಿಂದ ಹೇಳಿಕೊಂಡಿರುವರು. ಅಂತಹವರನ್ನೆಲ್ಲ ದೇಶದ್ರೋಹಿಗಳು, ಅಜ್ಞರು, ಮೋಸಹೋದವರೆಂದು ತೀರ್ಮಾನಿಸಿಬಿಡುವುದು ನಮ್ಮ ಅಜ್ಞಾನವನ್ನೇ ತೋರಿಸುವುದು. ವರ್ಣವ್ಯವಸ್ಥೆಯು ನಮ್ಮ ದೇಶಕ್ಕೆ ಐಕ್ಯಭಾವವನ್ನೂ ವೈವಿಧ್ಯವನ್ನೂ ಕೊಟ್ಟಿದೆ. ವರ್ಣವ್ಯವಸ್ಥೆಯಿಲ್ಲದಿದ್ದರೆ ಸಮಾಜದ ಬಿಗಿಯು ಸಡಿಲವಾಗಿ ಪರದೇಶೀಯರ ದಾಳಿಯಿಂದ ಈಜಿಪ್ಟ್, ಸುಮೇರು, ಅಸ್ಸಿರಿಯ ಸಂಸ್ಕೃತಿಗಳು ನಶಿಸಿದಂತೆ ನಮ್ಮ ಸಂಸ್ಕೃತಿಯೂ ಅದೃಶ್ಯವಾಗಿ ಹೋಗುತ್ತಿದ್ದಿತು. ಸ್ವಧರ್ಮರಕ್ಷಣೆಯಲ್ಲಿ ನಿಧನವಾದರೂ ನಿಶ್ಶ್ರೇಯಸಸಿದ್ಧಿ ಉಂಟಾಗುವದೆಂಬ ಭಾವವು ಭಾರತೀಯ ಸಂಸ್ಕೃತಿಯ ವ್ಯಕ್ತಿತ್ವವನ್ನು ಕಾಪಾಡಿದೆ. ವರ್ಣವು ಕುಲಕ್ರಮಾಗತವಾದ ವೃತ್ತಿಗಳನ್ನು ಪೋಷಿಸಿ ಆರ್ಥಿಕಾಭಿವೃದ್ಧಿಯನ್ನು ಮಾಡಿದೆ. ಶ್ರೇಣಿ, ಸಂಘ, ಪೂಗ ಮುಂತಾದವು ಪ್ರಜಾಪ್ರಭುತ್ವದ ತತ್ವಗಳನ್ನು ಬೋಧಿಸಿದೆ. ಸಮಾಜದಲ್ಲಿ ಧರ್ಮ ಮತ್ತು ನೀತಿಗಳನ್ನು ಸ್ಥಾಪಿಸಿದೆ. ಕಲಾಕೌಶಲ್ಯವನ್ನು ಹೆಚ್ಚಿಸಿದೆ. ಬೇರೆ ಕಾನೂನುಗಳ ಅವಶ್ಯಕತೆಯಿಲ್ಲದಂತೆ ಧರ್ಮದಾನಗಳಿಂದ ಕ್ಷಾಮ ಮತ್ತು ಆಪತ್ಕಾಲಗಳಲ್ಲಿ ದರಿದ್ರರನ್ನು ರಕ್ಷಿಸಿ ನಿರುದ್ಯೋಗ ಸಮಸ್ಯೆಯನ್ನು ಪರಿಹರಿಸಿತು. ನ್ಯಾಯಕ್ಕೂ ಸ್ವಾತಂತ್ರ್ಯಕಾಂಕ್ಷೆಗೂ ಸಮನ್ವಯಮಾಡಿದೆ. ಹೀಗೆ ವರ್ಣವಿಧಾನದಲ್ಲಿ ಕೆಲವು ಕುಂದುಕೊರತೆಗಳಿದ್ದರೂ ನಿಷ್ಪಕ್ಷಪಾತದೃಷ್ಟಿಯಿಂದ ಪರಿಶೀಲಿಸಿದರೆ ಸದ್ಗುಣಗಳೇ ಅಧಿಕವಾಗಿವೆಯೆಂದು ಹೇಳಬೇಕು.

**ಚಾತುರ್ವರ್ಣ್ಯ: ಬ್ರಾಹ್ಮಣರು:** ಬ್ರಾಹ್ಮಣ ವರ್ಣಧರ್ಮಗಳಲ್ಲಿ ಅಧ್ಯಯನ, ಇಜ್ಯಾ, ದಾನಗಳೆಂಬ ದ್ವಿಜಾತಿ ಸಾಮಾನ್ಯ ಧರ್ಮಗಳಲ್ಲದೇ ಪ್ರವಚನ, ಯಾಜನ, ಪ್ರತಿಗ್ರಹಗಳೆಂಬ ಮೂರು ಅಧಿಕವಾಗಿದ್ದವು.[1] ಬ್ರಾಹ್ಮಣರು ಸಚ್ಛೂದ್ರರು ಪಾಕಮಾಡಿದ ಅನ್ನವನ್ನು ಸ್ವೀಕರಿಸಬಹುದು.[2] ಆಪತ್ಸಮಯದಲ್ಲಿ ಬ್ರಾಹ್ಮಣರು ಇತರ ವರ್ಣಗಳಿಗೆ ವಿಹಿತವಾದ ಕರ್ಮವನ್ನು ಮಾಡಬಹುದು.[3] ರಾಜನು ಆಜ್ಞೆಮಾಡಿದರೆ ಬ್ರಾಹ್ಮಣರು ಶಸ್ತ್ರವನ್ನು ಹಿಡಿದು

[1] ಗೌ. ಧ. ಸೂ. X, ೧-೩ ; ೭-೫೦. ಆಪ. ಧ. ಸೂ. II, ೫-೧೦, ೫, ೮. ಬೌ. ಧ. ಸೂ. X, ೨-೫.

[2] ಯಾಜ್ಞ. I, ೧೬೬.

[3] ಗೌ. VII, ೬. ಬೌ. II, ೨-೮೦. ಆಪ. I, ೧೦ ; ೨೯. ೭. ಮನು. VIII, ೩೪೮. ವಸಿಷ್ಠ. III, ೨೪.

ದೇಶಸಂರಕ್ಷಣೆಯನ್ನು ಮಾಡಬೇಕು.[4] ದ್ರೋಣ, ಪರಶುರಾಮ, ಅಶ್ವತ್ಥಾಮ, ಕೃಪಾಚಾರ್ಯ ಮುಂತಾದವರೂ, ಪುಷ್ಯಮಿತ್ರ ಶುಂಗ, ಕಾಣ್ವವಾಸುದೇವ, ಕದಂಬ ಮಯೂರಶರ್ಮ, ಪೇಷ್ವೆಗಳೂ ಕ್ಷಾತ್ರವೃತ್ತಿಯನ್ನು ಅವಲಂಬಿಸಿದರು. ಹೀಗೆ ಬ್ರಹ್ಮಕ್ಷತ್ರ ರಾಜವಂಶಗಳಾದವು. ಬ್ರಾಹ್ಮಣನು ಪ್ರಾಣಿ ಹಿಂಸೆಯಾಗದಂತೆ ಕೃಷಿಕರ್ಮವನ್ನು ಮಾಡಬಹುದು. ಬ್ರಾಹ್ಮಣ ಮಾತಾಪಿತೃಗಳಿಂದ ಜನಿಸಿದ ಮಾತ್ರಕ್ಕೆ ಪುತ್ರನೆಂದೂ, ಉಪನೀತನಾದರೆ ಬ್ರಾಹ್ಮಣನೆಂದೂ, ವೇದಾಧ್ಯಯನ ಮಾಡಿ ಸ್ನಾತಕನಾಗಿ ಗೃಹಸ್ಥಾಶ್ರಮದಲ್ಲಿರುವವನು ಶ್ರೋತ್ರಿಯನೆಂದೂ, ಸ್ವಾಧ್ಯಾಯಸಿತಾಗ್ನಿಹೋತ್ರ ಹವಿರ್ಯಜ್ಞಗಳನ್ನು ಮಾಡುವವನು ಅನೂಚಾನನೆಂದೂ, ಸೋಮಯಾಜಿಗೆ ಭ್ರೂಣನೆಂದೂ ಯಮನಿಯಮಾದಿ ಅಷ್ಟಾಂಗ ಯೋಗಾಭ್ಯಾಸದಿಂದ ಋಷಿಕಲ್ಪನೆಂದೂ ಸಾಂಗ ಚತುರ್ವೇದ ತಪೋಯೋಗಗಳಿಂದ ಋಷಿಯೆಂದೂ ಹೆಸರು ಬರುವದು.[5]

ಬ್ರಾಹ್ಮಣನಿಗೆ ಹುಟ್ಟುವದಕ್ಕೆ ಮುಂಚಿನಿಂದ ಅಂತ್ಯೇಷ್ಟಿ ವರೆಗೆ ಹದಿನಾರು ಅಥವಾ ನಲವತ್ತೆಂಟು ಸಂಸ್ಕಾರಗಳು ನಡೆಯಬೇಕು.[6] ಈ ಸಂಸ್ಕಾರಗಳು ಪತಿತೋತ್ಪನ್ನತ್ವಕ್ಕಾಗಿ ಅಲ್ಲ. ಚಿತ್ತಶುದ್ಧಿಗಾಗಿ ಏರ್ಪಾಟಾಗಿವೆ. ಸಂಸ್ಕಾರಗಳಿಂದ ಬ್ರಹ್ಮಸಿದ್ಧಿಗೆ ಬೇಕಾದ ಎಂಟು ಆತ್ಮಗುಣಗಳೂ ಸಾಧನ ಚತುಷ್ಟಯ ಸಂಪತ್ತಿಯೂ ಅಭಿವ್ಯಕ್ತವಾಗುವವು. ಸಂಸ್ಕಾರಗಳು ಗೋತ್ರಪ್ರವರಗಳಿಗೆ ಅನುಸಾರವಾಗಿರುವವು. ವೇದದಲ್ಲಿ ಗೋತ್ರವೆಂಬುದಕ್ಕೆ ಕರುಹಟ್ಟಿ, ಮೇಘ, ಪರ್ವತ, ಕೋಟೆ, ಸಮೂಹ ಎಂಬ ಅರ್ಥಗಳಿವೆ. ಬ್ರಾಹ್ಮಣಗಳಲ್ಲಿ ಸಗೋತ್ರ ಸಪಿಂಡ ಎಂಬುದರಿಂದ ರಕ್ತಸಂಬಂಧವು ಸೂಚಿತವಾಗಿದೆ. ಪ್ರವರ ಎಂದರೆ

---

[4] ರಾಜ್ಞೋ ನಿಯೋಗಾದ್ಯೋದ್ಧವ್ಯಂ ಬ್ರಾಹ್ಮಣೇನ ವಿಶೇಷತಃ |
ವರ್ತತಾ ಕ್ಷತ್ರಧರ್ಮೇಣ ಹ್ಯೇವಂ ಧರ್ಮವಿದೋ ವಿದುಃ ||

ಮಹಾಭಾರತ, ಶಲ್ಯ, ೬೫, ೪೨.

[5] ವೈಖಾ. ಗೃ. ಸೂ. I, ೧. ಅಪರಾರ್ಕ ಪು. ೨೮೯.

[6] ಯಸ್ಯೈತೇಽಷ್ಟಾಚತ್ವಾರಿಂಶತ್ಸಂಸ್ಕಾರಾ . . . ಸಬ್ರಾಹ್ಮಣಃ ಸಾಯುಜ್ಯಂ ಸಾಲೋಕ್ಯಂ ಚ ಗಚ್ಛತಿ || ಗರ್ಭಾಧಾನ, ಪುಂಸವನ, ಸೀಮಂತೋನ್ನಯನ, ವಿಷ್ಣುಬಲಿ, ಜಾತಕರ್ಮ, ನಾಮಕರಣ, ಉಪನಿಷ್ಕ್ರಮಣ, ಅನ್ನಪ್ರಾಶನ, ಚೌಲ, ಉಪನಯನ—೧೦ ; ನಾಲ್ಕು ವೇದವ್ರತಗಳು ; ಪಂಚಮಹಾಯಜ್ಞಗಳು, ಏಳು ಪಾಕಯಜ್ಞಸಂಸ್ಥೆಗಳು ; ಏಳು ಹವಿರ್ಯಜ್ಞಸಂಸ್ಥೆಗಳು ; ಏಳು ಸೋಮಸಂಸ್ಥೆಗಳು ; ಇವುಗಳಿಂದ ಎಂಟು ಆತ್ಮಗುಣಗಳು— ದಯಾ, ದಾಕ್ಷಿಣ್ಯ, ಅನಸೂಯಾ, ಶೌಚ, ಅನಾಯಾಸ, ಮಂಗಲ, ಅಕಾರ್ಪಣ್ಯ, ಅಸ್ಪೃಹತಾ = ೪೮.

ಒಬ್ಬ ಋಷಿಯ ಅಗ್ನ್ಯುಪಾಸನಾವಿಧಿಯನ್ನೂ ಆತನ ಆಚಾರ್ಯತ್ವವನ್ನೂ ಶಿಷ್ಯರು ವರಿಸುವದು. ಆದುದರಿಂದ ಪ್ರವರವು ಆರ್ಷೇಯ. ಆಂಗಿರಸ, ಕಶ್ಯಪ, ವಸಿಷ್ಠ, ಮತ್ತು ಭೃಗುವೆಂಬ ನಾಲ್ಕೇ ಮೂಲಗೋತ್ರಗಳೆಂದು ಮಹಾಭಾರತ ದಲ್ಲಿ ಹೇಳಿದೆ.[7] ಬೌಧಾಯನ ಹಿರಣ್ಯಕೇಶಿಗಳು ವಿಶ್ವಾಮಿತ್ರ, ಜಮದಗ್ನಿ, ಭರ ದ್ವಾಜ, ಗೌತಮ, ಅತ್ರಿ, ವಸಿಷ್ಠ, ಅಗಸ್ತ್ಯ ಎಂಬ ಏಳು ಗೋತ್ರಗಳನ್ನು ಹೇಳಿರುವರು. ಕಶ್ಯಪರಿಂದಲೇ ದೇವದಾಸಪ ರ್ಯಂತಾದವರೆಲ್ಲರೂ ಹುಟ್ಟಿ ದುದರಿಂದ ಗೋತ್ರ ತಿಳಿಯದವರು ಕಾಶ್ಯಪಗೋತ್ರವನ್ನು ಸ್ವೀಕರಿಸಬಹುದು. ಪ್ರವರಗಳ ಸಂಖ್ಯೆ ನಲ್ವತ್ತೊಂಬತ್ತು. ಋಗ್ವೇದದ ಕಾಲದಲ್ಲಿಯೇ ಪ್ರವರ ಗಳಿದ್ದವು.[8] ಪ್ರವರದಲ್ಲಿ ನಾಲ್ಕು ಋಷಿಗಳ ಹೆಸರನ್ನು ಹೇಳಲಾಗದು. ವಿವಾಹ ದಲ್ಲಿ ಸಗೋತ್ರವಿರಬಾರದು ಮತ್ತು ಪ್ರವರ ಋಷಿಗಳ ಹೆಸರುಗಳ ಒಂದೂ ಸಮಾನವಾಗಿರಕೂಡದು. ಗೋತ್ರಗಳು ಬೌದ್ಧರಲ್ಲಿಯೂ ಜೈನರಲ್ಲಿಯೂ ಇವೆ.[9] ಕ್ಷತ್ರಿಯರು ಮಾನವ್ಯಸ ಗೋತ್ರವನ್ನಾಗಲೀ ತಮ್ಮ ಪುರೋಹಿತರ ಗೋತ್ರವನ್ನಾಗಲೀ ಹೇಳಿಕೊಳ್ಳಬಹುದು. ಧರ್ಮಶಾಸ್ತ್ರಗಳ ಪ್ರಕಾರ ವೈಶ್ಯರಿಗೆ ವಾತ್ಸಪ್ರ ಎಂಬುದೊಂದೇ ಗೋತ್ರ. ಭಾಲನ್ದಸವೆಂಬ ಏಕಾರ್ಷ ಅಥವಾ ಬಾಲನ್ದನ, ವಾತ್ಸಪ್ರ, ಮಾಂಗ್‌ಕ್ತಿಲ ಎಂಬ ತ್ರ್ಯಾರ್ಷಪ್ರವರ. ಅಥವಾ ತಮ್ಮ ಪುರೋಹಿತರ ಪ್ರವರ. ಶರ್ಮನ್, ರಕ್ಷಾ (ವರ್ಮನ್, ತ್ರಾತ) ಪುಷ್ಟಿ (ಪಾಲಿತ, ಗುಪ್ತ, ಭೂತಿ, ದತ್ತ), ಪ್ರೇಷ್ಯಾ (ದಾಸ, ಭೃತ್ಯ) ಎಂಬ ನಾಲ್ಕು ವರ್ಣದವರ ಉಪನಾಮಗಳು ಪ್ರಾಚೀನವಲ್ಲ. ಸ್ವಾಮಿನ್, ಭಟ್ಟ, ಶರ್ಮನ್ ಎಂಬುವು ಕರ್ಮಮೀಮಾಂಸಕ ಮತ್ತು ವೇದಾನ್ತಿಗಳಿಗೆ ಮಾತ್ರ ಸಲ್ಲುತ್ತಿದ್ದವು. ಆದರೂ ಶಾಸನಗಳಲ್ಲಿ ಕಂಡುಬರುವ ಹೆಸರುಗಳಿಂದ ಒಂದೇ ನಿಯಮವಿದ್ದಿತೆಂದು ಹೇಳುವದಕ್ಕಾಗುವದಿಲ್ಲ.

ಬ್ರಾಹ್ಮಣರಲ್ಲಿ ಕೆಲವರು ಸ್ವವರ್ಣೋಚಿತ ವೃತ್ತಿಗಳನ್ನು ತ್ಯಜಿಸಿ ಬೇರೆ ಜೀವನೋಪಾಯಗಳನ್ನಂಗೀಕರಿಸಿದುದರಿಂದಲೂ, ಆರ್ಯಾವರ್ತದಿಂದ ಹೊರಟು ಭರತಖಂಡದ ಬೇರೆ ಬೇರೆ ಭಾಗಗಳಲ್ಲಿ ನೆಲೆಸಿದುದರಿಂದಲೂ, ಇತರ ಕಾರಣಗಳಿಂದಲೂ ಆಚಾರ ಭೇದಗಳುಂಟಾಗಿ ನಾಮ ಮಾತ್ರ ಬ್ರಾಹ್ಮಣ ರೆಂದೂ ಪಂಕ್ತಿಪಾವನರಲ್ಲವೆಂದು ಗಣಿಸಲ್ಪಟ್ಟರು. ಬ್ರಾಹ್ಮಣರಲ್ಲಿಯೇ ದೇವ, ಮುನಿ, ದ್ವಿಜ, ಕ್ಷತ್ರ, ವೈಶ್ಯ, ಶೂದ್ರ, ನಿಷಾದ, ಪಶು, ಮ್ಲೇಚ್ಛ, ಚಣ್ಡಾಲ

---

[7] ಶಾನ್ತಿಪರ್ವ ೨೯೭, ೧೭-೧೮.

[8] ಋಗ್. VIII, ೧೦೨-೪ ; I, ೪೫-೩.

[9] *E.I.X.* Lüders List, No. 158.

ರಿರುವರೆಂದು ಅತ್ರಿಸ್ಮೃತಿಯು ಹೇಳುವದು.[10] ಬೌದ್ಧಗ್ರಂಥಗಳಿಂದ ಎರಡು ಸಾವಿರದ್ವೈನೂರು ವರ್ಷಗಳ ಹಿಂದೆಯೇ ಬುದ್ಧನು ಬ್ರಾಹ್ಮಣರು ಪೂರ್ವಕಾಲದಲ್ಲಿ "ಅಜ್ಝೇನ ಆಹಿತಗ್ಗಿ" ಮುಂತಾದ ಸತ್ಕರ್ಮನಿರತರಾಗಿದ್ದರೆಂದೂ ಆದರೆ ತನ್ನ ಕಾಲದಲ್ಲಿ ಅನೇಕರು ವೈದ್ಯರೂ ಪರಿಚಾರಕರೂ, ಭಿಕ್ಷುಕರೂ, ಸನ್ಯಾಸಿಗಳೂ, ವರ್ತಕರೂ, ಯೋಧರೂ, ಕೃಷೀವಲರೂ, ಪಶುಪಾಲಕರೂ, ಧೂಮಪಾನಮಾಡುವವರೂ, ಪಶುಪಾಲಕರೂ, ಕನ್ಯಾವಿಕ್ರಯಮಾಡುವವರೂ, ಜೋಯಿಸರೂ, ಪುರೋಹಿತರೂ, ಬೇಟೆಗಾರರೂ, ನಿಷಿದ್ಧದಾನಗ್ರಹಣಮಾಡುವವರೂ ಶ್ರಾದ್ಧಭೋಜನಮಾಡುವವರೂ ಆಗಿ ಕೆಟ್ಟುಹೋಗಿರುವರೆಂದು ಹೇಳಿದನೆಂದು ತಿಳಿದುಬರುವದು. ಬ್ರಾಹ್ಮಣಕವಿಗಳೇ ರಚಿಸಿರುವ ಕಾವ್ಯ, ನಾಟಕ, ಕಾದಂಬರಿ, ಭಾಣಗಳಲ್ಲಿ ಬ್ರಾಹ್ಮಣರ ಭೋಜನ ಪ್ರೀತಿ ಮತ್ತು ಇತರ ದುರಾಚಾರಗಳು ವರ್ಣಿತವಾಗಿವೆ. ವೈದಿಕರೂ ಅಗ್ರಹಾರನಿವಾಸಿಗಳೂ ಆದ ಬ್ರಾಹ್ಮಣರು ಪಟ್ಟಣಗಳಲ್ಲಿದ್ದ ಸಿಯೋಗಿ ಲೌಕಿಕ ಬ್ರಾಹ್ಮಣರ ಆಚಾರವೇಷಗಳನ್ನು ಕಂಡು ಆಶ್ಚರ್ಯಪಡುತ್ತಿದ್ದರು.[11] ಬಹು ಪ್ರಾಚೀನಕಾಲದಿಂದಲೂ ಬ್ರಾಹ್ಮಣರಲ್ಲಿ ಕೆಲವರು ತಮ್ಮ ವರ್ಣಧರ್ಮಗಳನ್ನು ಮರೆತು ನಡೆಯುತ್ತಿದ್ದರೂ ಸಾಮಾನ್ಯವಾಗಿ ಬ್ರಾಹ್ಮಣರು ಸಾತ್ವಿಕಜೀವನ ಮಾಡುತ್ತ,

---

[10] ಅತ್ರಿ. ೩೭೩-೩೮೪ ; ವೇದೈರ್ವಿಹೀನಾಶ್ಚ ಪಠನ್ತಿ ಶಾಸ್ತ್ರಂ ಶಾಸ್ತ್ರೇಣಹೀನಾಶ್ಚ ಪುರಾಣಪಾಠಾಃ | ಪುರಾಣಹೀನಾಃ ಕೃಷಿಣೋಭವನ್ತಿ ಭ್ರಷ್ಟಾಸ್ತತೋ ಭಾಗವತಾಭವನ್ತಿ ||

[11] ಮಕರನ್ದ :—ಸಖೇ ಮಿಳಿನ್ದ !

ಇತಏವ ಸಕಲ ವಿದ್ಯಾನಿಷದ್ಯಾಯಮಾನಂ ವಿದ್ಯಾನಗರಮ್ |
ಅಸ್ಮಿನ್ ಕಿಲಮಹಾನಯಂ ವೇಷೋ ರಾಜನಿಯೋಗವ್ಯಾಪಾರಶಾಲಿನಾಮ್ |
ಯಜ್ಞೋಪವೀತಂ ಮಲಿನಂತದೇಕಂ ಶ್ಮಶ್ರೂಣಿಕೃತ್ತಾನಿ ಚಮತ್ಕೃತಾನಿ |
ಉಷ್ಣೀಶಶಾಟೀಧವಳಾತಿಸೂಕ್ಷ್ಮಾವಾಸಸ್ತ್ರಿಕೋಣಂ ದ್ವಿಪಟೀವಿಶಾಲಾ ||

ಮಿಲಿನ್ದ :—ಏತೇಷಾಂ ಕೋऽಯಂ ಪ್ರಾತಃಕಾಲೀನೋವಿಧಿಃ ?

ಉತ್ಥಾಯೋಷಸಿ ಧೂಮಪಾನಕಲನಾತಾಮ್ಬೂಲಿಕಾಚರ್ವಣಮ್ |
ಪಶ್ಚಾದ್ವಿಶ್ಲಥಕೇಶಪಾಶನಹನಂ ಶಾರೀರಶುದ್ಧಿಸ್ತತಃ |
ಪ್ರಕ್ಷಾಳ್ಯಾನನಮುಚ್ಚದರ್ಪಣಧೃತಿಃ ಪುಣ್ಡ್ರಪ್ರಕಾರಸ್ತತಃ |
ಲೇಖಂ ಲೇಖನಿಕಾಂಪಿಧಾಯಚ ಪಟೀಕಾರ್ಯಾದ್ಬಹಿರ್ನಿರ್ಗಮಃ ||

ಏತೇ ವೈದಿಕಂಕರ್ಮಪರಸಾತ್ಕೃತ್ವಾಸುಖೇನವರ್ತನ್ತೇ |
ಸನ್ಧ್ಯಾವಿಧಿಂ ಭಾವನಯೈವಕೃತ್ವಾಹೋಮಂಜಪಂ ದೈವತಪೂಜನಂಚ |
ಪುರೋಹಿತಾಯತ್ತತಯಾವಿಧಾಯ ಯಭಂತ್ಯಹೋ ನಿದ್ರತಿಭುಂಜತೇಚ ||

ರಾಮಚನ್ದ್ರಕವಿ—ಕೇರಳಾಭರಣ.

ಪ್ರಪಂಚದಲ್ಲೆಲ್ಲ ಆಶ್ಚರ್ಯಕರವಾದ ವೇದವಿದ್ಯೆಯನ್ನು ಬರವಣಿಗೆಯ ಸಹಾಯವನ್ನಪೇಕ್ಷಿಸದೆ ಚ, ತು, ತಪ್ಪದೆ ರಕ್ಷಿಸಿಕೊಂಡುಬಂದು, ತತ್ವಶಾಸ್ತ್ರ, ಕಲೆ, ಸಾಹಿತ್ಯ, ವಿಜ್ಞಾನವೇ ಮುಂತಾದ ಸಂಸ್ಕೃತಿಯ ಸರ್ವಾಂಗಗಳಿಗೂ ಒಂದು ವಿಶಿಷ್ಟಗುಣವನ್ನು ಕೊಟ್ಟು, ದೇಶ, ಕಾಲ, ಜಾತಿ, ಆರ್ಥಿಕಸ್ಥಿತಿ, ರಾಜಕೀಯ ಆಂದೋಳನೆ ಮುಂತಾದವುಗಳಿಗೆ ಅತೀತವಾದ ಇಹಸೌಖ್ಯ ಆಮುಷ್ಮಿಕ ದೃಷ್ಟಿಗಳನ್ನು ಸಾಧಿಸಿ, ಭಾರತೀಯ ಸಂಸ್ಕೃತಿಯನ್ನೂ ರಾಷ್ಟ್ರೀಯತೆಯನ್ನೂ ವ್ಯಕ್ತಿತ್ವವನ್ನೂ ರಕ್ಷಿಸಿಕೊಂಡು ಬಂದಿರುವರು. ಶಾಕಾಹಾರ, ಪಶುದಾಚಾರ, ಶಾಂತಿ, ತುಷ್ಟಿ, ಲೋಕಸಂಗ್ರಹ, ಐಚ್ಛಿಕದಾರಿದ್ರ್ಯ, ಅಧರ್ಮಖಂಡನೆಯಲ್ಲಿ ನಿರ್ದಾಕ್ಷಿಣ್ಯ, ಸತ್ಯಜ್ಞಾನಾನ್ವೇಷಣೆ ಮುಂತಾದ ಬ್ರಾಹ್ಮಣರ ಗುಣಗಳನ್ನು ಕಂಡು ಶ್ರೇಷ್ಠನಾದ ಅಲಗ್ಸಾಂಡರನೊಡನೆ ಬಂದ ಯವನರಿಂದ ಹಿಡಿದು, ಹತ್ತೊಂಬತ್ತನೆಯ ಶತಮಾನದ ವರೆಗೂ ಪರದೇಶೀಯ ಪರಜಾತೀಯ ಪ್ರವಾಸಿಗಳೂ ಹೊಗಳಿರುವರು. ಅಲ್ಲದೆ ಬ್ರಾಹ್ಮಣರು ಸಮುದ್ರಯಾನವನ್ನೂ ಮಾಡಿ ಪಶ್ಚಿಮದಲ್ಲಿ ಈಜಿಪ್ಟ್, ಗ್ರೀಸ್ ಮತ್ತು ರೋಮ್ ದೇಶಗಳ ವರೆಗೂ ಪೂರ್ವದಲ್ಲಿ ಈಸ್ಟರ್ ಐಲೆಂಡ್ಸ್ ಮೆಕ್ಸಿಕೋ ವರೆಗೂ ಭಾರತೀಯ ಸಂಸ್ಕೃತಿಯನ್ನು ಶಾಂತರೀತಿಯಲ್ಲಿ ಪ್ರಚಾರಮಾಡಿದರು. ಆದುದರಿಂದ ತಾತ್ಕಾಲಿಕ ಅಭಿಪ್ರಾಯಗಳನ್ನು ಬಿಟ್ಟು ನಿಷ್ಪಕ್ಷಪಾತದೃಷ್ಟಿಯಿಂದ ನೋಡಿದರೆ ಬ್ರಾಹ್ಮಣರು ಭಾರತೀಯ ಸಂಸ್ಕೃತಿಗೇ ಅಲ್ಲದೆ ಪ್ರಪಂಚಕ್ಕೆಲ್ಲ ಮಹೋಪಕಾರ ಮಾಡಿರುವರೆಂದು ಹೇಳಬೇಕು.

**ಕ್ಷತ್ರಿಯರು:** ಬೌದ್ಧ ಮತ್ತು ಜೈನಗ್ರಂಥಗಳಲ್ಲಿ ತೀರ್ಥಂಕರರೂ ಗೌತಮಬುದ್ಧನೂ ಕ್ಷತ್ರಿಯರಾದುದರಿಂದ ಕ್ಷತ್ರಿಯರೇ ಅಗ್ರವರ್ಣವೆಂದು ಹೇಳಿರುವುದರಿಂದಲೂ ಕೆಲವು ಉಪನಿಷತ್ತುಗಳಲ್ಲಿ ಅಶ್ವಪತಿ ಕೇಕಯನಂತಹ ಕ್ಷತ್ರಿಯರು ಬ್ರಾಹ್ಮಣರಿಗೂ ಬ್ರಹ್ಮೋಪದೇಶ ಮಾಡಿದರೆಂದು ಹೇಳಿರುವುದರಿಂದಲೂ, ಕೆಲವರು ಮೊದಲು ಕ್ಷತ್ರಿಯರೇ ಉತ್ತಮವರ್ಣದವರಾಗಿದ್ದರೆಂದು ಹೇಳುವರು. ಆದರೆ ಜನಕ, ಚಿತ್ರರಥ ಮುಂತಾದವರು ಯಾಜ್ಞವಲ್ಕ್ಯರೇ ಮುಂತಾದ ಋಷಿಗಳಿಂದ ಉಪದೇಶಹೊಂದಿದಂತೆ ತಿಳಿದುಬರುವದು. ಪಂಚಾಗ್ನಿ ವಿದ್ಯೆಯು ಮಾತ್ರ ಮೊದಲು ರಾಜರ್ಷಿಗಳಲ್ಲಿದ್ದಿತು. ಬ್ರಾಹ್ಮಣರಿಗೆ ನಿಜವಾದ ರಾಜನು ಸೋಮನು. ಪಟ್ಟಾಭಿಷಿಕ್ತನಾದ ಕ್ಷತ್ರಿಯನು ತನ್ನ ಕರ್ತವ್ಯವಾದ ಧರ್ಮರಕ್ಷಣೆ ಮಾಡಿದರೆ ಮಾತ್ರ ಬ್ರಾಹ್ಮಣರಿಂದಲೂ ರಾಜನೆಂದು ಅಂಗೀಕೃತನಾಗುವನು. ಕುಮಾರಿಲನು ಬುದ್ಧನು

ಕ್ಷತ್ರಿಯನಾದರೂ ತನ್ನ ವರ್ಣದ ಧರ್ಮವನ್ನನುಸರಿಸದೆ ಬ್ರಾಹ್ಮಣ ವರ್ಣೋಚಿತವಾದ ಧರ್ಮೋಪದೇಶಕ್ಕೆ ಆರಂಭಿಸಿದುದರಿಂದ ಶಾಕ್ಯವಚನಗಳು ವಿಶ್ವಾಸಾರ್ಹಗಳಲ್ಲವೆಂದು ಹೇಳಿರುವರು.[12] ಕೆಲವು ಸ್ಮೃತಿಗಳು ಕಲಿಯುಗದಲ್ಲಿ ಶುದ್ಧ ಕ್ಷತ್ರಿಯವರ್ಣವೇ ಇಲ್ಲವೆಂದು ಹೇಳುವವು. ಪುರಾಣಗಳು ಶೂದ್ರನಾದ ಮಹಾಪದ್ಮನಂದನು ಕ್ಷತ್ರಿಯ ವಂಶಗಳನ್ನೆಲ್ಲ ನಾಶಮಾಡಿದನೆಂದೂ, ಹೊಸ ಕೃತಯುಗದಲ್ಲಿ ಕಲಾಪಗ್ರಾಮದ ದೇವಾಪಿಯು ಪುನಃ ಕ್ಷತ್ರಿಯವರ್ಣವನ್ನು ಸೃಷ್ಟಿಸುವನೆಂದೂ ಹೇಳುವವು.[13] ಆದರೆ ಪರಾಶರ ಮಾಧವೀಯ ಮಿತಾಕ್ಷರ ಸಿದ್ಧಾಂತಗಳು ನಾಲ್ಕು ವರ್ಣಗಳೂ ಕಲಿಯುಗದಲ್ಲಿವೆಯೆಂದು ಹೇಳುವವು. ಗ್ರೀಕರ ಗ್ರಂಥಗಳಲ್ಲಿ "ಖತ್ರಿಯೊ" ಎಂಬ ಜನಾಂಗವು ಅಲೆಕ್ಸಾಂಡರನೊಡನೆ ಯುದ್ಧ ಮಾಡಿತೆಂದೂ, ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಯೌಧೇಯ ಮುಂತಾದವರು ಶಸ್ತ್ರೋಪಜೀವಿಗಳೆಂದೂ, ಗೌತಮೀಪುತ್ರ ಶಾತಕರ್ಣಿಯು ತಾನು "ಖತಿಯದಪಮಾನಮದನ"ನೆಂದು ಹೇಳಿಕೊಂಡಿರುವುದರಿಂದಲೂ, ಈಗಲೂ ಖತ್ರಿ ಎಂಬ ವಂಗಡವು ಉತ್ತರಭಾರತದಲ್ಲಿರುವುದರಿಂದಲೂ ಕ್ಷತ್ರಿಯರು ಇರುವರೆಂದು ಹೇಳಬಹುದು. ರಾಜಪುತ್ರರು ಪ್ರಾಚೀನ ಕ್ಷತ್ರಿಯರಲ್ಲವೆಂದೂ, ಮೊದಲು ಸಿಥಿಯನ್ ಜನರಾಗಿದ್ದು ಹಿಂದೂಮತವನ್ನು ಸ್ವೀಕರಿಸಿ ಅಗ್ನಿಪ್ರಾಯಶ್ಚಿತ್ತ ಹೊಂದಿ "ವಹ್ನಿಕುಲ ಕ್ಷತ್ರಿಯ"ರಾದರೆಂದೂ ಕೆಲವರು ಊಹಿಸುವರು. ಆದರೆ ಉತ್ತರದೇಶದ ರಾಜಪುತ್ರವಂಶಗಳೆಂದೆನಿಸಿದ ಸೋಲಂಕೀ, ಚೌಹಾನ್, ಪರಮಾರ, ರಾಠೋರ್ ಮುಂತಾದವರು ಕರ್ಣಾಟಕದ ಮಾನವ್ಯಸಗೋತ್ರರೂ ಹಾರಿತೀಪುತ್ರರೂ ಆದ ಚಾಳುಕ್ಯ, ರಾಷ್ಟ್ರಕೂಟವಂಶಗಳ ಶಾಖೆಗಳಾದುದರಿಂದ ಕ್ಷತ್ರಿಯರೆಂದೇ ನಿರ್ಧರಿಸಬೇಕು. ಸ್ಮೃತಿಗಳನ್ನನುಸರಿಸಿಯೇ ಗಾಗಾಭಟ್ಟನು ಶಿವಾಜಿಯು ರಾಜಪುತ್ರಕ್ಷತ್ರಿಯನೆಂದು ನಿರ್ಧರಿಸಿದನು. ರಾಜಪುತ್ರರಲ್ಲಿ

[12] ಶಾಕ್ಯಾದಿ ವಚನಾನಿ ಕತಿಪಯ ದಮದಾನಾದಿವರ್ಜಂ ಸರ್ವಾಣ್ಯೇವ ಸಮಸ್ತ ಚತುರ್ದಶವಿದ್ಯಾಸ್ಥಾನವಿರುದ್ಧಾನಿ ತ್ರಯೀಮಾರ್ಗವ್ಯುತ್ಥಿತವಿರುದ್ಧಾಚರಣೈರ್ಬುದ್ಧಾದಿಭಿಃ ಪ್ರಣೀತಾನಿ| . . . ಸ್ವಧರ್ಮಾತಿಕ್ರಮೇಣ ಚ ಯೇನ ಕ್ಷತ್ರಿಯೇಣ ಸತಾ ಪ್ರವಕ್ತೃತ್ವಪ್ರತಿಗ್ರಹೌ ಪ್ರತಿಪನ್ನೌ ಸ ಧರ್ಮಮವಿಪ್ಲುತಮುಪದೇಕ್ಷ್ಯತೀತಿ ಕಃ ಸಮಾಶ್ವಸೇತ್| ಉಕ್ತಂ ಚ| ಪರಲೋಕವಿರುದ್ಧಾನಿ ಕುರ್ವಾಣಂ ದೂರತಸ್ತ್ಯಜೇತ್| ಆತ್ಮಾನಂ ಯೋಽತಿಸಂಧತ್ತೇ ಸೋಽನ್ಯಸ್ಮೈ ಸ್ಯಾತ್ಕಥಂ ಹಿತಃ ?—ಮ. ಭಾ. ಶಾನ್ತಿಪರ್ವ 143-13.

—ತನ್ತ್ರವಾರ್ತಿಕ. ಪುಟ ೧೯೩

[13] ವಿಷ್ಣುಪುರಾಣ, IV-24-244.

ಅಗ್ನಿ, ಸೂರ್ಯ ಮತ್ತು ಚಂದ್ರವಂಶಗಳಿರುವವು. ರಾಜಪುತ್ರರಾದ ಪೃಥ್ವೀರಾಜ, ಪ್ರತಾಪಸಿಂಹ ಮುಂತಾದವರೂ, ಪದ್ಮಿನಿಯಂತಹ ಕ್ಷತ್ರಿಯ ರಮಣಿಯರೂ ಜೋಹಾರ್ ಸಹಗಮನ ಪದ್ಧತಿಗಳಿಂದ ತಮ್ಮ ಪ್ರಾಣಗಳನ್ನೇ ಅರ್ಪಿಸಿ ಕ್ಷಾತ್ರತೇಜಸ್ಸನ್ನು ಬೆಳಗಿರುವರು.

**ವೈಶ್ಯರು:** ಬೌದ್ಧಗ್ರಂಥಗಳಲ್ಲಿ "ವೆಸ್ಸ" ರಲ್ಲಿ "ಗಹಪತಿ" (ಗೃಹಪತಿ) "ಸೆಟ್ಠಿ" (ಶ್ರೇಷ್ಠಿ) ಎಂಬೆರಡು ಪಂಗಡಗಳಿದ್ದವೆಂದೂ ಗೃಹಪತಿ ಅಥವಾ ಕುಟುಂಬಿಗಳು ವ್ಯವಸಾಯ ಪಶುಪಾಲನೆಗಳಿಂದಲೂ ಸೆಟ್ಟಿಗಳು ವಾಣಿಜ್ಯದಿಂದಲೂ ಜೀವಿಸುತ್ತಿದ್ದರೆಂದು ಹೇಳಿದೆ. ಸೇಣಿ (ಶ್ರೇಣಿ), ಪೂಗ, ಸತ್ಥವಾಹ (ಸಾರ್ಥವಾಹ) ಕುಲ, ನಿಗಮ, ಗಣ ಮುಂತಾದ ವ್ಯಾಪಾರಸಂಸ್ಥೆಗಳಿಗೆ ಸೆಟ್ಠಿಯು ಅಧ್ಯಕ್ಷನಾಗಿದ್ದನು. ಸೆಟ್ಠಿಯು ರಾಜನ ಮಂತ್ರಾಲೋಚನಸಭೆಯ ಸದಸ್ಯನೂ ಆಗಿದ್ದನು. ಅನಾಥಪಿಂಡಿಕ ಮುಂತಾದ ಸೆಟ್ಠಿಗಳು ಬುದ್ಧನ ಕಾಲದಲ್ಲಿ ಮಹಾದಾನಿಗಳೆಂದು ಪ್ರಸಿದ್ಧರಾಗಿದ್ದರು. ದಕ್ಷಿಣದೇಶದ ಶಾಸನಗಳಿಂದ ಬಣಜಿಗರು (ಸೆಟ್ಟಿಬಣಂಜು, ವಳಂಜಿಯಾರ್) ಮೊದಲು ಜೈನರಾಗಿದ್ದು ಅನಂತರ ಶೈವರಾದರೆಂದು ತಿಳಿದುಬರುವದು. ನಗರತ್ತಾರ್, ಚೆಟ್ಟಿಯಾರ್, ಶೆಟ್ಟಿಗಳು, ಪಟ್ಟಣಸ್ವಾಮಿಗಳು, ಹಂಜಮಾನದವರು, ನಖರ ಪರಿವಾರ, ನಾನಾ ದೇಶಿಗಳು, ಅಯ್ಯಾವಳೆ ಐನೂರ್ವರು, ಮುಮ್ಮುರಿದಂಡಂಗಳು, ಬ್ಯಾರಿ (ವ್ಯಾಪಾರಿ) ಮುಂತಾದವರು ವ್ಯಾಪಾರದಿಂದ ಜೀವಿಸುತ್ತಿದ್ದರೆಂದು ಶಾಸನಗಳು ಹೇಳುವವು. ಆಂಧ್ರದೇಶದ ಕೋಮಟಿಗಳು ತಮಿಳು ದೇಶದ ಬೇರಿಗಳೂ ತಾವೇ ನಿಜವೈಶ್ಯರೆಂದು ವಿವಾದಮಾಡುತ್ತಿದ್ದರೆಂದೂ ಇದನ್ನು ತೀರ್ಮಾನಿಸಲು ವಿಜಯನಗರದ ಒಂದನೆಯ ದೇವರಾಯನು ಮಲ್ಲಿನಾಥಸೂರಿ ಮುಂತಾದ ಪಂಡಿತರನ್ನು ಕರೆಸಿ ಸಭೆ ಮಾಡಿದನೆಂದು ತಿಳಿದುಬರುವದು.[14] ಕೋಮಟಿ ಎಂಬ ಪದವು ಗೋಮಂತ ಅಥವಾ ಆಂಧ್ರದೇಶದಲ್ಲಿ ಪ್ರಸಿದ್ಧ ಶೈವಮತವಾಗಿದ್ದ ಗೋಳಕೀಮಠ ಎಂಬುದರಿಂದ ಹುಟ್ಟಿತೆಂದು ಕೆಲವರು ಊಹಿಸಿರುವರು. ರಾಜಮಂಡ್ರಿಯ ರೆಡ್ಡಿರಾಜರಲ್ಲಿ ಕೋಮಟಿ ವೇಮ ಎಂಬ ಹೆಸರು ಕಂಡುಬರುವದರಿಂದ ಕೋಮಟಿ ಎಂಬ ಶಬ್ದವು ಇತರ ವರ್ಣದವರಿಗೂ ಅನ್ವಯಿಸುತ್ತಿದ್ದಿತೇ ಎಂಬುದು ವಿಚಾರಾರ್ಹವಾದುದು. ರಾಜರಾಜ ನರೇಂದ್ರನ ಕಾಲದಲ್ಲಿಯೋ ಅಥವಾ ಅನಂತರವೋ ವಾಸವಾಂಬ ಅಥವಾ ಕನ್ಯಕಾಪರಮೇಶ್ವರಿಯು ಸತೀತ್ವಪರೀಕ್ಷೆಯಾದನಂತರ

[14] *M.A.R.* ೧೯೨೭, p. ೨೬.

ವೈಶ್ಯರಲ್ಲಿ ವಿವಿಧ ಪಂಗಡಗಳಾದುವೆಂದು ಭಾಸ್ಕರಾಚಾರ್ಯನ ತೆಲುಗು ಕನ್ಯಕಾ ಪುರಾಣ, ದೇವಾಂಗಪುರಾಣಗಳಿಂದ ತಿಳಿದುಬರುವದು. ಕನ್ಯಕಾಪೂಜೆಯು ಅನೇಕ ಪ್ರಾಚೀನ ಸಂಸ್ಕೃತಿಗಳಲ್ಲಿಯೂ, ಶಾಕ್ತಮತದಲ್ಲಿಯೂ ಕಂಡುಬರುವದು. ಕನ್ಯಾಕುಮಾರಿ, ಕನ್ನಿಕೇಕಥೆಗಳಿಗೂ ಈ ಕಥೆಗೂ ಏನೂ ಸಂಬಂಧ ವಿದ್ದಂತೆ ತೋರುವದಿಲ್ಲ. ಪುರಾಣಗಳ ಪ್ರಕಾರ ಉಪರಿಚರವಸುವಿನ ಪುತ್ರಿಯೂ ವ್ಯಾಸರ ತಾಯಿಯೂ ಆದ ಸತ್ಯವತಿಗೆ ವಾಸವೀ ಎಂಬ ಹೆಸರಿದೆ. ಕೆಲವರು ದ್ವೈಪಾಯನ ವ್ಯಾಸರನ್ನು ಕಾನೀನನೆಂದು ಹೇಳುವರು.[15] ಈ ವಾಸವೀ ಕಥೆಗೂ ಕನ್ಯಕಾಪರಮೇಶ್ವರೀ ಕಥೆಗೂ ಇರಬಹುದಾದ ಸಂಬಂಧವನ್ನು ನಿರ್ಧರಿಸುವದು ಕಷ್ಟವಾಗಿದೆ. ಉತ್ತರದೇಶದಲ್ಲಿ ವೈಶ್ಯವರ್ಣದಲ್ಲಿ ಜೈನರೂ ವೈಷ್ಣವರೂ ಇರುವರು. ಸೇಟ್ ಎಂಬ ಹೆಸರನ್ನು ಈಗ ಪಾರ್ಸಿಗಳೂ ಮುಸ್ಲಿಮರೂ ಹೊಂದಿರುವರು. ವೈಶ್ಯರು ಭರತಖಂಡದ ಸಂಪತ್ತನ್ನು ಹೆಚ್ಚಿಸಿ ಸಮುದ್ರಯಾನವನ್ನೂ ಮಾಡಿ ಪೂರ್ವದಲ್ಲಿ ಚೀಣ, ಜಾವ ದೇಶಗಳ ವರೆಗೂ ಪಶ್ಚಿಮದಲ್ಲಿ ಈಜಿಪ್ಟ್, ಗ್ರೀಸ್, ರೋಮನ್ ಚಕ್ರಾಧಿಪತ್ಯಗಳ ವರೆಗೂ ವ್ಯಾಪಾರವನ್ನು ವಿಸ್ತರಿಸಿ, ಅನೇಕ ದಾನಧರ್ಮಗಳನ್ನು ಮಾಡಿ ಭಾರತೀಯರ ಆರ್ಥಿಕ ಉನ್ನತಿಗೆ ಕಾರಣರಾಗಿದ್ದರು.

**ಶೂದ್ರರು :** ಬಹುಸಂಖ್ಯಾತರಾದ ಚತುರ್ಥವರ್ಣದವರನ್ನು ಕೆಲವು ಧರ್ಮಶಾಸ್ತ್ರಗಳು ಸಚ್ಛೂದ್ರ, ಅಸಚ್ಛೂದ್ರರೆಂದು ವಿಭಾಗಿಸಿವೆ. ಬಾದರಿಯ ಮತಾನುಸಾರ ಶೂದ್ರರಿಗೂ ಯಜ್ಞಮಾಡುವ ಅಧಿಕಾರವಿದೆ.[16] ಜೈಮಿನಿಯು ರಥಕಾರ, ಸ್ಥಪತಿ, ನಿಷಾದರಿಗೂ ಅಧಿಕಾರವಿದೆಯೆಂದು ಹೇಳುವನು.[17] ರಥಕಾರರು ವೈಶ್ಯ ಮತ್ತು ಶೂದ್ರವರ್ಣಗಳಿಗೆ ಮಧ್ಯೆ ಇರುವ ವರ್ಣದವರೆಂದೂ, ಸೌಧನ್ವನ ಗೋತ್ರದವರೆಂದೂ, ವರ್ಷಾಕಾಲದಲ್ಲಿ ಇವರಿಗೆ ಉಪನಯನವಾಗಬೇಕೆಂದು ಪ್ರಾಚೀನಮೀಮಾಂಸಕರು ಹೇಳುವರು.[18] ನಿಷಾದಸ್ಥಪತಿಯೆಂಬುದಕ್ಕೆ ಆಧುನಿಕ ಮೀಮಾಂಸಕರು ನಿಷಾದರಾಜನ ಬಳಿಯಲ್ಲಿ ಸ್ಥಪತಿ ವೃತ್ತಿಯಿಂದ ಜೀವಿಸುವ ಬ್ರಾಹ್ಮಣರೆಂದು ಅರ್ಥಮಾಡಿದರು. ಇವ್ವಾಪ್ರಾರ್ತ

[15] ಪುರಾಣನಾಮ ಚೂಡಾಮಣಿ—'ವಾಸವೀ'. ಆದರೆ ಮಧ್ವಾಚಾರ್ಯರು ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ವ್ಯಾಸರು ಕಾನೀನರೆಂದೂ ಸತ್ಯವತಿಗೂ ಪರಾಶರರಿಗೂ ವಿವಾಹವಾಗಿದ್ದಿತೆಂದೂ ಹೇಳುವರು —ಮ. ಭಾ. ತಾ.ನಿ. X, ೮೦ ff.

[16] ಪೂರ್ವಮೀಮಾಂಸಾ ಸೂತ್ರ, VI, ೧-೨೭.

[17] ಪೂರ್ವಮೀಮಾಂಸಾ ಸೂತ್ರ, VI, ೧-೫೧, ೫೨.

[18] ಶ. ಬ್ರಾ. I, ೧-೪.

ಗಳಲ್ಲಿ "ಇಷ್ಟ"ವು ಬ್ರಾಹ್ಮಣರಿಗೂ "ಪೂರ್ತ"ವು ಸರ್ವವರ್ಣದವರಿಗೂ ವಿಹಿತ. ಎರಡರಿಂದಲೂ ಪರಮಪದವಿಯು ಸಿಗುವದು.[19] ವೈಶ್ವದೇವಯಜ್ಞದಲ್ಲಿ ಶೂದ್ರನು ಪಾಕಮಾಡಿದ ಅನ್ನವನ್ನು ಬಲಿಹಾಕಬಹುದು.[20] ಶೂದ್ರರಿಗೆ ವೇದಾಧಿಕಾರವಿಲ್ಲದಿದ್ದರೂ ಆಧ್ಯಾತ್ಮಿಕ ತತ್ವಗಳನ್ನು ಇತಿಹಾಸ, ಪುರಾಣ, ದೇಶಭಾಷೆಗಳ ಮೂಲಕ ಬೋಧಿಸಲು ಅಡ್ಡಿಯಿಲ್ಲ. ಗ್ರೀಕರ ಗ್ರಂಥಗಳಿಂದ ಶೂದ್ರರೆಂಬ ಒಂದು ಜನಾಂಗವು ವಾಯವ್ಯಪ್ರಾಂತದಲ್ಲಿದ್ದಿತೆಂದು ಕಂಡು ಬರುವದು. ಇವರು ಬಹು ಪರಾಕ್ರಮಿಗಳಾಗಿದ್ದು ಅಲಕ್ಸಾಂಡರನಂತಹ ವಿಖ್ಯಾತ ದಂಡನಾಯಕನನ್ನೂ ಸೋಲಿಸಿದರು. ಶೂದ್ರರಲ್ಲಿ ಮುಖಂಡ ರಾದವರು ಕುಟುಂಬಿಕ, ಕುಲಕ, ರಾಷ್ಟ್ರಕೂಟ (ರೆಡ್ಡಿ), ಕುಟುಂಬಿ, ಮಹತ್ತರ ಎಂಬುದಾಗಿ ಗ್ರಾಮಾಧಿಕಾರವನ್ನು ಮಾಡುತ್ತಿದ್ದರೆಂದು ಶಾಸನಗಳಿಂದ ತಿಳಿದುಬರುವದು. ಶೂದ್ರರಲ್ಲಿ ಕೃಷಿ, ಪಶುಪಾಲನೆ ಮುಂತಾದ ವೃತ್ತಿಗಳನ್ನನು ಸರಿಸಿ ಅನೇಕ ಪಂಗಡಗಳುಂಟಾದವು. ಬೇಟೆಯಿಂದ ಬೇಡ, ಜೇನುಕುರುಬ, ಶೋಲಿಗ, ಇರುಳ ಮುಂತಾದವರೂ, ಮೀನುಹಿಡಿಯುವದರಿಂದಲೂ ದೋಣಿ ನಡಿಸುವದರಿಂದಲೂ ಬೆಸ್ತ, ತೊರೆಯ, ಕಿಲ್ಲೆಕೇತ, ಅಂಬಿಗರೂ, ಪಶುಪಾಲನೆ ಯಿಂದ ಕುರುಬ, ಗೊಲ್ಲ, ಗೌಳಿಗರೂ, ವ್ಯವಸಾಯದಿಂದ ಗಂಗಡಿಕಾರ, ಅರೆ, ಬಕ್ಕರು, ಒಕ್ಕಲಿಗರೂ, ನಾಡುಗೌಡರೂ, ತಿಗುಳರೂ, ಕಸುಬುಗಳಿಂದ ಮೇದರು, ದರ್ಜಿ, ಕುಂಬಾರ, ಅಗಸ, ನಾಯಿಂದ, ಬಂಜಾರ, ಪಿಂಜಾರಿ, ಡೊಂಬ, ಜಟ್ಟಿ ಮುಂತಾದವರೂ ಬೇರೆ ಬೇರೆ ಜಾತಿಗಳಾದರು. ಇವರಲ್ಲಿಯೂ ಗೋತ್ರಗಳಿವೆ. ಕರ್ಣಾಟಕ ಮತ್ತು ತಮಿಳು ದೇಶಗಳಲ್ಲಿ ಇಡಂಗೈ ವಲಂಗೈ (ಎಡಗೈ ಬಲಗೈ) ಎಂಬ ಎರಡು ಮುಖ್ಯ ವಿಭಾಗಗಳಿದ್ದವೆಂದೂ ಜಾತಿ ಮರ್ಯಾದೆಗಳಿಗಾಗಿ ಇವರಲ್ಲಿ ಕಲಹಗಳಾಗುತ್ತಿದ್ದವೆಂದು ಶಾಸನಗಳಿಂದ ತಿಳಿದುಬರುವದು. ಹದಿನೆಂಟು ಸಮಯ (ಪಣ, ಬಣ)ಗಳು ದಕ್ಷಿಣ ದೇಶದಲ್ಲಿವೆ. ಪಣಕಟ್ಟು ಎಂಬ ವಿಷಯಗಳನ್ನನುಸರಿಸಿ ಆಯಾ ಜಾತಿ ಮುಖಂಡರು ನ್ಯಾಯತೀರ್ಮಾನ ಮಾಡುತ್ತಿದ್ದರು. ಇದರಿಂದ ಒಗ್ಗಟ್ಟೂ, ಧರ್ಮವೂ, ಜಾತ್ಯಭಿಮಾನವೂ ಉಂಟಾಗಿ ವೃಥಾ ಧನವ್ಯಯವಾಗುವದಕ್ಕೆ ಅವಕಾಶವಿರುತ್ತಿರಲಿಲ್ಲ. ಧರ್ಮವ್ಯಾಧ ವಿದುರರಂತಹ ಆದರ್ಶಶೂದ್ರರು

[19] ಸಂಗಚ್ಛಸ್ವ ಪಿತೃಭಿಃ ಸಂಯಮೇನ ಇಷ್ಟಾಪೂರ್ತೇನ ಪರಮೇವ್ಯೋಮನ್-ಋಗ್ X, ೧೪-೮ ; ಇಷ್ಟಾಪೂರ್ತಮವತುನಃ ಪಿತೄಣಾಮಹಂವದೇ ಹರಸಾದೈವ್ಯೇನ—ಅಥರ್ವ. II, ೧೨-೪೦.

[20] ಆಪ. ಧ. ಸೂ. II, ೨-೩, ೧-೪.

ಅಧ್ಯಾತ್ಮ ವಿದ್ಯೆಯಲ್ಲಿಯೂ ಅಗ್ರಗಣ್ಯರಾಗಿದ್ದರು. ಮಹಾರಾಜರ ಶುಭ ಸಾಮುದ್ರಿಕ ಲಕ್ಷಣವಾದ ಹಲರೇಖೆಗೆ ತಮ್ಮ ಭುಜಾಗ್ರದಲ್ಲಿರುವ ನೇಗಿಲೇ ಕಾರಣವೆಂದು ಶೂದ್ರರು ಹೆಮ್ಮೆಪಡುತ್ತಿದ್ದರೆಂದು ಕೃಷ್ಣದೇವರಾಯನು ವರ್ಣಿಸಿರುವನು.[21]

**ಸ್ತ್ರೀಯರು:** ವೇದಯುಗದಲ್ಲಿ ಸ್ತ್ರೀಯರ ಸ್ಥಾನಮಾನಗಳನ್ನು ಹಿಂದೆ ಸೂಚಿಸಿದೆ. ಸ್ಮೃತಿಕಾರರು ಸ್ತ್ರೀಯರಲ್ಲಿ ಬ್ರಹ್ಮವಾದಿನೀ ಮತ್ತು ಸದ್ಯೋವಧುಗಳೆಂಬ ಎರಡು ವಿಧವೆಂದೂ ಬ್ರಹ್ಮವಾದಿನಿಯರಿಗೆ ಉಪನಯನವೂ ಎಂಟು ವರ್ಷಕ್ಕೆ ಮುಂಚೆಯೇ ಸಮಾವರ್ತನವೂ ನಡೆಯಬೇಕೆಂದು ಹೇಳುವರು. ವಧುವಿಗೆ ಯಜ್ಞೋಪವೀತಧಾರಣೆಯೂ ವಿಹಿತ.[22] ಆದರೆ ಈಚಿನ ಸ್ಮೃತಿಗಳು ಸ್ತ್ರೀಯರಿಗೆ ಉಪನಯನ ವಿಧಿಯು ಹಿಂದಿನಕಾಲದಲ್ಲಿದ್ದಿತೆಂದೂ ಕಲಿವರ್ಜ್ಯವೆಂದೂ ಹೇಳುವವು.[23] ಮಹಾಶ್ವೇತೆಯು ಯಜ್ಞೋಪವಿತವನ್ನೂ ಭಸ್ಮತ್ರಿಪುಣ್ಡ್ರವನ್ನೂ ಧರಿಸಿದಳೆಂದು ಬಾಣನು ವರ್ಣಿಸಿರುವನು. ಉಪನೀತರಾದ ಸ್ತ್ರೀಯರು ಸ್ವಗೃಹದಲ್ಲಿಯೇ ಭಿಕ್ಷೆಯನ್ನೆತ್ತಬೇಕು ಮತ್ತು ಅಣ್ಣ, ತಂದೆ ಅಥವಾ ಪತಿಯಿಂದ ಅಧ್ಯಯನಮಾಡಬೇಕು. ದ್ವಿಜಾತಿ ಸ್ತ್ರೀಯರನ್ನು ದೇವೀ, ಭಗವತೀಯೆಂದು ಸಂಬೋಧಿಸಬೇಕು. ಕಾಮಸೂತ್ರಗಳಲ್ಲಿ ಸ್ತ್ರೀಯರಿಗೆ ಲೇಖನ ವಾಚನ ಮುಂತಾದ ಕಲೆಗಳನ್ನು ಕಲಿಸಬೇಕೆಂದು ಹೇಳಿದೆ. ಪತಂಜಲಿಯು ಆಪಿಶಲಾ, ಕಾಶಕೃತ್ಸ್ನಾ, ಆಚಾರ್ಯ ಎಂಬ ಉದಾಹರಣೆಗಳಿಂದ ಸ್ತ್ರೀಯರು ವ್ಯಾಕರಣ ಮೀಮಾಂಸಾಶಾಸ್ತ್ರಗಳ ಅಧ್ಯಾಪಕಿಯರಾಗಿದ್ದರೆಂದು ಸೂಚಿಸುವನು. ಶಕುನ್ತಲೆಯು ಪತ್ರಲೇಖನೆಯಲ್ಲಿ ಕುಶಲಳಾಗಿದ್ದಳು. ಮಾಲತೀ ಮತ್ತು ಮಾಧವರ ತಂದೆಗಳು ಕಾಮನ್ದಕಿಯೊಡನೆ ಒಂದೇ ಗುರುವಿನ ಬಳಿಯಲ್ಲಿ ಅಧ್ಯಯನಮಾಡಿದರೆಂದು ಭವಭೂತಿಯು ಹೇಳುವದರಿಂದ ಸಹಾಧ್ಯಯನವು (Co-education) ಇದ್ದಿತೆಂದು ಹೇಳಬಹುದು. ಸ್ತ್ರೀಯರಿಗೆ ಮುಖ್ಯ ಸಂಸ್ಕಾರವಾದ ವಿವಾಹದಲ್ಲಿ ಉಪಯೋಗಿಸುವ ಮನ್ತ್ರಗಳ ಅರ್ಥವು ತಿಳಿದಿರಬೇಕು. ಸಂಸ್ಕೃತದಲ್ಲಿಯೂ ದೇಶಭಾಷೆಗಳಲ್ಲಿಯೂ ಅನೇಕ ಕವಯಿತ್ರಿ

---

[21] ನೃಪುಲಪದಹಲರೇಖಲಕೆಲ್ಲಮಾ ಭು| ಜಾಗ್ರಹಲರೇಖಲೇ ಮೂಲಮನುಚು ಕೋಟಿ| ಕೊಂಡಲುಗ ಧಾನ್ಯರಾಸುಲ ಪಂಡ ವೀಟಿ| ಸುಜನ ಭಜನೈಕ ವಿಖ್ಯಾತಿ ಶೂದ್ರ ಜಾತಿ ||—ಆಮುಕ್ತಮಾಲ್ಯದ.

[22] ಹಾರೀತಸ್ಮೃತಿ ; ಗೋಭಿಲ ಗೃಹ್ಯಸೂತ್ರ. II, ೧-೧೯.

[23] ಪುರಾಕಲ್ಪೇತುನಾರೀಣಾಂ ಮೌಞ್ಜೀಬನ್ಧನಮಿಷ್ಯತೇ | ಅಧ್ಯಾಪನಂಚವೇದಾನಾಂ ಸಾವಿತ್ರೀವಾಚನಂ ತಥಾ ||-ಯಮಸ್ಮೃತಿ ; ಸಂಸ್ಕಾರಪ್ರಕಾಶ, ಪು. ೪೦೨.

ಯರಿದ್ದರು. ಜೈನರಲ್ಲಿ ದಿಗಂಬರ ಪಂಗಡದವರು ಸ್ತ್ರೀಯರಿಗೆ ಆಜನ್ಮದಲ್ಲಿ ಮೋಕ್ಷವಿಲ್ಲವೆಂದು ಹೇಳಿದರೂ ಇತರ ಪಂಗಡಗಳಲ್ಲಿ ಸ್ತ್ರೀಯರಿಗೆ ದೀಕ್ಷೆಯಿದೆ. ಬೌದ್ಧರಲ್ಲಿ ಮೊದಮೊದಲು ಗೌತಮಬುದ್ಧನು ಸ್ತ್ರೀಯರಿಗೆ ದೀಕ್ಷೆಯನ್ನು ಕೊಡಲು ಸಮ್ಮತಿಸದಿದ್ದರೂ ಅನಂತರ ಅನೇಕ ಸ್ತ್ರೀಯರು ಭಿಕ್ಷುಣಿಯರಾಗಿ ಥೇರಿಗಾಥಾ ಮುಂತಾದ ಗ್ರಂಥಗಳನ್ನು ರಚಿಸಿ ಮತಪ್ರಚಾರಮಾಡಿದರು. ಸ್ತ್ರೀನಿಂದೆಯು ಪ್ರಪಂಚದ ಎಲ್ಲ ಮತಗಳಲ್ಲಿಯೂ ಕಂಡುಬರುವಂತೆ ಭಾರತೀಯ ಗ್ರಂಥಗಳಲ್ಲಿಯೂ ಕಂಡುಬರುವದು. ಆದರೆ ಭರತಖಂಡದಲ್ಲಿ ಆಧ್ಯಾತ್ಮಿಕ ತತ್ವಗಳೇ ಮುಖ್ಯವಾದುದರಿಂದ ನಹಿನಿಂದಾನ್ಯಾಯದಂತೆ,[24] ನಿಂದಾವಾಕ್ಯಗಳು ವೈರಾಗ್ಯಸ್ತುತ್ಯರ್ಥವೇ ವಿನಾ ಮುಖ್ಯಾರ್ಥದಲ್ಲಿ ಗ್ರಹಿಸಕೂಡದು. ಗೃಹಸ್ಥಾಶ್ರಮವೇ ಅತ್ಯುತ್ತಮವೆಂದು ಅನೇಕ ಪೂರ್ವಮೀಮಾಂಸಕರು ವಾದಿಸುವರು. ಗೃಹಸ್ಥನಿಂದಲೆ ಇತರ ಆಶ್ರಮಗಳು ಪೋಷಿತವಾಗಿವೆ. ಗೃಹಸ್ಥನಿಗೆ ಗೃಹಿಣಿಯೇ ಭೂಷಣ. ಗೃಹಿಣಿಯರ ಪ್ರಶಂಸೆಯು ಧರ್ಮಶಾಸ್ತ್ರಗಳಲ್ಲಿಯೂ ಕಾವ್ಯಗಳಲ್ಲಿಯೂ ವಿಶೇಷವಾಗಿದೆ.[25]

ಧರ್ಮಾರ್ಥಗಳು ಸ್ತ್ರೀಯರನ್ನೇ ಅನುಸರಿಸಿವೆ. ಸ್ತ್ರೀಯು ಧರ್ಮಕ್ಕೆ ವಿರುದ್ಧವಲ್ಲದ ಕಾಮಕ್ಕೂ ಪ್ರಜೆಗೂ ಮೂಲ; ಸ್ತ್ರೀಯು ಗೃಹಲಕ್ಷ್ಮಿ; ಎಂತಹ ನೀಚನಾದ ಗಂಡನನ್ನೂ ಅಗ್ನಿಪ್ರವೇಶಮಾಡಿ ಹಿಂಬಾಲಿಸುವಳು. ವೈರಾಗ್ಯವೆಂಬ ನೆಪದಿಂದ ಸ್ತ್ರೀನಿಂದೆಮಾಡುವರು ಮಹಾಪಾತಕರೆಂದು ವರಾಹಮಿಹಿರನು ಹೇಳಿರುವನು[26]. ಭವಭೂತಿಯೂ ಶ್ರೀ ಸೀತಾರಾಮರ

[24] ನಹಿ ನಿಂದಾ ನಿಂದ್ಯಂ ನಿಂದಿತುಂ ಪ್ರವರ್ತತೇ | ಅಪಿತು ತದಿತರದ್ವಿಧೇಯಂ ಪ್ರಶಂಸಿತುಮ್ ||

[25] ಗೃಹಿಣೀ ಸಚಿವಃ ಸಖೀ ಮಿಥಃ ಪ್ರಿಯಶಿಷ್ಯಾ ಲಲಿತೇ ಕಲಾವಿಧೌ | ಕರುಣಾವಿಮುಖೇನ ಮೃತ್ಯುನಾ ಹರತಾ ತ್ವಾಂ ವದ ಕಿಂ ನ ಮೇ ಹೃತಮ್ || ಪ್ರೇಯೋ ಮಿತ್ರಂ ಬಂಧುತಾ ವಾ ಸಮಗ್ರಾ ಸರ್ವೇ ಕಾಮಾಃ ಶೇವಧಿರ್ಜೀವಿತಂ ವಾ | ಸ್ತ್ರೀಣಾಂ ಭರ್ತಾ ಧರ್ಮದಾರಾಶ್ಚ ಪುಂಸಾಮಿತ್ಯನ್ಯೋನ್ಯಂ ವತ್ಸಯೋರ್ಜ್ಞಾತಮಸ್ತು ||

ಕಾಳಿದಾಸ—ರಘುವಂಶ. VIII, ೬೬

[26] ಯೇಽಪ್ಯಂಗನಾನಾಂ ಪ್ರವದಂತಿ ದೋಷಾನ್ ವೈರಾಗ್ಯಮಾರ್ಗೇಣ ಗುಣಾನ್ ವಿಹಾಯ | ತೇ ದುರ್ಜನಾ ಮೇ ಮನಸೋ ವಿತರ್ಕಃ ಸದ್ಭಾವವಾಕ್ಯಾನಿ ನ ತಾನಿ ತೇಷಾಮ್ || ಪ್ರಬ್ರೂತ ಸತ್ಯಂ ಕತರೋಽಂಗನಾನಾಂ ದೋಷೋಽಸ್ತಿ ಯೋ ನಾಚರಿತೋ ಮನುಷ್ಯೈಃ | ಧಾರ್ಷ್ಟ್ಯೇನ ಪುಂಭಿಃ ಪ್ರಮದಾ ನಿರಸ್ತಾ ಗುಣಾಧಿಕಾಸ್ತಾ ಮನುನಾತ್ರ ಚೋಕ್ತಮ್ || (ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ). ಜಾಯಾ ವಾ ಸ್ಯಾಜ್ಜನಿತ್ರೀ ವಾ ಸ್ಯಾತ್ಸಂಭವಃ ಸ್ತ್ರೀಕೃತೋ ನೃಣಾಮ್ | ಹೇ ! ಕೃತಘ್ನಾಸ್ತಯೋರ್ನಿಂದಾಂ ಕುರ್ವ

ಆದರ್ಶದಾಂಪತ್ಯವನ್ನು ಹೃದಯಂಗಮವಾಗಿ ವರ್ಣಿಸಿರುವನು.[27] ಇಂತಹ ಅಭಿಪ್ರಾಯಗಳು ಹದಿಬದೆಯ ಧರ್ಮದಂತಹ ಗ್ರಂಥಗಳಲ್ಲಿಯೂ ಕಂಡುಬರುವದು. ಮಾತೃ ಅಧಿಕಾರವಿರುವ ದೇಶಗಳಲ್ಲಿಯೇ ಅಲ್ಲದೆ ಭರತಖಂಡದ ಇತರ ಭಾಗಗಳಲ್ಲಿಯೂ ಸ್ತ್ರೀಯರು ರಾಜ್ಯಭಾರವನ್ನು ಕೂಡ ವಹಿಸಿದ್ದರು. ಕರ್ನಾಟಕದಲ್ಲಿ ವಿಜ್ಜಿಕಾ, ಚಂದಲಾ, ಶಾಂತಲಾ, ಭೈರಾದೇವಿ ಮುಂತಾದವರೂ ಆಂಧ್ರದೇಶದ ಕಾಕಾತೀಯ ರುದ್ರಾಂಬಾ, ಉತ್ತರದಲ್ಲಿ ಅಹಲ್ಯಾಬಾಯಿ, ಝಾನ್ಸಿರಾಣಿ ಲಕ್ಷ್ಮೀಬಾಯಿ, ಚಾಂದ್‌ಬೀಬಿ, ರಜ್ಹಿಯಬೇಗಂ, ನೂರ್‌ಜಹಾನ್ ಮುಂತಾದವರು ನಮ್ಮ ಚರಿತ್ರೆಯಲ್ಲಿ ಪ್ರಸಿದ್ಧರಾಗಿರುವರು.

**ವೇಶ್ಯೆಯರು :** ಎಲ್ಲ ಪ್ರಾಚೀನ ಸಂಸ್ಕೃತಿಗಳಲ್ಲಿ ವೇಶ್ಯೆಯರಿಗೆ ಸ್ಥಾನವಿದ್ದಿತೆಂದು ತಿಳಿದುಬರುವದು. ಭರತಖಂಡದಲ್ಲಿ ಸ್ತ್ರೀಯರನ್ನು ಸ್ವೀಯಾ, ಪರಕೀಯಾ, ಸಾಧಾರಣಾ ಎಂದು ವಿಭಾಗಿಸಿ ಸಾಧಾರಣಾ ಸ್ತ್ರೀಯರಲ್ಲಿ ಗಣಿಕಾ, ವೇಶ್ಯಾ, ನಟೀ, ಅಜ್ಜುಕಾ, ಅಭಿಸಾರಿಕಾ, ಅಪ್ಸರಾ, ಉರ್ವಶೀ, ಕುಲಟಾ, ಕುಟ್ಟನೀ, ಕುಂಭದಾಸೀ ಮುಂತಾದ ಭೇದಗಳಿದ್ದವು[28]. ಸಾಧಾರಣಾ, ಜಾರಾ, ನಟೀ ಎಂಬ ಪದಗಳು ಋಗ್ವೇದದಲ್ಲಿಯೇ ಕಂಡುಬರುವದು. ಮಹಾವ್ರತದಲ್ಲಿ ಕುಂಭದಾಸಿಗಳು ಮಾರ್ಜಾಲೀಯ ಅಗ್ನಿ ಸುತ್ತಲೂ ನರ್ತನ ಮಾಡುತ್ತಿದ್ದರು. ಗಣಿಕೆಯರು ಚತುಷ್ಷಷ್ಟಿ ಕಲೆಗಳಲ್ಲಿ ಪರಿಣತರಾಗಿರಬೇಕು.[29] ಪಂಚಚೂಡರೆಂಬ ಅಪ್ಸರಸ್ತ್ರೀಯರಿಗೆ ಹುಟ್ಟಿದವರು ವೇಶ್ಯೆಯರು. ಇವರು ರಾಜರ ಆಸ್ಥಾನಗಳಲ್ಲಿ ಆಡಪ, ದರ್ಪಣ ಮುಂತಾದ ಮಂಗಳದ್ರವ್ಯಗಳನ್ನು ಹಿಡಿದು ರಾಜರಿಗೆ ಅಂಗರಕ್ಷಕರಾಗಿಯೂ ಅಂತಃಪುರದಲ್ಲಿ ಸೇವಕಿಯ

ತಾಂ ವಃ ಕುತಃ ಸುಖಿವಃ || ಅಹೋ ಧಾರ್ಷ್ಟ್ಯಮಸಾಧೂನಾಂ ನಿಂದತಾಮನಘಾಃ ಸ್ತ್ರಿಯಃ | ಮುಷ್ಣತಾಮಿವ ಚೌರಾಣಾಂ ತಿಷ್ಠ ಚೌರೇತಿ ಜಲ್ಪತಾಮ್ || ಪುರುಷಶ್ಚಟುಲಾನಿ ಕಾಮಿನೀನಾಂ ಕುರುತೇ ಯಾನಿ ರಹೋ ನ ತಾನಿ ಪಶ್ಚಾತ್ | ಸುಕೃತಜ್ಞತಯಾಂಗನಾ ಗತಾಸೂನವಗುಹ್ಯ ಪ್ರವಿಶಂತಿ ಸಪ್ತಜಿಹ್ವಮ್ |

ಬೃಹತ್ಸಂಹಿತಾ. ಅ. ೭೪.

[27] ಅದ್ವೈತಂ ಸುಖದುಃಖಯೋರನುಗುಣಂ ಸರ್ವಾಸ್ವವಸ್ಥಾಸು ಯದ್ವಿಶ್ರಾಮೋ ಹೃದಯಸ್ಯ ಯತ್ರ ಜರಸಾ ಯಸ್ಮಿನ್ನಹಾರ್ಯೋ ರಸಃ | ಕಾಲೇನಾವರಣಾತ್ಯಯಾತ್ ಪರಿಣತೇ ಯತ್ಸ್ನೇಹಸಾರೇ ಸ್ಥಿತಂ ಸೌಖ್ಯಂ ತಸ್ಯ ಸುಮಾನುಷಸ್ಯ ಕಥಮಪ್ಯೇಕಂ ಹಿ ತತ್ಪ್ರಾಪ್ಯತೇ ||—

ಉತ್ತರ ರಾಮಚರಿತ.

[28] Ludwik: *Vēśyā—Synonyms and Aphorisms. Bhāratīya Vidyā*, IV. pt. 1-2.

[29] ಕಾಮಸೂತ್ರ, I. ೩-೨೦.

ರಾಗಿಯೂ ಇರುತ್ತಿದ್ದರು. ಚನ್ದ್ರಗುಪ್ತ ಮೌರ್ಯನು ಯವನ ಕನ್ಯೆಯರನ್ನು ಅಂಗರಕ್ಷಣೆಗಾಗಿ ನಿಯಮಿಸಿದ್ದನು. ಹರ್ಷನು ಪ್ರಯಾಣ ಮಾಡುವ ಸಮಯದಲ್ಲಿ ಗಣಿಕೆಯರು ಹೆಣ್ಣು ಆನೆಗಳ ಮೇಲೆ ಕುಳಿತು ಹಿಂಬಾಲಿಸುತ್ತಿದ್ದರು. ಸ್ಮೃತಿಗಳಲ್ಲಿ ವೇಶ್ಯಾಧರ್ಮವು ಉಕ್ತವಾಗಿದೆ.[30]

ದೇವಾಲಯಗಳಲ್ಲಿ ದೇವದಾಸಿಯರು ವಂಶಪರಂಪರೆಯಾಗಿ ಸೇವೆಮಾಡುತ್ತಿದ್ದರು.[31] ಇವರಿಗೆ ಮಹಾರಾಷ್ಟ್ರದಲ್ಲಿ ಭಾವಿನೀ ಎಂಬ ಹೆಸರಿದ್ದಿತು.[32] ದಕ್ಷಿಣದೇಶದ ಮುಖ್ಯ ದೇವಾಲಯಗಳಲ್ಲೆಲ್ಲ ಸಂಗೀತ ನಾಟ್ಯಸೇವೆಗಾಗಿ ದೇವದಾಸಿಯರಿಗೆ ಮನೆ, ಹೊಲ, ಮುಂತಾದುವನ್ನು ದಾನಮಾಡುತ್ತಿದ್ದರೆಂದು ಶಾಸನಗಳಿಂದ ತಿಳಿದುಬರುವದು. ಅನೇಕ ವೇಶ್ಯೆಯರು ವಿದ್ಯಾವಂತರೂ ಕವಿಗಳೂ ಆಗಿದ್ದರು. ವಿಜಯನಗರ ಸಾಮ್ರಾಜ್ಯದಲ್ಲಿ ದೇವದಾಸಿಯರು ಗುಪ್ತ ರಾಜಕೀಯತಂತ್ರಗಳನ್ನು ಕಂಡುಹಿಡಿದು ಅಧಿಕಾರಿಗಳಿಗೆ ಸಹಾಯಮಾಡುತ್ತಿದ್ದರು. ಗ್ರೀಕರ "ಹೆಟಿರೈ" ಅಂತೆ ವಿಜಯನಗರದ ವೇಶ್ಯೆಯರು ಗೌರವಸ್ಥರಾಗಿದ್ದರೆಂದೂ, ಮಹರ್ನವಮಿಯದಿನ ಎಲ್ಲರೂ ಸೇರಿ ತಮ್ಮ ಕಲಾಕೌಶಲ್ಯವನ್ನು ಪ್ರದರ್ಶಿಸುತ್ತಿದ್ದರೆಂದೂ ಪೋರ್ಚುಗೀಸ್ ಪ್ರವಾಸಿಗಳು ವಿಶೇಷವಾಗಿ ವರ್ಣಿಸಿರುವರು.

**ಅಂತ್ಯಜರು:** ವೇದಯುಗದಲ್ಲಿ ಚಣ್ಡಾಲ ಪುಲ್ಕಸರನ್ನು ಅಸ್ಪೃಶ್ಯರೆಂಬುದಾಗಿ ಗಣಿಸಿದ್ದರೆಂಬುದಕ್ಕೆ ಆಧಾರಗಳಿಲ್ಲ. ಪ್ರಾಚೀನ ಸ್ಮೃತಿಗಳಲ್ಲಿ ನಾಲ್ಕೇವರ್ಣಗಳು ಉಕ್ತವಾಗಿವೆ. ಆದುದರಿಂದ ಅಂತ್ಯಜರು ಚತುರ್ಥ ವರ್ಣದವರೆಂದು ತಿಳಿದುಬರುವದು. ಸುಮಾರು ಕ್ರಿ.ಪೂ. ೮ ನೆಯ ಶತಾಬ್ದದಿಂದೀಚೆಗೆ ಅಸ್ಪೃಶ್ಯರೆಂಬ ಭಾವವು ಬೆಳದಂತೆ ತೋರುವದು. ಉಪನಿಷತ್ತುಗಳಲ್ಲಿ ಮನುಷ್ಯನು ತನ್ನ ದುಷ್ಕರ್ಮದ ಫಲವಾಗಿ ಚಣ್ಡಾಲನಾಗಿ ಹುಟ್ಟುವನೆಂದು ಹೇಳಿದೆಯೇ ಹೊರತು ಇಲ್ಲಿ ಅಸ್ಪೃಶ್ಯತಾಭಾವವು ಕಂಡುಬರುವದಿಲ್ಲ.[33]

---

30 ಗೌ XXII, ೨೭; ಮನು IV-೨೦೯; IX-೨೫೯; ಯಾಜ್ಞ. II-೨೯೦; ನಾರದ-ಸ್ತ್ರೀ ಪುಂಸ. ೭೮-೭೯. ಮತ್ಸ್ಯಪುರಾಣ. ಅ. ೭೦; ಅ. ೨೨೭-೧೪೪-೫.

31 ರಾಜತರಂಗಿಣಿ IV, ೨೬೯. *E. I.* II. p. II, p. ೨೨೭; *E. I.* XI, ೨೬. ೨೨; *E. I.* XIII, p. ೫೮.

32 ಭಾವ ಎಂದರೆ ದೇವತಾಭಿಮಾನ. "ರತಿರ್ದೇವಾದಿ ವಿಷಯಾ. . . ಭಾವ ಇತಿ ಪ್ರೋಕ್ತಃ"—ಕಾವ್ಯಪ್ರಕಾಶ IV, ೩೫.

33 ಕುಪೂಯಚರಣಾ. . . ಶ್ವಯೋನಿಂವಾ ಸೂಕರಯೋನಿಂವಾ ಚಣ್ಡಾಲಯೋನಿಂವಾ ||
ಬೃಹದಾರಣ್ಯ, ಛಾನ್ದೋಗ್ಯ ಉಪನಿಷತ್ತು.

ಸವರ್ಣದವರೂ ಕೂಡ ಕೆಲವು ಸಂದರ್ಭಗಳಲ್ಲಿ ಅಸ್ಪೃಶ್ಯರೆಂಬುದನ್ನು ನಾವು ಗಮನಿಸಬೇಕು. ಅಸ್ಪೃಶ್ಯತೆಗೆ ಮುಖ್ಯ ಕಾರಣಗಳು:—(೧) ಜನ್ಮ, (೨) ಮಹಾಪಾತಕಗಳು, (೩) ಮತಭೇದಗಳು,[34] (೪) ಕೆಲವು ಜೀವನೋಪಾಯಗಳು,[35] (೫) ಕೆಲವು ಅವಸ್ಥೆಗಳು,[36] (೬) ಕೆಲವು ದೇಶಗಳೂ ಜನರೂ,[37] (೭) ಹೇಯವಾದ ಕರ್ಮಗಳು,[38] (೮) ಕತ್ತೆ ನಾಯಿ ಹಲ್ಲಿ ಮುಂತಾದವುಗಳ ಸಂಪರ್ಕ.[39] ಚಣ್ಡಾಲನ ನೆರಳಿನಿಂದ ದೋಷವಿಲ್ಲ.[40] ರಾಜಮಾರ್ಗಗಳು ಸೂರ್ಯ ಮತ್ತು ವಾಯುಸಂಪರ್ಕದಿಂದ ಯಾವಾಗಲೂ ಶುದ್ಧ.[41] ವಿಷ್ಣು ಸಮೀಪದಲ್ಲಿಯೂ ಯಾತ್ರೆ, ವಿವಾಹ, ಯಜ್ಞ ಉತ್ಸವ, ಸಂಗ್ರಾಮ, ಅಗ್ನ್ಯುತ್ಪಾತ ಮುಂತಾದ ಸಮಯಗಳಲ್ಲಿ ಅಸ್ಪೃಶ್ಯತೆಯಿಲ್ಲ.[42]

---

34 ಶೈವಾನ್ ಪಾಶುಪತಾನ್ ಸ್ಪೃಷ್ಟ್ವಲೋಕಾಯತಿಕ ನಾಸ್ತಿಕಾನ್ | ವಿಕರ್ಮಸ್ಥಾನ್ ದ್ವಿಜಾನ್ ಶೂದ್ರಾನ್ ಸವಾಸಾಜಲಮಾವಿಶೇತ್ || ಮಿತಾಕ್ಷರ ಯಾಜ್ಞ III, ೩೦. ಬೌದ್ಧಾನ್ ಪಾಶುಪತಾನ್ ಜೈನಾನ್ ಲೋಕಾಯತಿಕ ಕಾಪಿಲಾನ್ | ವಿಕರ್ಮಸ್ಥಾನ್ ದ್ವಿಜಾನ್ ಸ್ಪೃಷ್ಟ್ವಾ ಸವಾಸಾಜಲಮಾವಿಶೇತ್ ||—ಸ್ಮೃತಿ ಚನ್ದ್ರಿಕಾ. I. ಪು. ೧೧೮.

35 ದೇವಲಕಬ್ರಾಹ್ಮಣ, ಸೋಮವಿಕ್ರಯಮಾಡುವವನು, ಇತ್ಯಾದಿ.

36 ರಜಸ್ವಲಾ, ಜಾತಾಶೌಚ, ಮೃತಾಶೌಚ, ಶವ ಮತ್ತು ಶ್ಮಶಾನಸಂಪರ್ಕ.

37 ಮ್ಲೇಚ್ಛ, ಚೀಣ, ಹೂಣ, ಇತ್ಯಾದಿ.

38 ಕೈವರ್ತ, ಮೃಗಯು ನಾಪಿತ, ವ್ಯಾಧ, ಸೌನಿ, ಶಾಕುನಿಕ, ರಜಕ.

39 ಆಪ ಧ. ಸೂ, I, ೫-೧೫. ೧೬.

40 ಮನು V, ೧೩೩ ; ವಿಷ್ಣು. ಧ ಸೂ. ೨೩-೫೨. ಮೇಧಾತಿಥಿ ಮನು. IV, ೧೩೦

41 ಯಜ್ಞ. I, ೧೯೪.

42 ವಿಷ್ಣ್ವಾಲಯ ಸಮೀಪಸ್ಥಾನ್ ವಿಷ್ಣುಸೇವಾರ್ಥಮಾಗತಾನ್ | ಚಣ್ಡಾಲ ಪುಕ್ಕಸಾನ್ಯಾಪಿ ಸ್ಪೃಷ್ಟ್ವಾನಸ್ನಾನಮಾಚರೇತ್ ||—ನಿತ್ಯಾಚಾರಪದ್ಧತಿ. ಪು. ೧೩೦. ದೇವಯಾತ್ರಾ ವಿವಾಹೇಷು ಯಜ್ಞಪ್ರಕರಣೇಷುಚ | ಉತ್ಸವೇಷು ಚಸರ್ವೇಷು ಸ್ಪೃಷ್ಟಾಸ್ಪೃಷ್ಟಿರ್ನವಿದ್ಯತೇ || ಅತ್ರಿ. ೨೪೯. ಗ್ರಾಮೇತುಯತ್ರ ಸಂಸ್ಪೃಷ್ಟಿರ್ಯಾತ್ರಾ ದೇವಗೃಹೇಷು ಚ | ಗ್ರಾಮಸಂದೂಷಣೇ ಚೈವ ಸ್ಪೃಷ್ಟಿದೋಷೋ ನವಿದ್ಯತೇ ||—ಸ್ಮೃತಿ ಚನ್ದ್ರಿಕಾ. ಪು. ೧೧೯. ಸಂಗ್ರಾಮೇ ಹಟ್ಟಮಾರ್ಗೇಚ ಯಾತ್ರಾ ದೇವಗೃಹೇಷು ಚ | ಉತ್ಸವಕ್ರತು ತೀರ್ಥೇಷು ವಿಪ್ಲವೇ ಗ್ರಾಮದೇಶಯೋಃ | ಮಹಾಜಲಸಮೀಪೇಷು ಮಹಾಜನವರೇಷು ಚ | ಅಗ್ನ್ಯುತ್ಪಾತೇ ಮಹಾಪತ್ಸು ಸ್ಪೃಷ್ಟಾಸ್ಪೃಷ್ಟಿರ್ನದುಷ್ಯತಿ || ಪ್ರಾಪ್ಯಕಾರೀನ್ದ್ರಿಯಂ ಸ್ಪೃಷ್ಟಮಸ್ಪೃಷ್ಟಿತ್ವಿತರೇನ್ದ್ರಿಯಂ | ತಯೋಶ್ಚ ವಿಷಯಂ ಪ್ರಾಹುಃ ಸ್ಪೃಷ್ಟಾಸ್ಪೃಷ್ಟ್ಯಭಿಧಾನತಃ ||-ಸ್ಮೃತ್ಯರ್ಥಸಾರ. ಪು. ೭೦. ಪರಾ. ಮಾಧ II. ೧. ಪು. ೧೧೫.

ಹರಿಜನರಿಗೆ ವೈದಿಕಕರ್ಮಗಳಿಲ್ಲದಿದ್ದರೂ ಸಾಧಾರಣ ಧರ್ಮಗಳೂ ವಿಷ್ಣುಪೂಜೆಯೂ ವಿಹಿತ.[43] ಅಂತ್ಯಜರು ಭೈರವಪೂಜೆಮಾಡಬೇಕೆಂದು ದೇವೀಪುರಾಣದಲ್ಲಿ ಹೇಳಿದೆ. ಎಲ್ಲ ಪ್ರತಿಲೋಮಜಾತಿಗಳಿಗೂ ವ್ರತಗಳಿವೆ.[44]

ಫಾಹಿಯಾನ್, ಯುವಾನ್‌ಚ್ವಾಂಗ್, ಇತ್ಸಿಂಗ್, ಅಲ್‌ಬೆರೂನಿ ಮುಂತಾದ ವಿದೇಶೀಯ ಪ್ರವಾಸಿಗಳು ಭರತಖಂಡದಲ್ಲಿ ಚಂಡಾಲರಿಗೆ ಊರಿನ ಹೊರಗೆ ವಾಸಸ್ಥಾನವಿದ್ದಿತೆಂದೂ, ಅವರು ಊರಿನ ಒಳಕ್ಕೆ ಬಂದರೆ ಇತರರಿಗೆ ಎಚ್ಚರಿಕೆ ಕೊಡುತ್ತಿದ್ದರೆಂದೂ ಹೇಳಿರುವರು. ಆದರೆ ಬಾಣನು ಕಾದಂಬರಿಯಲ್ಲಿ ಚಣ್ಡಾಲಕನ್ಯೆಗೆ ರಾಜಸಭೆಯಲ್ಲಿ ಪ್ರವೇಶವಿದ್ದಿತೆಂದು ಹೇಳುವನು. ಕಾಲಕ್ರಮೇಣ ಅಸ್ಪೃಶ್ಯತಾನಿಯಮಗಳು ಕಟುತರವಾದವು. ಆದರೂ ನಂದನಾರರಂತಹ ಶಿವಭಕ್ತರೂ ಕೆಲವರು ಆಳ್ವಾರರೂ ಅಸ್ಪೃಶ್ಯರಾಗಿದ್ದರೂ ಸರ್ವವರ್ಣಗಳ ಜನರಿಂದಲೂ ಗೌರವ ಹೊಂದಿದರು. ಶ್ರೀಶಂಕರರು ಮನೀಷಾಪಂಚಕದಲ್ಲಿ ಜ್ಞಾನಿಯಾದವನು ಚಣ್ಡಾಲನಾಗಲೀ ದ್ವಿಜನಾಗಲೀ ಗುರುವೆಂದು ಹೇಳಿರುವರು. ಶ್ರೀ ರಾಮಾನುಜರು ಅಂತ್ಯಜರಿಗೆ ತಿರುಕ್ಕುಲತ್ತಾರ್ ಎಂದು ಹೆಸರಿಟ್ಟು ಕೆಲವು ಹಕ್ಕುಗಳನ್ನು ಕೊಟ್ಟರು. ವೀರಶೈವರು ಸ್ಪೃಶ್ಯಾಸ್ಪೃಶ್ಯ ನಿಯಮಗಳನ್ನು ಲೆಕ್ಕಿಸಲಿಲ್ಲ. ಹರಿದಾಸಕೂಟದವರು ಊರಹೊರಗಿರುವವನು ಹೊಲೆಯನಲ್ಲ, ದುಷ್ಕರ್ಮಮಾಡುವವನೇ ನಿಜವಾದ ಹೊಲೆಯನೆಂದು ಸವರ್ಣದವರ ದುರಭಿಮಾನವನ್ನು ಖಂಡಿಸಿರುವರು. ಹೀಗೆ "ಹರಿಜನೋದ್ಧಾರ" ಕಾರ್ಯವು ನಡೆಯುತ್ತಲೇ ಬಂದಿತು. ಹತ್ತೊಂಬತ್ತನೆಯ ಶತಾಬ್ದದಿಂದ ಭರತಖಂಡದಲ್ಲಿ ಚಲುವಳಿಗಳುಂಟಾಗಿ ಹರಿಜನರಿಗೆ ನ್ಯಾಯಸ್ಥಾನಗಳಲ್ಲಿ ನ್ಯಾಯಸಮತ್ವವು ಸಿಕ್ಕಿದೆ.

**ಆಶ್ರಮಗಳು :** ವರ್ಣಗಳು ಸಮಾಜಜೀವನದ ವಿಭಾಗಗಳು. ಆಶ್ರಮಗಳು ವ್ಯಕ್ತಿಜೀವನಕ್ಕೆ ಸಂಬಂಧಪಟ್ಟಿವೆ.[45] ಮಾನವನಿಗೆ ಪ್ರಕೃತಿಸಹಜವಾದ ಆಹಾರ, ನಿದ್ರಾ, ಭಯ, ಕಾಮಗಳೆಂಬ ಮೂಲಭಾವಗಳನ್ನು ಸಂಸ್ಕರಿಸಿ ಚತುರ್ವಿಧ ಪುರುಷಾರ್ಥಗಳಾದ ಧರ್ಮ, ಅರ್ಥ, ಕಾಮ, ಮೋಕ್ಷಗಳ ಸಿದ್ಧಿಯನ್ನು ಪಡೆಯುವ ಮಾರ್ಗವನ್ನು ತೋರಿಸಲು ಆಶ್ರಮವ್ಯವಸ್ಥೆಯು

---

43 ಶ್ರವಣಾತ್ಕೀರ್ತನಾದ್ಧ್ಯಾನಾತ್ ಪೂಯನ್ತ್ಯೇನ್ತಾವಸಾಯಿನಃ | ತತ್ರ ಬ್ರಹ್ಮಮಯಸ್ಯೇಶ : ಕಿಮುತೇಕ್ಷಾಭಿಮರ್ಶಿನಃ ||—ಶ್ರೀ ಭಾಗವತ. X. ೭೪-೪೪.

44 ಮಿತಾಕ್ಷರ-ಯಾಜ್ಞ. III-೨೬೨.

45 ಶೈಶವೇಽಭ್ಯಸ್ತ ವಿದ್ಯಾನಾಂ ಯೌವನೇ ವಿಷಯೈಷಿಣಾಮ್ | ವಾರ್ಧಕ್ಯೇ ಮುನಿವೃತ್ತಾನಾಂ ಯೋಗೇನಾನ್ತೇ ತನುತ್ಯಜಾಮ್ || ರಘುವಂಶ.

ಏರ್ಪಾಟಾಗಿದೆ. ನಾಲ್ಕು ಮೂಲಭಾವಗಳು, ನಾಲ್ಕು ಪುರುಷಾರ್ಥಗಳು, ನಾಲ್ಕು ವರ್ಣಗಳು ನಾಲ್ಕು ಆಶ್ರಮಗಳು ಹೀಗೆ ಒಂದನ್ನೊಂದು ಹೊಂದು ಕೊಂಡಿವೆ.

| ಮೂಲಭಾವ Basic Instinct | ಸಂಸ್ಕೃತಭಾವ Sublimation | ಸಮಾಜಜೀವನ ವರ್ಣಗಳು | ವ್ಯಕ್ತಿಜೀವನ ಆಶ್ರಮಗಳು |
|---|---|---|---|
| ಭಯ | ಅಭಯ (ಮೋಕ್ಷ) | ಬ್ರಾಹ್ಮಣ | ಸನ್ಯಾಸ |
| ಕಾಮ | ಧರ್ಮಾವಿರುದ್ಧ ಕಾಮ | ಕ್ಷತ್ರಿಯ | ವಾನಪ್ರಸ್ಥ |
| ಆಹಾರ | ಅರ್ಥ | ವೈಶ್ಯ | ಗೃಹಸ್ಥ |
| ನಿದ್ರಾ (ಆಲಸ್ಯ) | ಧರ್ಮ ಜಾಗೃತಿ | ಶೂದ್ರ | ಬ್ರಹ್ಮಚಾರಿ |

ಆಶ್ರಮ ಎಂಬ ಪದವು ಸಂಹಿತೆಯಲ್ಲಾಗಲೀ ಬ್ರಾಹ್ಮಣಗಳಲ್ಲಾಗಲೀ ಕಂಡುಬರುವದಿಲ್ಲ. ಆದರೆ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ ಮತ್ತು ಯತಿಗಳ ಉಲ್ಲೇಖವಿದೆ. ಆದುದರಿಂದ ಆಶ್ರಮವ್ಯವಸ್ಥೆಯು ವರ್ಣವ್ಯವಸ್ಥೆ ಯಂತೆಯೇ ಪ್ರಾಚೀನ. ನಾಲ್ಕು ಆಶ್ರಮಗಳ ತತ್ವಗಳು ಉಪನಿಷತ್ತುಗಳಲ್ಲಿ ನಿರ್ದಿಷ್ಟವಾಗಿವೆ.[46] ಅತ್ಯಾಶ್ರಮಿ ಅಥವಾ ಅಂತ್ಯಾಶ್ರಮಿಯೆಂಬ ಪದವು ಶ್ವೇತಾಶ್ವತರದಲ್ಲಿ ಕಂಡುಬರುವದು.[47] ಜಾಬಾಲೋಪನಿಷತ್ತಿನಲ್ಲಿ ಆಶ್ರಮ ವಿಧಿಗಳು ಉಕ್ತವಾಗಿವೆ. ಪಾಣಿನಿಯು ಪಾರಾಶರ್ಯ, ಕರ್ಮಂದ, ಮಸ್ಕರಿ, ಭಿಕ್ಷುಸೂತ್ರಗಳನ್ನು ಸೂಚಿಸಿರುವನು.[48] ಸಮುಚ್ಚಯದೃಷ್ಟಿಯಿಂದ ಒಂದಾದ ಮೇಲೆ ಮತ್ತೊಂದು ಆಶ್ರಮವು ವಿಹಿತ.[49] ಕೆಲವರು ವಾನಪ್ರಸ್ಥ ಸನ್ಯಾಸಾ ಶ್ರಮಗಳು ಕಲಿವರ್ಜ್ಯವೆಂದು ಹೇಳುವರು. ವಿಕಲ್ಪವಾಗಿ ಜಾಬಾಲ ಶ್ರುತಿಯು ಬ್ರಹ್ಮಚರ್ಯದಿಂದಲೇ ಸನ್ಯಾಸಾಶ್ರಮಕ್ಕೆ ಹೋಗಬಹುದೆಂದು

---

46 ಐ. ಬ್ರಾ. ೩೩-೧೧ ; ಛಾಂ. II, ೨೩-೧ ; V, ೧೦-೧ ; ಬೃಹ. ಉಪ. VI, ೨-೧೫ ; VI, ೫-೨ ; ಮುಣ್ಡಕ III, ೨-೬ ;

47 ಶ್ವೇ. VI, ೨೧.

48 ಪಾರಾಶರ್ಯ ಶಿಲಾಲಿಭ್ಯಾಂ ಭಿಕ್ಷುನಟಸೂತ್ರಯೋಃ | ಕರ್ಮನ್ದ ಕೃಶಾಶ್ವಾದಿನಃ | ಮಸ್ಕರಮಸ್ಕರಿಣೌ ವೇಣುಪರಿವ್ರಾಜಕಯೋಃ || ಪಾಣಿನಿ. VI, ೧-೧೬೪.

49 ಬ್ರಹ್ಮಸೂತ್ರ III, ೪-೪೦. ದಕ್ಷಸ್ಮೃತಿ. I, ೮೯. ಮನು. IV, ೧.

ಹೇಳುವದು.[50] ಬಾಧಾದೃಷ್ಟಿಯಿಂದ ಗೃಹಸ್ಥಾಶ್ರಮವೇ ಸರ್ವೋತ್ತಮ.[51] ಸನ್ಯಾಸಾಶ್ರಮವು ಪ್ರಹ್ಲಾದನ ಮಗನಾದ ಅಸುರ ಕಪಿಲನಿಂದ ಸೃಷ್ಟವಾಯಿತೆಂದೂ ವೇದವಿರುದ್ಧವೆಂದೂ, ಆದುದರಿಂದ ಯಜ್ಞಕರ್ಮಕ್ಕಾಗಿಯೂ ಋಣತ್ರಯ ಪರಿಹಾರಕ್ಕಾಗಿಯೂ ಗೃಹಸ್ಥಾಶ್ರಮವೇ ಉತ್ತಮವೆಂದು ಪಂಡಿತರು ಹೇಳುವರು.[52] ಮುಕ್ತಿಸಾಧನೆಗೆ ಶರೀರ ಪಾಟವವು ಅವಶ್ಯಕ. ಅಂತಹ ದೇಹವನ್ನು ನಮಗೆ ಕೊಟ್ಟ ಪಿತೃಗಳಿಗೂ ಆಧ್ಯಾತ್ಮ ಮಾರ್ಗದಲ್ಲಿ ನಮ್ಮನ್ನು ಪ್ರಚೋದಿಸುವ ಅಭಿಮಾನಿ ದೇವತೆಗಳಿಗೂ, ಅತ್ಯುತ್ತಮವಾದ ಜ್ಞಾನವನ್ನು ಪ್ರಸಾದಿಸಿರುವ ಋಷಿಗಳಿಗೂ ಸಲ್ಲಬೇಕಾದ ಋಣಗಳನ್ನು ತೀರಿಸುವದು ಮನುಷ್ಯನ ಕರ್ತವ್ಯವಾಗಿದೆ. ಎಪ್ಪತ್ತು ವರ್ಷಗಳಾದಮೇಲೆ ಸನ್ಯಾಸವನ್ನು ಸ್ವೀಕರಿಸಬಹುದು.[53] ಎಲ್ಲ ಆಶ್ರಮಗಳಿಗೂ ಸಮಾನಫಲವಿದೆಯೆಂದು ಆಪಸ್ತಂಬರು ತೀರ್ಮಾನಿಸಿರುವರು.[54]

**ಬ್ರಹ್ಮಚರ್ಯ :** ಗರ್ಭಾಷ್ಟಮವರ್ಷದಲ್ಲಿ ವಸಂತಋತುವಿನಲ್ಲಿ ಬ್ರಾಹ್ಮಣನಿಗೂ, ಹನ್ನೆರಡನೆಯ ವರ್ಷದಲ್ಲಿ ಗ್ರೀಷ್ಮಋತುವಿನಲ್ಲಿ ಕ್ಷತ್ರಿಯನಿಗೂ, ಹದಿನಾಲ್ಕು ಹದಿನಾರನೆಯ ವರ್ಷದಲ್ಲಿ ಶರದೃತುವಿನಲ್ಲಿ ವೈಶ್ಯನಿಗೂ ಉಪನಯನವಾಗಬೇಕೆಂಬ ಸಾಮಾನ್ಯ ನಿಯಮವಿದೆ. ದಣ್ಡ, ಕೌಪೀನ, ಮೌಞ್ಜೀ, ಶಿಖಾ, ಬ್ರಹ್ಮಸೂತ್ರ ಕೃಷ್ಣಾಜಿನಗಳು ಬ್ರಹ್ಮಚಾರಿಯ ಚಿಹ್ನೆಗಳು. ಶಿಖೆಗಳನ್ನು ಪ್ರವರಸಂಖ್ಯಾನುಸಾರ, ಗೋತ್ರಾನುಸಾರ ಅಥವಾ ಕುಲಪದ್ಧತಿ ಪ್ರಕಾರ ಇಟ್ಟುಕೊಳ್ಳಬಹುದು. ವಾಸಿಷ್ಠರಿಗೆ ಬಲಗಡೆಯಲ್ಲೂ, ಕಾಶ್ಯಪರಿಗೆ ಎರಡುಕಡೆಯಲ್ಲೂ, ಅಂಗಿರಸರಿಗೆ ಪಂಚಚೂಡಗಳೂ, ಭಾರ್ಗವರಿಗೆ ಮುಣ್ಡನವೂ ವಿಹಿತ. ಅಥವಾ ಪಶ್ಚಾಚ್ಚೂಡ, ಪುರಶ್ಚೂಡ (ದ್ರವಿಡ ದೇಶದಲ್ಲಿ), ವಟಪತ್ರಾಕಾರದ ಶಿಖೆಯನ್ನೂ ಧರಿಸಬಹುದು. ಶಿಖೆಯಿಲ್ಲದೆ

---

50 ಜಾಬಾಲೋಪನಿಷತ್ತು ; ಆಪ. ಧ. ಸೂ. II, ೯-೨೧-೭ ; II, ೯-೨೨-೭, ೮. ಯಾಜ್ಞ. III, ೫೬. ವಸಿಷ್ಠ. VIII, ೩,

51 ಗೌತಮ. III, ೧-೩೫, ಬೌ. II, ೬-೨೯.

52 ಏಕಾಶ್ರಮ್ಯಂತ್ವಾಚಾರ್ಯಾ ಅಪ್ರಜನನತ್ವಾದಿತರೇಷಾಮ್ | ತತ್ರೋದಾಹರನ್ತಿ ಪ್ರಾಹ್ಲಾದಿರ್ವೈ ಕಪಿಲೋ ನಾಮಾಸುರ ಆಸ | ಸ ಏತಾನ್ಭೇದಾಂಶ್ಚಕಾರ ದೇವೈಃ ಸ್ಪರ್ಧಮಾನಸ್ತಾನ್ಮನೀಷೀ ನಾದ್ರಿಯೇತ || ಬೌ. ಧ. ಸೂ. II, ೬-೨೯. ೪೨-೩.

53 ಬೌ. ಧ. ಸೂ. II, ೧೦-೫.

54 ತೇಷು ಸರ್ವೇಷು ಯಥೋಪದೇಶಮವ್ಯಗ್ರೋ ವರ್ತಮಾನಃ ಕ್ಷೇಮಂಗಚ್ಛತಿ— ಆಪ. II, ೯-೨೧-೨ ; ನತು ತಜ್ಜ್ಯೈಷ್ಠ್ಯಮಾಶ್ರಮಾಣಾಮ್ II, ೯-೨೪. ೧೪.

ಇರಬಾರದು.[55] ಆಪಸ್ತಮ್ಬ ಮನುಗಳು ಬ್ರಹ್ಮಚಾರಿಯು ಮುಣ್ಡನಮಾಡಿಸಿ ಕೊಳ್ಳಬಹುದು, ಅಥವಾ ಶಿಖೆಯನ್ನೋ ಜಟೆಯನ್ನೋ ಧರಿಸಬಹುದೆಂದು ವಿಕಲ್ಪ ಹೇಳಿರುವರು.[56] ಬ್ರಹ್ಮಚಾರಿಯು ಸಮಿತ್ಪಾಣಿಯಾಗಿ ಆಚಾರ್ಯನನ್ನು ಸಮೀಪಿಸಿ ಗೋತ್ರಸೂತ್ರಪ್ರವರಗಳನ್ನು ಹೇಳಿ ಅಭಿವಾದನ ಮಾಡಿ ಗಾಯತ್ರ್ಯುಪದೇಶವಾದ ಅನಂತರ ಸ್ವಶಾಖಾಧ್ಯಯನವನ್ನು ಆರಂಭಿಸಬೇಕು. ಬ್ರಹ್ಮಚಾರಿಗೆ ಅಭಿವಾದನ, ನಮಸ್ಕಾರ, ಪ್ರದಕ್ಷಿಣ, ಶೌಚ, ಭಿಕ್ಷಾಕ್ರಮ, ಇನ್ದ್ರಿಯನಿಗ್ರಹ, ಆಚಾರ್ಯಶುಶ್ರೂಷಾ ಇತ್ಯಾದಿ ವಿಷಯಗಳಲ್ಲಿ ಅನೇಕ ನಿಯಮಗಳಿವೆ. ಕೆಲವು ಧರ್ಮಶಾಸ್ತ್ರಗಳು ಹನ್ನೆರಡು, ಇಪ್ಪತ್ತುನಾಲ್ಕು ಅಥವಾ ನಲ್ವತ್ತೆಂಟು ವರ್ಷಗಳ ಬ್ರಹ್ಮಚರ್ಯವನ್ನು ವಿಧಿಸಿರುವವು. ಆದರೆ ನಲ್ವತ್ತೆಂಟು ವರ್ಷ ಅಥವಾ ಯಾವಜ್ಜೀವ ಬ್ರಹ್ಮಚರ್ಯೆಯು ವೇದ ವಿರುದ್ಧವೆಂದು ಶಬರಸ್ವಾಮಿಗಳು ಹೇಳುವರು.[57] ಧರ್ಮಜಿಜ್ಞಾಸೆಯನ್ನು ಮಾಡಿ ಬ್ರಹ್ಮಚಾರಿಯು ಸ್ನಾತಕನಾಗಬೇಕು.[58]

**ಗೃಹಸ್ಥಾಶ್ರಮ :** ಸ್ನಾತಕನು ಗುರ್ವನುಜ್ಞೆಯನ್ನು ಪಡೆದು ವಿವಾಹ ವಾಗಬೇಕು. ಕನ್ಯೆಗೆ ಸಹೋದರರಿರಬೇಕು. ಧರ್ಮಸೂತ್ರಗಳಲ್ಲಿ ನಗ್ನಿಕಾ ವಿವಾಹ ಪ್ರೌಢಾವಿವಾಹಗಳೆರಡೂ ಉಕ್ತವಾಗಿವೆ. ಕನ್ಯೆಯ ತಂದೆಯು ಸಕಾಲದಲ್ಲಿ ವಿವಾಹಮಾಡದೇ ಇದ್ದರೆ ರಜೋದರ್ಶನಾನನ್ತರ ಮೂರು ತಿಂಗಳು ಅಥವಾ ಮೂರು ವರ್ಷ ಕಾದು ತಾನೇ ಪತಿಯನ್ನು ವರಿಸಬಹುದು.[59] ಪಾರಸ್ಕರ ಗೃಹ್ಯಸೂತ್ರದಲ್ಲಿ[60] ಮದುವೆಯ ಮೂರುದಿನ ಪತಿಪತ್ನಿಯರು ಬ್ರಹ್ಮಚರ್ಯವನ್ನು ಪಾಲಿಸಿ ನಾಲ್ಕನೆಯ ದಿನ ಚತುರ್ಥೀಕರಣ (ನಿಷೇಕ)

---

55 ಅಮೇಧ್ಯಂವಾ ಏತಚ್ಛಿರೋ ಯದಶಿಖಮ್ | ಕಾಠಕ. ಗೃ. ಸೂ ೪೦-೭ ;

56 ಆಪ. ಧ. ಸೂ. I, ೧-೨. ೩೧ ಮನು. II, ೨೧೯.

57 ಶಾಬರಭಾಷ್ಯ ಜೈ. I, ೩-೮-೪.

58 ವೇದಾಧ್ಯಯನಮೇವ ಪೂರ್ವಮಭಿನಿರ್ವೃತ್ಯ ಅನನ್ತರಂ ಧರ್ಮಜಿಜ್ಞಾಸಿತವ್ಯಃ| ವೇದಮಧೀತ್ಯನತ್ವರಿತೇನ ಸ್ನಾತವ್ಯಮ್ | ಅನನ್ತರಂ ಧರ್ಮೋ ಜಿಜ್ಞಾಸಿತವ್ಯ ಇತಿ " ಅಥ ' ಶಬ್ದಸ್ಯಾರ್ಥಃ| ಧರ್ಮಾಯ ಹಿ ವೇದವಾಕ್ಯಾನಿ ವಿಚಾರಯಿತುಂ ಅನಧೀತವೇದೋನ ಶಕ್ನುಯಾತ್ | ಅತಃ—ಏತಸ್ಮಾತ್ಕಾರಣಾತ್, ಅನನ್ತರಂ ಧರ್ಮೋಜಿಜ್ಞಾಸಿತವ್ಯ ಇತಿ " ಅತಃ " ಶಬ್ದಸ್ಯಾರ್ಥಃ|| ಶಾಬರಭಾಷ್ಯ.

59 ತ್ರೀನ್ಯೃತೂನತೀತ್ಯಸ್ವಯಂಯುಜ್ಯೇತ ಅನಿನ್ದಿತೇನ ಉತ್ಸೃಜ್ಯ ಪಿತ್ರ್ಯಾಲಂಕಾರಾನ್— ಗೌ. ೧೮-೨೦-೨೩ ; ಮನು. XI, ೯೯-೯೦ ; ಬೌ. ಧ. ಸೂ. IV-೧-೧೪ ; ವಸಿಷ್ಠ ೧೭-೬೭. ೬೮.

60 ಪಾರ. ಗೃ. ಸೂ. I, ೮.

ವಾಗಬಹುದೆಂದು ಹೇಳಿರುವದರಿಂದ ಪ್ರೌಢಾವಿವಾಹವು ಸೂಚಿತವಾಗಿದೆ. ಆಶ್ವಲಾಯನರು ಇದಕ್ಕೆ ಸಮ್ಮತಿಸದೆ ಮೂರು ಅಥವಾ ಹನ್ನೆರಡು ದಿನಗಳು ಕಳೆಯಬೇಕೆಂದು ಹೇಳುವರು.[61] ಹರ್ಷಚರಿತೆಯಲ್ಲಿ ಹನ್ನೆರಡು ವರ್ಷದ ರಾಜ್ಯಶ್ರೀಗೆ ಮದುವೆಯಾದ ರಾತ್ರಿಯಲ್ಲೇ ನಿಷೇಕವೂ ಆಯಿತೆಂದು ಬಾಣನು ಹೇಳುವನು.[62]

ಮೇಲಿನ ವರ್ಣದವರು ಕೆಳಗಿನ ವರ್ಣಗಳ ಹೆಂಗಸರನ್ನು ಮದುವೆಯಾಗ ಬಹುದು. ಬೌಧಾಯನರು ಉಪನಯನವಿಲ್ಲದವರೊಡನೆ ಭೋಜನ, ಸ್ತ್ರೀಯ ರೊಡನೆ ಭೋಜನ, ಪರ್ಯುಷಿತಾನ್ನ (ತಂಗಳನ್ನ) ಭೋಜನ, ಮಾತುಲಪಿತೃ ಷ್ವಸೃದುಹಿತೃಗಮನ ಮುಂತಾದುವು ದಕ್ಷಿಣದೇಶದ ಆಚಾರಗಳೆಂದು ಹೇಳುವರು. ಆದರೆ ಯಮ-ಯಮಿಯರ ಕಥೆ[63], ಪೃಥೆಯ (ಕುಂತಿ) ಮಗನಾದ ಅರ್ಜುನನು ತನ್ನ ತಾಯಿ ಸಹೋದರನಾದ ವಸುದೇವನ ಮಗಳು ಸುಭದ್ರೆ ಯನ್ನು ಮದುವೆಯಾದುದೂ ಉತ್ತರದಲ್ಲಿ ಕೂಡ ಈ ಪದ್ಧತಿ ಇದ್ದಿತೆಂದು ಸೂಚಿಸುವವು.[64] ಸ್ಮೃತಿ ಮುಕ್ತಾಫಲ, ಧರ್ಮಸಿಸ್ಧು ಮುಂತಾದ ನಿಬನ್ಧನ ಗಳಲ್ಲಿ ದಾಕ್ಷಿಣಾತ್ಯರು ಕೆಲವರು ತಮ್ಮ ಸ್ವಂತ ಸಹೋದರಿಯ ಮಗಳನ್ನೇ ಮದುವೆಯಾಗುವರೆಂದು ಹೇಳಿದೆ.

ವಿವಾಹವಿಧಾನಗಳು ಆರು ಎಂದು ಆಪಸ್ತಮ್ಬ ವಸಿಷ್ಠರೂ, ಎಂಟು ಎಂದು ಇತರರೂ ಹೇಳುವರು.[65] ಯಾವ ಧರ್ಮಸೂತ್ರದಲ್ಲಿಯೂ ಮಾಂಗಲ್ಯದ ಉಲ್ಲೇಖ ಕಂಡುಬರುವದಿಲ್ಲ. ನಾಸಿಕಾಭರಣವು ಕೂಡ ಕ್ರಿ.ಶ. ೧೧ ನೆಯ ಶತಮಾನದನಂತರ ಆರ್ಯರಲ್ಲಿ ಪ್ರಚಾರಕ್ಕೆ ಬಂದಿತು. ನಿರ್ದುಷ್ಟಳಾದ ಕನ್ಯೆ ಯನ್ನು ಮದುವೆಯಾಗಿ ಸರಿಯಾದ ಕಾರಣವಿಲ್ಲದೆ ಬಿಟ್ಟರೆ ಅಂತಹವನಿಗೆ ರಾಜದಂಡವು ವಿಧಿಸಿದೆ. ಮತ್ತು ಅಂತಹವನು ಕತ್ತೆಯ ಚರ್ಮವನ್ನು ಧರಿಸಿ

---

[61] ಆಶ್ವ. ಗೃ. ಸೂ. I, ೮-೧೦ ; I, ೭-೨. ಇದು ವಿದೇಹದೇಶದ ಪದ್ಧತಿಯೆಂದು ವ್ಯಾಖ್ಯಾನಕಾರನಾದ ನಾರಾಯಣನು ಹೇಳುವನು.

[62] ಹ. ಚ. ಉಚ್ಛ್ವಾಸ IV. ಹರ್ಷನು ವೈಶ್ಯನಾದರೂ ಅವನ ಅಳಿಯನಾದ ಗ್ರಹ ವರ್ಮನು ಕ್ಷತ್ರಿಯನು.

[63] ಋಗ್. X, ೧೬-೧, ಶತ. ಬ್ರಾ. I, ೮-೩-೬. ಖಿಲಸೂಕ್ತ—*Aufrecht's Ed.* II, p. ೭೬ ff.

[64] ಕುಮಾರಿಲರು ಸುಭದ್ರೆಯು ನಿಜವಾಗಿ ಕೃಷ್ಣನ ಸೋದರಿಯಲ್ಲವೆಂದೂ, ವಸುದೇವನ ತಾಯಿಯ ಮಗಳೋ ಅಥವಾ ವಸುದೇವನ ತಂದೆಯ ಸಹೋದರಿಯ ಮಗಳೋ ಆಗಿದ್ದ ಳೆಂದು ಪರಿಹಾರ ಹೇಳಿರುವರು.

[65] ಬ್ರಾಹ್ಮ, ಪ್ರಾಜಾಪತ್ಯ, ಆರ್ಷ, ದೈವ, ಗಾನ್ಧರ್ವ, ಆಸುರ, ರಾಕ್ಷಸ, ಪೈಶಾಚ.

ಆರು ತಿಂಗಳು ವರೆಗೂ ಏಳು ಮನೆಗಳಲ್ಲಿ ಮಾತ್ರ ಭಿಕ್ಷೆಯೆತ್ತಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು.[66] ಪರಿವೇದನೆ (ಕಿರಿಯರು ಮೊದಲು ವಿವಾಹವಾಗುವದು) ನಿಷಿದ್ಧ. ಬಹುಪತ್ನೀತ್ವವು ನಿಷೇಧಿಸಲ್ಪಡದಿದ್ದರೂ ಏಕಪತ್ನೀವ್ರತವೇ ಶ್ಲಾಘ್ಯ ವಾದ ಧರ್ಮ.[67] ಬಹುಪತಿತ್ವವು (Polyandry) ಶಾಸ್ತ್ರವಿರುದ್ಧ. ಮಹಾ ಭಾರತದಲ್ಲಿ ಜಟಿಲಾಗೌತಮಿಯು ಏಳು ಗಂಡರನ್ನೂ, ವಾರ್ಕ್ಷೀ ಎಂಬುವಳು ಹತ್ತು ಜನ ಸಹೋದರರಾದ ಪ್ರಾಚೇತಸರನ್ನು ಪತಿಗಳಾಗಿ ಹೊಂದಿದ್ದರೆಂದು ಹೇಳಿದೆ. ದ್ರೌಪದಿಯ ವಿಷಯವಾಗಿ ಕುಮಾರಿಲರೂ ಮಧ್ವಾಚಾರ್ಯರು ಒಂದು ವಿಧವಾಗಿ ಪರಿಹಾರವನ್ನು ಹೇಳಿರುವರು.[68] ಟಿಬೆಟ್ ನೇಪಾಳ ಪ್ರಾಂತಗಳಲ್ಲಿ ಈಗಲೂ ಬಹುಪತಿತ್ವವು ಕಂಡುಬರುವದು.

ದಾಂಪತ್ಯವಿಚ್ಛೇದ ಮತ್ತು ಪುನರ್ವಿವಾಹಗಳ ವಿಷಯವಾಗಿ ಧರ್ಮ ಶಾಸ್ತ್ರಗಳಲ್ಲಿ ಭಿನ್ನಾಭಿಪ್ರಾಯಗಳಿವೆ. ಹಿಂದೂವಿವಾಹವು ಕರಾರಲ್ಲ, ಒಂದು ಸಂಸ್ಕಾರ. ಆದುದರಿಂದ ತ್ಯಜನ, ಅಗಲಿಕೆ ಅಥವಾ ಸ್ವೈರವೃತ್ತಿ ಯಿಂದ ಹಿಂದೂ ವಿವಾಹವು ರದ್ದಾಗುವುದಿಲ್ಲ. ಬ್ರಾಹ್ಮ, ಆರ್ಷ, ದೈವ ಮತ್ತು ಪ್ರಾಜಾಪತ್ಯ ವಿವಾಹಗಳಲ್ಲಿ ಯಾವ ಸಂದರ್ಭದಿಂದಲೂ ವಿಚ್ಛೇದ ವಿಲ್ಲ. ಕೌಟಿಲ್ಯನು ಗಂಡಹೆಂಡತಿಯರಲ್ಲಿ ಒಬ್ಬರಿಗೆ ದ್ವೇಷವಿದ್ದ ಮಾತ್ರದಿಂದಲೇ ವಿವಾಹವು ರದ್ದಾಗದೆಂದೂ ಪರಸ್ಪರ ದ್ವೇಷವಿದ್ದು ಪ್ರಾಣಾಪಾಯವಾಗುವ ಸಂಭವವಿದ್ದರೆ ದಾಂಪತ್ಯವಿಚ್ಛೇದವಾಗಬಹುದೆಂದು ಹೇಳುವನು[69]. ಬ್ರಾಹ್ಮ ಣೇತರರಲ್ಲಿ "ಸೋಡಿಚೀಟಿ", "ಉಡ್ಕಿ" ಮುಂತಾದ ಪದ್ಧತಿಗಳಿವೆ.

ಪುನರ್ವಿವಾಹವಾದ ಸ್ತ್ರೀಯರು ಮೂರು ವಿಧವೆಂದು ನಾರದಸ್ಮೃತಿಯೂ ಏಳು ವಿಧವೆಂದು ಕಾಶ್ಯಪ ಬೌಧಾಯನ ಸ್ಮೃತಿಗಳೂ ಹೇಳುವವು. ವಾಚಾ ದತ್ತಾ, ಮನೋದತ್ತಾ, ಕಂಕಣ ಕಟ್ಟಿಸಿಕೊಂಡವಳು, ಧಾರಾದತ್ತಾ, ಪಾಣಿ ಗೃಹೀತೆ—ಇವರೈವರ ವಿವಾಹವೂ ಪೂರ್ತಿಯಾಗಿಲ್ಲವಾದುದರಿಂದ ಇವರು ಪುನರ್ಭೂ (ಪುನಃವಿವಾಹಿತ) ಗಳಾಗಬಹುದು. ಸಪ್ತಪದಂಗತಾ ಮತ್ತು ಪ್ರಸೂತಳು ಪುನರ್ಭೂ ಆಗಲಾರಳು. ಕೆಲವು ಸಂದರ್ಭಗಳಲ್ಲಿ ಪುನರ್ವಿವಾಹ

---

66 ಸ್ತ್ರೀರತ್ನಂ ದುಷ್ಕುಲಾದಪಿ—ಮನು. II, ೨೩೮ ; ಪ್ರತಿಗೃಹ್ಯ ತು ಯಃ ಕನ್ಯಾಮ ದುಷ್ಟಾಮುತ್ಸೃಜೇನ್ನರಃ | ಸವಿನೇಯಸ್ತ್ವಕಾಮೋಽಪಿಕನ್ಯಾಂ ತಾಮೇವಚೋದ್ವಹೇತ್ ||—ನಾರದಸ್ಮೃತಿ ; ಆಪ. ಧ. ಸೂ I-೧೦-೨೮-೧೯.

67 ಆಪ. ಧ. ಸೂ. -II, ೫-೧೧, ೧೨, ೧೩.

68 ತಂತ್ರವಾರ್ತಿಕ, ಪು ೨೦೯ ; ಮಹಾಭಾರತ ತಾತ್ಪರ್ಯನಿರ್ಣಯ, XVII.

69 ಅರ್ಥಶಾಸ್ತ್ರ III, ೩.

ವಾಗಬಹುದೆಂದು ಪರಾಶರ, ನಾರದಸ್ಮೃತಿಗಳೂ ಅಗ್ನಿಪುರಾಣವೂ ಹೇಳುವವು[70]. ಪರಾಶರ ಮಾಧವೀಯದಲ್ಲಿ ಇದು ಕಲಿವರ್ಜ್ಯವೆಂದು ಹೇಳಿದೆ. ಆದರೇ ಅದೇ ಗ್ರಂಥವು ಪರಾಶರಸ್ಮೃತಿಯು ಕಲಿಯುಗಕ್ಕಾಗಿಯೇ ನಿರ್ಮಿತವಾಯಿತೆಂದು ಹೇಳುವದು. ಮತ್ತೆ ಕೆಲವರು ಇದು ಸಪ್ತಪದಂಗತಾಪ್ರಸೂತರಿಗೆ ಅನ್ವಯಿಸುವದಿಲ್ಲವೆಂದು ಹೇಳುವರು. ಅಥರ್ವವೇದದಲ್ಲಿ ಪುನರ್ವಿವಾಹವನ್ನು ಸೂಚಿಸಿದೆ[71]. ಸ್ಮೃತ್ಯರ್ಥಸಾರದಲ್ಲಿ ಈ ವಿವಿಧಾಭಿಪ್ರಾಯಗಳು ಉಕ್ತವಾಗಿವೆ[72]. ಮಹಾಭಾರತದಲ್ಲಿ ದಮಯನ್ತಿಗೆ ಪುನರ್ವಿವಾಹಪ್ರಯತ್ನವು ನಡೆಯಿತೆಂದು ಹೇಳಿದೆ[73]. ಆದರೆ ಆದಿಪರ್ವದಲ್ಲಿ ದೀರ್ಘತಮ ಋಷಿಯು ನಿಯೋಗ, ಪುನರ್ವಿವಾಹಪದ್ಧತಿಗಳನ್ನು ನಿಷೇಧಿಸಿದನೆಂದೂ ಹೇಳಿದೆ.[74] ಆಪಸ್ತಮ್ಬರೂ ಪುನರ್ವಿವಾಹವನ್ನು ಖಂಡಿಸಿರುವರು[75]. ಗುಪ್ತಸಮ್ರಾಟನಾದ ಇಮ್ಮಡಿ ಚಂದ್ರಗುಪ್ತನು ತನ್ನಣ್ಣನಾದ ರಾಮಗುಪ್ತನನ್ನು ಕೊಂದು ವಿಧವೆಯೂ ಅಣ್ಣನ ಹೆಂಡತಿಯೂ ಆದ ಧ್ರುವಾದೇವಿಯನ್ನು ಮದುವೆಯಾದನೆಂದು ವಿಶಾಖದತ್ತನ "ದೇವೀಚನ್ದ್ರಗುಪ್ತ" ನಾಟಕದಿಂದ ತಿಳಿದುಬರುವದು. ಕ್ರಿಸ್ತಶಕ ಆರನೆಯ ಶತಾಬ್ದದ ವರೆಗೆ ಕೆಲವು ಭಾಗಗಳಲ್ಲಿ ವಿಧವಾವಿವಾಹ ಪದ್ಧತಿಯಿದ್ದಂತೆ ಕಂಡುಬರುವದು.

ಸ್ವಯಂವರ ಮತ್ತು ಗಾನ್ಧರ್ವವಿವಾಹಪದ್ಧತಿಯು ಕ್ಷತ್ರಿಯರಲ್ಲಿ ಹನ್ನೆರಡನೆಯ ಶತಾಬ್ದದ ವರೆಗೂ ಇದ್ದಿತು. ಬಿಲ್ಹಣನು ವಿಕ್ರಮಾಂಕದೇವ ಚರಿತೆಯಲ್ಲಿ ಚಾಳುಕ್ಯ ಆರನೆಯ ವಿಕ್ರಮಾದಿತ್ಯನನ್ನು ಚನ್ದ್ರಲೇಖೆಯು ವರಿಸಿದಳೆಂದು ವರ್ಣಿಸಿರುವನು. ರಾಜಪುತ್ರರಲ್ಲಿಯೂ ಈ ಪದ್ಧತಿಯಿದ್ದಿತೆಂದು ಪೃಥ್ವೀರಾಜನ ಕಥೆಯಿಂದ ತಿಳಿದುಬರುವದು. ವೇದಯುಗದಲ್ಲಿ ಪರದಾಪದ್ಧತಿಯು ಇರಲಿಲ್ಲ. ಆದರೆ ಪಾಣಿನಿಯು[76] ರಾಣಿಯರು ಅಸೂರ್ಯಂ

---

[70] ನಷ್ಟೇ ಮೃತೇ ಪ್ರವ್ರಜಿತೇ ಕ್ಲೀಬೇಚಪತಿತೇಪತೌ | ಪಂಚಸ್ವಾಪತ್ಸುನಾರೀಣಾಂ ಪತಿರನ್ಯೋವಿಧೀಯತೇ || ಪರಾಶರ IV, ೩೦ ; ನಾರದ-ಸ್ತ್ರೀಪುಂಸ ೯೭ ; ಅಗ್ನಿಪುರಾಣ 154-56.

[71] ಅಥರ್ವ V-17-8. 9 ; IX, ೫-೨೭. ೨೮.

[72] ಸ್ಮೃತ್ಯರ್ಥಸಾರ. ಪು. ೧೨

[73] ವನಪರ್ವ. ೭೦-೨೪.

[74] ಆದಿಪರ್ವ. ೧೦೪-೩೪. ೩೭.

[75] ಆಪ. ಧ. ಸೂ. II, ೬-೧೩-೩.

[76] ಪಾಣಿನಿ, III, ೨-೩೬.

ಪಶ್ಯರೆಂದು ಹೇಳುವುದರಿಂದಲೂ ಮಹಾಭಾರತ,[77] ರಾಮಾಯಣಗಳಲ್ಲಿ ದ್ರೌಪದಿ ಮತ್ತು ಸೀತಾದೇವಿಯರು ಪರದಾಪದ್ಧತಿಯನ್ನು ಅನುಸರಿಸುತ್ತಿದ್ದರೆಂದು ಹೇಳಿರುವದರಿಂದಲೂ ಕ್ರಿ.ಪೂ. ೬ ನೆಯ ಶತಾಬ್ದದಿಂದ ರಾಜವಂಶದವರಲ್ಲಿ ಮಾತ್ರ ಈ ಪದ್ಧತಿಯು ಇದ್ದಿತೆಂದು ಊಹಿಸಬಹುದು. ಸೀತೆಯನ್ನು ಖೇಚರರೂ ಕೂಡ ನೋಡಲು ಸಾಧ್ಯವಾಗಿರಲಿಲ್ಲವೆಂದೂ ಆದರೆ ಆಪತ್ಸಮಯ, ಸ್ವಯಂವರ, ಯಜ್ಞ ಮತ್ತು ವಿವಾಹ ಸಮಯಗಳಲ್ಲಿ ಹೊರಗೆ ಬರುವದು ದೋಷವಲ್ಲವೆಂದು ರಾಮಾಯಣದಲ್ಲಿ ಹೇಳಿದೆ. ದ್ರೌಪದಿಯು ವಿವಾಹಿತಸ್ತ್ರೀಯರನ್ನು ಸಭೆಗೆ ಎಳೆಯುವದು ಪ್ರಾಚೀನಧರ್ಮಕ್ಕೆ ವಿರುದ್ಧವೆಂದು ತನ್ನ ಸ್ವಯಂವರ ವಿವಾಹವಾದ ದಿನದಿಂದ ಅದುವರೆಗೂ ಪರಪುರುಷರು ತನ್ನನ್ನು ನೋಡಿರಲಿಲ್ಲವೆಂದು ಹೇಳಿರುವಳು.[78] ರಾಜ್ಯಶ್ರೀಯೂ ಪತ್ರಲೇಖೆಯೂ ಅವಗುಂಠನವನ್ನು ಧರಿಸಿದ್ದರೆಂದು ಬಾಣನು ಹೇಳಿರುವನು.[79] ಶಕುಂತಲೆಯೂ ದುಷ್ಯಂತನ ಸಭೆಗೆ ಬಂದಾಗ ಅವಗುಂಠನವನ್ನು ಹಾಕಿಕೊಂಡಿದ್ದಳು. ಆದುದರಿಂದ ಪರದಾಪದ್ಧತಿಯು ವಿದೇಶೀಯರಿಂದ ಬಂದುದಲ್ಲವೆಂದೂ ಉತ್ತಮಕುಲದವರಲ್ಲಿ ಮಾತ್ರ ವಿವಾಹಾನಂತರ ಪ್ರಚಾರದಲ್ಲಿದ್ದಿತೆಂದೂ ಹೇಳಬಹುದು.

ವಿಧವೆಯರಿಗೆ ಕೇಶವಪನ ಅನುಮರಣಗಳು ವೇದಯುಗದಲ್ಲಿರಲಿಲ್ಲ. ಏಳನೆಯ ಶತಾಬ್ದದ ವರೆಗೂ ಮುಂಡನಪದ್ಧತಿಯು ಇರಲಿಲ್ಲ. ಬಾಣನು ಏಕವೇಣೀ ಬಂಧನವು ವಿಧವೆಯ ಚಿಹ್ನೆಯೆಂದು ಹೇಳಿರುವನು.[80] ಬೌಧಾಯನ ಪಿತೃಮೇಧ ಸೂತ್ರಗಳಲ್ಲಿ[81] ಶವದಹನ ಸಮಯದಲ್ಲಿ ಗಂಡಸರು ಮಾತ್ರ ವಪನ ಮಾಡಿಸಿಕೊಳ್ಳಬೇಕೆಂದೂ, ಸ್ತ್ರೀಯರಿಗೆ ಖಂಡಿತವಾಗಿ ಇಲ್ಲವೆಂದು ಹೇಳಿದೆ. ಮನು ಯಾಜ್ಞವಲ್ಕ್ಯರು ಕೂಡ ವಪನವಿಷಯವನ್ನು ಹೇಳಲಿಲ್ಲ. ಹನ್ನೊಂದನೆಯ ಶತಮಾನದ ನಂತರ ಸ್ಕಾಂದಪುರಾಣದ "ವಿಧವಾ ಕಬರೀಬನ್ಧೋ"

---

[77] ಮಹಾಭಾರತ. ಶಲ್ಯ ೨೯-೭೪ ; ಸಭಾ. ೬೯-೯. ರಾಮಾಯಣ. ಅಯೋಧ್ಯಾ. ೧೧೬-೨೨೮ ; ೩೩-೮.

[78] ಧರ್ಮ್ಯಾಂ ಸ್ತ್ರಿಯಂ ಸಭಾಂಪೂರ್ವೇ ನನಯನ್ತೀತಿನಃ ಶ್ರುತಮ್ | ಸ ನಷ್ಟಃ ಕೌರವ್ಯೇಷು ಪೂರ್ವೇ ಧರ್ಮಃಸನಾತನಃ ||

[79] ಹರ್ಷಚರಿತ IV. ಕಾದಂಬರೀ. ೯೯.

[80] ಹರ್ಷಚರಿತ VI. ಜನಿತವೇಣೀಬನ್ಧಾನಿ, ನಿರಂಜನರಂಜನಾರೋಚೀಂಷಿ ಚಷಕಮಧುನಿ ಮುಖಕಮಲ ಪ್ರತಿಬಿಮ್ಬಾನ್ಯದೃಶ್ಯನ್ತ ಭಟೀನಾಮ್ ||

[81] ಬೌ. I, ೪-೩ ; II, ೩-೧೭. ಏತಸ್ಮಿನ್ಕಾಲೇಸ್ಯಾಮಾತ್ಯಾಕೇಶಶ್ಮಶ್ರೂಣಿ ವಾಪಯನ್ತೇ ಯೇಸಂನಿಧಾನೇ ಭವನ್ತಿ,| ನಸ್ತ್ರೀಣಾಂ ಕೇಶವಪನಂ ವಿದ್ಯತೇನಚಿತಿಃ ನೇಷ್ಟಕಾನಪುನರ್ದಾಹೋ ದಾರುವತ್‌ಸ್ತ್ರೀಣಾಂ ಪಾತ್ರಾಣಿ ಭವನ್ತೀತಿ ವಿಜ್ಞಾಯತೇ ||

ಎಂಬ ಶ್ಲೋಕಕ್ಕೆ ವಿಪರೀತಾರ್ಥಮಾಡಿದುದರಿಂದಲೂ[82] ವಿಧವೆಯರು ಸನ್ಯಾಸಿಗಳಂತೆ ಬ್ರಹ್ಮಚರ್ಯವನ್ನು ಪಾಲಿಸಬೇಕೆಂಬ ಭಾವನೆಯಿಂದಲೂ ಮುಣ್ಡನ, ಶ್ವೇತ ಅಥವಾ ರಕ್ತವಸ್ತ್ರಧಾರಣೆ, ಉಪವಾಸ, ಏಕಭುಕ್ತಿಮುಂತಾದ ನಿಯಮಗಳು ಪ್ರಚಾರಕ್ಕೆ ಬಂದವು. ಯಾವ ಪ್ರಾಚೀನಸ್ಮೃತಿಯಲ್ಲೂ ಬಲಾತ್ಕಾರವಾಗಿ ವಪನವು ವಿಧಿಸಿಲ್ಲ. ಬ್ರಾಹ್ಮಣರಲ್ಲಿಯೂ ತೆಂಗಲೆ ಮುಂತಾದ ಪಂಗಡಗಳಲ್ಲಿ ಈ ಪದ್ಧತಿಯಿಲ್ಲ.

**ಸಹಗಮನ—ಅನುಮರಣ:** ಋಗ್ವೇದದ ಮಂತ್ರ ಒಂದಕ್ಕೆ ಆಧುನಿಕರು ಮಾಡಿರುವ ಅರ್ಥವನ್ನೂ ವಿಷ್ಣುಧರ್ಮಸೂತ್ರ[83] ಒಂದನ್ನೂ ಬಿಟ್ಟರೆ ಮತ್ತಾವ ಧರ್ಮಶಾಸ್ತ್ರದಿಂದಲೂ ಸಹಗಮನ ಪದ್ಧತಿಗೆ ಪ್ರಮಾಣಸಿಕ್ಕುವದಿಲ್ಲ. "ಕ್ಯಾಥೈ" ಎಂಬ ವಾಯುವ್ಯಪ್ರಾಂತದ ಒಂದು ಜನಾಂಗದಲ್ಲಿ ಮಾತ್ರ ಈ ಪದ್ಧತಿಯಿದ್ದಿತೆಂದು ಸ್ಟ್ರಾಬೊ ಎಂಬ ಗ್ರೀಕ್ ಗ್ರಂಥಕಾರನು ಹೇಳುವನು. ಮಹಾಭಾರತದಲ್ಲಿ ವಸುದೇವನ ಹೆಂಡತಿಯರಾದ ದೇವಕೀ, ಭದ್ರಾ, ರೋಹಿಣೀ, ಮದಿರೆಯರು ಅಗ್ನಿಪ್ರವೇಶಮಾಡಿದರೆಂದೂ, ಕೃಷ್ಣನ ಪತ್ನಿಯರಲ್ಲಿ ರುಕ್ಮಿಣೀ, ಗಾನ್ಧಾರೀ, ಶೈಬ್ಯಾ, ಹೈಮವತೀ, ಜಾಮ್ಬವತಿಯರೂ ಸಹಗಮನಮಾಡಿದರೆಂದೂ ಆದರೆ ಕೌರವರ ಹೆಂಡತಿಯರಾಗಲೀ ಸತ್ಯಭಾಮೆಯಾಗಲೀ ಅಗ್ನಿಪ್ರವೇಶಮಾಡಲಿಲ್ಲವೆಂದೂ ಹೇಳಿದೆ. ಕೌಸಲ್ಯೆ, ಕೈಕಯೀ, ಸುಮಿತ್ರೆಯರು ದಶರಥನ ಮರಣಾನಂತರ ಸಹಗಮನ ಮಾಡಲಿಲ್ಲ. ರಾಮಾಯಣದ ಉತ್ತರ ಕಾಣ್ಡದಲ್ಲಿ ಮಾತ್ರ ರಾವಣಪೀಡಿತಳಾದ ಒಬ್ಬ ಬ್ರಾಹ್ಮಣಿಯು ಸತಿಯಾದಳೆಂದು ಹೇಳಿದೆ.[84] ಆದರೆ ಸ್ಮೃತಿಗಳು ಬ್ರಾಹ್ಮಣ ಸ್ತ್ರೀಯರು ಸಹಗಮನ ಮಾಡಕೂಡದೆಂದು ಸ್ಪಷ್ಟವಾಗಿ ಹೇಳುವವು.[85] ಮೇಧಾತಿಥಿಯು ಕೂಡ ಬ್ರಾಹ್ಮಣ ಸ್ತ್ರೀಯರಿಗೆ ಅನುಮರಣವು ಅಶಾಸ್ತ್ರೀಯ

---

[82] ಸ್ಕಾನ್ದ. III-೭-೫೦.

[83] ಮೃತೇ ಭರ್ತರಿಬ್ರಹ್ಮಚರ್ಯಂ ತದನ್ವಾರೋಹಣಂವಾ| ವಿಷ್ಣುಂ. ಧ. ಸೂ. ೨೫-೧೪.

[84] ರಾಮಾಯಣ, ಉತ್ತರಕಾಣ್ಡ. ೧೭-೧೫,

[85] ಮೃತಾನುಗಮನಂ ನಾಸ್ತಿಬ್ರಾಹ್ಮಣ್ಯಾ ಬ್ರಹ್ಮಶಾಸನಾತ್| ಇತರೇಷಾಂತುವರ್ಣಾನಾಂ ಸ್ತ್ರೀಧರ್ಮೋsಯಂಪರಃಸ್ಮೃತಃ|| ನಮ್ರಿಯೇತ ಸಮಂಭರ್ತ್ರಾಬ್ರಾಹ್ಮಣೀಶೋಕಮೋಹಿತಾ| ಪ್ರವ್ರಜ್ಯಾಗತಿಮಾಪ್ನೋತಿ ಮರಣಾದಾತ್ಮಘಾತಿನೀ|| ಯಾಸ್ತ್ರೀ ಬ್ರಾಹ್ಮಣಜಾತೀಯಾಮೃತಂಪತಿಮನುವ್ರಜೇತ್| ಸಾಸ್ವರ್ಗಮಾತ್ಮಘಾತೇನ ನಾತ್ಮಾನಂನಪತಿಂನಯೇತ್|| ಪೈಠೀನಸೀ, ಅಂಗಿರಾ, ವ್ಯಾಘ್ರಪಾದ, ಉಶನ—ಅಪರಾರ್ಕ. ಪು. ೧೧೨.

ಅಧರ್ಮವೆಂದು ಹೇಳುವನು.[86] ಪತಿಯು ಸತಿಯ ಅನುಮರಣದಿಂದ ಪಾಪ ವಿಮುಕ್ತನಾಗುವನೆಂಬುದು ಕೇವಲ ಸ್ತುತ್ಯರ್ಥವೆಂದೂ ಬ್ರಹ್ಮಚರ್ಯಕ್ಕಿಂತ ಅನ್ವಾರೋಹಣವು ನಿಕೃಷ್ಟವೆಂದು ನಿಬನ್ಧಗಳು ಹೇಳುವವು.[87] ಆದರೆ ಕಾಲ ಕ್ರಮೇಣ ಕೆಲವರು ಕ್ಷತ್ರಿಯರಲ್ಲಿ ಮಾತ್ರ ಇದ್ದ ಪದ್ಧತಿಯು ಶ್ಲಾಘ್ಯವೆಂದು ಇತರ ವರ್ಣದವರೂ ಅನುಸರಿಸಲಾರಂಭಿಸಿದರು. ಭರತಖಂಡದ ಎಲ್ಲ ಭಾಗ ಗಳಲ್ಲಿಯೂ ಕಂಡುಬರುವ ಮಹಾಸತಿಕಲ್ಲು, ವೀರಕಲ್ಲುಗಳು ಅನೇಕ ಶಾಸನಗಳು ನಿದರ್ಶನಗಳಾಗಿವೆ. ವಿಲಿಯಂ ಬೆಂಟಿಂಕನು ಸಹಗಮನಪದ್ಧತಿಯನ್ನು ನಿಲ್ಲಿಸು ವದಕ್ಕೆ ಸ್ವಲ್ಪ ಹಿಂದೆ ಕ್ರಿ.ಶ. ೧೮೧೮ ರಲ್ಲಿ ಕಾಶಿ ಬಳಿಯಲ್ಲಿ ೩೪೩ ಸಹಗಮನ ಗಳು ಮಾತ್ರ ನಡೆದವೆಂದೂ ಆದರೆ ಕಲ್ಕತ್ತ ಬಳಿಯಲ್ಲಿ ೧೪೮೫ ನಡೆದವೆಂದು ತಿಳಿದುಬರುವದು. ಬಂಗಾಳದಲ್ಲಿ ಸಹಗಮನಪದ್ಧತಿಯು ಇಷ್ಟು ಅಧಿಕವಾಗಿ ದ್ದುದಕ್ಕೆ ಅಲ್ಲಿ ಪ್ರಚಾರದಲ್ಲಿರುವ ದಾಯಭಾಗನ್ಯಾಯವು ಮಿತಾಕ್ಷರ ನ್ಯಾಯಕ್ಕಿಂತಲೂ ಹೆಚ್ಚಾಗಿ ಸ್ತ್ರೀಯರಿಗೆ ಆಸ್ತಿಯ ಮೇಲೆ ಹಕ್ಕು ಕೊಟ್ಟಿರು ವದೇ ಕಾರಣ. ಆದರೂ ಪತಿಯ ಮೇಲಿನ ಪ್ರೀತಿಯಿಂದ ಸಾಧ್ವಿಯರನೇಕರು ಸತಿಗಳಾದರೆಂಬುದನ್ನು ಮರೆಯುವಹಾಗಿಲ್ಲ. ಬಲಿದ್ವೀಪದಲ್ಲಿರುವ ಹಿಂದುಗಳು ಡಚ್ಚರ ಅಧಿಕಾರದ ವರೆಗೂ ಸಹಗಮನಪದ್ಧತಿಯನ್ನಾಚರಿಸುತ್ತಿದ್ದರು.

**ಆತ್ಮಹತ್ಯೆ:** ಸಹಗಮನ, ಅನುಮರಣಗಳ ವರ್ಣನೆಯು ಅನೇಕ ಶಾಸನ ಗಳಲ್ಲಿಯೂ ಗ್ರಂಥಗಳಲ್ಲಿಯೂ ಕಂಡುಬರುವದು.[88] ಯಶೋಮತಿಯಂತಹ ಕೆಲವರು ರೋಗಿಯಾದ ಪತಿಯ ಮರಣಕ್ಕೆ ಮುಂಚೆಯೇ ಅಗ್ನಿಪ್ರವೇಶ ಮಾಡಿದರು. ಪತಿಯೊಡನೆ ಸತಿಯೆ ಅಲ್ಲದೆ ಇತರರೂ ಪ್ರಾಣಗಳನ್ನು ಅರ್ಪಿಸುತ್ತಿದ್ದರು. ಪ್ರಭಾಕರವರ್ಧನನು ಸತ್ತಾಗ ಅವನ ಸ್ನೇಹಿತರು, ಅಮಾ ತ್ಯರು, ಸೇವಕರೆಲ್ಲರೂ ಆತ್ಮಹತ್ಯೆಮಾಡಿಕೊಂಡರು.[89] ಕಾಶ್ಮೀರ ಅನನ್ತರಾಜನ ರಾಣಿಯು ಸಹಗಮನಮಾಡಿದಾಗ ಅವಳ ಪಲ್ಲಕ್ಕಿ ಹೊರುವವರೂ ಇತರ ಸೇವಕರೂ ಪ್ರಾಣತ್ಯಾಗಮಾಡಿದರು.[90] ಹೊಯ್ಸಳ ಚೋಳರ ಕಾಲದಲ್ಲಿ "ವೇಳೆವಾಳಿ-ಜೋಳವಾಳಿ" ಎಂಬ ಪದ್ಧತಿಯು ಇದ್ದಿತು. ಸೇವಕರು ತಮ್ಮ

---

86 ಮನು. V, ೧೫೧.

87 ಮದನಪಾರಿಜಾತ, ಪು. ೨೦೦ ; ಸ್ಮೃತಿಚನ್ದ್ರಿಕಾ. ಪು. ೨೫೪.

88 ಹಾಲ-ಗಾಥಾಸಪ್ತಶತೀ VII, ೩೩ ; ಹರ್ಷಚರಿತ V ; ಕಾದಮ್ಬರೀ. para ೨೭೭ ; ರಾಜತರಂಗಿಣಿ VI, ೧೦೭, ೧೯೫ ; VII, ೧೦೩, ೪೭೮.

89 ಹ. ಚ. V.

90 ರಾಜತರಂಗಿಣಿ VII, ೪೮೧.

ರಾಜನೊಡನೆ ತಾವೂ ಸಾಯುವವೆಂದು "ವೇಳೆವಾಕ್ಯ"ವನ್ನು ಕೊಟ್ಟು ರಾಜನನ್ನು ಅನುಸರಿಸುತ್ತಿದ್ದರು. ಹೊಯ್ಸಳ ವಿಷ್ಣುವರ್ಧನನ ಕಾಲದಿಂದ "ಗರುಡ"ರೆಂದು ವಂಶಪರಂಪರೆಯಾಗಿ ರಾಜಸೇವಕರು ಅರಮನೆಯಲ್ಲಿಯೇ ಬೆಳೆದು ಸನ್ಮಾನಪಡೆದು ಪೋಷಕನು ಸತ್ತಾಗ ಗಂಡಭೇರುಣ್ಡ ಕಂಬದಿಂದ ಬಿದ್ದೋ ಅಥವಾ ಇತರ ವಿಧಾನಗಳಿಂದಲೋ ತಮ್ಮ ಪ್ರಾಣಗಳನ್ನು ಅರ್ಪಿಸುತ್ತಿದ್ದರು. ಕುವರಲಕ್ಷ್ಮ ಮತ್ತು ಸುಗ್ಗಲೆಯರ ಚರಿತ್ರೆಯು ಪ್ರಸಿದ್ಧವಾಗಿದೆ. ತಳಕಾಡು ಗಂಗರ ಕಾಲದಲ್ಲಿ ರಾಜನ ಸಮಾಧಿಯಾದಾಗ ಸೇವಕನು "ಕೀಲ್ಗುಂಠೆ"ಯಾಗುವ ಪದ್ಧತಿಯಿದ್ದಿತು. ಅಲ್ಲದೆ ಒಡೆಯನಿಗೆ ಪುತ್ರೋತ್ಸವವೋ ವಿಜಯೋತ್ಸವವೋ ಆದರೆ ಸೇವಕರು ತಲೆ ಕೊಡುವೆ ವೆಂದು ಹರಿಕೆಮಾಡಿಕೊಳ್ಳುತ್ತಿದ್ದರು. ಈ "ಸಿಡಿತಲೆ" ಪದ್ಧತಿಯು ದಕ್ಷಿಣ ದೇಶಗಳಲ್ಲಿ ಪ್ರಚಾರವಾಗಿದ್ದಿತು. ದೇವರಿಗೂ ರಾಜನಿಗೂ ಮಾತುಕೊಟ್ಟಂತೆ ಪ್ರಾಣತ್ಯಾಗಮಾಡುತ್ತಿದ್ದಕ್ಕೆ ಅನೇಕ ಉದಾಹರಣೆಗಳಿವೆ.

ಇವಲ್ಲದೆ ಶಾಸ್ತ್ರಸಮ್ಮತವಾದ ಆತ್ಮಹತ್ಯೆಯೂ ಇದ್ದಿತು. ಸಾಮಾನ್ಯವಾಗಿ ಧರ್ಮಶಾಸ್ತ್ರಗಳೆಲ್ಲವೂ ಆತ್ಮಹತ್ಯೆಯನ್ನು ಖಂಡಿಸಿವೆ. ಆತ್ಮಘಾತುಕರು ಅಭಿಶಸ್ತರು, ಅವರಿಗೆ ಉತ್ತರಕ್ರಿಯೆ ಮಾಡಕೂಡದು, ಅನುತಾಪ ಪಡ ಕೂಡದು, ಆತ್ಮಹತ್ಯೆಗೆ ಪ್ರಯತ್ನಿಸಿದವರೂ ಸಂಕಲ್ಪಮಾಡಿದವರೂ ದಂಡಾ ರ್ಹರು. ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು.[91]

ಆದರೆ ಧರ್ಮರಕ್ಷಣೆಗಾಗಿಯೂ, ಪ್ರಾಯಶ್ಚಿತ್ತಕ್ಕಾಗಿಯೂ, ಮುಪ್ಪಿ ನಲ್ಲೂ, ವೈದ್ಯರ ಕೈಮೀರಿದ ರೋಗಬಂದಾಗಲೂ[92] ಪ್ರಾಣವನ್ನು ತ್ಯಜಿಸ ಬಹುದು. ಮಹಾಭಾರತದಲ್ಲಿ ಸರಸ್ವತಿಯ ಉತ್ತರತೀರ, ಪೃಥೂದಕಕ್ಷೇತ್ರ, ಹಿಮಾಚಲ, ಪ್ರಯಾಗದ ಅಕ್ಷಯವಟ ತ್ರಿವೇಣೀ ಸಂಗಮ ಮುಂತಾದ ಸ್ಥಳಗಳಲ್ಲಿ ಆತ್ಮಹತ್ಯೆಯು ದೋಷವಲ್ಲವೆಂದು ಹೇಳಿದೆ. ಕುಮಾರಿಲರೂ ಪ್ರಭಾ ಕರರೂ ತುಷಾಗ್ನಿಯಿಂದ ಪ್ರಾಯಶ್ಚಿತ್ತಮಾಡಿಕೊಂಡರೆಂದು ಐತಿಹ್ಯಗಳಿವೆ. ಯುವಾನ್‌ಚ್ವಾಂಗನು ಅಕ್ಷಯವಟದ ಕೊಂಬೆಯಿಂದ ತ್ರಿವೇಣಿ ಸಂಗಮಕ್ಕೆ ಹಾರಿ ಜನರು ಸಾಯುತ್ತಿದ್ದರೆಂದು ಹೇಳುವನು. ಯಶಃಕರ್ಣನು ತನ್ನ

---

91 ಪರಾಶರ IV, ೧. ೨; ಮನು V, ೮೯; ವಸಿಷ್ಠ, ಧ. ಸೂ. ೨೩-೧೪-೧೬; ೧೩-೮; ಗೌತಮ ೧೪-೧೧; ಆಪ. ಧ ಸೂ. I, ೧೦-೨೮, ೧೫-೧೭; ವಾಜಸನೇಯ ಸಂಹಿತಾ. ೪೦-೩; ಬೃ. ಉಪ. IV, ೪-೧೧; ಉತ್ತರರಾಮಚರಿತ IV, ೩ff.

92 ಯೋಜ್ಯೋಗಾಮಯಾವೀಸ್ಯಾತ್ ಸ ಏತಾವಿಷ್ಟಿಂ ನಿರ್ವಪೇತ್ | ಅಪ್ರತಿಸಮಾ ಧೇಯ ವ್ಯಾಧೀನಾಂಜಲಾದಿಪ್ರವೇಶೇನ ಪ್ರಾಣತ್ಯಾಗಃ ||

ರಾಣಿಯರೊಡನೆ ಅಕ್ಷಯವಟದ ಬಳಿಯಲ್ಲಿ ಸತ್ತನು.[93] ಕುಮಾರಗುಪ್ತನು ಪ್ರಯಾಗದಲ್ಲಿ ಬೆರಣಿಯ ಬೆಂಕಿಯನ್ನು ಪ್ರವೇಶಿಸಿದನು.[94] ಬಹುಳ ಮುದುಕನಾದ ಚಾಂಡೇಲ ಧಂಗದೇವನು ಪ್ರಯಾಗದಲ್ಲಿ ರುದ್ರಸಾಯುಜ್ಯ ಹೊಂದಿದನು.[95] ಪಶ್ಚಿಮ ಚಾಳುಕ್ಯ ಮೊದಲನೆಯ ಸೋಮೇಶ್ವರನು ಜ್ವರಗ್ರಸ್ತನಾಗಿ ತುಂಗಭದ್ರೆಯಲ್ಲಿ ಪ್ರಾಣವನ್ನು ತ್ಯಜಿಸಿದನು.[96] ಅಜನು ಗಂಗಾ-ಸರಯೂ ಸಂಗಮದಲ್ಲಿ ದೇಹತ್ಯಾಗಮಾಡಿದನು.[97] ಶೂದ್ರಕನೂ ಶರಭಂಗನೂ ಅಗ್ನಿಪ್ರವೇಶಮಾಡಿದರು.[98] ಬಹುಳ ವೃದ್ಧರಾದವರೂ ರೋಗಗ್ರಸ್ತರಾದವರೂ ಇತರರಿಗೆ ಹಿಂಸೆಕೊಡುವದಕ್ಕಿಂತ ಅಗ್ನಿ, ನೀರು, ಭೃಗುಪತನ (ಪರ್ವತ ಶಿಖರದಿಂದ ಬೀಳುವದು), ಅಕ್ಷಯವಟ, ಹಿಮಾಲಯದಲ್ಲಿ ಮಹಾಪ್ರಸ್ಥಾನ ಮೂಲಕ ಪ್ರಾಣತ್ಯಾಗಮಾಡುವುದೇ ಒಳ್ಳೆಯದು.[99] ಹೀಗೆಯೇ ಪಾಂಡವರೂ ಮಹಾಪ್ರಸ್ಥಾನಮಾಡಿ ಸ್ವರ್ಗಾರೋಹಣಮಾಡಿದರು. ಉಪಸರ್ಗ, ದುರ್ಭಿಕ್ಷ, ಮುಪ್ಪು, ವ್ಯಾಧಿ, ನಿಷ್ಪ್ರತೀಕಾರ (Passive Resistence) ಪ್ರಸಂಗಗಳಲ್ಲಿ ಧರ್ಮಕ್ಕಾಗಿ ತನುವಿಮೋಚನೆ ಮಾಡುವದಕ್ಕೆ ಸಲ್ಲೇಖನವೆಂಬ ವ್ರತವು ಜೈನರಲ್ಲಿದೆ. ಇದಕ್ಕೆ ಶ್ರವಣಬೆಳಗೊಳದ ಅನೇಕ ಶಾಸನಗಳು ನಿದರ್ಶನಗಳಾಗಿವೆ.

**ಪತಿತಸಂಸ್ಕಾರ ಮತ್ತು "ಶುದ್ಧಿ":** ಹಿಂದೂಮತದಲ್ಲಿ ಜನ್ಮತಃ ಹಿಂದುಗಳಲ್ಲದವರನ್ನು "ಶುದ್ಧಿ"ಮಾಡಿ ಸೇರಿಸಿಕೊಳ್ಳುವದಕ್ಕೆ ಯಾವ ಸ್ಮೃತಿಯ ಆಧಾರವೂ ಇಲ್ಲ. ಸನಾತನಮತದಲ್ಲಿಯೇ ಹುಟ್ಟಿ ಕಾರಣಾಂತರಗಳಿಂದ ಭ್ರಷ್ಟರಾದವರನ್ನು ಹಿಂದಕ್ಕೆ ತೆಗೆದುಕೊಳ್ಳಬಹುದು. ಪಂಚವಿಂಶಬ್ರಾಹ್ಮಣದಲ್ಲಿ ವ್ರಾತ್ಯರೂ ಮೊದಲು ವೈದಿಕಮತದವರೇಯೆಂದೂ, ವ್ರಾತ್ಯರು, ಅಭಿಶಸ್ತರು, ಬಾಲಕರೂ ಅತಿವೃದ್ಧರೂ ಆದವರನ್ನು ನಾಲ್ಕು ಏಕಾಹಸ್ತೋಮಗಳೆಂಬ ಸಂಸ್ಕಾರದಿಂದ ಅವರನ್ನು ಪುನಃ ಸೇರಿಸಿಕೊಳ್ಳಬಹುದೆಂದೂ ವಿಧಿಸಿದೆ.[100]

---

[93] *E. I.* XII, p. 205.
[94] *Gupta Inscriptions*, No. 42 *C.I.I.* III.
[95] *E. I.* I, p. 140.
[96] ವಿಕ್ರಮಾಂಕದೇವಚರಿತ, *E. C.* VII. *SK.* 136.
[97] ರಘುವಂಶ VIII, ೯೪.
[98] ಮೃಚ್ಛಕಟಿಕ I, ೪ ; ರಾಮಾಯಣ-ಅರಣ್ಯ ೯.
[99] ವೃಥಾನೇಚ್ಛೇತ್ತು ಜೀವಿತುಮ್—ಪರಾ.ಮಾ. I. pt. 2. ಪು. ೨೨೮. ಅಪರಾರ್ಕ. pt. ೮೭೭.
[100] ಪಂಚವಿಂಶ. ೧೭-೧-೪ ; ಅಥರ್ವ, XV ; ಕಾತ್ಯಾಯನ. ಶ್ರೌ. ಸೂ. XXII, ೪-೧, ೨೮. ಅಪ.ಶ್ರೌ. ಸೂ. XII, ೫-೪. ೧೪ ; ಪಾರಸ್ಕರ. ಗೃ. ಸೂ. II, ೫.

ಹನ್ನೆರಡು ತಲೆಗಳು ಕಳೆದಮೇಲೂ ಲೌಕಿಕಾಗ್ನಿಯಿಂದ ವ್ರಾತ್ಯಶುದ್ಧಿಯಾಗಬಹುದು.[101] ಪತಿತನು ಪ್ರಾಯಶ್ಚಿತ್ತಕ್ಕೆ ಸಮ್ಮತಿಸದಿದ್ದರೆ "ಘಟಸ್ಫೋಟ" ಮಾಡಬಹುದು. ಈಚೆಗೆ ಆರ್ಯಸಮಾಜದವರು ಮಾತ್ರ ಅನ್ಯಮತೀಯರನ್ನು ಶುದ್ಧಿಮಾಡಿ ತಮ್ಮ ಸಮಾಜಕ್ಕೆ ಸೇರಿಸಿಕೊಳ್ಳುತ್ತಿರುವರು. ಪತಿತ ಸಾಪಿತ್ರಕರಿಗೆ ಆಯಾ ವರ್ಣಕ್ಕೆ ನಿಯಮಿತವಾದ ಕಾಲಕಳೆದು ನಲ್ವತ್ತೆಂಟು ವರ್ಷಗಳಾದರೂ ಪುನಃ ಉಪನಯನವಾಗುವುದೆಂದು ಆಪಸ್ತಮ್ಬ, ಪಾರಸ್ಕರ, ವಿಶ್ವರೂಪ, ಹರದತ್ತರು ಹೇಳುವರು. ಆದುದರಿಂದ ಪ್ರಸಿದ್ಧ ಪಂಡಿತನಾದ ಗಾಗಾಭಟ್ಟನು ಶಿವಾಜಿಗೆ ಇಬ್ಬರು ಮಕ್ಕಳು ಹುಟ್ಟಿ ನಲ್ವತ್ತೈದು ವರ್ಷ ವಯಸ್ಸಾಗಿದ್ದರೂ ಉಪನಯನ ಮಾಡಿದುದು ಕೇವಲ ರಾಜಕೀಯ ಕಾರಣಗಳಿಂದಲ್ಲ. ದೇವಲಸ್ಮೃತಿ ಮುಂತಾದ ಗ್ರಂಥಗಳಲ್ಲಿ ಮ್ಲೇಚ್ಛರಿಂದ ಅಪಹೃತರಾದ ಅಥವಾ ಸಮುದ್ರಯಾನ, ನಿಷಿದ್ಧ ದೇಶ ಗಮನಮಾಡಿದ, ಬ್ರಾಹ್ಮಣರಿಗೂ ಸ್ತ್ರೀಯರಿಗೂ ಪ್ರಾಯಶ್ಚಿತ್ತ ಮೂಲಕ ಪುನಃ ವೈದಿಕಮತ ಪ್ರವೇಶವಾಗಬಹುದೆಂದು ಹೇಳಿದೆ.

ಗೃಹಸ್ಥಾಶ್ರಮ ಧರ್ಮಗಳಲ್ಲಿ ಶಾಲೀನ ಮತ್ತು ಯಾಯಾವರ ಎಂಬ ಎರಡು ಮುಖ್ಯ ಪ್ರಭೇದಗಳಿವೆ. ಸ್ಮೃತಿಗಳ ಪ್ರಕಾರ ಗೃಹಸ್ಥನು ದಿನವನ್ನು ಹದಿನಾರು ಭಾಗಮಾಡಿ ಆಯಾ ಕಾಲಕ್ಕೆ ವಿಹಿತವಾದ ಕರ್ಮಗಳನ್ನು ಮಾಡಬೇಕು. ಬ್ರಾಹ್ಮೀಮುಹೂರ್ತದಲ್ಲೆದ್ದು ಯಥಾವಿಧಿಯಾಗಿ ದೇಹಶೌಚ, ಸ್ನಾನ, ನೂತನ ವಸ್ತ್ರಧಾರಣೆ, ಪುಂಡ್ರಧಾರಣೆ, ಆಹ್ನಿಕ, ತರ್ಪಣ, ಪಂಚಯಜ್ಞ, ದೇವತಾಪೂಜೆಗಳಲ್ಲಿ ಪ್ರಾತಃಕಾಲವನ್ನು ಕಳೆದು ಅಪರಾಹ್ಣಾನಂತರ ಭೋಜನಮಾಡಬೇಕು. ಅನಂತರ ಜೀವನೋಪಾಯಕ್ಕೆ ಗಮನಕೊಟ್ಟು ಸಾಯಂಕಾಲದಲ್ಲಿ ಪುರಾಣಶ್ರವಣ, ಸಾಯಂಸನ್ಧ್ಯೆ ಮುಂತಾದುವನ್ನು ಮಾಡಿ ಭೋಜನವಾದನಂತರ ಶತಪಥ ಮುಗಿಸಿ ಆರು ಗಂಟೆ ಕಾಲ ನಿದ್ರೆಮಾಡಬೇಕು.[102] ಈ ನಿತ್ಯಕರ್ಮಗಳಲ್ಲದೆ ಯಥಾಶಕ್ತಿ ಯಜ್ಞಯಾಗಾದಿಗಳೂ ದಾನ, ಪ್ರತಿಷ್ಠಾ, ಉತ್ಸರ್ಗ ಮುಂತಾದ ಇತರ ಶ್ರೌತಕರ್ಮಗಳೂ ವಿಹಿತ. ಸನ್ಯಾಸಾಶ್ರಮ ವಿಧಿಗಳಿಗಿಂತ ತ್ವರಿತವಾಗಿಯೇ ಗೃಹಸ್ಥನಿಗೆ ಮುಕ್ತಿಯು ಲಭಿಸುವದೆಂದು ಕೆಲವರು ಅಭಿಪ್ರಾಯಪಡುವರು.[103]

---

101 ಮನು, XI, ೧೮೬ ; ಯಾಜ್ಞ. III, ೨೯೫ ; ವಸಿಷ್ಠ. XV, ೨೦ ; ಗೌತಮ ೨೦-೫.

102 ದಕ್ಷಸ್ಮೃತಿ. II, ೭೦. ೭೧.

103 ಬ್ರಹ್ಮಸಿದ್ಧಿಃ. ಪು. ೩೬. ಊರ್ಧ್ವರೇತಸಾಂಚಾಶ್ರಮಿಣಾಂವಿನಾಪಿ ತ್ರೈವಿಶುದ್ಧ

**ದೇವಾಲಯಗಳು :** ವೇದಯುಗದಲ್ಲಾಗಲೀ ಹರಪ್ಪ ಸಂಸ್ಕೃತಿಯಲ್ಲಾಗಲೀ ದೇವಾಲಯಗಳಿದ್ದಂತೆ ಕಂಡುಬರುವದಿಲ್ಲ. ಮನೆಯಲ್ಲಿಯೇ ದೇವರ ಪೂಜೆಗೆ ಪ್ರತ್ಯೇಕ ಕೋಣೆಗಳಿದ್ದವು. ಭಾರತೀಯ ಸಂಸ್ಕೃತಿಯಲ್ಲಿ ಸಾಮೂಹಿಕ ಪ್ರಾರ್ಥನಾಪದ್ಧತಿಯು (Congregational Worship) ಇರಲಿಲ್ಲ. ಕೀರ್ತನೆ, ಭಜನೆಪದ್ಧತಿಗಳು ಕ್ರಿಸ್ತಶತಾಬ್ದದಿಂದ ಈಚೆಗೆ ಆರಂಭವಾದಂತೆ ತೋರುವದು. ಆದರೆ ಕೆಲವು ಪುರಾತನ ಕ್ಷೇತ್ರತೀರ್ಥಗಳಲ್ಲಿ ದೇವತೆಗಳ ಪೂಜೆಯು ಪ್ರಾಚೀನವೆಂದು ಕಂಡುಬರುವದು. ಈ ದೇವಾಲಯಗಳಲ್ಲಿ ಹೊಟ್ಟೆಪಾಡಿಗಾಗಿ ಪೂಜೆಮಾಡುವ ಅರ್ಚಕರು (ದೇವಲಕರು) ನೀಚಬ್ರಾಹ್ಮಣರೆಂದು ಸ್ಮೃತಿಗಳು ಹೇಳುವವು. ಮೌರ್ಯರು ಹಿರಣ್ಯಾರ್ಥವಾಗಿ ದೇವತಾವಿಗ್ರಹಗಳನ್ನು ಮಾಡಿಸುತ್ತಿದ್ದರೆಂದು ಇದು ಗರ್ಹಣೀಯವೆಂದೂ, ಮೂಢಜನರನ್ನು ಮೋಸಗೊಳಿಸಿ ರಾಜಕಾರ್ಯವನ್ನೂ ಸಾಧಿಸುತ್ತಿದ್ದರೆಂದೂ ಕೌಟಿಲ್ಯನ ಅರ್ಥಶಾಸ್ತ್ರ, ಪತಂಜಲಿಯ ಮಹಾಭಾಷ್ಯಗಳಿಂದ ತಿಳಿದುಬರುವದು.[104] ಮೃತರ ಸಮಾಧಿಗಳ ಮೇಲೆ ಅವರ ವಿಗ್ರಹವನ್ನೋ ಲಿಂಗವನ್ನೋ ಸ್ಥಾಪಿಸಿ ಚೈತ್ಯ, ಸ್ತೂಪಗಳನ್ನು ಕಟ್ಟುತ್ತಿದ್ದರೆಂದು ಪ್ರಾಚೀನ ಗ್ರಂಥಗಳಿಂದ ತಿಳಿದುಬರುವದು. ದೇವಾಲಯವು ಸಮಾಜದ ಮುಖಂಡನ ಅಥವಾ ರಾಜನ ಮನೆ (ಕೋ-ಇಲ್). ಬಹುಶಃ ದೇವಾಲಯಗಳ ರಚನೆಯು ಹೀಗೆ ಆರಂಭವಾಯಿತು.

ಪ್ರಾಚೀನ ದೇವಾಲಯಗಳೆಲ್ಲವೂ ಗುಹೆಗಳೋ ಗುಹಾಕಾರವಾಗಿಯೋ ಆಗಿದ್ದವು. ಮನುಷ್ಯನ ಹೃದಯವೆಂಬ ಗುಹೆಯಲ್ಲಿ ದಹರಾಕಾಶವಿದೆಯೆಂದೂ ಅದರಲ್ಲಿ ಜ್ಯೋತಿಸ್ವರೂಪನಾದ ಈಶ್ವರನು ಇರುವನೆಂದೂ ಭಕ್ತನು ಈಶ್ವರನ

---

ವಿದ್ಯೋದಯ ಇಷ್ಯತೇ | ಕಿಂತು ಕಾಲಕೃತೋ ವಿಶೇಷಃ ; ಸಾಧನವಿಶೇಷಾದ್ಧಿ ಸಾಕ್ಷಿಪ್ರಂ ಕ್ಷಿಪ್ರತರಂಚ ವ್ಯಜ್ಯತೇ | ತದಭಾವೇ ಚಿರೇಣ ಚಿರತರೇಣ ಚ | ತದುಕ್ತಂ—"ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್" | ಏಷೋಽರ್ಥಃ—"ಯಜ್ಞೇನ ದಾನೇನ" ಇತಿಶ್ರವಣಾತ್ ಕರ್ಮಾಣ್ಯಪೇಕ್ಷ್ಯಂತೇ ವಿದ್ಯಾಯಾಮಭ್ಯಾಸಲಭ್ಯಾಯಾಮಪಿ, ಯಥಾಂತರೇಣಾಪ್ಯಶ್ವಂಗ್ರಾಮಪ್ರಾಪ್ತೌ ಸಿದ್ಧ್ಯನ್ತ್ಯಂ ಶೈಘ್ರ್ಯಾಯ ಅಕ್ಲೇಶಾಯವಾಽಶ್ವೋಽಪೇಕ್ಷ್ಯತೇ ||

[104] ಜೀವಿಕಾರ್ಥೇಚಾಪಣ್ಯೇ | ಪಾಣಿನಿ. V, ೩-೯೯ ; ವಾಸುದೇವಾರ್ಜುನಾಭ್ಯಾಂವುಞ್. IV, ೩-೯೮. ಅಪಣ್ಯ ಇತ್ಯುಚ್ಯತೇ | ತತ್ರೇದಂ ನ ಸಿದ್ಧ್ಯತಿ ಶಿವಃ ಸ್ಕನ್ದಃ ವಿಶಾಖ ಇತಿ | ಕಿಂಕಾರಣಮ್ ? ಮೌರ್ಯೈರ್ಹಿರಣ್ಯಾರ್ಥಿಭಿರರ್ಚಾಪ್ರಕಲ್ಪಿತಾಃ | ಭವೇತ್ತಾಸು ನಸ್ಯಾತ್ | ಯಾಸ್ತ್ವೇತಾಃ ಸಮ್ಪ್ರತಿಪೂಜಾರ್ಥಾಸ್ತಾಸು ಭವಿಷ್ಯತಿ |—ಮಹಾಭಾಷ್ಯ II, ಪು. ೪೨೯ ; ಕೌಟಿಲ್ಯ II, ೪.

ಸಾಯುಜ್ಯಪಡೆಯಬಹುದೆಂದೂ ದೇವಾಲಯಗಳು ಸ್ಥೂಲಸಿದರ್ಶನಗಳಿಂದ ಸೂಚಿಸುವವು.[105] ದೇಹವೇ ದೇವಾಲಯವು, ಜೀವನೇ ಸದಾಶಿವನು.[106] ದೇವಾಲಯಗಳು ಸಂಕ್ಷೇಪವಾಗಿ ಪರಮೇಶ್ವರನ ಬಾಹ್ಯಸೃಷ್ಟಿಯನ್ನೂ, ಮಾನವನ ದೇಹರಚನೆಯನ್ನೂ, ಜೀವದ ಪ್ರಗತಿಯನ್ನೂ ವಾಸ್ತುಶಿಲ್ಪರೂಪದಲ್ಲಿ ಭಕ್ತನಿಗೆ ಜ್ಞಾಪಿಸುವದಕ್ಕಾಗಿ ನಿರ್ಮಿತವಾಗಿವೆ. ಕೇವಲ ಮಂತ್ರಮಾಟಕ್ಕಾಗಿಯೇ ಆಗಲಿ ಕಾಮ್ಯಫಲಕ್ಕಾಗಿಯೇ ಆಗಲಿ ಅಲ್ಲ. ಮೂರ್ತಿಪೂಜೆಯ ತತ್ವವೂ ಇದೇ ಆಗಿದೆ.[107] ಆದರೆ ಶೈವ, ಶಾಕ್ತ, ವೈಷ್ಣವ ಬೌದ್ಧ, ಜೈನ ಮುಂತಾದವರೆಲ್ಲರೂ ಅರ್ಚಾಮೂರ್ತಿಗಳಿಗೂ ದಿವ್ಯಕ್ಷೇತ್ರ ತೀರ್ಥಗಳಿಗೂ ಅದ್ಭುತಕಾರ್ಯಗಳನ್ನು ಆರೋಪಿಸುತ್ತ ಬಂದರು.

ಕೇವಲ ಮತದೃಷ್ಟಿಯಿಂದಲೇ ಅಲ್ಲದೆ ದೇವಾಲಯಗಳು ವಿದ್ಯಾಭ್ಯಾಸ, ಲಲಿತಕಲೆ ಆರ್ಥಿಕಸ್ಥಿತಿ, ಸಮಾಜಸೇವೆ ದೃಷ್ಟಿಯಿಂದಲೂ ಸಮಾಜದಲ್ಲಿ ಮುಖ್ಯಸ್ಥಾನವನ್ನು ಪಡೆದಿದ್ದವು. ಆದುದರಿಂದಲೇ ಚಕ್ರವರ್ತಿಗಳಿಂದ ಹಿಡಿದು ಸಾಮಾನ್ಯ ಜನರಲ್ಲಿಯೂ ಯಥಾಶಕ್ತಿ ದೇವದಾನಗಳನ್ನು ಮಾಡಬೇಕೆಂಬ ನಂಬಿಕೆಯಿದ್ದಿತು. ಪ್ರತಿಯೊಂದು ಮುಖ್ಯ ದೇವಾಲಯದಲ್ಲಿಯೂ ಅರ್ಚಕ, ದೇವದಾಸಿ, ಹೂವಾಡಿಗ, ತೋಟಗಾರ, ಗಂಧಕಾರ, ಓಲಗದವ ಮುಂತಾದ ಅನೇಕ ಪರಿಚಾರಕರಿರುತ್ತಿದ್ದರು. ದೇವಸ್ಥಾನದ ಮೇಲ್ವಿಚಾರಣೆಗೆ ಚುನಾಯಿತರಾದ ಸಭಾಸದಸ್ಯರಿದ್ದರು. ಇವರು ಶ್ರೀ ಭಂಡಾರದಿಂದ ಬರಗಾಲದಲ್ಲಿ ರೈತರಿಗೆ ಧಾನ್ಯ, ಹಣ, ಬೀಜ ಕೊಟ್ಟು ಲೇವಾದೇವಿಯನ್ನು ನಡಿಸುತ್ತಿದ್ದರು. ಸ್ಥಾನಿಕರೂ, ಪಾರುಪತ್ತೆಗಾರರೂ, ಮಣೆಗಾರರೂ ನಿತ್ಯಕಟ್ಟಳೆ, ಮಾಸೋತ್ಸವ, ಪುಷ್ಪೋತ್ಸವ, ಬ್ರಹ್ಮೋತ್ಸವ ಮುಂತಾದ ಉತ್ಸವಗಳನ್ನು ನಡಿಸುತ್ತ,

---

105 ಹೃದಯಂ ತದ್ವಿಜಾನೀಯಾದ್ವಿಶ್ವಸ್ಯಾಯತನಂ ಮಹತ್ . . . ತಸ್ಯಾನ್ತೇಸುಷಿರಂ ಸೂಕ್ಷ್ಮಂ ತಸ್ಮಿನ್‌ಸರ್ವಂ ಪ್ರತಿಷ್ಠಿತಮ್ | ತಸ್ಯಮಧ್ಯೇಮಹಾನಗ್ನಿಃ . . . ತಸ್ಯಮಧ್ಯೇವಹ್ನಿಶಿಖಾ . . . ತಸ್ಯಶಿಖಾಯಾಮಧ್ಯೇಪರಮಾತ್ಮಾ ವ್ಯವಸ್ಥಿತಃ ಸಬ್ರಹ್ಮಾ ಸ ಹರಿಃ ಸಶಿವಃ ||- ಮಹಾನಾರಾಯಣ ಉಪ. ಬ್ರಹ್ಮಪುರೇಪುಣ್ಡರೀಕಂವೇಶ್ಮದಹರೋಽಸ್ಮಿನ್ನನ್ತರಾಕಾಶಃ— ಛಾಂದೋಗ್ಯ.

106 ದೇಹೋದೇವಾಲಯಃ ಪ್ರೋಕ್ತಃ ಜೀವಏವಸದಾಶಿವಃ |

107 ''ಡಿಲ್ಲಿರಾಯನ ಕಂಡು ಪುಲ್ಲೆಯ ಬೇಡುವರೆ''—ಪುರನ್ದರದಾಸರು. ಅಪ್ಸುದೇವೋ ಮನುಷ್ಯಾಣಾಂ ದಿವಿದೇವೋಮನೀಷಿಣಾಂ | ಕಾಷ್ಠಲೋಷ್ಠೇಷು ಮೂರ್ಖಾಣಾಂ ಯುಕ್ತಸ್ಯಾತ್ಮನಿ ದೇವತಾ || ಅಗ್ನೌ ಕ್ರಿಯಾವತಾಂದೇವೋ ದಿವಿದೇವೋ ಮನೀಷಿಣಾಮ್ | ಪ್ರತಿಮಾಸ್ವಲ್ಪಬುದ್ಧೀನಾಂ ಯೋಗಿನಾಂಹೃದಯೇಹರಿಃ || ನೃಸಿಂಹ ಪು. ೬೨-೫. ಪಾದ್ಮ ಪಾತಾಳಖಂಡ ; ಕುಲಾರ್ಣವತನ್ತ್ರ.

ದೇವದಾನ ಭೂಮಿಯ ಸಾಗುವಳಿಯನ್ನು ಮಾಡಿಸುತ್ತಿದ್ದರು. ದೇವಸ್ಥಾನದ ಮಂಟಪದಲ್ಲಿ ಧರ್ಮಸ್ಥಾನವಿದ್ದು ವಿವಾದಗಳು ಪರಿಹಾರವಾಗುತ್ತಿತ್ತು. ಮತ್ತು ದೇವಾಲಯಗಳಲ್ಲಿ ನಾಟಕಶಾಲೆಗಳಿದ್ದು ಉತ್ಸವ ಸಮಯದಲ್ಲಿ ಸಂಸ್ಕೃತ ಮತ್ತು ದೇಶಭಾಷೆಗಳಲ್ಲಿ ನಾಟಕ, ಬಯಲಾಟ, ಅಟ್ಟದಾಟಗಳನ್ನು ಆಡುತ್ತಿದ್ದರು. ದೇವರ ಸೇವೆಗಾಗಿ ನಡೆಯುತ್ತಿದ್ದ ಸಂಗೀತ ಭರತನಾಟ್ಯ ಗಳಿಂದ ಲಲಿತಕಲೆಗಳೂ, ವಾಸ್ತುಶಿಲ್ಪವೂ ಅಭಿವೃದ್ಧಿಯಾದವು. ಪುರಾಣ ಪಠನ, ಕಾಲಕ್ಷೇಪ, ಕೀರ್ತನೆ, ಯಾತ್ರೆಗಳಿಂದ ಪಾಮರರಿಗೆ ನೀತಿಬೋಧೆ ಯಾಗುತ್ತಿತ್ತು. ಪ್ರೌಢವಿದ್ಯೆಗಾಗಿ ದೇವಾಲಯಗಳ ಆಶ್ರಯದಲ್ಲಿ ಘಟಿಕಾ ಸ್ಥಾನಗಳಿದ್ದವು. ಇಲ್ಲಿ ವೇದ, ವೇದಾಂಗ, ವೈದ್ಯ ಮುಂತಾದ ಸಕಲಶಾಸ್ತ್ರ ಗಳನ್ನು ಬೋಧಿಸುವ ಉಪಾಧ್ಯಾಯರಿಗೂ ವಿದ್ಯಾರ್ಥಿಗಳಿಗೂ ವೇತನಗಳನ್ನು ಕೊಡುವದಕ್ಕೂ ಉಚಿತವಾಗಿ ಅನ್ನ ಬಟ್ಟೆ ಎಣ್ಣೆ ನೀರು ಹಾಕುವದಕ್ಕಾ ಗಿಯೂ ಏರ್ಪಾಡುಗಳಿದ್ದವು. ಅಲ್ಲದೆ ದೀನ, ಅನಾಥ, ಪಂಗು, ಅಂಧ, ಬಧಿರ, ಮುಂತಾದವರಿಗೆ ಅನ್ನದಾನಮಾಡುವ ಸತ್ರಗಳು ಬಾಣಂತಿಯ ಚಿಕಿತ್ಸೆಗೆ ಪ್ರಸೂತಾರೋಗ್ಯಶಾಲೆಗಳೂ, ಇತರ ಆರೋಗ್ಯಶಾಲೆಗಳೂ ಇದ್ದವು. ಆಗಾಗ ಸೇರುತ್ತಿದ್ದ ಜಾತ್ರೆಗಳಿಂದ ವರ್ತಕರ ವ್ಯಾಪಾರವೂ ವಿಶೇಷವಾಗಿ ನಡೆಯುತ್ತಿದ್ದುದಲ್ಲದೆ ಸಾಮಾನ್ಯ ಜನರಿಗೆ ವಸ್ತುಪ್ರದರ್ಶನ ಶಾಲೆಗಳಂತೆ ಉಪಯೋಗವಾಗುತ್ತಿದ್ದವು. ದೊಡ್ಡ ದೊಡ್ಡ ದೇವಾಲಯ ಗಳು ಕೋಟೆಗಳಂತೆ ಭದ್ರವಾಗಿದ್ದು ನೀರು, ದವಸಧಾನ್ಯಗಳಿಂದ ತುಂಬಿದ್ದುದ ರಿಂದ ಯುದ್ಧಕಾಲದಲ್ಲಿ ಶರಣಾಗತರಿಗೆ ಆಶ್ರಯವು ಸಿಗುತ್ತಿದ್ದಿತು. ಚಂದಾ ಸಾಹೇಬನಂತಹ ಮಹಮ್ಮದೀಯನೂ ಮೈಸೂರಿನ ದಳವಾಯಿ ನಂಜರಾಜನಿಗೆ ಹೆದರಿ ಶ್ರೀರಂಗದಲ್ಲಿ ಮೂರು ತಿಂಗಳು ಆಶ್ರಯ ಪಡೆದನು. ಹಿಂದೂ ರಾಜರು ದೇವಾಲಯಗಳನ್ನು ಪವಿತ್ರ ಸ್ಥಳಗಳೆಂದು ಗಣಿಸಿದ್ದುದರಿಂದ ಶತ್ರುವನ್ನು ನಾಶಮಾಡುವದಕ್ಕಾಗಿ ದೇವಾಲಯಗಳನ್ನು ಕೆಡಿಸಲು ಹಿಂತೆಗೆಯುತ್ತಿದ್ದರು. ದೇಶಕ್ಕೂ ರಾಜನಿಗೂ ಶತ್ರುಗಳಿಂದ ಹಣದ ಮುಗ್ಗಟ್ಟು ಬಂದಾಗ ದೇವಾಲ ಯದ ಅಧಿಕಾರಿಗಳು ಶ್ರೀಭಂಡಾರದಿಂದ ಬಿಡುಗಡೆ ಹಣವನ್ನು (Ransom) ಕೊಟ್ಟು ಸಹಾಯಮಾಡುತ್ತಿದ್ದರು. ಹೀಗೆ ಭಾರತೀಯ ಸಂಸ್ಕೃತಿಯ ವಿವಿಧ ರೂಪಗಳಿಗೂ ದೇವಾಲಯಗಳು ಪ್ರತ್ಯಕ್ಷನಿದರ್ಶನಗಳಾಗಿದ್ದವು. ಭಾರತೀಯ ದೇವಾಲಯಗಳ ವಾಸ್ತುಶಿಲ್ಪ ರೀತಿಯನ್ನೂ ಆಡಳಿತಪದ್ಧತಿಗಳನ್ನೂ ಅನುಸರಿಸಿ ಜಾವ, ಬಲಿ, ಸುಮಾತ್ರ, ಬರ್ಮ, ಕಾಂಬೋಡಿಯ ಮುಂತಾದ ದ್ವೀಪಾಂತರ ದೇಶಗಳಲ್ಲೂ ದೇವಾಲಯಗಳು ನಿರ್ಮಿತವಾದವು.

**ಆಹಾರ:** ಶುದ್ಧವಾದ ಆಹಾರದಿಂದ ಸತ್ತ್ವವು ಶುದ್ಧಿಯಾಗುವದು, ಶುದ್ಧಸತ್ತ್ವದಿಂದ ಸ್ಥಿರವಾದ ಪ್ರಜ್ಞೆಯುಂಟಾಗುವದು. ಸ್ಥಿತಪ್ರಜ್ಞನು ಎಲ್ಲ ಬನ್ಧನಗಳನ್ನೂ ಕಳೆದುಕೊಂಡು ಬ್ರಹ್ಮಸಿದ್ಧಿ ಹೊಂದುವನೆಂಬ ಭಾವವು ಭರತಖಣ್ಡದಲ್ಲಿ ಅತ್ಯಂತಪ್ರಾಚೀನ.[108] ಸ್ಮೃತಿಗಳಲ್ಲಿ ಅಭಕ್ಷ್ಯಭೋಜನ ಅಪೇಯ ಪಾನಗಳ ವಿಷಯವಾಗಿ ಅನೇಕ ನಿಯಮಗಳಿವೆ. ತನ್ನ ಹೊಟ್ಟೆ ಮಾತ್ರ ತುಂಬಿಕೊಳ್ಳುವವನೂ ಪಂಕ್ತಿಭೇದಮಾಡುವವನೂ ಮಹಾಪಾತಕಿಗಳು.[109] ಯಾರು ಪಂಕ್ತಿಪಾವನರು ಪಂಕ್ತಿಬಾಹ್ಯರೆಂಬುದನ್ನು ಸ್ಮೃತಿಗಳು ವಿಸ್ತಾರವಾಗಿ ಹೇಳಿವೆ. ಆಹಾರವು ಸ್ವಭಾವದುಷ್ಟ, ಕ್ರಿಯಾದುಷ್ಟ, ಕಾಲದುಷ್ಟ, ಸಂಸರ್ಗದುಷ್ಟ, ರಸದುಷ್ಟ, ಪರಿಗ್ರಹದುಷ್ಟವಾಗಿರಕೂಡದು. ಮಾಂಸಭೋಜನವು ವೇದಯುಗದಲ್ಲಿದ್ದರೂ ಕಲಿವರ್ಜ್ಯವೆಂದು ಸ್ಮೃತಿಗಳು ಹೇಳುವವು. ಶ್ರಾದ್ಧದಲ್ಲಿ ಗೋಮಾಂಸವನ್ನು ಯತಿಗೆ ಬಡಿಸಬೇಕೆಂಬ ನಿಯಮವಿದ್ದಿತು.[110] ಆದರೆ ಪಶುಗಳನ್ನು ನಾವು ಈ ಜನ್ಮದಲ್ಲಿ ತಿಂದರೆ ಮುಂದಿನ ಜನ್ಮದಲ್ಲಿ ನಾವೇ ಪಶುಗಳಿಗೆ ಆಹಾರವಾಗುವವೆಂದು ಮಾಂಸಭಕ್ಷಣನಿಷೇಧವೂ ಕಂಡುಬರುವದು.[111] ಮನುಸ್ಮೃತಿಯು ಕೆಲವುವಿಧ ಮತ್ಸ್ಯಗಳನ್ನು ತಿನ್ನಬಹುದೆಂದು ಹೇಳುವದು.[112] ಕೆಲವುವಿಧ ಶಾಕಪದಾರ್ಥಗಳೂ ವರ್ಜ್ಯ.[113] ಪಾನೀಯಗಳಲ್ಲಿ ಸೋಮ ಸುರಾ, ಗೌಡೀ, ಪೈಷ್ಟೀ, ಮಾಧ್ವೀ, ಮುಂತಾದ ಮಾದಕದ್ರವ್ಯಗಳೂ, ಹಾಲು, ಕಬ್ಬಿನಹಾಲು, ತೆಂಗಿನನೀರು, ನೀರುಮಜ್ಜಿಗೆ ಮುಂತಾದುವು ಪ್ರಚಾರದಲ್ಲಿದ್ದವು. ರೋಗಿಯು ಆರೋಗ್ಯಲಾಭಕ್ಕಾಗಿ ಮಧು, ಮದ್ಯ, ಮಾಂಸಗಳನ್ನು ಸ್ವೀಕರಿಸಬಹುದು.[114] ಕಾವ್ಯಗಳ ಅಷ್ಟಾದಶಲಕ್ಷಣಗಳಲ್ಲಿ ಮಧುಪಾನ ವರ್ಣನೆಯೂ ಒಂದು. ಕ್ಷತ್ರಿಯರಲ್ಲೂ ಇತರ

---

108 ಆಹಾರಶುದ್ಧೌ ಸತ್ತ್ವಶುದ್ಧಿಃ ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ | ಸ್ಮೃತಿರ್ಲಮ್ಭೇ ಸರ್ವಗ್ರನ್ಥೀನಾಂ ವಿಪ್ರಮೋಕ್ಷಃ | ಛಾನ್ದೋಗ್ಯ ಉಪ.

109 ಕೇವಲಾಘೋ ಭವತಿ ಕೇವಲಾದೀ ;

110 ಆಪ. ಧ ಸೂ. II, ೭-೧೬-೨೫ ; ವಸಿಷ್ಠ ಧ. ಸೂ. XI, ೩೪.

111 ತೇ ಹೋಚುರಿತ್ಥಂ ವಾ ಇಮೇ ಅಸ್ಮಾನಮುಷ್ಮಿಲ್ಲೋಕೇ ಅಸಚನ್ತ ತಾನ್ವಯಮಿದ ಮಿಹ ಪ್ರತಿಸಚಾಮಹ ಇತಿ | ಶತಪಥ. XI, ೬-೧-೩.

112 ಮನು. V, ೧೬.

113 ಕಳಂಜ, ಪಲಾಂಡು, ಪರಾರಿಕ, ಲಶುನ, ಕ್ಯಾಕು, ಶ್ಲೇಷ್ಮಾತಕ ಮುಂತಾದುವು.

114 ತಥಾಚ ಚರಕಾ : ಪಠನ್ತಿ—ಶ್ವೇತಕೇತುಂ ಹಾರುಣೇಯಂ ಬ್ರಹ್ಮಚರ್ಯಂ ಚರನ್ತಂ ಕಿಲಾಸೋ ಜಗ್ರಾಹ | ತಮಶ್ವಿನಾವೂಚತುಃ "ಮಧುಮಾಂಸೌ ಕಿಲ ತೇ ಭೈಷಜ್ಯಂ" ಇತಿ | ಸ ಹೋವಾಚ "ಬ್ರಹ್ಮಚರ್ಯಮಾನೀ ಕಥಂ ಮಧ್ವಶ್ನೀಯಾಮ್" ಇತಿ | ತೌ ಹೋಚತುಃ

ರಲ್ಲೂ ಮದ್ಯಪಾನವು ಇದ್ದಿತು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಮದಿರಾ ಪೂಜೆ, ಪಾನಶಾಲೆಗಳ ವ್ಯವಸ್ಥೆ ವಿಷಯವಾಗಿ ನಿಯಮಗಳಿವೆ, ಆದರೆ ಕಾಲ ಕ್ರಮೇಣ ಸುರಾಪಾನವು ಮಹಾಪಾತಕವೆಂಬ ಭಾವನೆಯು ಬೆಳೆಯಿತು. ಇದಕ್ಕೆ ಮರಣಾಂತ ಪ್ರಾಯಶ್ಚಿತ್ತವೆಂದು ಸ್ಮೃತಿಗಳು ಹೇಳುವವು.[115] ಶಾಕ್ತರೂ ಕೂಡ ಹದ್ದಿಲ್ಲದ ಮದ್ಯಪಾನವನ್ನು ಖಂಡಿಸಿರುವರು. ಮೆಗಾಸ್ತನೀಸ್, ಸ್ಟ್ರ್ಯಾಬೊ, ಆರ್ಕ್ಸಿರ್ಧಿಂಕಸ್ ಪ್ಯಾಪಿರಸ್ ನಾಟಕಗಳೇ ಮುಂತಾದ ಆಧಾರಗಳಿಂದ ಭಾರತೀಯರಿಗೆ ಮದ್ಯಪಾನವು ಅಪರಿಚಿತವೆಂದು ತಿಳಿದು ಬರುವದು. ಒಟ್ಟಿನಲ್ಲಿ ಮದ್ಯಪಾನ ನಿಷೇಧವೇ ಪ್ರಬಲವಾಗಿದ್ದಿತು.

**ತಂಬಾಕು—ನಶ್ಯ:** ವೈದ್ಯಗ್ರಂಥಗಳಲ್ಲಿ ಅನೇಕ ವಿಧವಾದ ನಶ್ಯಗಳ ವರ್ಣನೆಯಿದೆ. ಆದರೆ ತಂಬಾಕು (Tobacco) ಕ್ರಿ.ಶ. ೧೫ ನೆಯ ಶತಾಬ್ದದಲ್ಲಿ ನಮ್ಮ ದೇಶಕ್ಕೆ ಬಂದಮೇಲೆಯೇ ತಂಬಾಕಿನ ನಶ್ಯವು ಪ್ರಚಾರಕ್ಕೆ ಬಂದು "ಶಾಸ್ತ್ರೀಯವೂ" ಆಯಿತು. ನಶ್ಯದ ಮಹಿಮೆಯನ್ನು ಚಾಟುಕವಿಗಳು ತೆಲುಗಿನಲ್ಲಿ ಬಹಳವಾಗಿ ವರ್ಣಿಸಿರುವರು.[116]

ಧೂಮಪಾನವು ಜಾತಕಕಥೆಗಳು, ಕಾದಂಬರೀ, ವೈದ್ಯಗ್ರಂಥಗಳಲ್ಲಿ ಉಕ್ತವಾಗಿರುವುದರಿಂದ ಪ್ರಾಚೀನ ಪದ್ಧತಿ. ತಂಬಾಕಿನ ಧೂಮಪಾನವು ೧೭ ನೆಯ ಶತಾಬ್ದದಲ್ಲಿ ಪಾಶ್ಚಾತ್ಯರಿಂದ ಪ್ರಚಾರವಾಯಿತು. ಹಿಂದೆ ಸುಗಂಧ ದ್ರವ್ಯಗಳ ಧೂಮಪಾನವಿದ್ದಿತು. ಶೂದ್ರಕನು ಮಧ್ಯಾಹ್ನ ಭೋಜನಾನಂತರ ಧೂಮಪಾನಮಾಡಿ ತಾಮ್ಬೂಲಚರ್ವಣ ಮಾಡಿದನೆಂದು ಬಾಣನು ಹೇಳುವನು.[117] ವಿಜಯನಗರ ಸಾಮ್ರಾಜ್ಯದಲ್ಲಿ "ಚೀಣ ಸಿಗಾರ್", "ಬರ್ಮ ಚೆರೂಟ್" ಪ್ರಚಾರದಲ್ಲಿದ್ದವು. ಇಂಗ್ಲೆಂಡಿನ ಒಂದನೆಯ ಜೇಮ್ಸನಂತೆ ಮೊಘಲ್ ಸಾಮ್ರಾಟನಾದ ಜಹಾಂಗೀರನೂ ಧೂಮಪಾನ ನಿರೋಧ ಮಾಡಲು ಯತ್ನಿಸಿದನು. ಪ್ರಾಚೀನಕಾಲದಲ್ಲಿ ಧೂಪವರ್ತಿಯನ್ನು ಮಾಡುತ್ತಿದ್ದ ವಿಧಾನವು ಚರಕಸಂಹಿತೆಯಲ್ಲಿ ಉಕ್ತವಾಗಿದೆ.[118] ಒಂದು ಕಡ್ಡಿಗೆ

---

"ಯದಾಚಾತ್ಮನಾ ಪುರುಷೋಜೀವತಿ ಅಥಾನ್ಯತ್ಸುಕೃತಂಕರೋಮೀತಿ ಆತ್ಮಾನಂಹ್ಯೇವ ಸರ್ವತೋ ಗೋಪಯೇತ್" || ಯಾಜ. I, ೩೩ ; ವಿಶ್ವರೂಪವ್ಯಾಖ್ಯಾ.

115 ಗೌ. ೨೩-೧ ; ಮನು. XI, ೯೦ ; ಯಾಜ್ಞ III ೨೫೩.

116 V. Prabhākara Śāstri : ಚಾಟುಪದ್ಯಮಣಿಮಂಜರಿ.

117 ಪರಿಪೀತ ಧೂಪ ಧೂಮವರ್ತಿರುಪಸ್ಪೃಶ್ಯಚ ಗೃಹೀತತಾಮ್ಬೂಲಃ | ಕಾದಮ್ಬರೀ.

118 ಚರಕಸಂಹಿತಾ—ಸೂತ್ರಸ್ಥಾನ V,

ಸುಗಂಧದ್ರವ್ಯಗಳನ್ನು ಚೆನ್ನಾಗಿ ಅರೆದು ಲೇಪಿಸಿ, ಒಣಗಿದನಂತರ ಕಡ್ಡಿಯನ್ನು ಎಳೆದುಹಾಕಿ ಧೂಪವರ್ತಿಗಳನ್ನು ಮಾಡುತ್ತಿದ್ದರು.

ವೀಳೆಯದೆಲೆ, ಅಡಿಕೆ, ಮುಖವಾಸನೆಗಳ ವಿಷಯವಾಗಿ ವೈದ್ಯಗ್ರಂಥಗಳು ವಿಸ್ತಾರವಾಗಿ ಹೇಳುವವು. ವೇದವಾಙ್ಮಯದಲ್ಲಿ ವೀಳೆಯದೆಲೆಯ ಉಲ್ಲೇಖ ವಿಲ್ಲ. ವೀಳೆಯದೆಲೆ ಬಹುಶಃ ಪಾಲಿನೇಷಿಯ ಪ್ರಾಂತದಿಂದ ತೆಂಗಿನಮರ, "ಕ್ಯಾನೋ" ದೋಣಿ, "ಬೂಮ್‌ರಾಂಗ್" ಮುಂತಾದುವಗಳೊಡನೆ ಮೊದಲು ದಕ್ಷಿಣದೇಶಕ್ಕೆ ಬಂದು ಅನಂತರ ಉತ್ತರದಲ್ಲಿ ವ್ಯಾಪಿಸಿತೆಂದು ಊಹಿಸಲಾಗಿದೆ. ಎಲೆ ಅಡಿಕೆಗಳು ಗೌರವ ಸೂಚಕವೆಂದೂ ಭಾವಿಸಲ್ಪಟ್ಟಿವೆ.

**ವೇಷ ಭೂಷಣಗಳು:** ಭರತಖಂಡದಲ್ಲಿ ಶಿಲಾಯುಗದಲ್ಲಿಯೇ ಸೂಜಿಗಳೂ ನೂಲುತೆಗೆಯುವ ತಕಳಿಗಳೂ ಕಂಡುಬಂದರೂ ಹೊಲಿದ ಬಟ್ಟೆಯು ಕಲಾದೃಷ್ಟಿಯಿಂದಲೂ ಆರೋಗ್ಯದೃಷ್ಟಿಯಿಂದಲೂ ಅನಾದರಣೀಯವೆಂಬ ಭಾವವಿದ್ದುದರಿಂದ ಅಸ್ಯೂತವಸ್ತ್ರಗಳೇ ಪ್ರಶಸ್ತವೆಂದು ಭಾರತೀಯರು ಭಾವಿಸಿದ್ದರು. ಉಣ್ಣೆ, ಹತ್ತಿ, ರೇಷ್ಮೆ, ಕೃಷ್ಣಾಜಿನ ಮತ್ತು ನಾರಿನ ವಸ್ತ್ರಗಳು ಪ್ರಚಾರದಲ್ಲಿದ್ದವು, ಯಾವಾಗಲೂ ಮೈಮೇಲೆ ಎರಡು ಬಟ್ಟೆಗಳು (ದ್ವಿಪಟ) ಇರಬೇಕು.[119] ಬ್ರಾಹ್ಮಣರಿಗೆ ಶ್ವೇತ, ಕ್ಷತ್ರಿಯರಿಗೆ ರಕ್ತ, ವೈಶ್ಯರಿಗೆ ಪೀತ, ಶೂದ್ರರಿಗೆ ನೀಲ ವಸ್ತ್ರಗಳು ವಿಹಿತ.[120] ಪಂಚೆಯನ್ನು ಕಚ್ಚೆಹಾಕಿ ಕಟ್ಟಿಕೊಳ್ಳಬೇಕು. ಲುಂಗಿ (ದಟ್ಟಿ) ಅನಾರ್ಯರ ಸಂಪ್ರದಾಯ. ಹೊಕ್ಕಳು ಹತ್ತಿರ, ಎಡಭಾಗ ಮತ್ತು ಹಿಂಭಾಗಗಳಲ್ಲಿ ಮೂರು ಗಂಟುಗಳಿರಬೇಕು. ಹಿಂದುಗಡೆ ಕಚ್ಚೆಯ ಅಂಚು ಜೋಲಾಡಬಾರದು. ಕೆಳಗಿನ ಬಟ್ಟೆಯಿಂದ ದೇಹದ ಮೇಲ್ಭಾಗವನ್ನು ಮುಚ್ಚಿಕೊಳ್ಳಬಾರದು, ಯುವಾನ್‌ಚ್ವಾಂಗನು[121] ಭಾರತೀಯ ಸ್ತ್ರೀಯರು ಒಂದೇ ಉದ್ದವಾದ ವಸ್ತ್ರವನ್ನು ಭುಜಗಳು ಮುಚ್ಚಿ ಕೆಳಗಿನ ವರೆಗೂ ಜೋಲಾಡುವಹಾಗೆ ಧರಿಸುತ್ತಿದ್ದರೆಂದು ಹೇಳುವನು. ಆದರೆ ಪ್ರಾಚೀನ ಶಿಲ್ಪಗಳಲ್ಲೂ ಚಿತ್ರಗಳಲ್ಲೂ ಕಟ್ಯಧೋಭಾಗದಲ್ಲಿ ಒಂದು ವಸ್ತ್ರವೂ ಕುಚಬಂಧವೂ ಕಂಡುಬರುವವು. ಚೋಳೀ ಅಥವಾ ರವಿಕೆ ದಾಕ್ಷಿಣಾತ್ಯರಲ್ಲಿ ದ್ದಿತು. ಆದರೂ ದ್ರಾವಿಡಸ್ತ್ರೀಯರು ಪ್ರಕಟಸ್ತನಿಯರೆಂದೂ ಗೂರ್ಜರಾಂಗನೆಯರು ದೇಹವನ್ನೆಲ್ಲ ಮುಚ್ಚುಕೊಳ್ಳುತ್ತಿದ್ದರೆಂದೂ ಹೇಳಲಾಗಿದೆ.

---

119 ಆಪ. ಧ. ಸೂ. II, ೨೮—೨೨, ವಸಿಷ್ಠ, XII. ೧೪,

120 ಸ್ಮೃತಿಚನ್ದ್ರಿಕಾ I, p. ೧೧೩.

121 Walters : *On Yuwan Chwang.* I, p. ೧೫೦.

ವೇದಯುಗದಲ್ಲಿ ಸ್ತ್ರೀಯರು ಕುರೀರ, ಕುಮ್ಬ, ಓಪಶಗಳೆಂಬ ಶಿರೋಭೂಷಣಗಳನ್ನು ಧರಿಸುತ್ತಿದ್ದರು. ಪುರುಷರು ಕೂಡ ಶಿರಸ್ತ್ರಾಣ, ಶಿರೋವೇಷ್ಟನಗಳನ್ನು ವಿವಿಧ ರೀತಿಯಲ್ಲಿ ಹಾಕಿಕೊಳ್ಳುತ್ತಿದ್ದರು. ಉಷ್ಣೀಷಗಳು ಅಧಿಕಾರಸೂಚಕಗಳಾಗಿದ್ದವು. ಹೊಯ್ಸಳ ವಿಜಯನಗರದ ಕಾಲದಲ್ಲಿ ಮಹಾಕೂರ್ಪಾಸ (ಸಿಲುವಂಗಿ), ಕುಲ್ಲಾವಿ, ಕೋಕು (ರುಮಾಲು), ಪಾದಪರ್ಯಂತ ಚೊಲ್ಲಣ (ಪಾದಯಾಮ—ಪಾಯ್ಜಾಮ, ಷರಾಯಿ) ಉತ್ತರೀಯ, ನಡುಕಟ್ಟುಗಳು ರಾಜಸಭೋಚಿತವೇಷವಾಗಿದ್ದವು. ಕ್ಷತ್ರಿಯರೂ ಸೇನೆಯವರೂ ಚರ್ಮ ಮತ್ತು ಲೋಹಗಳ ತನುತ್ರಾಣ (Armour), ಶಿರಸ್ತ್ರಾಣ (Helmet) ಗಳನ್ನು ಪಯೋಗಿಸುತ್ತಿದ್ದರು.

ಪುರುಷರೂ ಸ್ತ್ರೀಯರೂ ಅಲಂಕಾರಪ್ರಿಯರಾಗಿದ್ದರು. ತಲೆಕೂದಲಿಗೆ ಸುಗನ್ಧತೈಲಗಳನ್ನು ಹಚ್ಚಿ ಬೈತಲೆ ತೆಗೆದು ಆಭರಣಗಳನ್ನೂ ಹೂಗಳನ್ನೂ ಮುಡಿಸಿಕೊಳ್ಳುತ್ತಿದ್ದರು. ಕೇಶಬಂಧನೆಯೇ ಒಂದು ಕಲೆಯಾಗಿದ್ದಿತು. ಅಜಂತಾ, ಅಮರಾವತೀ, ಬಾರ್ಹುತ್, ಸಾಂಚೀ, ಬೇಲೂರು ಹಳೇಬೀಡು ಮುಂತಾದ ಸ್ಥಳಗಳ ವಾಸ್ತುಶಿಲ್ಪದಿಂದ ಕೇಶಾಲಂಕಾರಗಳ ವೈವಿಧ್ಯವು ತಿಳಿದುಬರುವದು. ಮುಣ್ಡನೆಯು ರಾಜದಣ್ಡನೆಯ ಚಿಹ್ನೆ. ಬಹಳ ಪ್ರಾಚೀನ ಕಾಲದಿಂದಲೂ ನಮ್ಮ ದೇಶದಲ್ಲಿ ಕೇಶವಿನ್ಯಾಸಪದ್ಧತಿಗಳು ಅನೇಕವಾಗಿದ್ದವ. ಶಕರು ಅರ್ಧತಲೆಯನ್ನೂ, ಕಾಂಭೋಜಯವನರು ತಲೆಯನ್ನೆಲ್ಲ ಮುಂಡನ ಮಾಡಿಸಿಕೊಳ್ಳುತ್ತಿದ್ದರೆಂದೂ, ಪಾರದರು ಮುಕ್ತಕೇಶರೆಂದೂ, ಪಹ್ಲವರು ಶ್ಮಶ್ರುಧಾರಿಗಳೆಂದೂ ಹರಿವಂಶ, ವಿಷ್ಣುಪುರಾಣಗಳು ಹೇಳುವವು. ಹರಪ್ಪ ಸಂಸ್ಕೃತಿಯ ಕಾಲದಲ್ಲಿ ಕೆಲವರು ಮೀಸೆಯನ್ನು ಮಾತ್ರ ತೆಗಿಸಿ ಗಡ್ಡವನ್ನು ಬೆಳಸುತ್ತಿದ್ದರು. ಭರತಖಂಡದ ನಾಪಿತರ ಕೌಶಲ್ಯವನ್ನು ಪೋರ್ಚುಗೀಸ್ ಪ್ರವಾಸಿಗಳು ಹೊಗಳಿರುವರು.

ಹೆಂಗಸರು ಲೋಧ್ರದ ಚಕ್ಕೆಯಿಂದ ಮಾಡಿದ ಮುಖಚೂರ್ಣವನ್ನೂ (Face Powder), ತುಟಿಗೆ ಕೆಂಬಣ್ಣವನ್ನೂ, ಕಣ್ಣಿಗೆ ಅಂಜನವನ್ನೂ ಮೈಗೆ ಸುಗಂಧಗಳನ್ನೂ, ಕಬರಭೂಷಣ, ಕಾಲಿಗೆ ಎತ್ತು ಮೆಟ್ಟಿನ (High Heel) ಮುಖಮಲ್ ಬಟ್ಟೆಗೆ ಮುತ್ತು, ಜರೀ ಅಲಂಕಾರಮಾಡಿದ ಪಾದರಕ್ಷೆಗಳನ್ನೂ, ಕರವಸ್ತ್ರಗಳನ್ನೂ ಹಾವಿನ ಪೊರೆಯಂತೆ ತೆಳುವಾದ ಅವಕುಂಠನಗಳನ್ನೂ ಉಪಯೋಗಿಸುತ್ತಿದ್ದರು. ಶಕುನ್ತಲೆಯು ಲೋಧ್ರದ ಮುಖಚೂರ್ಣವನ್ನುಪಯೋಗಿಸುತ್ತಿದ್ದಳೆಂದು ಕಾಳಿದಾಸನು ಹೇಳುವನು. ತುಟಿಯ ಬಣ್ಣ, ಕಾಡಿಗೆ, ಬಾಚಣಿಗೆ ಮುಂತಾದ ಉಪಕರಣಗಳು ಹರಪ್ಪ ಅವಶೇಷಗಳಲ್ಲಿ ಕಾಣಬರು

ವವು. ಪುರುಷರೂ ಚಪ್ಪಲಿ, ಪಾಪಾಸು, ಶೀತದೇಶದಲ್ಲಿ ಮೊಣಕಾಲುದ್ದ ಪಾದರಕ್ಷೆ (Thigh Boots) ಗಳನ್ನುಪಯೋಗಿಸುತ್ತಿದ್ದರು. ಸಾಮಾನ್ಯ ಜನರು ಬರೀ ಕಾಲಿನಲ್ಲೇ ಇರುತ್ತಿದ್ದರು. ವಿಧವೆಯರು ಏಕವೇಣಿ, ಶ್ವೇತ[127] ಅಥವಾ ರಕ್ತವಸ್ತ್ರಗಳನ್ನೂ, ಬೌದ್ಧಭಿಕ್ಷುಗಳು ರಕ್ತಪಟವನ್ನೂ, ಕ್ಷಪಣಕರು ಪೀತ ಅಥವಾ ಶ್ವೇತವಸ್ತ್ರಗಳನ್ನೂ (ದಿಗಂಬರರು ನಗ್ನರಾಗಿಯೂ), ಪರಿವ್ರಾಜಕರು ಕಷಾಯ, ಧೂಳಿಧೂಸರಿತವಸ್ತ್ರಗಳನ್ನೂ ಧರಿಸುತ್ತಿದ್ದರು. ಭಾರತೀಯರಿಗೆ ವಸ್ತ್ರಗಳಿಗಿಂತ ಆಭರಣಗಳ ಮೇಲೆ ಪ್ರೀತಿ ಹೆಚ್ಚು. "ಕಿಮಿವಹಿಮಧುರಾಣಾಂಮಂಡನಂ ನಾಕೃತೀನಾಂ" ಎಂದು ಕವಿಗಳು ಹೇಳಿದರೂ ಶಿಖೆಯಿಂದ ನಖದ ವರೆಗೂ ಆಭರಣಗಳನ್ನು ಧರಿಸುವದರಲ್ಲಿ ಸ್ತ್ರೀಯರು ಆಸಕ್ತರಾಗಿದ್ದರು. ತಲೆಗೆ ಚೂಡಾಮಣಿ, ಸರಗಳು, ಸೀಮಂತ, ಭಾಪಿಂಗ, ಸೂರ್ಯಚಂದ್ರಾಕಾರದ ಆಭರಣಗಳು, ನಾಗರ, ರಾಗಟೆ, ಕುಚ್ಚು, ಕಿವಿಗೆ ಕುಣ್ಡಲ, ಕಮಲ, ಚಿನ್ನದ ಸರ, ತಾಟಂಕ[128] (ಓಲೆ), ನಾಗಾಭರಣಗಳೂ; ಕಪೋಲ, ಸ್ತನಪ್ರದೇಶಗಳಲ್ಲಿ ಕಸ್ತೂರಿಕಾಪತ್ರರೇಖೆ; ಕಂಠದಲ್ಲಿ ಹಾರಗಳು, ಭುಜಗಳಿಗೆ ಬಾಹುಪೂರ, ಭುಜಕೀರ್ತಿ; ಕೈಗಳಿಗೆ ಬಳೆ, ಕಂಕಣ, ಪರಿಸರ; ಬೆರಳುಗಳಿಗೆ ಪವಿತ್ರ, ಉಂಗುರಗಳು; ನಡುವಿನಲ್ಲಿ ಒಡ್ಯಾಣಬಂಧ, ಕಾಂಚೀದಾಮ; ಪಾದಗಳಿಗೆ ಅಂದಿಗೆ, ನೂಪುರ, ನಾಟ್ಯದಲ್ಲಿ ಗೆಜ್ಜೆಸರ ಮುಂತಾದುವು ಪ್ರಸಿದ್ಧ. ಒಡವರು ಬೆಳ್ಳಿ, ತಾಮ್ರ, ಕಬ್ಬಿಣ, ಬಿದಿರು, ಮರ, ಮಣ್ಣು, ಕವಡೆ ಮುಂತಾದವುಗಳಿಂದ ಮಾಡಿದ ಆಭರಣಗಳನ್ನು ಪಯೋಗಿಸುತ್ತಿದ್ದರು. ಮೂಗುಬೊಟ್ಟು ಅನಾರ್ಯರಲ್ಲಿಯೂ ವಿದೇಶೀಯರಲ್ಲೂ ಹರಪ್ಪ ಸಂಸ್ಕೃತಿಯಲ್ಲೂ ಕಂಡುಬಂದರೂ, ಶಂಕರಾಚಾರ್ಯರ ಕೆಲವು ಸ್ತೋತ್ರಗಳಲ್ಲಿ ಮುಕುರದ ಉಲ್ಲೇಖವಿದ್ದರೂ, ಹನ್ನೆರಡನೆಯ ಶತಾಬ್ದದಿಂದೀಚೆಗೆ ಇದು

[127] ಬಧ್ನಾನಾ ... ಧವ ವೇಣೀಂ ಪರಮನುಪ್ರತಾ; ಪರಿಧತ್ತಾ ಧವಲೇ ವಾಸಸೀವಸುಮತೀ—ಹರ್ಷಚರಿತ.

[128] ಲಲಿತಾತ್ರಿಪುರಸುನ್ದರಿಯ ತಾಟಂಕಗಳು ಸೂರ್ಯ ಮತ್ತು ಚನ್ದ್ರಮಣ್ಡಲಗಳು. "ತಾಟಂಕಯುಗಳೀಭೂತ ತಪನೋಡುಪಮಣ್ಡಲಾ"—ಲಲಿತಾ ಸಹಸ್ರನಾಮ. ಕರೀಮಣಿ ತಾಳೀಬೊಟ್ಟುಗಳು ಸುಮಂಗಲಿಯ ಚಿಹ್ನೆಗಳೆಂಬ ಭಾವವು ಆಧುನಿಕ. ಹಿಂದೆ ಪರಿಸರ (ಕಂಕಣ) ತಾಟಂಕಗಳೇ ಮುಖ್ಯವಾಗಿದ್ದವು. ಗಿರಿಜೆಯ ತಾಟಂಕಮಹಿಮೆಯಿಂದ ಶಿವನು ವಿಷಪಾನಮಾಡಿದರೂ ಅಪಾಯ ಹೊಂದಲಿಲ್ಲವೆಂದು ಶ್ರೀಶಂಕರರು ಆನನ್ದಲಹರಿಯಲ್ಲಿ ವರ್ಣಿಸಿರುವರು. ವೈದಿಕವಿವಾಹದಲ್ಲಿ ತಾಳಿಕಟ್ಟುವದಕ್ಕೆ ವೇದಮಂತ್ರಗಳಿಲ್ಲ. ಆದರೂ ಈ ಪದ್ಧತಿಯು ನವಶಿಲಾಯುಗದ ಮಾತೃದೇವತಾಪೂಜೆಯಿಂದ ಬಂದಿರಬಹುದು—cf. ಶ್ರೀ "ಚಾಮುಂಡೇಶ್ವರೀ". ಪ್ರಬುದ್ಧಕರ್ಣಾಟಕ. ರಜತೋತ್ಸವಸಂಚಿಕೆ.

ಸುಮಂಗಲಿಯ ಲಕ್ಷಣವೆಂದು ಗಣಿಸಲ್ಪಟ್ಟಿತು. ಕರ್ಣಕುಣ್ಡಲಗಳು ಯಜ್ಞ ಮಾಡಿದವರ ಲಕ್ಷಣ. ಅವಿದ್ಧಕರ್ಣರನ್ನು ಅನಾರ್ಯರೆಂದು ಭಾವಿಸಿದ್ದರು.

**ವಿದ್ಯಾಭ್ಯಾಸಪದ್ಧತಿ:** ಬಾಲ್ಯದಲ್ಲಿ ಸ್ಮರಣಶಕ್ತಿಯನ್ನೂ ಅನಂತರ ವಿವೇಚನಾಶಕ್ತಿಯನ್ನೂ ದೃಢಪಡಿಸುವದೇ ಪ್ರಾಚೀನ ವಿದ್ಯಾಭ್ಯಾಸ ಪದ್ಧತಿಯ ಧ್ಯೇಯವಾಗಿದ್ದಿತು. ಉಪನಿಷತ್ತುಗಳು ಶ್ರವಣ (ಬಾಲ್ಯ), ಮನನ (ಪಾಂಡಿತ್ಯ), ನಿಧಿಧ್ಯಾಸ (ಮೌನ)ಗಳು ಅವಶ್ಯಕವೆಂದು ಹೇಳುವವು. ಚೂಡಾಕರ್ಮವಾದನಂತರ ಅಕ್ಷರಾಭ್ಯಾಸವು ಆರಂಭವಾಗಿ ಎಂಟು ವರ್ಷದೊಳಗೆ ಓದು, ಬರಹ, ಸಾಮಾನ್ಯ ಗಣಿತ, ನಿಘಣ್ಟು (ಅಮರಕೋಶ), ವ್ಯಾಕರಣಶಬ್ದಗಳೇ ಮುಂತಾದ ಬಾಲಶಿಕ್ಷೆಯು ದೇಶಭಾಷೆಯ ಮೂಲಕ ನಡೆಯುತ್ತಿದ್ದಿತು. "ಕೂಲಿಮಠ"ಗಳಲ್ಲಿ ಹಲಗೆ, ಕಡಿತ, ಓಲೆಗರಿ ಅಥವಾ ಮರಳಿನ ಮೇಲೆ ಅಕ್ಷರಗಳನ್ನು ತಿದ್ದುತ್ತಿದ್ದರು. ಗೌತಮಬುದ್ಧನು ವಾಚನ, ಲೇಖನ, ಅಖ್ಖರ, ಪಾಲಿ, ಸಂಸ್ಕೃತ, ಚಂಡಾಲಭಾಸಾ, ವೇದ, ಅಂಗ, ಅಖ್ಯಾನ, ಗಾಥಾ, ನಾಟಕ, ನಟ್ಟತ್ತವಿದ್ಯಾ, ವೈದ್ಯಶಾಸ್ತ್ರಗಳನ್ನೂ, ಕ್ಷತ್ರಿಯೋಚಿತ ಗಜಶಾಸ್ತ್ರ, ಅಶ್ವಶಾಸ್ತ್ರ, ಧನುರ್ವಿದ್ಯಾ, ಗೀತ, ವಾದಿತ್ತ ಗನ್ಧಬ್ಬವಿಜ್ಜಾ"ಗಳನ್ನೂ ಕಲಿತನೆಂದು ಲಲಿತವಿಸ್ತರದಲ್ಲಿ ಹೇಳಿದೆ. ನಾರದನು ನಾಲ್ಕು ವೇದಗಳನ್ನೂ ಇತಿಹಾಸ, ಪುರಾಣ, ಪಿತ್ರ್ಯ, ರಾಶಿ, ದೈವ, ನಿಧಿ, ವಾಕೋವಾಕ್ಯ, ಏಕಾಯನ, ದೇವವಿದ್ಯಾ, ಬ್ರಹ್ಮವಿದ್ಯಾ, ಭೂತವಿದ್ಯಾ, ಕ್ಷತ್ರವಿದ್ಯಾ, ನಕ್ಷತ್ರವಿದ್ಯಾ, ಸರ್ಪದೇವ ಜನವಿದ್ಯೆಗಳನ್ನು ಕಲಿತು ಸಮಾಧಾನಹೊಂದದೆ ಸನತ್ಕುಮಾರರ ಬಳಿಗೆ ಬಂದು ಇವೆಲ್ಲಕ್ಕಿಂತಲೂ ಉತ್ತಮವಾದ ಆತ್ಮವಿದ್ಯೆಯನ್ನು ಕಲಿತನು.[124] ರಾಜಪುತ್ರರು ಕಲಿಯಬೇಕಾದ ವಿಷಯಗಳನ್ನು ಬಾಣನು ಹೇಳಿರುವನು.[125] ಬ್ರಾಹ್ಮಣರಿಗೆ ಉಪನಯನಾನಂತರ ಬ್ರಹ್ಮವಿದ್ಯೆ ಆರಂಭವಾಗಬೇಕು. "ಅಥಾತೋಧರ್ಮಜಿಜ್ಞಾಸಾ"

---

124 ಛಾನ್ದೋಗ್ಯ, VII. ೧-೧ ; ತತಸ್ತು ಊರ್ಧ್ವಂ ವಕ್ಷ್ಯಾಮೀತಿ |

125 ಪದೇ ವಾಕ್ಯೇ ಪ್ರಮಾಣೇ ಧರ್ಮಶಾಸ್ತ್ರೇ ರಾಜನೀತಿಷು ವ್ಯಾಯಾಮವಿದ್ಯಾಸು . . . ಸರ್ವೇಷ್ವಾಯುಧವಿಶೇಷು ರಥಚರ್ಯಾಸು ಗಜಪೃಷ್ಠೇಷು ತುರಂಗಮೇಷು . . . ವಾದ್ಯೇಷು ಭರತಾದಿಪ್ರಣೀತೇಷು ನೃತ್ಯಶಾಸ್ತ್ರೇಷು ನಾರದೀಯಪ್ರಭೃತಿಷುಗಾನ್ಧರ್ವವೇದ ವಿಶೇಷೇಷು . . . ಗ್ರಹಗಣಿತೇ . . . ವಾಸ್ತುವಿದ್ಯಾಸ್ವಾಯುರ್ವೇದೇ ಯನ್ತ್ರಪ್ರಯೋಗೇ . . . ಕಥಾಸುನಾಟಕೇಷು ಅಖ್ಯಾಯಿಕಾಸು ಕಾವ್ಯೇಷು ಮಹಾಭಾರತಪುರಾಣೇತಿಹಾಸರಾಮಾಯಣೇಷು ಸರ್ವಲಿಪಿಷು ಸರ್ವದೇಶಭಾಷಾಸು ಸರ್ವಶಿಲ್ಪೇಷು ಛನ್ದಃಸು ಅನ್ಯೇಷ್ವಪಿಕಲಾವಿಶೇಷೇಷು ಪರಂ ಕೌಶಲಮವಾಪ | ಕಾದಮ್ಬರೀ. Para. ೬೯-೭೧.

ಎಂಬ ಪೂರ್ವಮೀಮಾಂಸಾ ಸೂತ್ರದಲ್ಲಿ ಅಥ (ಅನಂತರ) ಶಬ್ದವು "ಸ್ವಾಧ್ಯಾಯೋಽಧ್ಯೇತವ್ಯಃ" ಎಂಬುದರ ಅನಂತರವೆಂಬುದನ್ನು ಸೂಚಿಸುತ್ತದೆಯೆಂದು ಕುಮಾರಿಲರು ಹೇಳುವರು. ಪ್ರಭಾಕರರು "ಅಷ್ಟವರ್ಷಂ ಬ್ರಾಹ್ಮಣಮುಪನಯೀತ ತಮಧ್ಯಾಪಯೀತ" ಎಂಬುದರಿಂದ ಹಿರಿಯರು ಬೋಧಿಸಬೇಕೆಂದೂ, ಅಧ್ಯಾಪಕನೇ ವಿದ್ಯಾಪ್ರವೇಶ ಮಾಡಿಸಬೇಕೆಂದೂ, ಮಗುವೇ ಅಧ್ಯಯನಮಾಡಬೇಕೆಂಬ ನಿಯಮವಿಲ್ಲವೆಂದೂ ಹೇಳುವರು.

ವಟುವು ಸಮಿತ್ಪಾಣಿಯಾಗಿ ಉತ್ತರ ಅಥವಾ ಪೂರ್ವಾಭಿಮುಖನಾದ ದರ್ಭಪಾಣಿಯಾದ ಆಚಾರ್ಯನನ್ನು ಸಮೀಪಿಸಿ ದಂಡವತ್ಪ್ರಣಾಮ ಮಾಡಿ ತನ್ನ ಗೋತ್ರ ಸೂತ್ರ ಪ್ರವರಗಳನ್ನು ನಿವೇದಿಸಿ ಅಭಿವಾದನೆಮಾಡಿ "ಅಧೀಹಿ ಭೋ" ಎಂದು ಕೇಳಿಕೊಳ್ಳಬೇಕು.[126] ವೇದವನ್ನು ಗುರುಮುಖದಿಂದಲೇ ಕಲಿಯಬೇಕು. ಪುಸ್ತಕಗಳಿಂದ ಕೂಡದು. ಪೂರ್ವಶಾಂತಿ ಮತ್ತು ಓಂಕಾರ ಪೂರ್ವಕವಾಗಿ ಆರಂಭಿಸಿ ಅವಿಚ್ಛಿನ್ನನಾಗಿ ಉಚ್ಚರಿಸಬೇಕು. ಗೀತೀ, ಶೀಘ್ರೀ, ಶಿರಃಕಮ್ಪೀ, ಲಿಖಿತಪಾಠಕ, ಅನರ್ಥಜ್ಞ ಮತ್ತು ಅಲ್ಪಕಣ್ಠರು ಪಾಠಕಾಧಮರು.[127] ದ್ಯೂತ, ಪುಸ್ತಕಶುಶ್ರೂಷಾ, ನಾಟಕಾಸಕ್ತಿ, ಸ್ತ್ರೀ ಚಿನ್ತಾ, ನಿದ್ರಾ, ತನ್ದ್ರಾ ಎಂಬ ಆರು ವಿದ್ಯಾವಿಘ್ನಕ್ಕೆ ಕಾರಣಗಳು.[128] ಅಧ್ಯಯನ ಸಮಾಪ್ತಿಯಾದ ನಂತರ ಉತ್ತರಾಶಾನ್ತಿ ಮಾಡಿದ ಮೇಲೆ ಶಿಷ್ಯನು ಗುರುಪಾದಗಳಿಗೆ ನಮಸ್ಕರಿಸಿ ಪ್ರವರವನ್ನುಚ್ಚರಿಸಿ "ಅಭಿವಾದಯೇ" ಎಂದು ಹೇಳಬೇಕು. ಪಾಠ ನಡೆಯುತ್ತಿರುವಾಗ ಗುರುಸಮ್ಮುಖದಲ್ಲಿ ಕಾಲು ಚಾಚಿಕೊಳ್ಳಬಾರದು. ಮಧ್ಯೆ ಎದ್ದುಹೋಗಬಾರದು. ಗುರುಛಾಯೆಯನ್ನು ದಾಟಬಾರದು. ಬ್ರಹ್ಮಚಿಹ್ನವನ್ನು ಅಲಕ್ಷ್ಯ ಮಾಡಕೂಡದು. ಮೊದಲು ತಮ್ಮ ಶಾಖೆಯನ್ನು ಕಲಿತು ಅನಂತರ ಇತರ ಶಾಖಾಗ್ರಂಥಗಳನ್ನು ಕಲಿಯಬೇಕು. ತಮ್ಮ ಶಾಖೆಯನ್ನು ಬಿಟ್ಟು ಇತರವನ್ನು ಕಲಿಯಲು ಯತ್ನಿಸಿದರೆ

---

[126] ಪ್ರಮಾಣಭೂತ ಆಚಾರ್ಯಃ ದರ್ಭಪಾಣಿಃ ಶುಚಾವವಕಾಶೇ ಪ್ರಾಙ್ಮುಖ ಉಪವಿಶ್ಯ ಸೂತ್ರಾಣಿ ಪ್ರಣಯತಿಸ್ಮ | ತತ್ರ ನೈಕೇನಾಪಿವರ್ಣೇನ ಅನರ್ಥಕ್ಯೇನ ಭವಿತವ್ಯಮ್ ||

[127] ಸರ್ವೇವೇದಾಮುಖತೋ ಗೃಹೀತಾಃ—ಗೋಪಥ. ಬ್ರಾ. I. ೩೧. ಗೀತೀ ಶೀಘ್ರೀ ಶಿರಃ ಕಮ್ಪೀ ತಥಾ ಲಿಖಿತಪಾಠಕಃ | ಅನರ್ಥಜ್ಞೋಽಲ್ಪ ಕಣ್ಠಶ್ಚ ಷಡೇತೇ ಪಾಠಕಾಧಮಾಃ || ಪಾಣಿನೀಯ ಶಿಕ್ಷಾ. ಪುಸ್ತಕಪ್ರತ್ಯಯಾಧೀತಂ ನಾಧೀತಂ ಗುರುಸನ್ನಿಧೌ | ಭ್ರಾಜತೇನ ಸಭಾಮಧ್ಯೇ. . . | ಪರಾ. ಮಾಧ. I, ೧-೧೫೪, ವೇದವಿಕ್ರಯಿಣಶ್ಚೈವ ವೇದಾನಾಂ ಚೈವದೂಷಕಃ | ವೇದಾನಾಂ ಲೇಖಕಶ್ಚೈವ ತೇವೈನಿರಯಗಾಮಿನಃ ||

[128] ಸ್ಮೃತಿ ಚನ್ದ್ರಿಕಾ. I, ೫೨.

ಶಾಖಾಪಾರಣ್ಗರಾಗುವರು.[129] ಪ್ರಸಿದ್ಧರಾದ ಗುರುಗಳನ್ನು ನಾನಾದೇಶಗಳ ವಿದ್ಯಾರ್ಥಿಗಳು ಆಶ್ರಯಿಸುತ್ತಿದ್ದರು. ಗುರುಗಳೂ ಕೂಡ ಸಮಗೆ ಸಚ್ಛಿಷ್ಯರು ದೊರಕಲಿಯೆಂದು ಕೋರುತ್ತಿದ್ದರು.[130] ಚಪಲಚಿತ್ತರಾದ ಕೆಲವರು ವಿದ್ಯಾರ್ಥಿಗಳು ಒಬ್ಬ ಗುರುವಿನ ಬಳಿ ನಿಲ್ಲದೆ ಇತರರನ್ನಾಶ್ರಯಿಸುತ್ತಿದ್ದರು. ಇಂತಹವರಿಗೆ "ತೀರ್ಥಕಾಕ"ವೆಂದು ಹೆಸರು.[131] ಒಂದೊಂದು ಗುರುಕುಲದಲ್ಲಿ ಹತ್ತು ಸಾವಿರ ಶಿಷ್ಯರೂ ಇರುತ್ತಿದ್ದರು. ಜ್ಯೇಷ್ಠ ಶಿಷ್ಯರು ಚಿಕ್ಕವರ ಆಚಾರವ್ಯವಹಾರಗಳಿಗೆ ಗಮನಕೊಡುತ್ತಿದ್ದರು. ಹೀಗೆ ಗುರುಕುಲವು ಗುರುವಾದ ಕುಲವೇ (ದೊಡ್ಡ ಮನೆ) ಆಗಿದ್ದಿತು. ಗುರುವು ಕೂಡ ಸತ್ಪಾತ್ರನಾದ ಶಿಷ್ಯನಿಗೆ ತನ್ನ ವಿದ್ಯೆಯನ್ನೆಲ್ಲ ಮರೆಮಾಚದೆ ಬೋಧಿಸಬೇಕು. ವಿದ್ಯಾರ್ಥಿಗೆ ಹೆಚ್ಚು ಪ್ರಯಾಸಕೊಡ ಕೂಡದು. ಹೊಟ್ಟೆಪಾಡಿಗಾಗಿ ವಿದ್ಯೆ ಹೇಳುವವನೂ ಕಲಿಯುವವನೂ ಅಧಃಪತಿತರಾಗುವರು. ಆಚಾರ್ಯನು ಅಧರಾರಣಿ, ಶಿಷ್ಯನು ಉತ್ತರಾರಣಿ, ಇವರ ಸನ್ಧಾನದಿಂದ ಜ್ಞಾನಾಗ್ನಿಯು ಪ್ರಜ್ವಲಿತವಾಗುವದು.[132] ಗುರುಶಿಷ್ಯರಿಗೆ ನಿಕಟಸಂಬನ್ಧವಿರಬೇಕು. ಶಿಷ್ಯನನ್ನು ವಾಗ್ದಂಡದಿಂದಲೂ ಧಿಗ್ದಣ್ಡದಿಂದಲೂ ಅಥವಾ ತೆಳುವಾದ ಬಿದುರಿನ ಕೋಲಿನಿಂದ ಬೆನ್ನ ಮೇಲೆ ಅಪಾಯವಾಗದಂತೆ ದಂಡಿಸಬಹುದು. "ಕೂಲಿಮಠ"ಗಳ ಕ್ರೂರದಂಡನೆಯ ವಿಧಾನಗಳು ಶಾಸ್ತ್ರವಿರುದ್ಧ. ಯಾವ ದಂಡನೆಗೂ ಬಗ್ಗದವನನ್ನು ಹೊರಡಿಸಬೇಕು. ಗುರುವು ಶಿಷ್ಯನನ್ನು ತನ್ನ ಮಗನೆಂದು ಭಾವಿಸಿ ಸೌಮ್ಯಮಾರ್ಗದಲ್ಲಿ ಶೋಧನೆ ಮಾಡಬೇಕು.[133]

[129] ಮನು III, ೨.

[130] ಯಥಾಪಃ ಪ್ರವತಾಯನ್ತಿ ಯಥಾಮಾಸಾ ಅಹರ್ಜರಮ್ | ಏವಂ ಮಾಂ ಬ್ರಹ್ಮಚಾರಿಣೋ ಧಾತಾರಾಯನ್ತು ಸರ್ವತಃ || ತೈ. ಉಪ. I, ೪-೩.

[131] ಯಥಾ ತೀರ್ಥೇ ಕಾಕಾ ನಚಿರಂ ಸ್ಥಾತಾರೋ ಭವನ್ತಿ ಏವಂ ಯೋ ಗುರುಕುಲಾನಿ ಗತ್ವಾ ನಚಿರಂ ತಿಷ್ಠತಿ ಸ ಉಚ್ಯತೇ ತೀರ್ಥಕಾಕ ಇತಿ—ಮಹಾಭಾಷ್ಯ, I, ಪು. ೪೯೧. ಶರೀರಂ ಸುರೂಪಂ ತಥಾವಾ ಕಲತ್ರಂ ಯಶಶ್ಚಾರುಚಿತ್ರಂ ಧನಂ ಮೇರುತುಲ್ಯಮ್ | ಮನಶ್ಚೇನ್ನಲಗ್ನಂ ಗುರೋರಂಘ್ರಿಪದ್ಮೇ ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಮ್ ? || ಷಡಂಗಾದಿ ವೇದೋ ಮುಖೇ ಶಾಸ್ತ್ರವಿದ್ಯಾ ಕವಿತ್ವಾದಿಗದ್ಯಂ ಸುಪದ್ಯಂ ಕರೋತಿ | ಮನಶ್ಚೇನ್ನ ಲಗ್ನಂ ಗುರೋರಂಘ್ರಿಪದ್ಮೇ ತತಃ ಕಿಂ ತತಃ ಕಿಂ ತತಃ ಕಿಂ ತತಃ ಕಿಮ್ ||— ಶಂಕರಾಚಾರ್ಯರ ಗುರ್ವಷ್ಟಕ.

[132] ಭೃತಕಾಧ್ಯಾಪಕೋ ಯಶ್ಚ ಭೃತಕಾಧ್ಯಾಪಿತಶ್ಚ ಯಃ | ತಾವುಭೌ ನರಕಂ ಯಾತಃ ಛಿನ್ನರಜ್ಜುರ್ಘಟೋ ಯಥಾ || ಆಚಾರ್ಯೋಽರಣಿರಾದ್ಯಸ್ಸ್ಯಾದನ್ತೇವಾಸ್ಯುತ್ತರಾರಣಿಃ | ತತ್ಸನ್ಧಾನಂ ಪ್ರವಚನಂ ವಿದ್ಯಾಸನ್ಧಿಃ ಸುಖಾವಹಃ || ಶ್ರೀಭಾಗವತ, XI, ೧೦.೧೨.

[133] ಯದ್ಯಪಿ ಸುಗುಣಾಧೀಷೇ ತಥಾಪಿ ಪುತ್ರ ಪಠವ್ಯಾಕರಣಮ್ ಸ್ವಜನಃ ಶ್ವಜನೋ ಮಾಭೂತ್ ಸಕಲಂ ಶಕಲಂ ಸಕೃತ್ ಶಕೃತ್ || ಮಹಾಭಾಷ್ಯ.

ಹೀಗೆ ವಿದ್ಯಾಭ್ಯಾಸಮಾಡಿದ ಅನಂತರ ಬ್ರಹ್ಮಚಾರಿಯು ಸ್ನಾತಕನಾಗು ವನು. ತೈತ್ತಿರೀಯೋಪನಿಷತ್ತಿನಲ್ಲಿ ಸ್ನಾತಕರಿಗೆ ಗುರುವಿನ ಅಸ್ತ್ಯೋಪದೇಶವು (Convocation Address). ಕಂಡುಬರುವದು "ಸತ್ಯವನ್ನು ಹೇಳು, ಧರ್ಮ ವನ್ನು ಅನುಸರಿಸು, ಇದುವರೆಗೆ ಕಲಿತಿದ್ದರಿಂದಲೇ ತೃಪ್ತನಾಗಬೇಡ, ಹೆಮ್ಮೆ ಪಡಬೇಡ, ಮಾತಾಪಿತೃಗಳನ್ನೂ ಆಚಾರ್ಯರನ್ನೂ ದೇವರಂತೆ ಭಾವಿಸು. ಪ್ರಜಾತಂತುವನ್ನು ಭಿನ್ನಮಾಡಬೇಡ. ಆಚಾರ್ಯನಿಂದ ಕಾಲುಭಾಗ ಮಾತ್ರ ಕಲಿತಿರುವೆ. ಸ್ವಮೇಧಾಶಕ್ತಿಯಿಂದ ಕಾಲುಭಾಗವನ್ನೂ, ಅನುಭವದಿಂದ ಕಾಲುಭಾಗವನ್ನೂ ಶಾಸ್ತ್ರದಿಂದ ಕಾಲುಭಾಗವನ್ನೂ ಕಲಿಯಬೇಕಾಗಿದೆ. ದುಷ್ಟರಿಗೆ ವಿದ್ಯೆಯು ವಿವಾದಕ್ಕಾಗಿ, ಧನವು ಮದಕ್ಕಾಗಿ, ಒಲವು ಪರರನ್ನು ಪೀಡಿಸುವದಕ್ಕಾಗಿ, ಆದರೆ ಇವು ಶಿಷ್ಟರಿಗೆ ಜ್ಞಾನಕ್ಕಾಗಿ, ದಾನಕ್ಕಾಗಿ, ಸಂರಕ್ಷಣೆಗಾಗಿ ಎಂಬುದನ್ನು ಮರೆಯಬೇಡ"[134] ಎಂಬುದೇ ಗುರುವಿನ ಸಂದೇಶ. ಅನಂತರ ಯಥಾಶಕ್ತಿ ಗುರುದಕ್ಷಿಣೆಯನ್ನು ಸಲ್ಲಿಸಿ ಗುರ್ವನುಜ್ಞೆ ಪಡೆದು ಕಾಶೀಮುಂತಾದ ದೇಶಸಂಚಾರ ಮಾಡಿ[135] ಅನುಭವವನ್ನು ಪಡೆದು ಗೃಹಸ್ಥಾಶ್ರಮ ಸ್ವೀಕಾರಮಾಡಬೇಕು. ದೇಶಸಂಚಾರವಿಲ್ಲದೆ ವಿದ್ಯಾಭ್ಯಾಸವು ಪೂರ್ತಿಯಾಗುವದಿಲ್ಲ.

**ವಿಶ್ವವಿದ್ಯಾಲಯಗಳು :** ವೇದಯುಗದಲ್ಲಿ ಸಮಿತಿ, ಸಮಾಜ, ಪರಿಷತ್ತು ಗಳಲ್ಲಿ ವಿವಾದಗಳೂ ಪಾಂಡಿತ್ಯಪ್ರದರ್ಶನಗಳೂ ನಡೆಯುತ್ತಿದ್ದವು.[136] ಕ್ರಿ.ಪೂ. ೮ನೆಯ ಶತಾಬ್ದದಿಂದ ಕಾಶೀ, ತಕ್ಷಶಿಲಾ ಮುಂತಾದ ಸ್ಥಳಗಳು ಪ್ರೌಢವಿದ್ಯೆಯ ಕೇಂದ್ರಗಳಾದವು. ರಾಜಶೇಖರನ ಕಾವ್ಯಮೀಮಾಂಸೆ,

---

[134] ಸತ್ಯಂವದ, ಧರ್ಮಂಚರ, ಸ್ವಾಧ್ಯಾಯಾನ್ಮಾ ಪ್ರಮದಃ> ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋಭವ. ಪ್ರಜಾತಂತುಂಮಾವ್ಯವಚ್ಛೇತ್ಸೀಃ

—ತೈ. ಉಪ. I, ೧ ff.

ಆಚಾರ್ಯಾತ್ಪಾದಮಾದತ್ತೇ ಪಾದಂ ಶಿಷ್ಯಃ ಸ್ವಮೇಧಯಾ | ಕಾಲೇನಪಾದಮಾದತ್ತೇ ಪಾದಂ ಸಬ್ರಹ್ಮಚಾರಿಭಿಃ || ಕಾಲೇನಪಾದಂ ಲಭತೇತಥಾಯಂ ತಥಾಚಪಾದಂ ಗುರುಯೋಗತಶ್ಚ | ಉತ್ಸಾಹಯೋಗೇನ ಚ ಪಾದಮೃಚ್ಛೇತ್ ಶಾಸ್ತ್ರೇಣಪಾದಂಚ ತತೋಽಭಿಯಾತಿ || ಸನತ್ಸುಜಾತೀಯ—I-೧೩.

ವಿದ್ಯಾವಿವಾದಾಯ ಧನಂಮದಾಯಶಕ್ತಿಃ ಪರೇಷಾಂ ಪರಪೀಡನಾಯ | ಮಷ್ಟಸ್ಯ ಸಾಧೋಃ ವಿಪರೀತಮೇತತ್ ಜ್ಞಾನಾಯ ದಾನಾಯ ಚ ರಕ್ಷಣಾಯ || ಸಾಕ್ಷರಾ ವಿಪರೀತಾಶ್ಚೇತ್ ರಾಕ್ಷಸಾಃ ●

[135] ಇದು ಈಗ ಕಾಶೀಯಾತ್ರೆಯೆಂಬ ಪ್ರಹಸನವಾಗಿ ಪರಿಣಮಿಸಿದೆ.

[136] ಛಾಂದೋಗ್ಯ V, ೩-೧ ; ಬೃ. ಉಪ. V, ೧.

ಸಮನ್ತಭದ್ರನ ಚರಿತ್ರೆಗಳಿಂದ ಪಾಟಲೀಪುತ್ರ, ವಿದಿಶಾ, ದಶಪುರ (ಮನ್ದಸರ್), ವಾರಾಣಸೀ, ಕಾಂಚೀ, ಕರಹಾಟ ಪಟ್ಟಣಗಳೂ, ಕಾಶ್ಮೀರ, ಪುಣ್ಡ್ರ, ಮಾಳವ, ಸಿನ್ಧು, ಠಕ್ಕ ವಿಷಯಗಳೂ ಪಾಣ್ಡಿತ್ಯಪರೀಕ್ಷೆ ಮಾಡುವ ಸ್ಥಾನಗಳಾಗಿದ್ದವೆಂದು ತಿಳಿದುಬರುವದು. ಇವುಗಳಿಗೆ ಘಟಿಕಾಸ್ಥಾನಗಳೆಂದು ಹೆಸರು. ಮಯೂರಶರ್ಮನು ತನ್ನ ಗುರುವಾದ ವೀರಶರ್ಮನೊಡನೆ ಇನ್ನೂ ಹೆಚ್ಚು ವಿದ್ಯಾರ್ಜನೆ ಮಾಡಲು ಕಂಚಿಗೆ ಹೋದನು. ಅಕಲಂಕನು ಕಂಚಿಯ ಘಟಿಕೆಯಲ್ಲಿ ಬೌದ್ಧರನ್ನು ಗೆದ್ದನು. ಘಟಿಕಾಯನ್ತ್ರಗಳಿದ್ದುದರಿಂದಲೂ ಅಘಟಿತ ಘಟನಾಪಟುಗಳಾದ ವಿದ್ವಾಂಸರಿದ್ದುದರಿಂದಲೂ ಘಟಿಕಾಸ್ಥಾನಗಳೆಂದು ಹೆಸರಾಯಿತು. ತಮಿಳುಶಾಸನಗಳು ಇವರನ್ನು ಗಟಿಕೆಯಾರ' ಎಂದು ಹೇಳುವವು. ಇಲ್ಲಿನ ಪರೀಕ್ಷೆಗಳಲ್ಲಿ ಸಾಮಾನ್ಯತೇರ್ಗಡೆಯಾದವರು ಘಟಿಕಾ ಸಾಮಾನ್ಯರು. ಮೇಲ್ತರದಲ್ಲಿ ಉತ್ತೀರ್ಣರಾದವರು ಘಟಿಕಾಸಾಹಸರು. ಘಟಿಕಾಸ್ಥಾನಗಳಲ್ಲಿ ಹದಿನಾಲ್ಕು ಅಥವಾ ಹದಿನೆಂಟು ಮಹಾವಿದ್ಯೆಗಳನ್ನು ಬೋಧಿಸುತ್ತಿದ್ದರು.[187] ವಿಶ್ವವಿದ್ಯಾಲಯಗಳಲ್ಲಿ ಎಲ್ಲ ಮತೀಯರೂ ತಮ್ಮ ತಮ್ಮ ಶಾಸ್ತ್ರಗಳನ್ನು ಕಲಿಯಲು ಅವಕಾಶವಿದ್ದಿತು. ಬೌದ್ಧಾಚಾರ್ಯನಾದ ದಿವಾಕರ ಮಿತ್ರನ ಆಶ್ರಮದಲ್ಲಿ ಇತರ ಮತಾನುಯಾಯಿಗಳೂ ಇದ್ದರೆಂದು ಬಾಣನು ಹೇಳುವನು.[188]

ಕರ್ಣಾಟಕದಲ್ಲಿ ಹನ್ನೊಂದನೆಯ ಶತಾಬ್ದದಿಂದ ಬೆಳಗಾಮೆಯಲ್ಲಿ ಪರ್ವತಾಮ್ನಾಯದ ಮೂವರಕೋಣೆ ಸಂತತಿಯ ಶಕ್ತಿಪರಿಷೆ ಕಾಳಾಮುಖಸ್ಥಾನವಾದ ಕೋಡಿಮಠವು ಪ್ರಸಿದ್ಧ ವಿಶ್ವವಿದ್ಯಾಲಯವಾಗಿದ್ದಿತು. ಈ ಮಠದ ಆಚಾರ್ಯಪರಂಪರೆಯಲ್ಲಿ ಕೇದಾರಶಕ್ತಿ, ಶ್ರೀಕಣ್ಠಶಕ್ತಿ, ಸೋಮೇಶ್ವರ, ವಿದ್ಯಾಭರಣ, ಜ್ಞಾನಶಕ್ತಿ, ವಾಮಶಕ್ತಿ, ಗೌತಮಶಕ್ತಿ, ಇಮ್ಮಡಿವಾಮಶಕ್ತಿ,

---

[187] ವಾಯು I, ೬೧-೭೯ ; ಗರುಡ. ೨೨೪-೨೧, ರಘುವಂಶ. V, ೨೧ ; *E. I.* VIII. p. ೨೮೭. *E. I.* XVIII, p. ೫. ಪವಿತ್ರಾನ್ಯೇವಹಿ ಚತುರ್ದಶ ಅಷ್ಟಾದಶವಾ ವಿದ್ಯಾಸ್ಥಾನಾನಿ ಧರ್ಮಪ್ರಮಾಣತ್ವೇನಪರಿ ಗೃಹೀತಾನಿ ವೇದೋಪವೇದಾಂಗಾಷ್ಟಾದಶ ಧರ್ಮಸಂಹಿತಾ ಪುರಾಣಶಾಸ್ತ್ರ ಶಿಕ್ಷಾ ದಣ್ಡನೀತಿ ಸಂಜ್ಞಕಾನಿ—ಕುಮಾರಿಲ. ತನ್ತ್ರವಾರ್ತಿಕ, ಪು. ೨೦೧. ಜೈನರಲ್ಲೂ ಚತುರ್ದಶ ಮಹಾವಿದ್ಯೆಗಳಿದ್ದವು. ಚತುರ್ದಶ ಮಹಾವಿದ್ಯಾಸ್ಥಾನಾನಾಂಪಾರಗಾ ಇಮೇ—ಜಿನಸೇನ ಮಹಾಪುರಾಣ. I, ೧.

[188] ಆರ್ಹತೈಃ ಮಸ್ಕರಿಭಿಃ ಶ್ವೇತಪಟೈಃ ಪಾಣ್ಡುರಭಿಕ್ಷುಭಿಃ ಭಾಗವತೈರ್ವರ್ಣಿಭಿಃ ಕೇಶಲುಂಛಕೈಃ ಕಾಪಿಲೈಃ ಲೋಕಾಯತಿಕೈಃ ಜೈನೈಃ ಕಣಾದೈಃ ಔಪನಿಷದೈಃ ಈಶ್ವರ ಕಾರಣಿಕೈಃ ಕಾರನ್ಧಮಿಭಿಃ ಧರ್ಮಶಾಸ್ತ್ರಿಭಿಃ ಪೌರಾಣಿಕೈಃ ಸಾಪ್ತತನ್ತವೈಃ ಶೈವೈಃ ಶಾಬ್ದಿಕೈಃ ಪಾಂಚರಾತ್ರಿಕೈಶ್ಚಾನ್ಯೈಃ—ಹರ್ಷಚರಿತ, ಪು. ೩೧೬.

ಇಮ್ಮಡಿಶ್ರೀಕಣ್ಠ, ಮುಮ್ಮಡಿವಾಮಶಕ್ತಿ ಎಂಬುವರು ಕ್ರಮವಾಗಿ ಅಧ್ಯಕ್ಷರಾಗಿದ್ದು ಸುಮಾರು ಇನ್ನೂರು ವರುಷ ಭರತಖಂಡದಲ್ಲೆಲ್ಲ ವಿಖ್ಯಾತಿಹೊಂದಿ ಶಾಖಾಮಠಗಳನ್ನು ಸ್ಥಾಪಿಸಿ ವಿದ್ಯಾದಾನಮಾಡಿದರು. ಈ ಕೋಡಿಮಠವನ್ನು ಶಾಸನಗಳಲ್ಲಿ ಹೀಗೆ ವರ್ಣಿಸಿದೆ:

> "ಸಾಂಗಋಗ್ಯಜುಸ್ಸಾಮಾಥರ್ವ ಚತುರ್ವೇದಸ್ವಾಧ್ಯಾಯಸ್ಥಾನಮುಂ, ಕೌಮಾರ, ಪಾಣಿನೀಯ, ಶಾಕಟಾಯನ ಶಬ್ದಾನುಶಾಸನ ವ್ಯಾಕರಣ ಸ್ಥಾನಮುಂ, ನ್ಯಾಯ ವೈಶೇಷಿಕ ಸಾಂಖ್ಯ ಬೌದ್ಧಾದಿ ಷಡ್ದರ್ಶನವ್ಯಾಖ್ಯಾನ ಸ್ಥಾನಮುಂ, ಲಾಕುಳ ಸಿದ್ಧಾನ್ತ ಪಾತಂಜಲಾದಿ ಯೋಗಶಾಸ್ತ್ರ ವ್ಯಾಖ್ಯಾನ ಸ್ಥಾನಮುಂ, ದೀನಾನಾಥ ಪಂಗ್ವನ್ಧ ಬಧಿರ ಕಥಕ ಗಾಯಕ ವಾದಕ ವಾಂಶಿಕ ನರ್ತಕ ವೈತಾಳಿಕ ನಗ್ನ ಭಗ್ನ ಕ್ಷಪಣಕ ಏಕದಣ್ಡಿ ತ್ರಿದಣ್ಡಿ ಹಂಸ ಪರಮಹಂಸಾದಿ ನಾನಾ ದೇಶಭಿಕ್ಷು ಜನಾನಿವಾರ್ಯಾನ್ನದಾನ ಸ್ಥಾನಮುಂ, ನಾನಾನಾಥರೋಗಿಜನ ಭೈಷಜ್ಯಸ್ಥಾನಮುಂ. ಸಕಲ ಭೂತಾಭಯಸ್ಥಾನಮುಂ"

ವಿಶ್ವವಿದ್ಯಾಲಯದ ಅಧ್ಯಾಪಕರಿಗೆ ರಾಜರು ಭೂದಾನ, ಗೃಹಗಳು, ಸೇವಕರು ಪಾರಿತೋಷಕಗಳಿಗಾಗಿ ವ್ಯವಸ್ಥೆಮಾಡಿದ್ದರು. ಇವಕ್ಕೆ ಭಟ್ಟವೃತ್ತಿಗಳೆಂದು ಹೆಸರು. ವೀರಚೋಳನ ಪೀರಾಪುರ ಶಾಸನದಲ್ಲಿ ವ್ಯಾಕರಣ ವ್ಯಾಖ್ಯಾನ, ಮೀಮಾಂಸಾವ್ಯಾಖ್ಯಾತೃ, ವೇದಾನ್ತೋಪಾಧ್ಯಾಯ, ಋಗ್ಯಜುಸ್ಸಾಮವೇದ ಉಪಾಧ್ಯಾಯರು, ರೂಪಾವತಾರ (ವ್ಯಾಕರಣ) ವ್ಯಾಖ್ಯಾನ, ಪುರಾಣಪಾಠಕ, ವೈದ್ಯ, ಅಂಬಷ್ಠ, ವಿಷವಾದಿನ್, ಜ್ಯೋತಿರ್ವಿದ ಮುಂತಾದವರಿಗೆ ವೃತ್ತಿಗಳನ್ನು ಹಂಚಿದಂತೆ ಹೇಳಿದೆ. ವಿದ್ಯಾರ್ಥಿಗಳ ಅಶನ ವಸನ ತೈಲಾಭ್ಯಂಜನಾದಿಗಳಿಗೂ ಏರ್ಪಾಡುಮಾಡುತ್ತಿದ್ದರೆಂದು ಅನೇಕ ಶಾಸನಗಳಿಂದ ತಿಳಿದುಬರುವದು.

ತಕ್ಷಶಿಲಾ, ವಿಕ್ರಮಶೀಲಾ, ನಾಲಂದಾ ವಿಶ್ವವಿದ್ಯಾಲಯಗಳ ವಿಷಯವಾಗಿ ಬೌದ್ಧಗ್ರಂಥಗಳಿಂದ ಹೆಚ್ಚು ವಿಷಯಗಳು ತಿಳಿದುಬರುವವು. ನಾಲಂದಾ ನಿವೇಶನದ ಶೋಧನೆಯಿಂದಲೂ, ಶಾಸನಗಳಿಂದಲೂ ಚೀಣ ಪ್ರವಾಸಿಗಳ ಲೇಖನೆಗಳಿಂದಲೂ ನಾಲಂದಾ ವಿಶ್ವವಿದ್ಯಾಲಯವು ಕ್ರಿ.ಶ. ೬ ನೇ ಶತಾಬ್ದದಿಂದ ಹದಿಮೂರನೆಯ ಶತಾಬ್ದದ ವರೆಗೂ ಜಗತ್ಪ್ರಸಿದ್ಧವಾಗಿದ್ದಿತೆಂದು ಕಂಡುಬರುವದು. ಗುಪ್ತಚಕ್ರವರ್ತಿಗಳು, ವರ್ಧನರು, ಮೌಖರಿಗಳು, ಪಾಲರು, ಸೇನರು, ದ್ವೀಪಾಂತರದ ರಾಜರು ಈ ವಿದ್ಯಾಲಯವನ್ನು ಪೋಷಿಸಿದರು. ತಡೆಯಿಲ್ಲದೆ ಯಾವಾಗಲೂ ದಾನನಡೆಯುತ್ತಿದ್ದುದರಿಂದ (ನ+ಅಲಂ+ದಾ) ನಾಲಂದಾ ಎಂದು ಹೆಸರುಬಂದಿತು. ಇಲ್ಲಿ ಎಂಟು

ಮಹಾಪಾಠಶಾಲೆ (College) ಗಳಿದ್ದವು. ಒಂದೊಂದು ಮಹಾಪಾಠಶಾಲೆಯಲ್ಲೂ ಮುವ್ವತ್ತು ನಲ್ವತ್ತು ಉಪನ್ಯಾಸಾಂಗಣಿ (Lecture Halls) ಗಳಿದ್ದವು. ಅಲ್ಲದೆ ಧರ್ಮಗುಂಜವೆಂಬ ಪುಸ್ತಕಭಣ್ಡಾರಕ್ಕೆ ರತ್ನಸಾಗರ, ರತ್ನೋದಧಿ, ರತ್ನರಂಜಕಗಳೆಂಬ ಮೂರು ಪ್ರತ್ಯೇಕ ಕಟ್ಟಡಗಳು ಮೀಸಲಾಗಿದ್ದವು. ಜ್ಯೋತಿಷ್ಕರಿಗಾಗಿ ಒಂದು ನಿರೀಕ್ಷಣಗೃಹವಿದ್ದಿತು (Observatory). ಎಲ್ಲಕ್ಕೂ ಮೇಲೆ ಒಂದು ಘಟೀಯನ್ತ್ರವು ಸರಿಯಾದ ಕಾಲವನ್ನು (Standard Time) ಮಗಧ ದೇಶಕ್ಕೆಲ್ಲ ಸೂಚಿಸುತ್ತಿತ್ತು. ಮಹಾಯಾನ ಬೌದ್ಧ ವಿದ್ಯೆಯೇ ಮುಖ್ಯವಾಗಿದ್ದರೂ ವೇದ ವೇದಾಂಗ, ಯೋಗ, ಹೇತುವಿದ್ಯಾ, ಶಬ್ದವಿದ್ಯಾ, ತನ್ತ್ರಶಾಸ್ತ್ರ ಮುಂತಾದುವನ್ನೂ ಬೋಧಿಸುತ್ತಿದ್ದರು. ವಿದ್ಯಾರ್ಥಿಗೆ ಸುಲಭವಾಗಿ ಪ್ರವೇಶವು ಸಿಗುತ್ತಿರಲಿಲ್ಲ. ಬಂದ ವಿದ್ಯಾರ್ಥಿಯನ್ನು "ದ್ವಾರಪಣ್ಡಿತ"ರು ಕಠಿನವಾಗಿ ಪರೀಕ್ಷಿಸಿ ಅರ್ಹನೆಂದು ತೋರಿದರೆ ಸೇರಿಸಿಕೊಳ್ಳುತ್ತಿದ್ದರು. ಹತ್ತು ಪ್ರವೇಶಾರ್ಥಿಗಳಲ್ಲಿ ಎಂಟು ಜನರು ನಿರಾಶೆಯಿಂದ ಹಿಂದಿರುಗುತ್ತಿದ್ದರೆಂದು ಯುವಾನ್‌ಚ್ವಾಂಗನು ಹೇಳುವನು. ಪ್ರವೇಶವು ಇಷ್ಟು ಕಠಿನವಾದರೂ ಹತ್ತು ಸಾವಿರಕ್ಕಿಂತ ಹೆಚ್ಚಾಗಿ ವಿದ್ಯಾರ್ಥಿಗಳಿದ್ದರು. ಇವರಲ್ಲಿ ಬ್ರಹ್ಮಚಾರಿಗಳೂ ಗೃಹಸ್ಥರೂ ಇದ್ದರು.

ನಾಲಂದಾ ವಿಶ್ವವಿದ್ಯಾಲಯದ ಅಧ್ಯಕ್ಷನಿಗೆ ಮಾತ್ರ ಪಣ್ಡಿತನೆಂಬ ಬಿರುದಿದ್ದಿತು. ವಿಕ್ರಮಶೀಲ ವಿದ್ಯಾಲಯದಲ್ಲಿ ಪಂಡಿತನೆಂಬುದು ತೇರ್ಗಡೆಯಾದವನ ಚಿಹ್ನೆ (Degree). ನಾಲಂದಾ ಸ್ಥಾನಪತಿಗಳಾದ ನಾಗಾರ್ಜುನ, ಅಸಂಗ, ಆರ್ಯದೇವ, ವಸುಬನ್ಧು, ದಿಙ್ನಾಗ, ಧರ್ಮಕೀರ್ತಿ, ಧರ್ಮಪಾಲ, ಶೀಲಭದ್ರರಂತಹ ವಿದ್ವಾಂಸರು ಜಗತ್ಪ್ರಖ್ಯಾತರಾಗಿದ್ದು ದೇಶಾಂತರಗಳಿಂದಲೂ ಶಿಷ್ಯರನ್ನು ಆಕರ್ಷಿಸುತ್ತಿದ್ದರು. ಇತರ ಅಧ್ಯಾಪಕರೂ, ಕರ್ಮದಾನ, ವಿಹಾರಪಾಲ ಮುಂತಾದ ಅಧಿಕಾರಿಗಳೂ ಮೂರುಸಾವಿರವಿದ್ದರು.

ವಿದ್ಯಾರ್ಥಿಗಳು ವೈದಿಕ ಬ್ರಹ್ಮಚಾರಿಗಳಂತೆಯೇ ಒಬ್ಬ ಗುರುವನ್ನನುಸರಿಸಿ ಶುಶ್ರೂಷೆ ಮಾಡಬೇಕಾಗಿದ್ದಿತು. ದೇಹದಣ್ಡವಿರಲಿಲ್ಲ. ಅಲ್ಪಾಪರಾಧಗಳಿಗೆ ಪ್ರಾಯಶ್ಚಿತ್ತವೂ ಮಹಾಪರಾಧಗಳಿಗೆ ವಿದ್ಯಾಲಯದಿಂದ ಹೊರಡಿಸುವುದೇ ಪದ್ಧತಿಯಾಗಿದ್ದಿತು. ವಿದ್ಯಾರ್ಥಿಗಳು ವೇತನವನ್ನು ಕೊಡಬೇಕೆಂಬ ನಿಯಮವಿರಲಿಲ್ಲ. ಆದರೆ ಉಪಪನ್ನರಾದವರು ಯಥಾಶಕ್ತಿ ತಮ್ಮ ವಸತಿ ಅಶನ ವಸನಗಳ ಖರ್ಚನ್ನು ತಾವೇ ವಹಿಸಿಕೊಳ್ಳುತ್ತಿದ್ದರು. ವಿದ್ಯಾರ್ಥಿಗಳು ಸೊಂಟದಲ್ಲಿ ಒಂದು ಮೇಲೊಂದು ಬಟ್ಟೆಗಳನ್ನೂ ಚಳಿಗಾಲದಲ್ಲಿ ಕಿವಿ ಮುಚ್ಚುವಂತಹ ಕುಲ್ಲಾವಿಗಳನ್ನೂ ಹಾಕಿಕೊಳ್ಳುತ್ತಿದ್ದರು. ಪ್ರಾತಃಸ್ನಾನ

ಪ್ರಾರ್ಥನೆಗಳನಂತರ ಸ್ವಲ್ಪ ಗಂಜಿ, ಮಧ್ಯಾಹ್ನದಲ್ಲಿ ಪುಷ್ಕಳವಾದ ಊಟ, ಸಾಯಂಕಾಲದಲ್ಲಿ ಅಲ್ಪಾಹಾರಗಳನ್ನೂ ವಿದ್ಯಾರ್ಥಿಗಳಿಗೆ ಹಾಕುತ್ತಿದ್ದರು. ಈ ಖರ್ಚಿಗಾಗಿ ನೂರು ಗ್ರಾಮಗಳು ದತ್ತಿಯಾಗಿದ್ದವು. ಭಿಕ್ಷುಣಿಯರಿಗೂ ಪ್ರವೇಶವಿದ್ದಿತು. ಆದರೆ ಅವರು ಏಕಾಂತದಲ್ಲಿ ವಿದ್ಯಾರ್ಥಿಗಳ ಕೋಣೆಗಳನ್ನು ಪ್ರವೇಶಿಸಕೂಡದು. ಎಷ್ಟೋ ಸಾವಿರ ವಿದ್ಯಾರ್ಥಿಗಳೂ ಭಿಕ್ಷುಣಿಯರೂ ಇದ್ದರೂ ಅಸಭ್ಯವರ್ತನೆಗೆ ಒಂದು ಉದಾಹರಣೆಯೂ ಸಿಕ್ಕಿಲ್ಲವೆಂದು ಯುವಾನ್‌ಚ್ವಾಂಗ್ ಮತ್ತು ಇತ್ಸಿಂಗರು ಹೇಳುವರು.

ಚದುರಂಗ, ಚೆಂಡಾಟ, ಕುಸ್ತಿ, ಬಿಲ್ಲುಗಾರಿಕೆ, ಕುಣಿಯುವದು, ಚಿಣ್ಣಿ ಕೋಲು, ಮರಕೋತಿ, ಉಪಾಧ್ಯಾಯರನ್ನು ಮರೆಮಾಚಿ ಅಣಕಿಸುವುದೇ ವಿದ್ಯಾರ್ಥಿಗಳ ವ್ಯಾಯಾಮ ವಿನೋದಗಳಾಗಿದ್ದವು. ಸಭಾಗೃಹಗಳಲ್ಲಿ ಅಲ್ಲದೆ ಯಾವಾಗಲೂ ಇಲ್ಲಿನ ವಿದ್ಯಾರ್ಥಿಗಳು ಪ್ರಪಂಚದಲ್ಲಿರುವ, ಇಲ್ಲದಂತಹ ಎಲ್ಲ ವಿಚಾರಗಳನ್ನೂ ಸರ್ವಜ್ಞರಂತೆ ಚರ್ಚಿಸುತ್ತಾ ಕಾಲಕಳೆಯುವರೆಂದು ಇತ್ಸಿಂಗನು ಹೇಳಿರುವನು.

ಉಪನ್ಯಾಸಕಾಲವನ್ನು ಘಟೀಯನ್ತ್ರದಿಂದ ನಿರ್ಣಯಿಸುತ್ತಿದ್ದರು. ಧರ್ಮಶಾಸ್ತ್ರಗಳಲ್ಲಿ ಹೇಳಿರುವಂತೆ ಅನಧ್ಯಯನ ದಿನಗಳಿದ್ದುವು. ಆರು ವರ್ಷದ ಹುಡುಗರು ಮಹೇಶ್ವರದೇವನ ಸಿದ್ಧವ್ಯಾಕರಣವನ್ನೂ, ಎಂಟನೆಯ ವರ್ಷದಲ್ಲಿ ಪಾಣಿನಿ ಸೂತ್ರಗಳನ್ನೂ, ಎಂಟು ತಿಂಗಳಲ್ಲಿ ಧಾತುಪಾಠವನ್ನೂ, ಇಪ್ಪತ್ತನೆಯ ವರ್ಷದ ವರೆಗೂ ಕವನಮಾಡುವದು, ವೃತ್ತಸೂತ್ರ, ಕಾವ್ಯ, ನಾಟಕ, ಅಲಂಕಾರಶಾಸ್ತ್ರಗಳನ್ನೂ, ಅನಂತರ ಹೇತುವಿದ್ಯಾ, ನ್ಯಾಯದ್ವಾರ ತರ್ಕಶಾಸ್ತ್ರ, ಪತಂಜಲಿಯ "ಚೂಣಿ", ಭರ್ತೃಹರಿಶಾಸ್ತ್ರ, ಅಭಿಧರ್ಮಕೋಶ ಮುಂತಾದುವನ್ನು ಅಭ್ಯಾಸಮಾಡುತ್ತಿದ್ದರು. ನಾಲಂದಾ ವಿಶ್ವವಿದ್ಯಾಲಯಕ್ಕೆ ಚೀಣ, ಜಪಾನ್, ಕೊರಿಯ, ತುರ್ಕಿಸ್ತಾನ, ಸುಮಾತ್ರ, ಚಂಪ, ಜಾವ, ಸಿಂಹಳ, ಗಾನ್ಧಾರ, ಯವನ, ಕಾಂಭೋಜ, ಪಾರಸೀಕ, ಕಂಚಿ, ಸುವರ್ಣದ್ವೀಪ (ಬರ್ಮ), ಟಿಬೆಟ್ ಮುಂತಾದ ದೂರದೇಶಗಳಿಂದ ಸಮುದ್ರ, ಹಿಮಾಲಯಪರ್ವತ, ಮರುಭೂಮಿಗಳನ್ನೂ ದಾಟಿಕೊಂಡು ಪ್ರಯಾಣದ ಅಪಾಯ ಪ್ರಯಾಸಗಳನ್ನು ಲೆಕ್ಕಿಸದೆ ವಿದ್ಯಾರ್ಥಿಗಳು ಬರುತ್ತಿದ್ದರು. ಇಂತಹ ಪ್ರಖ್ಯಾತವಾದ ವಿದ್ಯಾಲಯವನ್ನು ಕ್ರಿ.ಶ. ೧೨೦೫ರಲ್ಲಿ ಮಹಮ್ಮದೀಯರು ನಾಶಮಾಡಿದರು. ಅಲ್ಲಿದ್ದ ವಿದ್ವಾಂಸರು ಪರದೇಶಗಳಿಗೆ ಹೋಗಿ ಭಾರತೀಯ ಸಂಸ್ಕೃತಿಯನ್ನು ಹರಡಿದರು.

ಕ್ರಿಸ್ತಪೂರ್ವ ಎಂಟನೆಯ ಶತಾಬ್ದದಿಂದ ಮೌರ್ಯರ ಕಾಲದವರೆಗೂ ತಕ್ಷ

ಶಿಲೆಯು ಕಾಶಿಗಿಂತಲೂ ಪ್ರಸಿದ್ಧವಾಗಿದ್ದಿತು. ಇಲ್ಲಿ ಹದಿನಾರು ವರ್ಷ ಮೀರಿದವರಿಗೆ ಪ್ರವೇಶ ದೊರೆಯುತ್ತಿದ್ದಿತು. ಉಪಪನ್ನರು "ಆಚರಿಯ ಭಾಗ"ವನ್ನು ಕೊಟ್ಟು ಸ್ವಂತಗೃಹಗಳಲ್ಲಿ ವಾಸವಾಡುತ್ತಿದ್ದರು. ಬಡ ವಿದ್ಯಾರ್ಥಿಗಳು "ಧಮ್ಮಂತೇವಾಸಿ"ಗಳಾಗಿ ಗುರುಶುಶ್ರೂಷೆ ಮಾಡುತ್ತಿದ್ದರು. ಅಲ್ಲದೆ ನಗರದ ಗೃಹಸ್ಥರು ಹಬ್ಬ ಸಮಾರಾಧನೆ ಸಮಯುಗಳಲ್ಲಿ ಬಡ ವಿದ್ಯಾರ್ಥಿಗಳನ್ನು ಊಟಕ್ಕೆ ಕರೆದು ವಸ್ತ್ರದಕ್ಷಿಣೆಗಳನ್ನು ಕೊಡುತ್ತಿದ್ದರು. ಕೆಲವರು ವಿದ್ಯಾರ್ಥಿಗಳು "ವಾರ"ದಿಂದಲೂ ಜೀವಿಸುತ್ತಿದ್ದರು. ಮದುವೆಯಾದ ವಿದ್ಯಾರ್ಥಿಗಳು ಬೇರೆ ಮನೆಗಳಲ್ಲಿರುತ್ತಿದ್ದರು. "ರಾತ್ರಿಹೊತ್ತಿನಲ್ಲಿ ಓದಿ ಏಕೆ ಕಣ್ಣು ಹಾಳುಮಾಡಿಕೊಳ್ಳುತ್ತೀರಿ" ಎಂದು ಈ ವಿದ್ಯಾರ್ಥಿಗಳ ಹೆಂಡತಿಯರು ದೀಪವನ್ನಾರಿಸಿಬಿಟ್ಟು ಪುಸ್ತಕವನ್ನು ಕಿತ್ತುಕೊಳ್ಳುತ್ತಿದ್ದರು.[139] ಒಬ್ಬ ಮುಖ್ಯೋಪಾಧ್ಯಾಯನು ಐನೂರು ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿದ್ದನು. ಈತನಿಗೆ ಜ್ಯೇಷ್ಠ ವಿದ್ಯಾರ್ಥಿಗಳು ಸಹಾಯಕರಾಗಿದ್ದರು. ಇಂತಹ ಉತ್ತಮ ವಿದ್ಯಾರ್ಥಿಗಳನ್ನು ಪರೀಕ್ಷಿಸಿ ಯೋಗ್ಯನಾದವನಿಗೆ ಉಪಾಧ್ಯಾಯನು ತನ್ನ ಮಗಳನ್ನು ಮದುವೆಮಾಡುತ್ತಿದ್ದನು. ಗುರುಕುಲದಲ್ಲಿ ವಿದ್ಯಾರ್ಥಿಗಳು ಕೋಳಿಕೂಗುವ ಹೊತ್ತಿಗೆ ಎದ್ದು ಪಾಠಗಳನ್ನು ಮನನ ಮಾಡುತ್ತಿದ್ದರು. ಕೆಲವರು ಸೋಮಾರಿ ವಿದ್ಯಾರ್ಥಿಗಳು "ಈ ಹಾಳು ಕೋಳಿಯಿಂದ ನಿತ್ಯವೂ ನಿದ್ರಾಭಂಗವಾಗುತ್ತಲ್ಲಾ" ಎಂದು ಆ ಬಡಕೋಳಿಯನ್ನು ಕೊಂದುಬಿಡುತ್ತಿದ್ದರು. ವಿದ್ಯಾರ್ಥಿಗಳು ಹದಿನೆಂಟು "ಶಿಪ್ಪ" ಮೂರುವೇದ, "ಹತ್ಥಿಸುತ್ತ", "ಮನ್ತ", "ಲುದ್ಧಕವಿಜ್ಜಾ", ಸಾಮುದ್ರಿಕ ಜ್ಯೋತಿಷ ಮುಂತಾದುವನ್ನು ಕಲಿಯುತ್ತಿದ್ದರು, ಅರಣ್ಯದಲ್ಲಿದ್ದ "ಇಸಿ" (ಋಷಿ)ಗಳಿಂದಲೂ ಅನೇಕರು ವಿದ್ಯಾಭ್ಯಾಸಮಾಡುತ್ತಿದ್ದರು.

ಕ್ಷತ್ರಿಯರು ರೂಪ, ಲೇಖ, ಗಣನಾ, ವ್ಯವಹಾರ, ದಣ್ಡನೀತಿ, ವಾರ್ತಾ, ಆನ್ವೀಕ್ಷಕೀ, ಪುರಾಣ, ಇತಿಹಾಸ, ಧನುರ್ವಿದ್ಯಾ, ಅರ್ಥಶಾಸ್ತ್ರ, ಧರ್ಮ ಶಾಸ್ತ್ರಗಳಿಗೆ ಗಮನಕೊಡುತ್ತಿದ್ದರು. ವೈಶ್ಯರು ವಾರ್ತಾ, ಪಶುಪಾಲನೆ, ಅಳತೆ-ತೂಕಗಳು, ಲಾಭ-ನಷ್ಟ, ಲೇವಾದೇವಿ ಮುಂತಾದುವನ್ನೂ, ಶೂದ್ರರು ವ್ಯವಸಾಯ ಗೃಹಕೈಗಾರಿಕೆಗಳನ್ನೂ ಕಲಿಯುತ್ತಿದ್ದರು. ಆಯಾ ಕುಲದ ಗಣ, ಶ್ರೇಣಿ, ಪೂಗಗಳು (Guilds) ಕೈಗಾರಿಕೆಗಳನ್ನು ಕಲಿಸಲು ಹೊಣೆ ಹೊತ್ತಿದ್ದವು. ಈ ಕಸಬುಗಳು ವಂಶಪರಂಪರೆಯಾಗಿ ಬರುತ್ತಿದ್ದುದರಿಂದ ಮನೆಯ ಯಜಮಾನನೇ ಗುರುವಾಗಿದ್ದನು. ಆದುದರಿಂದ ಪ್ರಾಚೀನ ವಿದ್ಯಾ

---

[139] Fausböll, *Jātakas*, I, p. 300, 463.

ಭ್ಯಾಸಪದ್ಧತಿಯು ಕೇವಲ ವಾಙ್ಮಯ ವಿಷಯಕ (Literary) ವಾಗಿರದೆ ಜೀವನೋಪಾಯಕ್ಕೂ ಸಹಾಯಕವಾಗಿದ್ದಿತು.

ಮೊಘಲ್ ಚಕ್ರವರ್ತಿಗಳ ಕಾಲದಲ್ಲಿ ನಮ್ಮ ದೇಶದ ಚರಿತ್ರೆಯಲ್ಲೆಲ್ಲ ಮೊದಲು ಒಂದು ವಿದೇಶೀಯ ಭಾಷೆಯು (ಪಾರಸೀ) ರಾಜಭಾಷೆಯಾಯಿತು. ಅನಂತರ ಮೆಕಾಲೆಯ ಪ್ರಭಾವದಿಂದ ಆಂಗ್ಲಭಾಷೆಗೆ ಪ್ರಾಮುಖ್ಯತೆ ಯುಂಟಾಗಿ ದೇಶಭಾಷೆಗಳು ಕ್ಷೀಣವಾದವು. ಈಚೆಗೆ ಪ್ರಾಚೀನ ಗುರುಕುಲ ಪದ್ಧತಿಯನ್ನು ಮರೆಯದೆ ಆಧುನಿಕ ಕಾಲಕ್ಕೆ ತಕ್ಕಂತೆ ವಿದ್ಯಾಭ್ಯಾಸಕ್ರಮ ವನ್ನು ಮಾರ್ಪಡಿಸಬೇಕೆಂದು ಪ್ರಯತ್ನಗಳಾಗುತ್ತಿವೆ.

**ವ್ಯಾಯಾಮ ವಿನೋದಗಳು :** ಮಲ್ಲಯುದ್ಧ, ಚದುರಂಗ, ಅಶ್ವಕ್ರೀಡೆ (Polo), ಎಲೆಯಾಟ (ಇಸ್ಪೀಟ್) ಭರತಖಂಡದಲ್ಲಿ ಹುಟ್ಟಿ ಪ್ರಪಂಚದಲ್ಲೆಲ್ಲ ಹರಡಿಕೊಂಡವು. ಮಲ್ಲರು ಒಂದು ಜನಾಂಗವಾಗಿದ್ದರು. ಪ್ರಾಚೀನ ಈಜಿಪ್ಟ ಮತ್ತು ಗ್ರೀಸ್ ದೇಶಗಳ ಚಿತ್ರಗಳಲ್ಲಿ ಕಂಡುಬರುವ ಕುಸ್ತಿಯ ಪಟ್ಟುಗಳು ಭಾರತೀಯರಲ್ಲೇ ಇದ್ದವು. ಜಪಾನಿನಲ್ಲಿ ಇದರಿಂದ ಜೂಡೊ (ಜುಜಿಟ್ಸು) ಎಂಬ ಕಲೆಯು ಬೆಳೆಯಿತು. ಈಗಲು ಕೂಡ ಗಾಮಾನಂತಹ ಪೈಲ್ವಾನರು ಪ್ರಪಂಚದಲ್ಲೆಲ್ಲ ಪ್ರತಿಸ್ಪರ್ಧೆ ಇಲ್ಲದಂತೆ ಕೀರ್ತಿಗಳಿಸಿರುವರು.

ಭರತಖಂಡದ ಚತುರಂಗ ಆಟಕ್ಕೆ ಪರ್ಷಿಯ ಭಾಷೆಯಲ್ಲಿ ಷಟ್ರಂಜ್ ಎಂದು ಹೆಸರಾಗಿ, ಸ್ಪೈನ್ ದೇಶಕ್ಕೆ ವ್ಯಾಪಿಸಿ ಅಲ್ಲಿ ಚೆಸ್ ಎಂಬ ಹೆಸರನ್ನು ಹೊಂದಿ ಯೂರೋಪ್ ಖಂಡದಲ್ಲಿ ಪ್ರಚಾರಕ್ಕೆ ಬಂದಿತು. ಅಶ್ವಕ್ರೀಡೆಯು ಕೂಡ ಭರತಖಂಡದಲ್ಲಿಯೇ ಹುಟ್ಟಿತು. ಕ್ರಿ.ಪೂ. ೧೪೦೦ ರಲ್ಲಿಯೇ ಅಶ್ವ ಶಾಸ್ತ್ರದ ಸಂಕೇತಗಳು ಬೊಘಾಸ್ ಕಾಯಶಾಸನ, ಟೆಲ್ ಅಲ್ ಅಮಾರ್ನ ಪತ್ರಗಳಲ್ಲಿ ಕಂಡುಬರುವವು. ಕಿ-ಕಿ ಕುಲಿಶ್ ಎಂಬ ಮಿಟಾನ್ನೈ ಜನಾಂಗಕ್ಕೆ ಸೇರಿದ ಅಶ್ವಶಾಸ್ತ್ರಜ್ಞನು ಇಂಡೋ-ಯೂರೋಪಿಯನ್ ಭಾಷೆಯಲ್ಲಿ ಕುದುರೆ ಗಳನ್ನು ಲಾಯಗಳಲ್ಲಿ ಪಳಗಿಸುವ ರೀತಿಯನ್ನು ವರ್ಣಿಸಿರುವನು.[140] ರಾಷ್ಟ್ರ

[140] ಈ ಗ್ರಂಥದಲ್ಲಿ ಅ-ಇ-ಕ, ವ-ಅರ್-ತ-ನ್-ನ (ಏಕವರ್ತನ), ತಿ-ಎರು-ಉ-ಉರ್-ತ-ನ್-ನ (ತ್ರಿವರ್ತನ), ಪ-ಅನ್-ಸ-ವ-ಅರ್-ತ-ಅನ್-ನ (ಪಂಚವರ್ತನ) ; ಸ-ಅತ್-ತ-ವ-ಅರ್-ತ-ಅನ್-ನ (ಸಪ್ತವರ್ತನ), ನ್-ಅ-ವ-ಅರ್-ತ-ಅನ್-ನ (ನವವರ್ತನ) ಎಂಬ ಪದಗಳು ಬಹುಶಃ ಶಾಲಿಹೋತ್ರನ ಅಶ್ವಶಾಸ್ತ್ರದಿಂದ ಬಂದವೆಂದು ಊಹಿಸಲಾಗಿದೆ. ಆಸ್ಕಂದಿತ, ಧೌರಿತಕ, ರೇಚಿತ, ವಲ್ಗಿತ, ಪ್ಲುತಗಳೆಂಬ ಅಶ್ವಗಳ ಪಂಚಧಾರಾ ಧಾಟಿಗಳಾಗಿದ್ದಿರ ಬಹುದು. Jensen : *Indische Zähl Wörter. Preuss AK Wiss. 1919. p. 367* ; Förrer : *Z. D. M. G.* 76. p, 174, 1922 : Lesney : *Archiv Orientalni* IV, p. 257.

ಕೊಟ ಇನ್ನ್ರನ ಶ್ರವಣಬೆಳಗೊಳ ಶಾಸನದಲ್ಲಿಯೂ, ಚಾಳುಕ್ಯ ಸೋಮೇಶ್ವರನ ಅಭಿಲಷಿತಾರ್ಥಚಿನ್ತಾಮಣಿಯಲ್ಲೂ ಅಶ್ವಕನ್ದುಕ ಕ್ರೀಡೆ (Polo)ಯ ವರ್ಣನೆಯಿದೆ. ಇದು ಪರ್ಶಿಯ ದೇಶದಲ್ಲಿ ಚೌಘಾನ್ ಎಂಬ ಹೆಸರನ್ನು ಪಡೆಯಿತು. ಮೊಘಲರು ಹಿಂದೂದೇಶಕ್ಕೆ ಇದನ್ನು ಪುನಃ ತಂದರು. ಅನಂತರ ಬ್ರಿಟಿಷರಿಂದ ಪುನಃ ಪಾಶ್ಚಾತ್ಯ ದೇಶಗಳಿಗೆ ವ್ಯಾಪಿಸಿತು. ಈಗಲೂ ಟಿಹ್ರಿ ಗಾಹ್ವಾರ್ಲ್, ಮಣಿಪುರ, ನೇಪಾಳ ಮುಂತಾದ ಹಿಮಾಲಯ ಪ್ರಾಂತಗಳಲ್ಲಿ ಜನರಿಗೆ ಈ ಆಟದಮೇಲೆ ಅಭಿಲಾಷೆ ಹೆಚ್ಚು. ಜೋಧ್‌ಪುರದ ಪೋಲೋ ಕೂಟದವರು ಪ್ರಪಂಚದಲ್ಲೆಲ್ಲ ಪ್ರಖ್ಯಾತರಾಗಿರುವರು.

"ಇಸ್ಪೀಟ್" ಆಟವು ಪೂರ್ವಕಾಲದ "ದಶಾವತಾರ" (ಗಂಜೀಫಾ) ಆಟದಿಂದ ಹುಟ್ಟಿತು. ನಾಲ್ಕು ವಿಧವಾದ ಎಲೆಗಳಲ್ಲಿ "ಹಾರ್ಟ್ಸ್" ಬ್ರಾಹ್ಮಣರನ್ನು, "ಕ್ಲಬ್" ಕ್ಷತ್ರಿಯರನ್ನು, "ಡೈಮಂಡ್" ವೈಶ್ಯರನ್ನು "ಸ್ಪೇಡ್ಸ್" ಶೂದ್ರರನ್ನು ಸೂಚಿಸುವವು. ದ್ಯೂತ (ಅಕ್ಷಕ್ರೀಡೆ), ಚೌಕಬಾರ, ಕೊಯ್ಯಂಗೊಟ್ಟ, ಯೋಗಾಸನ ಮುಂತಾದುವು ಇತರ ಮನೆಯೊಳಗಣ ಆಟ (Indoor Games)ಗಳಾಗಿದ್ದವು. ಕುಸ್ತಿ, ಕುದುರೆಜೂಜು, ಬೇಟೆ, ಚಿಣ್ಣಕೋಲು, ಚೆಂಡಾಟ, ದೊಂಬರಾಟ, ಕೋಳಿ, ಟಗರು, ಕೋಣ, ಆನೆಗಳ ಕಾಳಗ, ವಿಕಟ, ವಿಪ್ರವಿನೋದಿಗಳ ಕೌಶಲ್ಯ, ನಾಟಕ, ಗೊಂಬೆಯಾಟ, ಕೋಲಾಟ, ಯಕ್ಷಗಾನ, ಜಲಕ್ರೀಡೆ, ಉದ್ಯಾನವಿನೋದ, ಗಾಳಿಪಟ, ಹರಿಕಥಾಕಾಲಕ್ಷೇಪ, ಶತಾವಧಾನ, ಸಮಸ್ಯಾಪೂರಣೆ, ಅನ್ತ್ಯಾಕ್ಷರೀ, ಭರತನಾಟ್ಯ, ಸಂಗೀತ, ಕಾಮನ ಹಬ್ಬ, ಯುಗಾದಿ ಸುಗ್ಗಿಕಾಲಗಳ ಕುಣಿತ, ಬಿಲ್ಲುಗಾರಿಕೆ, ಕೋಲು ವರಸೆ, ಕತ್ತಿವರಸೆ ಮುಂತಾದ ಅನೇಕ ವ್ಯಾಯಾಮ ಕ್ರೀಡೆಗಳು ಬಹಳ ಕಾಲ ದಿಂದಲೂ ಒಂದಿವೆ. ಗ್ರೀಕರು "ಒಲಂಪಿಕ್ ಸ್ಪರ್ಧೆ" ಮುಂತಾದುವುಗಳಿಂದ ಕೇವಲ ದೇಹದಾರ್ಢ್ಯಕ್ಕೆ ಮಾತ್ರ ಹೆಚ್ಚು ಗಮನ ಕೊಡುತ್ತಿದ್ದರು. ಆದರೆ ಭಾರತೀಯರು ಅತಿಯಾಗಿ ಮಾಂಸಖಂಡಗಳನ್ನು ಮಾತ್ರ ಬೆಳಸದೆ ಸರ್ವಾಂಗಗಳೂ ಸಮಪ್ರಮಾಣದಲ್ಲಿ ಬೆಳೆಯಬೇಕೆಂದು, "ಶರೀರಮಾದ್ಯಂ ಖಲುಧರ್ಮ ಸಾಧನಂ" ಎಂಬಂತೆ, ವ್ಯಾಯಾಮಗಳಿಗೆ ಉಚಿತ ಪ್ರಾಮುಖ್ಯತೆಯನ್ನು ಕೊಡುತ್ತಿದ್ದರು.

**ವಾನಪ್ರಸ್ಥಾಶ್ರಮ:** ಗೃಹಸ್ಥಾಶ್ರಮದ ಅನಂತರ ತಲೆನರೆತ ಮೇಲೆ ವಾನಪ್ರಸ್ಥಾಶ್ರಮವು ವಿಹಿತ. ವಾನಪ್ರಸ್ಥರಿಗೆ ವೈಖಾನಸ, ಶ್ರಾಮಣಕ ಎಂಬ ಹೆಸರುಗಳೂ ಉಂಟು. ಇವರಲ್ಲಿ ಆಚಾರಭೇದದಿಂದ ಸಪತ್ನೀಕ-ಅಪತ್ನೀಕ, ಅಥವಾ ಪಚಮಾನಕ-ಅಪಚಮಾನಕರೆಂಬ ಪಂಗಡಗಳಿದ್ದವು. ಸಪತ್ನೀಕರಲ್ಲಿ

ಔದುಮ್ಬರ, ವೈರಿಂಚ, ವಾಲಖಿಲ್ಯ ಫೇನಪರೆಂದೂ, ಪಚಮಾನಕರಲ್ಲಿ ಸರ್ವಾರಣ್ಯಕ (ಇನ್ದ್ರಾವಸಿಕ್ತ, ರೇತೋವಸಿಕ್ತ), ವೈತುಷಿಕ, ಹಣ್ಣು ಗೆಡ್ಡೆ ತಿನ್ನುವವರೂ, ಹಣ್ಣನ್ನು ಮಾತ್ರ ತಿನ್ನುವವರು, ಶಾಕಾಹಾರ ಉಳ್ಳವರೂ ಎಂದೂ, ಅಪಚಮಾನಕರಲ್ಲಿ ಉನ್ಮಜ್ಜಕ, ಪ್ರವೃತ್ತಾಶಿ, ಮುಖೇನಾದಾಯಿ, ತೋಯಾಹಾರ, ವಾಯುಭಕ್ಷ ಎಂಬ ಭೇದಗಳಿದ್ದವು.[141] ಶಕುನ್ತಲೆಯು ಕಣ್ವಾಶ್ರಮದಲ್ಲಿ ವೈಖಾನಸವ್ರತವನ್ನಾಚರಿಸುತ್ತಿದ್ದಳು. ಯಯಾತಿ, ಧೃತರಾಷ್ಟ್ರ, ಕುನ್ತೀ, ಸತ್ಯಭಾಮೆ, ಪಾಣ್ಡವರೇ ಮುಂತಾದವರು ವಾನಪ್ರಸ್ಥರಾಗಿದ್ದು ಮಹಾಪ್ರಸ್ಥಾನ ಮಾಡಿದರು.

**ಸನ್ನ್ಯಾಸಾಶ್ರಮ :** ಸನ್ನ್ಯಾಸವು ಪ್ರಪಂಚದ ಹೊಣೆಗಾರಿಕೆಯನ್ನು ತಪ್ಪಿಸಿಕೊಳ್ಳುವ (Escapism) ಮಾರ್ಗವಲ್ಲ. ಕುಟುಂಬಪೋಷಣೆಗೆ ಏರ್ಪಾಟು ಮಾಡದೆ ಗುರುಹಿರಿಯರ ಮತ್ತು ಸಂಬಂಧಿಗಳ ಅನುಮತಿ ಪಡೆಯದೆ ಸನ್ನ್ಯಾಸವನ್ನು ಸ್ವೀಕರಿಸಿದರೆ ರಾಜದಣ್ಡನೆಯಾಗಬೇಕು.[142] ಅಷ್ಟಶ್ರಾದ್ಧಗಳನ್ನು ಮಾಡಿ ಎಲ್ಲರ ಅನುಮತಿಯನ್ನು ಪಡೆದು ಪ್ರೈಷಮಂತ್ರಗಳನ್ನುಚ್ಚರಿಸಿ ಸರ್ವಭೂತಾಭಯಪ್ರದಾನಪೂರ್ವಕ ಆಚಾರ್ಯನಿಂದ ಕೌಪೀನ, ದಣ್ಡ, ಕಮಂಡಲು ಮುಂತಾದುವನ್ನು ಗ್ರಹಿಸಿ ಪರ್ಯಂಕಶೌಚ ಯೋಗಪಟ್ಟಗಳನ್ನು ಪಡೆದನಂತರ ಸನ್ನ್ಯಾಸಿಯಾಗುವನು. ಆತುರಸನ್ನ್ಯಾಸದಲ್ಲಿ ಪ್ರೈಷೋಚ್ಚಾರ ಅಭಯಪ್ರದಾನಗಳು ಸಾಕು. ಸನ್ನ್ಯಾಸಿಗಳಿಗೆ ಚಾತುರ್ಮಾಸ್ಯ, ಭಿಕ್ಷೆ, ಕ್ಷೌರ ಇತ್ಯಾದಿ ವಿಷಯಗಳಲ್ಲಿ ಅನೇಕ ನಿಯಮಗಳಿವೆ. ಪರಿವ್ರಾಜಕರಲ್ಲಿ ಕುಟೀಚಕ, ಬಹೂದಕ, ಹಂಸ, ಪರಮಹಂಸರೆಂಬ ಭೇದಗಳಿವೆ. ಹಂಸ ಪರಮಹಂಸರು ಏಕದಣ್ಡಿಗಳು, ಶಿಖಾಯಜ್ಞೋಪವೀತಗಳ ಅವಶ್ಯಕತೆಯಿಲ್ಲ. ಕೆಲವರು ತ್ರಿದಣ್ಡಿ ಸನ್ನ್ಯಾಸವನ್ನು ಅವೈದಿಕವೆಂದು ಹೇಳುವರು. ಆರೂಢಪತಿತರು ಚಣ್ಡಾಲರಂತೆ ಗಣಿಸಲ್ಪಡುವರು. ಶ್ರೀ ಶಂಕರರು ತೀರ್ಥ, ಆಶ್ರಮ, ವನ, ಅರಣ್ಯ, ಗಿರಿ, ಪರ್ವತ, ಸಾಗರ, ಸರಸ್ವತೀ, ಭಾರತೀ, ಪುರೀ ಎಂಬ ದಶನಾಮವ್ಯವಸ್ಥೆ ಮಾಡಿದರು. ತುರೀಯಾತೀತ ಮತ್ತು ಅವಧೂತರಿಗೆ ಮಾತ್ರ ನಿಯಮಗಳು ಕಡಿಮೆ. ಸನ್ನ್ಯಾಸಿಯು ಒಂದೇ ಸ್ಥಳದಲ್ಲಿ ಮೂರು ರಾತ್ರಿಗಳಿಗಿಂತ ಹೆಚ್ಚಾಗಿರಬಾರದು, ಪಲ್ಲಕ್ಕಿಯಲ್ಲಿ ಕುಳಿತುಕೊಳ್ಳಬಾರದು. ಆದರೂ ಕಾಲಕ್ರಮೇಣ ಲೋಕಸಂಗ್ರಹಕ್ಕಾಗಿ ಮಠಗಳು ಪ್ರಬಲವಾದುವು. ಅನ್ನದಾನ, ವಿದ್ಯಾದಾನ,

---

[141] ವೈಖಾನಸ ಸೂತ್ರ. VIII, ೭ ; ಬೌ. ಧ. ಸೂ. III, ೩ ; ರಾಮಾಯಣ, ಅರಣ್ಯ X, ೨೬ ; ಬೃಹತ್ಪರಾಶರ XI, ೨೯೦ ; ಮನು. VI, ೨ ;

[142] ಅರ್ಥಶಾಸ್ತ್ರ. II, ೧.

ಅಭಯ ದಾನಗಳು ನಡೆಯುತ್ತಿದ್ದವು. ಸನ್ಯಾಸಿಗಳು ಸೋಮಾರಿಗಳಾಗಿ ಪ್ರಪಂಚ ವಿಮುಖರಾಗಿರದೆ ರಾಜ್ಯಸ್ಥಾಪನೆಗೆ ಸಹಾಯಮಾಡುತ್ತಿದ್ದರೆಂದು ತಳಕಾಡು ಗಂಗ, ಹೊಯ್ಸಳ, ಪರಿವ್ರಾಜಕಮಹಾರಾಜ, ವಿಜಯನಗರ, ಮರಾಟರ ಸಾಮ್ರಾಜ್ಯಚರಿತ್ರೆಗಳಿಂದ ತಿಳಿದುಬರುವದು. ಮುಹಮ್ಮದೀಯರ ದಾಳಿಯಿಂದ ಹಿಂದೂಧರ್ಮವನ್ನು ರಕ್ಷಿಸಲು ಶ್ರೀ ವಿದ್ಯಾರಣ್ಯರು ವಿಜಯನಗರವನ್ನು ಸ್ಥಾಪಿಸಿದರು. ರಾಮದಾಸರೂ ಬ್ರಹ್ಮಾನಂದ ಸರಸ್ವತಿಗಳೂ ಮರಾಟ ಸಾಮ್ರಾಜ್ಯದ ಸೂತ್ರಧಾರಿಗಳಾಗಿದ್ದರು. ಅಕ್ಬರನು ಹಿಂದುಗಳನ್ನು ಹಿಂಸಿಸುತ್ತಿದ್ದಾಗ ಮಧುಸೂದನ ಸರಸ್ವತಿಗಳು ಕ್ಷತ್ರಿಯ, ವೈಶ್ಯ, ಶೂದ್ರರಿಗೂ ಸನ್ಯಾಸವನ್ನು ಕೊಟ್ಟು ಶಸ್ತ್ರಧಾರಣೆ ಮಾಡಿಸಿದರು. ಶೂದ್ರಸ್ತ್ರೀಯರೂ ಕೂಡ ಗಿರಿ, ಪುರೀ ಸನ್ಯಾಸಿಗಳಾದರು. ಬಂಗಾಳದಲ್ಲಿ ಈ ಸನ್ಯಾಸಿಗಳು ದಂಗೆಯೆದ್ದು ಬ್ರಿಟಿಷರ ಆಳಿಕೆಯನ್ನೇ ನಾಶಮಾಡಲು ಯತ್ನಿಸಿದರು.[148] ಮಠಾಧಿಪತಿಗಳಲ್ಲಿ ಮಾನಮರ್ಯಾದೆಗಳಿಗಾಗಿ ಎಷ್ಟೇ ಕಲಹಗಳಿದ್ದರೂ ಒಟ್ಟಿನಲ್ಲಿ ಸನ್ಯಾಸಿಗಳಿಂದ ಭಾರತೀಯ ಸಂಸ್ಕೃತಿಗೆ ಮಹದುಪಕಾರವಾಗಿದೆ. ಲೋಕೋದ್ಧಾರವಾಗಬೇಕಾದರೆ ನಿಷ್ಕಾಮಕರ್ಮ ಮಾಡುವ, ನಿರ್ಭಯನಾದ, ಪಕ್ಷಪಾತರಹಿತನಾದ ಸನ್ಯಾಸಿಯಿಂದಲೇ ಆಗಬೇಕಾದುದರಿಂದ ಸನ್ಯಾಸಾಶ್ರಮವನ್ನು ಗರ್ಹಣೆ ಮಾಡುವದು ಅವಿಚಾರಿತ ರಮಣೀಯ.

---

148 *J. R. A. S.* ೧೯೨೫. p. ೪೭೯ ; *Calcutta Review*, ೧೯೩೦.

# ೭. ಆರ್ಥಿಕ ಸ್ಥಿತಿ

ಜ್ಞಾನೇ ಕರ್ಮಣಿಯೋಗೇಚ ವಾರ್ತಾಯಾಂ ದಣ್ಡಧಾರಣೇ |
ಯಾವಾನರ್ಥೋ ನೃಣಾಂತಾತ! ತಾವಾಂಸ್ತ್ವಹಂಚತುರ್ವಿಧಃ ||

ಶ್ರೀ ಭಾಗವತ.

ಭರತಖಣ್ಡವು ಪ್ರಾಚೀನಕಾಲದಲ್ಲಿ ಅಪಾರಸಂಪತ್ತುಳ್ಳ ದೇಶವೆಂದು ಪ್ರಖ್ಯಾತವಾಗಿದ್ದಿತು. ಇಲ್ಲಿನ ಐಶ್ವರ್ಯದ ಕತೆಗಳನ್ನು ಕೇಳಿ ಶಕ, ಯುವನ, ಚೀಣ, ಹೂಣ, ಅರಬ್ಬೀಯು, ತುರುಷ್ಕ, ಆಫ್‌ಘನ್, ಪಠಾಣ, ಮೊಘಲ್, ಪೋರ್ಚುಗಿಸ್, ಡಚ್, ಫ್ರೆಂಚ್, ಇಂಗ್ಲಿಷ್ ಜನರು ನಮ್ಮ ದೇಶಕ್ಕೆ ಬಂದು ವ್ಯಾಪಾರದಿಂದಲೂ, ಕೊಳ್ಳೆಯಿಂದಲೂ ಸಂಪತ್ತನ್ನು ಸೂರೆಮಾಡಲು ಯತ್ನಿಸಿದರು. ಅಲೆಕ್ಸಾಂಡರೊಡನೆ ಬಂದ ಯವನರೂ, ಮೆಗಾಸ್ತನೀಸ್, ಡೈಮಾಕಸ್ ಮುಂತಾದ ರಾಯಭಾರಿಗಳೂ, ಪ್ರವಾಸಿಗಳಾದ ಅಪೋಲೋನಿಯಸ್, ಕಾಸ್ಮಾಸ್ ಇಂಡಿಕೋಪ್ಲ್ಯುಸ್ಟೀಸ್, ಸುಲೇಮಾನ್, ಇದ್ರಿಸಿ, ಅಲ್ಬರೂನಿ, ಇಬನ್‌ಬಟೂಟ, ಯುವಾನ್‌ಚ್ವಾಂಗ್, ಫಾಹಿಯಾನ್, ಇತ್ಸಿಂಗ್, ನಿಕೋಲೊಕಾಂತಿ, ಅಬ್ದುರ್ರಸಾಕ್, ನಿಕಿಟಿನ್, ಪೈಸ್, ಪ್ರೀಟ್ರೊಡೆಲ್ಲವಾಲ್ಲಿ, ಬಾರ್ಬೋಸ, ಮಾನ್‌ಸೆರಾಟ್, ಲಿನ್‌ಷೋಟೆನ್, ಸರ್‌ಥಾಮಸ್‌ರೋ, ಮಾರ್ಕೊಪೋಲೋ ಮುಂತಾದವರು ಭರತಖಂಡದ ಧನಧಾನ್ಯ ವಸ್ತುವಾಹನ ಕನಕರತ್ನ ಸಂಪತ್ತಿಯನ್ನು ಕಂಡು ಬೆರಗಾಗಿ ವರ್ಣಿಸಿರುವರು.

**ವ್ಯವಸಾಯ**: ಈಗಿನಂತೆಯೇ ಜನರ ಅಧಿಕಾಂಶ ವ್ಯವಸಾಯದಿಂದ ಜೀವಿಸುತ್ತಿದ್ದರು. ವೇದಯುಗದಲ್ಲಿ ಭೂಮಿಯನ್ನು ವಾಸ್ತು (ಕ್ಷೇತ್ರ), ಹುಲ್ಲುಗಾವಲು ಅರಣ್ಯವೆಂಬುದಾಗಿ ವಿಭಾಗಿಸಿ ವಾಸ್ತು ಅಥವಾ ಕ್ಷೇತ್ರದಲ್ಲಿ ಹಲಕ್ಕೆ ಎತ್ತು ಹೂಡಿ "ಸೀತಾ" (ನೇಗಿಲಸಾಲು)ಮಾಡಿ ಧಾನ, ವ್ರೀಹಿ, ಗೋಧೂಮ, ಶಾಲಿ ಮುಂತಾದ ದವಸಗಳನ್ನು ಬೆಳೆಯುತ್ತಿದ್ದರು. ಕ್ರಿ.ಪೂ. ಆರನೆಯ ಶತಾಬ್ದದಲ್ಲಿ ಸಾವಿರ "ಕರಿಸ" (೮೦೦೦ ಎಕರೆ) ಪ್ರಮಾಣದ ಹೊಲಗಳಿದ್ದವು. ಬೌದ್ಧಗ್ರಂಥಗಳಲ್ಲಿ ಕುಟುಂಬಿಕರು ಶಾಲಿ, ವ್ರೀಹಿ, ತಂಡುಲ, ಯವ, ಕಂಗು, ತಿಲ, ಮಾಷ, ಮುದ್ಗ, ಏರಣ್ಡ, ಮರಿಚ, ಜೀರಕ, ಶೃಂಗಬೇರ, ತಂಬುಲ, ನಾಳಿಕೇರ, ಪೂಗ, ಅಲಾಬು, ಕೂಷ್ಮಾಣ್ಡ, ತ್ರಿಪುಷ, ಉರ್ವಾರುಕ ಮುಂತಾದುವನ್ನು ಬೆಳೆಯುತ್ತಿದ್ದರೆಂದು ಹೇಳಿದೆ. ಮೌರ್ಯರ ಕಾಲದಲ್ಲಿ ವ್ಯಾವಸಾಯವು ಹೆಚ್ಚಾಗಿ, ರೈತರಿಗೆ ಸಹಾಯಮಾಡುವದಕ್ಕೂ

ಕ್ಷಾಮನಿವಾರಣೆಗೂ ಮುಖ್ಯಸ್ಥಳಗಳಲ್ಲಿ ಸರ್ಕಾರದ ಕಣಜಗಳಿದ್ದವೆಂದು ಅರ್ಥಶಾಸ್ತ್ರದಿಂದಲೂ ಶಾಸನಗಳಿಂದಲೂ ತಿಳಿದುಬರುವದು. ಸರ್ಕಾರವೂ ಧರ್ಮಾತ್ಮರೂ ನೀರಾವರಿ ಕೆಲಸಕ್ಕಾಗಿ ಕೊಳ, ಅಣಕಟ್ಟೆ, ಕಾಲುವೆ, ಸರೋವರಗಳನ್ನು ನಿರ್ಮಿಸುತ್ತಿದ್ದರು. ಗಿರಿನಾರ್ ಬಳಿ ಸುದರ್ಶನವೆಂಬ ಸರೋವರವು ಮೌರ್ಯಚನ್ದ್ರಗುಪ್ತನ ಕಾಲದಿಂದ ಗುಪ್ತ ಸ್ಕನ್ದಗುಪ್ತನ ಕಾಲದ ವರೆಗೆ ಸುಮಾರು ೮೦೦ ವರ್ಷ ನೀರನ್ನು ಒದಗಿಸುತ್ತಿದ್ದಿತು. ನದಿಗಳಿಗೆ ಅಣೆಕಟ್ಟು ಕಟ್ಟಿ ಕೆರೆಗಳನ್ನು ಮಾಡುವದರಲ್ಲಿ ಭಾರತೀಯರು ಅದ್ಭುತ ಕೌಶಲ್ಯವನ್ನು ತೋರಿಸಿರುವರು. ದೇಶದಲ್ಲಿ ಎಂತಹ ವಿಪ್ಲವವಾದರೂ, ಹತ್ತಿರವೇ ಯುದ್ಧ ನಡೆಯುತ್ತಿದ್ದರೂ ವ್ಯವಸಾಯವು ಮಾತ್ರ ನಿರಾಟಂಕವಾಗಿ ಸಾಗಬೇಕೆಂದು ಎಲ್ಲರೂ ಪ್ರಯತ್ನಿಸುತ್ತಿದ್ದರು. ಉದ್ಯಾನಗಳಲ್ಲಿ ತೆಂಗು, ವೀಳೆಯದೆಲೆ, ಅಡಿಕೆ, ಹಣ್ಣು ಹೂಗಳನ್ನು ಬೆಳಸುತ್ತಿದ್ದರು. ಮೊಘಲರು ಬಂದ ನಂತರ ಕಾಶ್ಮೀರ, ಪಂಜಾಬ್, ಆಗ್ರ ಮುಂತಾದ ಸ್ಥಳಗಳಲ್ಲಿ ಮನೋರಂಜಕವಾದ ಶಾಲಿಮಾರ್, ಲಾಲ್‌ಬಾಗ್ ಮುಂತಾದ ಉದ್ಯಾನಗಳು ನಿರ್ಮಿತವಾದವು.

**ಕೈಗಾರಿಕೆಗಳು** : ಕೈಗಾರಿಕೆ ಸಂಘಗಳು (Craft Guilds) ಭರತಖಂಡದಲ್ಲಿ ವೇದಯುಗದಿಂದಲೂ ಇದ್ದವು. ತನ್ತುವಾಯ, ರಜಕ, ಚಿಪ್ಪಿಗ, ಉಪ್ಪಾಲಿಗ, ಸೂದ, ಲೋಹಕಾರ, ಚರ್ಮಕಾರ, ಕುಂಭಕಾರ, ಗಂಧಕಾರ, ಮಾಲಾಕಾರ, ಸ್ವರ್ಣಕಾರ, ರಥಕಾರ, ವರ್ಧಕಿ, ತಕ್ಷಕ, ತೈಲಕಾರ, ನಲಕಾರ, ವೇಣುಕಾರ (ಮೇದರ) ಮುಂತಾದವರ ಶ್ರೇಣಿಗಳಿದ್ದವೆಂದು ಶಾಸನಗಳಿಂದ ತಿಳಿದುಬರುವದು. ಮುಖ್ಯಪಟ್ಟಣಗಳಲ್ಲಿ ಒಂದೊಂದು ಕಸುಬಿಗೆ ಒಂದೊಂದು ಬೀದಿಯು ಮೀಸಲಾಗಿದ್ದಿತು. ತಯಾರಾದ ವಸ್ತುಗಳು ಕೊಂಡುಕೊಳ್ಳಲು ಅರ್ಹವೆಂದು ಮಾರುಕಟ್ಟೆಯ ಅಧಿಕಾರಿಗಳು ಮುದ್ರೆಹಾಕುತ್ತಿದ್ದರು. ಕುಲ, ಶ್ರೇಣಿ, ಗಣಗಳು ತಮ್ಮ ಕಸುಬಿಗೆ ಬೇಕಾದ ನಿಯಮಗಳನ್ನು ಮಾಡಿಕೊಳ್ಳಲು ಅಧಿಕಾರ ಪಡೆದಿದ್ದವು. ಚರ ಮತ್ತು ಸ್ಥಿರ ಆಸ್ತಿಯನ್ನು ಸಂಪಾದಿಸಬಹುದು. ಅಧಿಕಾರಿಗಳನ್ನು ಚುನಾಯಿಸಿಕೊಳ್ಳಬಹುದು. ಅಪರಾಧಿಗಳನ್ನು ದಣ್ಡಿಸಬಹುದು, ಬೆಲೆಯನ್ನು ನಿರ್ಧರಿಸಬಹುದು. ಸಂಘರಕ್ಷಣೆಗಾಗಿ ತಕ್ಕಷ್ಟು ಸೈನ್ಯವನ್ನಿಟ್ಟುಕೊಳ್ಳಬಹುದು. ತಮ್ಮ ಸಂಘದ ಚಿಹ್ನೆಯುಳ್ಳ ನಾಣ್ಯಗಳನ್ನೂ ಮುದ್ರಿಸಬಹುದು. ಒಟ್ಟು ಲಾಭವನ್ನು ಸಮವಾಗಿ ಹಂಚಿಕೊಳ್ಳುವದಕ್ಕೂ ಲೆಕ್ಕಗಳನ್ನು ಪರಿಶೋಧಿಸುವದಕ್ಕೂ ಪಂಚಾಯತರನ್ನು ನೇಮಿಸಬಹುದು. ರಾಜನು ಪ್ರಬಲಕಾರಣಗಳಿಲ್ಲದೆ ಈ ಶ್ರೇಣಿಗಳ ವ್ಯವಹಾರದಲ್ಲಿ ಪ್ರವೇಶಿಸು

ತ್ತಿರಲಿಲ್ಲ. ಗುಪ್ತರ ಕಾಲದ ಮಂದಸರಶಾಸನದಿಂದ ಇಂತಹ ಶ್ರೇಣಿಗಳಿಗೆಷ್ಟು ಸ್ವಾತಂತ್ರ್ಯವಿದ್ದಿತೆಂದು ಕಂಡುಬರುವದು. ಒಂದು ನೆಯ್ಗೆಗಾರರ ಶ್ರೇಣಿಯು ಮೊದಲು ಲಾಟದೇಶದಲ್ಲಿದ್ದು ರಾಜನಿಂದ ಆಹ್ವಾನಹೊಂದಿ ಒಟ್ಟಿಗೆ ಬಂದು ದಶಪುರ (ಮಂದಸರ್)ದಲ್ಲಿ ನೆಲಸಿತು. ಈ ಶ್ರೇಣಿಯ ಸದಸ್ಯರು ಕಾವ್ಯ, ನಾಟಕ, ಅಲಂಕಾರ, ಧನುರ್ವಿದ್ಯಾ, ಗಾನ್ಧರ್ವವಿದ್ಯಾ ಮುಂತಾದವುಗಳಲ್ಲಿಯೂ ಪರಿಣತರಾಗಿದ್ದು ದಶಪುರದಲ್ಲಿ ವಾಪೀ, ಕೂಪ, ತಟಾಕ, ಆರಾಮ, ಸೂರ್ಯದೇವಾಲಯಗಳನ್ನು ಸ್ಥಾಪಿಸಿದರು. ಚೋಳ, ಚಾಳುಕ್ಯ, ಹೊಯ್ಸಳ, ವಿಜಯನಗರ ಸಾಮ್ರಾಜ್ಯಗಳಲ್ಲಿಯೂ ಇಂತಹ ಸಂಘಗಳು ಪ್ರಬಲವಾಗಿದ್ದವು. ಕಾಶ್ಮೀರದ ಶಾಲು, ಡಾಕಾ ಮಸ್ಲಿನ್, ಕಾಶೀ ಪೀತಾಂಬರ, ಕಂಚಿಯ ಪಾತ್ರೆಗಳು, ಮಧುರೆ ತಕ್ಷಶಿಲಾ ಮುಂತಾದ ಪಟ್ಟಣಗಳ ಒಡವೆಗಳೂ ಪ್ರಾಚೀನಕಾಲದಲ್ಲಿ ಪರದೇಶಗಳಲ್ಲಿಯೂ ಪ್ರಸಿದ್ಧವಾಗಿದ್ದವು. ಹತ್ತೊಂಬತ್ತನೆಯ ಶತಾಬ್ದದ ವರೆಗೂ ಭರತಖಂಡದ ಕೈಗಾರಿಕೆಗಳು ಉನ್ನತ ಸ್ಥಿತಿಯಲ್ಲಿದ್ದವು. ಯನ್ತ್ರಗಳ ಸ್ಪರ್ಧೆಯಿಂದಲೂ, ರಾಜಕೀಯ ಮತ್ತು ಆರ್ಥಿಕ ದಾಸ್ಯದಿಂದಲೂ ಈ ಕಸುಬುಗಳು ಕ್ಷೀಣಿಸುತ್ತ ಬಂದವು.

**ವ್ಯಾಪಾರ:** ವಾಣಿಜ್ಯದಲ್ಲಿ ಲಕ್ಷ್ಮಿಯಿರುವಳೆಂಬುದಕ್ಕೆ ಭರತಖಂಡದ ಪ್ರಾಚೀನ ವ್ಯಾಪಾರಪದ್ಧತಿಯು ನಿದರ್ಶನವಾಗಿದೆ. ಪಶ್ಚಿಮ ದೇಶಗಳ ಫಿನೀಷಿಯನ್, ಪೂರ್ವದ ಚೀಣ ಜನರಂತೆ ಭಾರತೀಯರೂ ವ್ಯಾಪಾರದ ಮೂಲಕ ಪ್ರಪಂಚದ ಅನೇಕ ಭಾಗಗಳೊಡನೆ ಸಂಬಂಧ ಬೆಳಸಿದ್ದರು. ವೇದಯುಗದಲ್ಲ "ಪಣಿ", "ಬೇಕನಾಟ" ಎಂಬವರು ವ್ಯಾಪಾರಗಾರರಾಗಿದ್ದರೆಂದು ತಿಳಿದುಬರುವದು. ಆರ್ಯರು ಕೂಡ ಸಮುದ್ರಯಾನವನ್ನು ಮಾಡುತ್ತಿದ್ದು ವ್ಯಾಪಾರವನ್ನು ತುಚ್ಛವೆಂದು ಗಣಿಸುತ್ತಿರಲಿಲ್ಲ. "ಇನ್ದ್ರಂವಯಂ ವಣಿಜಂ ಹವಾಮಹೇ" ಇತ್ಯಾದಿ ಸೂಕ್ತಗಳು ವಾಣಿಜ್ಯಾಭಿಲಾಷೆಯನ್ನು ಸೂಚಿಸುವವು. ಅನಂತರ ಹರಪ್ಪಸಂಸ್ಕೃತಿಯ ಕಾಲದಲ್ಲಿ ಭರತಖಂಡದ ಪದಾರ್ಥಗಳು ಸುಮೇರು, ಬ್ಯಾಬಿಲೋನಿಯ, ಅಸ್ಸಿರಿಯ, ಟ್ರಾಯ್, ಕ್ರೀಟ್, ಈಜಿಪ್ಟ್ ಮುಂತಾದ ದೇಶಗಳಲ್ಲಿ ವ್ಯಾಪಿಸಿದ್ದವು. ಈಜಿಪ್ಟ್ ದೇಶದ ರಾಜರೂ, ಯೆಹೂದ್ಯ ರಾಜನಾದ ಸಾಲೊಮನ್, ಅಸ್ಸಿರಿಯ ಚಕ್ರವರ್ತಿಗಳು ಭರತಖಂಡದಿಂದ ನೀಲ (Indigo), ಕಪಿ, ತೋಕೈ (ನವಿಲು) ಅರಿಶೀ (ಅಕ್ಕಿ), ಹವಳ, ಮುತ್ತು, ವೈಡೂರ್ಯ (Beryl), ತೇಗ ಮತ್ತು ಗಂಧದಮರ, ವಜ್ರ ಮುಂತಾದ ನವರತ್ನಗಳು, ಮೆಣಸು, ಲವಂಗ, ಸುಗನ್ಧದ್ರವ್ಯ, ಆಭರಣ, ವಸ್ತ್ರ ಮುಂತಾದುವನ್ನು ಹೇರಳವಾಗಿ ತಮ್ಮ ದೇಶ

ಗಳಿಗೆ ತರಿಸಿಕೊಳ್ಳುತ್ತಿದ್ದರು. ಗ್ರೀಕರೂ ರೋಮನ್ ಜನರೂ ಕೂಡ ಭಾರತೀಯ ವಸ್ತುಗಳಿಗೆ ಮುಗ್ಧರಾಗಿ ವರ್ಷಕ್ಕೆ ೧೦ ಲಕ್ಷ ಪೌಂಡುಗಳಿಗಿಂತ ಹೆಚ್ಚಾಗಿ ಭರತಖಂಡಕ್ಕೆ ಸಲ್ಲಿಸುತ್ತಿರುವರೆಂದು ಪ್ಲಿನಿಯು ಹೇಳುವನು. ಬೌದ್ಧ ಜಾತಕಗಳಲ್ಲಿ ಅಶ್ಮಕ-ಮುಲಕನಾಡಿನ ಒಬ್ಬ ಬ್ರಾಹ್ಮಣ ಗುರುವು ತನ್ನ ಶಿಷ್ಯರೊಡನೆ ಬವೇರು (Babylon) ದೇಶಕ್ಕೆ ಹೋದನೆಂದು ಹೇಳಿದೆ. ಸಿಂಹಳ ಚೀಣ ಬರ್ಮ ಮುಂತಾದ ಪೂರ್ವದೇಶಗಳೊಂದಿಗೂ ವ್ಯಾಪಾರ ನಡೆಯುತ್ತಿತ್ತು. ಕ್ರಿ.ಶ. ೧ನೆಯ ಶತಾಬ್ದದ "ಪೆರಿಪ್ಲೂಸ್" ಎಂಬ ಗ್ರಂಥದಲ್ಲಿ ಬಾರಿಗಾಸ್ಥ (ಭರುಕಚ್ಛ), ಸೊಪಾರ (ಶೂರ್ಪಾರಕ), ಕಲ್ಯಾಣ, ನೇತ್ರ (ನೇತ್ರಾವತಿ—ಮಂಗಳೂರು) ಬಟೆಗಳ (ಭಟ್ಕಲ್), ಮುಸ್ಯೆರಿಸ್ (ಮರಿಚ ಪಟ್ಟಣ—ಕ್ರಾಂಗನೂರ್) ಮುಂತಾದ ರೇವುಪಟ್ಟಣಗಳು ಪಶ್ಚಿಮ ತೀರದಲ್ಲಿ ಪ್ರಸಿದ್ಧವಾಗಿದ್ದವೆಂದು ಹೇಳಿದೆ. ಪ್ಲಿನಿ, ಟಾಲೆಮಿ, ಕಾಸ್ಮಾಸ್ ಇಂಡಿಕೋಪ್ಲೂಸ್ಟೀಸ್ ಎಂಬವರ ಗ್ರಂಥಗಳಿಂದ ಕುಮಾರಿ, ನಾಗಪಟ್ಟಣ, ಕಾವೇರಿ ಪಟ್ಟಣ, ತಾಮ್ರಲಿಪ್ತಿ, ಮತ್ಸ್ಯಪಟ್ಟಣ ಮುಂತಾದವು ಪೂರ್ವತೀರದಲ್ಲಿ ಪ್ರಖ್ಯಾತವಾಗಿದ್ದವೆಂದು ತಿಳಿದುಬರುವದು. ಸಂಘಸಾಹಿತ್ಯವು ಯವನರ ಹಡಗುಗಳು ವಿಶೇಷವಾಗಿ ಬಂದು ಪಾಂಡ್ಯ ಚೋಳ ದೇಶಗಳೊಡನೆ ವ್ಯಾಪಾರ ಮಾಡುತ್ತಿದ್ದವೆಂದು ಹೇಳುವದು. ವಿದೇಶಗಳಿಗೆ ಹತ್ತಿ, ಉಣ್ಣೆ, ರೇಷ್ಮೆ ಬಟ್ಟೆಗಳನ್ನೂ ಮೆಣಸು ಮುಂತಾದುವನ್ನು ರಫ್ತುಮಾಡಿ, ಚಿನ್ನ, ಅಲಸಂದೆ (ಅಲೆಕ್ಸಾಂಡ್ರಿಯದ ಧಾನ್ಯ) ಇತ್ಯಾದಿ ವಸ್ತುಗಳನ್ನು ಆಮದುಮಾಡುತ್ತಿದ್ದರು. ಕ್ರಿ.ಶ. ೫೦ ರಲ್ಲಿ ಹಿಪ್ಪಾಲಿಸ್ ಎಂಬುವನು "ಮಾನ್ಸೂನ್" ವಾಯುಚಲನೆಯನ್ನು ಗೊತ್ತುಹಚ್ಚಿದ ಮೇಲೆ ಪಾಶ್ಚಾತ್ಯರ ಹಡಗುಗಳು ಹದಿನಾರು ವಾರಗಳಲ್ಲಿ ಇಂಡಿಯ ದೇಶವನ್ನು ತಲುಪುತ್ತಿದ್ದವು. ರೋಮನ್ ಸಾಮ್ರಾಜ್ಯವು ಕ್ರಮವಾಗಿ ಕ್ಯಾರ್‌ಕೆಲ್ಲ, ನೆರೋ, ಅಲಾರಿಕ್, ಅಟ್ಟಿಲ ಮುಂತಾದವರಿಂದ ನಾಶವಾಗುತ್ತ ಬರಲು ಪಾಶ್ಚಾತ್ಯ ವ್ಯಾಪಾರವು ಕ್ಷೀಣಿಸಿತು. ಆದರೇ ಇದೇ ಸಮಯದಲ್ಲಿ ಭಾರತೀಯರು ಪೂರ್ವದೇಶಗಳಿಗೆ ವಲಸೆ ಹೋಗಲಾರಂಭಿಸಿದುದರಿಂದ ಚೀಣಾದ ವರೆಗೂ ವ್ಯಾಪಾರವು ವಿಸ್ತರಿಸಿತು. ಈಗಲೂ ಮಲಬಾರಿನಲ್ಲಿ ಚೀಣ ಸಂಸ್ಕೃತಿಯ ಕುರುಹುಗಳು ಕಂಡುಬರುವವು.

ಭರತಖಂಡ ಎಲ್ಲ ರಾಜವಂಶದವರೂ ವಿದೇಶೀಯ ವ್ಯಾಪಾರವನ್ನು ಪ್ರೋತ್ಸಾಹಿಸಿರುವರು. ಉದಾಹರಣೆಗಾಗಿ ಹೊಯ್ಸಳರ ಹದಿಮೂರನೆಯ ಶತಾಬ್ದದ ಒಂದು ಶಾಸನವನ್ನು ತೋರಿಸಬಹುದು. ಹೊಯ್ಸಳ ಇಮ್ಮಡಿ ವೀರಬಲ್ಲಾಳನ ಆಶ್ರಯದಲ್ಲಿ ಕಮ್ಮಟದ ಚಟ್ಟಸೆಟ್ಟಿ ದಾಸಯ್ಯಸೆಟ್ಟಿಯೆಂಬು

ವರು ಸಮುದ್ರವ್ಯಾಪಾರಮಾಡಿ ಎಲ್ಲಾ ದಿಕ್ಕಿನಿಂದಲೂ ಕುದುರೆ, ಆನೆ, ಮುತ್ತು ಮುಂತಾದ ಪದಾರ್ಥಗಳನ್ನು ತರಿಸುತ್ತಿದ್ದರು.[1]

ಹರಿಯಹಯಕ್ಕೆ ತೋಡೆನಿಪ ಹೇಷಿಚಯಂಗಳನಿನ್ದ್ರದನ್ತಿಯೊಳ್
ದೊರೆಯೆನಿಸಿರ್ಪದನ್ತಿಗಳನಭ್ರದೊಳಾದ ಸುಪಾಣಿ ಮುತ್ತಿನೊಳ್
ಸರಿಯೆನಿಸಿರ್ಪ ಮುತ್ತುಗಳನೆಯ್ದೆ ಬಜಂತ್ರದೆ ತಂದು ಮಾಱುವಂ
ಧರಣಿಪಗೊಲ್ದು ಕಮ್ಮಟದ . . . ಚಟ್ಟಸಸೆಟ್ಟಿ ಸಂತತಂ ||
ಹರಿದಾಶಾಭಾಣ್ಡಮಂವಾಣಿಗೆ ನಡಿಸುವಂವಾರುಣೀವಸ್ತುವಂ ವಿ
ಸ್ತರದಿಂದಿನ್ದ್ರಾಶೆಯೊಳ್ ಪೆರ್ಚಿಸುವನೊಸೆದು ಕೌಬೇರಿಯಿಂ ದ್ಯುಮ್ನವಂನೋ
ಡಿರೆ ಯಾಮ್ಯಾಭಾಗದೊಳ್ಸಂದಿಸುವನೆಸೆವ ವಸ್ತ್ರಂಗಳಂ ಯಾಮ್ಯದಿಂದು
ತ್ತರದಿಕ್ಕಿಂಗಟ್ಟುವಂ ನೋಡನುಪಮವಣಿಜಂ ದಾಸಯಂ ದೋಷದೂರಂ ||

ವಿಜಯನಗರ ಸಾಮ್ರಾಜ್ಯದಲ್ಲಿ ೩೦೦ ರೇವುಪಟ್ಟಣಗಳಿದ್ದವು. ಚೋಳರೂ ವಿಜಯನಗರದರಸರೂ ದ್ವೀಪಾಂತರಗಳನ್ನು ಗೆಲ್ಲುವುದಕ್ಕಾಗಿಯೂ ನೀರ್ಗಳ್ಳರನ್ನು ಅಡಗಿಸುವದಕ್ಕಾಗಿಯೂ ನೌಕಾಬಲವನ್ನಿಟ್ಟಿದ್ದರು. ಮರಾಠರು ಕೂಡ ಪಶ್ಚಿಮತೀರವನ್ನೆಲ್ಲ ತಮ್ಮ ಅಧೀನದಲ್ಲಿಟ್ಟುಕೊಂಡಿದ್ದರು. ಅರಬ್ಬೀಯರು, ಮಾಪಿಳ್ಳೆಗಳು, ಪೋರ್ಚುಗೀಸರೂ ಅರೇಬಿಯ ಪರ್ಷಿಯ ದೇಶಗಳಿಂದ ಉತ್ತಮಜಾತಿಯ ಕುದುರೆಗಳನ್ನು ತರಿಸಿ ಅಧಿಕ ಲಾಭ ಹೊಂದುತ್ತಿದ್ದರು. ವೆನಿಸ್, ಜಿನೋವ, ಫ್ಲಾರೆನ್ಸ್ ಮುಂತಾದ ಇಟಲಿ ದೇಶದ ವ್ಯಾಪಾರ ಪಟ್ಟಣಗಳು ಇಂಡಿಯ ದೇಶದಿಂದ ಅಮೂಲ್ಯ ವಸ್ತುಗಳನ್ನು ತರಿಸಿ ಯೂರೋಪ್ ದೇಶಗಳಲ್ಲಿ ಮಾರಿ ಬಹುಳ ಪ್ರಖ್ಯಾತವಾದವು. ಸಮುದ್ರವ್ಯಾಪಾರದ ಮುಖ್ಯ ಮಾರ್ಗಗಳು:—ಈಜಿಪ್ಟಿನ ಅಲೆಕ್ಸಾಂಡ್ರಿಯ ಪಟ್ಟಣದಿಂದ ಕೆಂಪುಸಮುದ್ರದ ಮೂಲಕ ಏಡೆನ್ ವರೆಗೂ ಒಂದು ಮಾರ್ಗವು ಕವಲೊಡೆದು ಉತ್ತರದಲ್ಲಿ ಶೂರ್ಪಾರಕಕ್ಕೂ ದಕ್ಷಿಣದಲ್ಲಿ ಕ್ರಾಂಗನೂರಿಗೂ ಬಂದಿದ್ದಿತು. ಇನ್ನೊಂದು ಕ್ರಾಂಗನೂರಿನಿಂದ ಹೊರಟು ಸಿಂಹಳದ್ವೀಪವನ್ನು ಬಳಸಿಕೊಂಡು ಚೋಳಮಂಡಲದ ತೀರವನ್ನನುಸರಿಸಿ ಬಂಗಾಳದ ತಾಮ್ರಲಿಪ್ತಿ ವರೆಗೂ ಹೋಗಿದ್ದಿತು. ಮತ್ತೊಂದು ಮಾರ್ಗವು ಕಾನ್‌ಸ್ಟಾಂಟಿನೋಪಲ್, ಪಾಮೈರ, ಬ್ಯಾಬಿಲೋನಿಯ ದೇಶಗಳಲ್ಲಿ ಬಂದು ಪರ್ಷಿಯನ್ ಕೊಲ್ಲಿ ಮೂಲಕ ಶೂರ್ಪಾರಕಕ್ಕೆ ಬರುತ್ತಿದ್ದಿತು. ಪೂರ್ವದಲ್ಲಿ ಕಾವೇರಿಪಟ್ಟಣ, ಮತ್ಸ್ಯಪಟ್ಟಣ, ಮಹಾಬಲಿಪುರ, ಅಮರಾವತಿಗಳಿಂದ ನೇರವಾಗಿ ಬಂಗಾಳಕೊಲ್ಲಿಯನ್ನು ದಾಟಿ ಜಾವ, ಸುಮಾತ್ರ, ಬೋರ್ನಿಯೋ,

[1] *E.C.* VII. *A.K.* 22.

ಫಿಲಿಪ್ಪೈನ್ಸ್, ಇಂಡೋ-ಚೀಣ, ಪೀಕಿನ್, ಜಪಾನ್, ಕೊರಿಯ ವರೆಗೂ, ಇನ್ನೂ ಪೂರ್ವಕ್ಕೆ ಹಾವೈ (ಶಾವಕಂ), ಈಸ್ಟರ್ ಐಲೆಂಡ್ಸ್, ಮೂಲಕ ಮೆಕ್ಸಿಕೋ ವರೆಗೂ ಹೋಗುವ ಮಾರ್ಗವಿದ್ದಿತು. ಈ ಸ್ಥಳಗಳಲ್ಲೆಲ್ಲ ಭಾರತೀಯ ಸಂಸ್ಕೃತಿಯ ಚಿಹ್ನೆಗಳು ಈಗಲೂ ಕಂಡುಬರುವವು.

**ಒಳದೇಶದ ವ್ಯಾಪಾರ:** ಸಾರ್ಥವಾಹ, ವೀರಬಣಂಜು, ಕೋಮಟಿ, ಬೇರಿ ಮುಂತಾದವರು ಕಾವಡಿ, ಕತ್ತೆ, ಎತ್ತು ಭಂಡಿಗಳ ಮೇಲೆ ಸಾಮಾನನ್ನು ಹೇರಿಕೊಂಡು ಭರತಖಂಡದಲ್ಲೆಲ್ಲ ಸುತ್ತಿ ವ್ಯಾಪಾರ ನಡಿಸುತ್ತಿದ್ದರು. ಉತ್ತರಾಪಥದಲ್ಲಿ ಪುರುಷಪುರ (ಪೆಷಾವರ್), ಗಾನ್ಧಾರ, ತಕ್ಷಶಿಲೆಯಿಂದ



ಮುಖ್ಯ ವ್ಯಾಪಾರ ಮಾರ್ಗಗಳು.

ಮಹಾಪಥ (Grand Trunk Road) ವನ್ನ ನುಸರಿಸಿ ಪೂರ್ವದಲ್ಲಿ ಕಾಮಾಖ್ಯ (ಆಸ್ಸಾಂ)ದ ವರೆಗೂ ಒಂದು ಮುಖ್ಯ ವ್ಯಾಪಾರಮಾರ್ಗವಿದ್ದಿತು. ಖೈಬರ್, ಬೋಲಾನ್ ಕಣಿವೆಗಳ ಮೂಲಕ ಪರ್ಷಿಯ ತುರ್ಕಿಸ್ತಾನಗಳಿಗೂ, ಕಾಶ್ಮೀರ ನೇಪಾಳ ಮೂಲಕ ಟಿಬೆಟ್ ಚೀಣ ದೇಶಗಳಿಗೂ ಪ್ರಯಾಸಕರವಾದ ಪರ್ವತ ಮಾರ್ಗಗಳಿದ್ದವು. ದಕ್ಷಿಣಾಪಥದಲ್ಲಿ ಸಿನ್ಧು ಸೌವೀರಪ್ರಾಂತದಿಂದ ಪಶ್ಚಿಮ

ತೀರದ ರೇವುಪಟ್ಟಣಗಳನ್ನು ಬಳಸಿಕೊಂಡು ಕನ್ಯಾಕುಮಾರಿ ವರೆಗೂ ಒಂದು ಮಾರ್ಗವೂ ; ಕಾಶಿಯಿಂದ ಕೋಸಲ, ವಿನ್ಧ್ಯಪ್ರಾಂತ್ಯಗಳ ಮೂಲಕ ದಕ್ಷಿಣಕ್ಕೆ ನೇರವಾಗಿ ದೇವಗಿರಿ, ಕಲ್ಯಾಣ, ಬಾದಾಮಿ, ಗದಗು, ಹಂಪೆ, ಧರ್ಮವರ, ಬೆಂಗಳೂರು ಪಟ್ಟಣಗಳನ್ನು ಸುತ್ತಿಕೊಂಡು ಕಣಿವೆಯನ್ನು ದಾಟಿ ಶ್ರೀರಂಗ, ಮಧುರೆ, ರಾಮೇಶ್ವರದ ವರೆಗೂ ಹೋಗುವ ಒಂದು ಮಾರ್ಗವೂ ; ದಕ್ಷಿಣ ಕೋಸಲದಿಂದ ಪೂರ್ವಕ್ಕೆ ತಿರುಗಿ ಕಳಿಂಗ, ಕೊಲ್ಲೇರು, ನಾಗಾರ್ಜುನಕೊಂಡ, (ಶ್ರೀಶೈಲ), ಕಾಳಹಸ್ತಿ, ಮೈಲಾಪುರ, ಮಹಾಬಲಿಪುರ, ಕಂಚಿ, ಕಾವೇರಿಪಟ್ಟಣ, ನಾಗಪಟ್ಟಣಗಳ ಮೂಲಕ ರಾಮೇಶ್ವರಕ್ಕೆ ಹೋಗುವ ಒಂದು ಮಾರ್ಗವೂ, ಪಶ್ಚಿಮತೀರದ ಮಂಗಳೂರು ಬಾರಕೂರುಗಳಿಂದ ಹೊನ್ನಾವರ, ಹಳೇಬೀಡು, ಬೇಲೂರು ಬಳಸಿ ಸಂಗಿಲಿಘಟ್ಟವನ್ನು ದಾಟಿ ಪೂರ್ವತೀರದಲ್ಲಿ ಕಂಚಿ, ಪುದುಚೇರಿ (Pondicherry) ವರೆಗೂ ಮತ್ತೊಂದು ಮುಖ್ಯ ವ್ಯಾಪಾರಮಾರ್ಗವೂ ಇದ್ದವು.

ವ್ಯಾಪಾರಶ್ರೇಣಿ (Trade Guilds) ಗಳಿಗೆ ನಗರಗಳಲ್ಲಿ ಪಟ್ಟಣಸ್ವಾಮಿಯೂ ಶ್ರೇಷ್ಠಿಯೂ ಮುಖ್ಯಾಧಿಕಾರಿಗಳಾಗಿದ್ದರು. ವರ್ತಕರ ಸಭೆಗೆ ಮಹಾನಾಡು, ಮಣಿಮಂಗಲ ಎಂಬ ಹೆಸರಿದ್ದವು. ಕರ್ಣಾಟಕದಲ್ಲಿ ಐವತ್ತಾರು ದೇಶದ ಅಯ್ಯಾವಳೆ (ಐಹೊಳೆ) ಬಾಲಮೂಲ ವೀರಬಣಂಜುಗಳೆಂಬುವರು ಪ್ರಸಿದ್ಧರಾಗಿದ್ದರು. ಚಾಳುಕ್ಯ ಮತ್ತು ಹೊಯ್ಸಳ ಶಾಸನಗಳಲ್ಲಿ ಇವರ ಪ್ರಶಂಸೆಯು ಅಧಿಕವಾಗಿ ಕಂಡುಬರುವದು.[2]

"ಸ್ವಸ್ತಿ ಸಮಸ್ತಭುವನವಿಖ್ಯಾತ ಪಂಚಶತವೀರ ಶಾಸನಲಬ್ಧಾನೇಕ ಗುಣಗಣಾಲಂಕೃತ ವೀರಬಣಂಜು ಧರ್ಮಪಾಳ ವಿಶುದ್ಧಗುಡ್ಡಧ್ವಜವಿರಾಜಮಾನ ವಾಸುದೇವ ಖಂಡಳೀಮೂಲಭದ್ರಂ ವಂಶೋದ್ಭವರೂ, ಭಗವತೀಲಬ್ಧವರಪ್ರಸಾದರೂ, ದ್ವಾತ್ರಿಂಶದುಮ್ಮೇಳೊಮ್ಮರ ವಷ್ಟಾದಶಪಟ್ಟಣಂಗಳು ಚೌಷಷ್ಠಿಯೋಗಪೀಠಮುಂ ಚತುರ್ದಿಶೆಯಾಶ್ರಯಮ ನಾನಾದೇಶ ಭ್ರಮಾಂತಕರವರ್ಗೆ ಪುಟ್ಟಿಯುಂ ಕೃತಯುಗತ್ರೇತೆ ದ್ವಾಪರ ಕಲಿಯುಗಂ ಮೊದಲಾಗೆ ಬ್ರಹ್ಮ ವಿಷ್ಣು ಮಹೇಶ್ವರರವರ ಮತಂ, ಪೃಥ್ವಿಯೆ ಹಸುಂಬೆಯಾಗೆ ಅಷ್ಟದಿಕ್ಪಾಲಕರೇ ಗೊಂಟಾಗೆ, ಚಕ್ರಮೇ ಬೆಳವಾಗೆ, ಕೂಯೇ ಮರಸುರಿಗೆಯಾಗೆ, ಹಸುಂಬೆಯೊಳಮೂಲ್ಯವಸ್ತುಗಳೇ ವಸ್ತುಗಳಾಗೆ, ಚೇರ ಚೋಳ ಪಾಂಡ್ಯ ಮಲಯ ಮಗಧ ಕೌಸಲ, ಸೌರಾಷ್ಟ್ರ ಧನುಷ್ಟ್ರ ಕುರುಕಾಂಭೋಜ ಗೌಳ ಲಾಳ ಬರ್ಬರ ಪಾರಸ ನೇಪಾಳ ಏಕಪಾದ ಲಂಬಕರ್ಣ ಸ್ತ್ರೀರಾಜ್ಯ ಘೋಳಾಮುಖವೆಂಬ ನಾನಾದೇಶಂಗಳೊಳಂ, ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖ ಸಂವಾಹನವೆಂಬ ದಿಗ್ದಂತಿಪಟ್ಟಣಂಗಳಂ, ಪಾದಮಾರ್ಗ ಜಲಮಾರ್ಗದೊಳು ಪಟ್ಟಂಡ

[2] *E.C* VII?. *Sk*. 118. A.D, 1054.

ಮಂಡಳಂಗಳಂ ಪೊಕ್ಕು, ಭದ್ರಹಸ್ತಿ ಜಾತ್ಯಶ್ವ ಇನ್ದ್ರನೀಲ ಚನ್ದ್ರಕಾನ್ತ ಮುತ್ತು ಮಾಣಿಕ್ಯ ವಜ್ರವೈಡೂರ್ಯ ಗೋಮೇಧಿಕ ಪುಷ್ಯರಾಗ ಪದ್ಮರಾಗ ಪವಳ ಮರಕತ ಕರ್ಕೇತನ ನಾನಾವಸ್ತುಗಳ ಮನೇಲಾಲವಂಗವಗರು ಚನ್ದನ ಕರ್ಪೂರ ಕಸ್ತೂರಿ ಕುಂಕುಮ ಮಲಿಗಜಾದಿ ಸುಗಂಧದ್ರವ್ಯಂಗಳುಮಂ ಪೇಱಿಯುಂ ಮಾಱಿಯುಂ ಪೆಗಲೊ ಳಾಂತು ಸುಂಕಚ್ಛಾವುಯಮಂ ಕಿಡಿಸಿ ಚಕ್ರವರ್ತಿಯ ಸುವರ್ಣಭಣ್ಡಾರಮುಮಂ ಮಾಣಿಕ್ಯಭಣ್ಡಾರಮುಮಂ ಪಟ್ಟಸಭಣ್ಡಾರಮುಮಂ ತೆಕ್ಕನೆತೀವಿ ಮಿಕ್ಕು ದಱಿೊಳುಚತು ಸ್ಸಮಯ ಷಡ್ದರ್ಶನ ವಿಶಿಷ್ಟವಿದಗ್ಧ ಜನ ಪಂಡಿತ ಮುನಿಜನಂಗಳ್ಗೆ ನಿತ್ಯಂ ಬೆಸಕೈಯುತ್ತ ಮಹದೇವರುಮನಿಷ್ಟದೇವರುಮಾಗಿಬಗೆದು, ಗಾರ್ದಭ ಮಹಿಷಾವಾಹಿಕ ಚೇನಾ ಭರಣಭೂಷಿತರಪ್ಪ ಎಂಟನಾಡ ಪದಿನಱುವರುಂ, ಗವಱೆಗಳುಂ, ಗಾತ್ರಿಗರುಂ, ಸೆಟ್ಟಿ ಗರುಂ, ಸೆಟ್ಟಿಗುತ್ತರುಂ, ಅಂಕಕಾಱರುಂ, ಬೀರರುಂ, ಬೀರವಣಿಗರುಂ, ಗಂದಿಗರುಂ, ಗಾವುಂಡರುಂ, ಗಾವುಂಡಸ್ವಾಮಿಗಳುಂ ಇಂತು ಬಲ್ಲುಂಕೆ ದಂಡಹಸ್ತರುಂ, ಆನೆಯೆ ಭೇರಿಯಾಗೆ, ಭೇರಿಯೆ ಮದ್ದಳೆ ಆಗೆ, ಬೆಳುಗೊಡೆಗಳೇ ನೆಳಲಾಗೆ, ಮಹಾಸಮುದ್ರವೇ ನೀರ್ಗಾರಿಗೆಯಾಗೆ, ಇಂದ್ರನೇ ಕರಗವಳನಾಗೆ, ವರುಣನೇ ಗಳೆವಿಡಿವನಾಗೆ, ಧನದನೇ ಭಂಡಾರಿಗನಾಗೆ, ನವಗ್ರಹಂಗಳೇ ಕೆಂಕಣವಾಗೆ, ರಾಹುವೇ ತೊಂಗಲಾಗೆ, ಕೇತುವೇ ಸುರಿಗೆಯಾಗೆ, ಕುಳಿಕವೇ ಮೊನೆಯಾಗೆ, ಚಂದ್ರಾದಿತ್ಯರೇ ಬೆಂಬಲವಾಗೆ ಮೂವತ್ತು ಮೂರು ದೇವರ್ಕಳೇಕನೋಟಕರ್ಕಳಾಗೆ ಭಟಾರಿಯ ಮಕ್ಕಳ ಡಮರುಗಪೆರೆಸಿಘೋಷ ಣರುಮಪ್ಪ ಶ್ರೀಮದಯ್ಯಾವಳೆಯ್ನೂರು ಸ್ವಾಮಿಗಳ್ . . . ತ್ರೈಲೋಕ್ಯಮಂಸಾಧಿಸುವ ಗುಡ್ಡಶಾಸ್ತ್ರದವಯವಲಕ್ಷಣಂಗಳನಱೆದು ನುಡಿವಂಗಡಿವಂದಿರ್ಗಳ್ಗಂ ದೆಸೆಮುಸಗಿಬರ್ಪಪ ಸುಂಬಿಕಂಕಣ ಪರಿದಕತ್ತರ್ಿ ಮುಱಿದುಬಿದ್ದ ಪೆಣಕ್ಕಂ ಸೂಱೆವೋದ ಚಂಡಕ್ಕಂ ಎತ್ತಿದ ನೆತ್ತರಕೂಱೆಗಂ, ಪಟ್ಟಪಾಳಕ್ಕಂ ಪಾಯ್ದಬಲಿಗಂ ಮೊಱೆಯೆಂಬಶಬ್ದಕ್ಕಂ ಸಮಯ ಧರ್ಮಕ್ಕಂ ಕೂಡಿದಸಂಘಾತಕ್ಕಂ ಮಾಡಿದಬ್ಯವಸ್ಥೆಗಂ ತಪ್ಪುವರಲ್ಲರು, ಪಣವನೊಲ್ಲರು, ಪೆಣಕ್ಕೆನಲ್ಲರ್ . . .''

**ನಾಣ್ಯಗಳು :** ಸಣ್ಣ ವ್ಯಾಪಾರಗಳು ಪದಾರ್ಥವಿನಿಮಯ (Barter) ದಿಂದಲೇ ನಡೆಯುತ್ತಿದ್ದರೂ ವೇದಯುಗದಲ್ಲಿಯೇ ಹಿರಣ್ಯಪಿಂಡ, ನಿಷ್ಕ, ಸುವರ್ಣ, ಶತಮಾನ, ಪಾದ ಎಂಬ ನಾಣ್ಯಗಳಿದ್ದವು. ಇವು ಬಹುಶಃ ಮೊದಮೊದಲು ಬಂಗಾರದ ಗಟ್ಟಿಗಳಂತಿದ್ದವು. ರಜತವು ಅಶ್ರುಜವೆಂದು ಭಾವಿಸಿದ್ದರಿಂದ ಅಷ್ಟುಪ್ರಶಸ್ತವಾಗಿರಲಿಲ್ಲ. ಸುಮಾರು ಕ್ರಿ.ಪೂ. ೮ ನೆಯ ಶತಾಬ್ದದಿಂದ ಬೆಳ್ಳಿಯ " ಪುರಾಣ " ನಾಣ್ಯಗಳು ಚಲಾವಣೆಯಲ್ಲಿದ್ದವು. ಈ ಪುರಾಣಗಳ ಮೇಲೆ ಕಂಡುಬರುವ ಕೆಲವು ಚಿಹ್ನೆಗಳು ಹರಪ್ಪ ಮುದ್ರೆಗಳ ಮೇಲೂ ಕಂಡುಬರುವವು. ಆದರೆ ಹರಪ್ಪ ಸಂಸ್ಕೃತಿಯಲ್ಲಿ ಎಂತಹ ನಾಣ್ಯ ಗಳಿದ್ದವೆಂದು ಊಹಿಸಲು ನಿಸ್ಸಂಶಯವಾದ ನಾಣ್ಯಗಳು ಸಿಕ್ಕಿಲ್ಲ. ಈ ಪುರಾಣಗಳು ಬಾರ್ಹದ್ರಥ, ಶೈಶುನಾಗ, ನಂದರ ಕಾಲದಲ್ಲಿಯೇ ಇದ್ದುದರಿಂದ ನಾಣ್ಯಕಲೆಯು ಯವನರಿಂದ ಬಂದುದಲ್ಲ. ತಕ್ಷಶಿಲೆಯ ರಾಜನಾಗಿದ್ದ ಅಂಭಿ

(Omphis) ಅಲೆಕ್ಸಾಂಡರಿಸಿಗೆ ೮೦ "ಟಾಲೆಂಟ್" ತೂಕದ ಮುದ್ರಿತ ರಜತ ನಾಣ್ಯಗಳನ್ನು ಕಳುಹಿಸಿದ್ದನು. ತಕ್ಷಶಿಲೆಯ (ಕ್ರಿ.ಪೂ. ೨೦೦-೧೮೦) ತಾಮ್ರನಾಣ್ಯಗಳನ್ನು ಪಾಸ್ಟೋಲಿಯೋನ್, ಅಗೆಥೋಕ್ಲೀಸ್ ಎಂಬ ಯವನರಾಜರು ಅನುಕರಿಸಿದರು. ಬಾರ್ಹುತ್, ಬುದ್ಧಗಯಾ, ಸಾಂಚಿ ಶಿಲ್ಪ ಗಳಲ್ಲಿ ಚಚ್ಚೌಕವಾದ ನಾಣ್ಯಗಳು ಚಿತ್ರಿತವಾಗಿವೆ.

ಪುರಾಣಗಳನ್ನು ಐದು ವಿಧವಾಗಿ ವಿಭಾಗಿಸಿದೆ: (೧) ದಪ್ಪವಾದ ಬಗ್ಗಿಸಿದ ಬೆಳ್ಳಿ ಗಟ್ಟಿಗಳು ಸೂರ್ಯ ಅಥವಾ ಚಕ್ರಮುದ್ರೆಯನ್ನು ಹೊಂದಿವೆ. ಪ್ರಾಚೀನ ಇರಾನಿನ ಸ್ಟೇಟರ್ (ಎರಡು ಸಿಗ್ಲೋಯ್) ಅರ್ಧ ಮತ್ತು ಕಾಲು ಸಿಗ್ಲಾಯ್ ನಾಣ್ಯಗಳ ತೂಕವಿದೆ. (೨) ಚಿಕ್ಕ ಚತುರಸ್ರಾಕಾರದ ನಾಣ್ಯಗಳು ಮಧ್ಯಪ್ರಾಂತಗಳಲ್ಲಿ ಪ್ರಚಾರದಲ್ಲಿದ್ದ ಅರ್ಧ ಕಾರ್ಷಾಪಣಗಳು. (೩) ಪಂಜಾಬ್ ಮಧುರಾ ಪ್ರಾಂತಗಳಲ್ಲಿ ಸಿಕ್ಕುವ ಒರಟಾದ ಒಂದು ಕಡೆ ಮಾತ್ರ ಪರ್ವತ, ಸೂರ್ಯ, ಸ್ವಸ್ತಿಕ ಚಿಹ್ನೆಗಳುಳ್ಳ ಅರ್ಧ ಕಾರ್ಷಾಪಣಗಳು. (೪) ದಪ್ಪವಾದ ಎರಕಹೊಯ್ದ ಒಂದುಕಡೆ ಮಾತ್ರ ಮುದ್ರಿತವಾದ ೨, ೧, ೧/೨ ಕಾರ್ಷಾಪಣಗಳು; ೧, ೧/೨, ೧/೪, ಕಳಿಂಜಗಳು ಸತಾರ ಪ್ರಾಂತದಲ್ಲಿ ಸಿಕ್ಕಿವೆ. (೫) ದಕ್ಷಿಣದೇಶದಲ್ಲಿ ಸಂದಿ, ನಂದಿಪದ, ಅರ್ಧಚನ್ದ್ರ ಮುಂತಾದ ಚಿಹ್ನೆಗಳುಳ್ಳ ನಾಣ್ಯಗಳು.

ಈ ಪುರಾಣಗಳ ಮೇಲೆ ಕಂಡುಬರುವ ಗುರುತುಗಳು ತಾಂತ್ರಿಕ ಚಿಹ್ನೆ ಗಳೆಂದು ಕೆಲವರು, ವರ್ತಕಶ್ರೇಣಿಗಳ ಮುದ್ರೆಗಳೆಂದು ಕೆಲವರೂ, ದೇವಾ ಲಯ, ಕ್ಷೇತ್ರ, ರಾಜ್ಯಗಳ ಲಾಂಛನಗಳೆಂದು ಕೆಲವರು ಊಹಿಸುವರು. ನಾಣ್ಯಗಳ ಮೇಲೆ ಅಕ್ಷರಗಳೂ ರಾಜನ ಅಥವಾ ದೇವತೆಯ ವಿಗ್ರಹಗಳೂ ಕ್ರಿ.ಪೂ. ಮೂರನೆಯ ಶತಾಬ್ದದಿಂದೀಚೆಗೆ ಪ್ರಚಾರಕ್ಕೆ ಬಂದಂತೆ ತೋರು ತ್ತದೆ. ಗಣರಾಜ್ಯ (Republics) ಗಳಾದ ಅರ್ಜುನಾಯನ, ಅಪರಾಂತ, ಔದುಮ್ಬರ, ಮಾಳವ, ಪಾಂಚಾಲ, ರಾಜನ್ಯ, ಶಿಬಿ ಮುಂತಾದುವೂ, ಅಯೋಧ್ಯ, ಅರಕಿನ, ಕಾಡ, ಕೌನ್ಯಕುಬ್ಜ, ಕೌಶಾಂಬಿ, ಮಗಧ, ಕುಲೂತ, ಕುಣಿಂದ, ಮಧುರಾ, ತಕ್ಷಶಿಲಾ ರಾಜರೂ ಇಂತಹ ಪುರಾಣಗಳನ್ನು ಚಲಾವಣೆಗೆ ತಂದರು. ಕ್ರಿ.ಪೂ. ೨ನೆಯ ಶತಾಬ್ದದಿಂದ ವಾಯವ್ಯ ಭಾಗ ಗಳಲ್ಲಿ ಇಂಡೋ-ಗ್ರೀಕ್, ಇಂಡೋ-ಬಾಕ್ಟ್ರಿಯನ್, ಇಂಡೋ-ಪಾರ್ಥಿ ಯನ್ ರಾಜರು ಎರಕಹೊಯ್ದ ಎರಡು ಕಡೆಗಳಲ್ಲೂ ಸಲಕ್ಷಣವಾದ ವಿಗ್ರಹ ಗಳನ್ನೂ ಎರಡು ಭಾಷೆ ಎರಡು ಲಿಪಿಗಳಲ್ಲಿ ರಾಜರ ಹೆಸರನ್ನೂ ಹೊಂದಿದ ನಾಣ್ಯಗಳನ್ನು ಮಾಡಿಸಿದರು. ಇರಾನ್ ದೇಶದ ಸ್ತತೇರ. (Stater),

ರೋಮನ್ ಜನರ ದೀನಾರ (Denarius), ದ್ರಮ್ಮ (Drachma) ಮುಂತಾದ ನಾಣ್ಯಗಳೂ ಪ್ರಚಾರದಲ್ಲಿದ್ದವು.[3] ಬೆಳ್ಳಿ ಮತ್ತು ತಾಮ್ರದ ಕಾರ್ಷಾಪಣ (ಕಹಾಪಣ), ಪಣ, ಅರ್ಧಪಣ, ಕಾಣಿ, ಕಾಶು, ದುಡ್ಡು, ಬೇಳೆ ಮುಂತಾದುವು ನಾನಾಭಾಗಗಳಲ್ಲಿದ್ದವು. ಮನುಸ್ಮೃತಿ,[4] ಯಾಜ್ಞವಲ್ಕ್ಯಸ್ಮೃತಿ, ಅರ್ಥಶಾಸ್ತ್ರ, ಮಹಾವೀರನ ಗಣಿತಸಾರಸಂಗ್ರಹ, ರಾಜಾದಿತ್ಯನ ವ್ಯವಹಾರಗಣಿತ, ಭಾಸ್ಕರಾಚಾರ್ಯನ ಲೀಲಾವತಿ ಮುಂತಾದ ಗ್ರಂಥಗಳಲ್ಲಿ ಆಯಾ ಕಾಲದಲ್ಲಿ ದೇಶಭಾಗಗಳಲ್ಲಿ ಪ್ರಚಾರದಲ್ಲಿದ್ದ ನಾಣ್ಯಗಳ ಕೋಷ್ಟಕಗಳು ಕಂಡುಬರುವವು. ಸಾಧಾರಣವಾಗಿ ಕೆಳಗೆ ಕಂಡ ತೂಕಗಳುಳ್ಳ ನಾಣ್ಯಗಳಿದ್ದವೆಂದು ಹೇಳಬಹುದು.

| | | | |
|---|---|---|---|
| ಚಿನ್ನದ ನಾಣ್ಯಗಳು : | ೧ | ರತಿ (ಗುಂಜ) ತೂಕ | = ಶಾಷಾರ್ |
| | ೨ | ,, | = ರೂಪಕ |
| | ೫ | ,, | = ಮಾಷ |
| | ೮೦ | ,, | = ಕಾರ್ಷಾಪಣ, ಪಲ, |
| | ೧೦೦ | ,, | = ಶತಮಾನ |
| | ೩೨೦ / ೪೦೦ | ,, | ನಿಷ್ಕ, ಪಲ. |
| ಬೆಳ್ಳಿನಾಣ್ಯಗಳು : | ೩೨ | ರತಿ ತೂಕ | = ೧ ಧರಣ, ಪುರಾಣ |
| | ೧೬ | ,, | = ೧/೨ ,, |
| | ೪ | ,, | = ೧/೮ ,, ೧ ಮಾಷ |
| | ೨ | ,, | = ೧/೧೬ ,, ೧/೨ ಮಾಷ |
| ತಾಮ್ರನಾಣ್ಯಗಳು : | ೮೦ | ರತಿ ತೂಕ | = ೧ ಕಾರ್ಷಿಕಾಪಣ (ಹಣ) |
| | ೪೦ | ,, | = ೧/೨ ,, |
| | ೨೦ | ,, | = ೧/೪ ,, |
| | ೧೦ | ,, | = ೧/೮ ,, |
| | ೫ | ,, | = ೧/೧೬ ಮಾಷ, ಕಾಶು, ಕಾಣಿ |

ಗುಪ್ತರ ನಾಣ್ಯಗಳು ಗ್ರೀಕ್ ಮತ್ತು ಕುಷಾಣ ತೂಕಗಳನ್ನನುಸರಿಸಿದ್ದವು. ದಕ್ಷಿಣ ದೇಶದಲ್ಲಿ ಕದಂಬರ "ಪದ್ಮಟಂಕ"ಗಳು ಪ್ರಚಾರದಲ್ಲಿದ್ದವು.

[3] ಹಿರಣ್ಯಗರ್ಭಸಂಭೂತಂ ಸ್ವರ್ಣದೀನಾರ ಶೋಭಿತಮ್ ||

[4] ಮನು. VIII—131-8.

ಚಾಳುಕ್ಯ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ ಕಾಶ್ಮೀರ ರಾಜರು ಕರ್ಣಾಟಾನುಗುಣವಾದ ಟಂಕಗಳನ್ನು ಮಾಡಿಸಿದರು. ಡಿಲ್ಲಿಯ ಸುಲ್ತಾನರನೇಕರು ಮುಸ್ಲಿಮರಾದರೂ ತಮ್ಮ ನಾಣ್ಯಗಳ ಮೇಲೆ ಹಿಂದೂ ದೇವತೆಗಳ ವಿಗ್ರಹಗಳನ್ನೂ ದೇವನಾಗರೀ ಅಕ್ಷರಗಳನ್ನೂ ಹಾಕಿಸಿರುವರು. ಮಹಮದ್ ಬಿನ್ ತೊಗ್ಲಖನು ಚರ್ಮದ ನಾಣ್ಯಗಳನ್ನು ಚಲಾವಣೆಗೆ ತರಲು ಯತ್ನಿಸಿದನು. ಮೊಘಲ್ ಚಕ್ರವರ್ತಿಗಳು ಸುಂದರವಾದ ನಾಣ್ಯಗಳನ್ನು ಅಚ್ಚು ಹಾಕಿಸಿದರು. ಮರಾಟ ಸಾಮ್ರಾಜ್ಯವು ವಿಜಯನಗರ ಮತ್ತು ಮೊಘಲರ ನಾಣ್ಯಗಳನ್ನು ಅನುಕರಿಸಿತು. ಹದಿನೇಳು ಹದಿನೆಂಟನೆಯ ಶತಾಬ್ದಗಳಲ್ಲಿ ವಿಜಯನಗರದ ವರಾಹ (ಪ್ರತಾಪ) ಜಿತಲ್, ತಾರ, ಪಣ, ಕಾಸು, ಕಾಣಿಗಳೂ, ಮೊಘಲರ ಮೊಹರ್, ಲಾರಿನ್, ರುಪಯಾ, ಖುರ್ದಾ, ಟಾಕ್, ಪೈಸಾ ಮುಂತಾದುವೂ, ಮರಾಟರ ಹೋನ, ಧರಣ, ಚವಲ, ಡುವಲ, ಲಾಹರೀ, ಫಣಮು, ಪಣ, ರೂಕ, ಪೈಸ, ತಿರೀಕ ಪೈಸ, ಸಸಗಾಣಿ ಮುಂತಾದ ನಾಣ್ಯಗಳೂ, ಕೆಳದಿ ಚಿತ್ರದುರ್ಗ ಮುಂತಾದ ಪಾಳೆಯಗಾರರ ನಾಣ್ಯಗಳೂ ಪ್ರಚಾರದಲ್ಲಿದ್ದವು. ಈಸ್ಟ್ ಇಂಡಿಯ ಕಂಪನಿಯವರು ಮೊಘಲರ ಪಗೋಡ ರೂಪಾಯಿಗಳನ್ನು ಅನುಕರಿಸಿ ತಮಗೆ ಅಧೀನವಾಗಿದ್ದ ಭಾಗಗಳಲ್ಲಿ ಚಲಾವಣೆ ಮಾಡುತ್ತಿದ್ದರು. ಮೈಸೂರಿನಲ್ಲಿದ್ದ ಕಂಠೀರಾಯಿ ಹಣ ಮುಂತಾದುವನ್ನು ಬದಲಾಯಿಸಲು ಟೀಪುವು ಯತ್ನಿಸಿದ್ದನು. ಬ್ರಿಟಿಷರ ಸಾಮ್ರಾಜ್ಯವು ಹರಡಿದಂತೆಲ್ಲ "ಕುಂಪಣಿ" ರೂಪಾಯಿಗಳೂ ಹರಡಿದವು, ದೇಶೀಯ ರಾಜರನೇಕರು ಮುದ್ರಿಸುವ ಹಕ್ಕನ್ನು ಕಳೆದುಕೊಂಡರು.

ನಾಣ್ಯಗಳಲ್ಲದೆ ಬಹಳ ಪ್ರಾಚೀನ ಕಾಲದಿಂದಲೂ ಪ್ರಸಿದ್ಧ ವರ್ತಕರು "ಹುಂಡಿ"ಗಳ ಸಹಾಯದಿಂದ ವ್ಯಾಪಾರವನ್ನು ನಡೆಯಿಸುತ್ತಿದ್ದರು.

**ಅಳತೆಗಳು-ತೂಕಗಳು :** ವೇದವಾಙ್ಮಯದಲ್ಲಿ ಯಜ್ಞಶಾಲೆ ವೇದಿಕೆಗಳನ್ನು ರಚಿಸುವದಕ್ಕೂ ಕಾಲವನ್ನು ನಿರ್ಧರಿಸುವದಕ್ಕೂ ಸಲಕರಣೆಗಳಿದ್ದವೆಂದು ಕಂಡುಬರುವದು. ಹರಪ್ಪ ಸಂಸ್ಕೃತಿಯಲ್ಲಿ ಅತಿ ಸೂಕ್ಷ್ಮ ಪ್ರಮಾಣದ ಅಳತೆ ತೂಕಗಳಿದ್ದವು. ಮಾನ ಅಥವಾ ಮಣ ಎಂಬುದು ಬ್ಯಾಬಿಲೋನಿಯ ದೇಶದ "ಮಿನ"ದಿಂದ ಬಂದಿತೆಂದು ಕೆಲವರು ಹೇಳುವರು. ನಾಣ್ಯಗಳನ್ನು ಕೂಡ ತೂಕಕ್ಕಾಗಿ ಉಪಯೋಗಿಸುತ್ತಿದ್ದರು. ಕಾಲಿದಾಸನು ಹಿಮಾಚಲ ಶ್ರೇಣಿಯನ್ನು ಮಾನದಣ್ಡವೆಂದು ವರ್ಣಿಸಿರುವನು. ವೈದ್ಯ, ಜ್ಯೋತಿಷ್ಯ, ಗಣಿತ ಗ್ರಂಥಗಳಲ್ಲಿ ಅನೇಕ ವಿಧವಾದ ಅಳತೆ ತೂಕಗಳ ಕೋಷ್ಟಕಗಳಿವೆ, ಸಾಮಾನ್ಯವಾಗಿ :—

| | | |
|---|---|---|
| ೩೦ ಪರಮಾಣು | = | ೧ ತ್ರಸರೇಣು (ವಂಶೀ) |
| ೨೬ ತ್ರಸರೇಣು | = | ೧ ಮರೀಚಿ |
| ೬ ಮರೀಚಿ | = | ೧ ರಜಕ |
| ೩ ರಜಕ | = | ೧ ಸರ್ಷಪ (ಸಾಸಿವೆ) |
| ೮ ಸರ್ಷಪ | = | ೧ ಯವ |
| ೪ ಯವ | = | ೧ ಗುಂಜ |
| ೬ ಗುಂಜ | = | ೧ ಮಾಷ, ಹೇಮ, ಧಾನ |
| ೪ ಮಾಷ | = | ೧ ಶಾಣ, ಧರಣ, ಟಂಕ |
| ೨ ಶಾಣ | = | ೧ ಕೋಲ, ದ್ರಕ್ಷ್ಣ |
| ೨ ಕೋಲ | = | ೧ ಕರ್ಷ |
| ೨ ಕರ್ಷ | = | ೧ ಅರ್ಧಪಲ, ಅಷ್ಟಮಿಕ, ಶುಕ್ತಿ |
| ೨ ಅರ್ಧಪಲ | = | ೧ ಪಲ, ಚತುರ್ಥಿಕ, ಷೋಡಶೀ, ಬಿಲ್ವ |
| ೨ ಪಲ | = | ೧ ಪ್ರಸೃತ |
| ೨ ಪ್ರಸೃತ | = | ೧ ಅಂಜಲಿ, ಕುಡುವ, ಅಷ್ಟಮಾನ |
| ೨ ಅಂಜಲಿ | = | ೧ ಮಾನಿಕ, ಅಷ್ಟಪಲ |
| ೨ ಮಾನಿಕ | = | ೧ ಪ್ರಸ್ಥ |
| ೪ ಪ್ರಸ್ಥ | = | ೧ ಆಢಕ, ಚತುಷ್ಷಷ್ಟಿಪಲ |
| ೪ ಆಢಕ | = | ೧ ದ್ರೋಣ, ಕಲಶೀ, ನಲ್ವಣ, ಘಟ |
| ೨ ದ್ರೋಣ | = | ೧ ಶೂರ್ಪ, ಕುಂಭ |
| ೨ ಶೂರ್ಪ | = | ೧ ದ್ರೋಣೀ, ವಾಹ, ಗೋಣೀ |
| ೪ ದ್ರೋಣೀ, | = | ೧ ಖಾರೀ, = ೪೦೯೬ ಪಲ |
| ೨೦೦ ಪಲ | = | ೧ ಭಾರ; |
| ೧೦೦ ಪಲ | = | ೧ ತುಲ |

ಅಳತೆಗಳಲ್ಲಿ ಯವ, ಅಂಗುಳ, ವಿತಸ್ತಿ, ಹಸ್ತ, ನಲ್ವ, ವೇಲಿ, ಯೋಜನ, ಮಾರು, ಗಜ ಮುಂತಾದುವೂ, ಗೇಣಿನಗಳೆಗಳೂ ಶಾಸನಗಳಲ್ಲಿ ಉಕ್ತವಾಗಿವೆ. ಚೋಳ ರಾಜರಾಜ ಮತ್ತು ಕುಲೋತ್ತುಂಗರು ಸಾಮ್ರಾಜ್ಯದ ಭೂಮಿಗಳ ನ್ನೆಲ್ಲ ಬಹು ಸೂಕ್ಷ್ಮವಾಗಿ ಅಳೆಯಿಸಿ ಕಂದಾಯವನ್ನು ನಿರ್ಧರಿಸಿದರೆಂದು ಶಾಸನಗಳಿಂದ ತಿಳಿದುಬರುವದು. ಶ್ರವಣಬೆಳಗೊಳದ ಗೊಮ್ಮಟೇಶ್ವರನನ್ನು ನಿರ್ಮಿಸಿದ ಶಿಲ್ಪಿಯು ತಾನು ಉಪಯೋಗಿಸಿದ ಅಳತೆ ಕಡ್ಡಿಯನ್ನು ತೋರಿ ಸಿರುವನು. ಇದು ಈಗ ಫ್ರೆಂಚರಲ್ಲಿ ಪ್ರಚಾರದಲ್ಲಿರುವ ಪ್ರಮಾಣಕ್ಕನುಸಾರ ವಾಗಿರುವದು ಆಶ್ಚರ್ಯವನ್ನುಂಟುಮಾಡುವದು.

ಕ್ಷಾಮಗಳೂ ಈತಿಬಾಧೆಗಳೂ ಭರತಖಂಡಕ್ಕೆ ಹೊಸದಲ್ಲ. ಮಿಡಿತೆಗಳ ಹಾವಳಿಯಿಂದ ಕುರುದೇಶದಲ್ಲಿ ಬರಗಾಲ ಬಂದಿದ್ದಿತೆಂದು ಛಾನ್ದೋಗ್ಯ

ಉಪನಿಷತ್ತು ಹೇಳುವದು. ಉತ್ತರದೇಶದಲ್ಲಿ ಹನ್ನೆರಡು ವರ್ಷ ಕ್ಷಾಮ ಬಂದಾಗ ಜೈನಸಂಘವು ದಕ್ಷಿಣಕ್ಕೆ ಬಂದಿತೆಂದು ಜೈನಗ್ರಂಥಗಳು ಹೇಳುವವು. ಕೌಟಿಲ್ಯನ ಅರ್ಥಶಾಸ್ತ್ರ ಮತ್ತು ಮೌರ್ಯರ ಶಾಸನಗಳಿಂದ ರಾಜರು ಅನುಸರಿಸುತ್ತಿದ್ದ ಕ್ಷಾಮನಿವಾರಣೋಪಾಯಗಳನ್ನು (Famine Relief) ತಿಳಿಯಬಹುದು. ಇತರ ಪ್ರಾಂತ್ಯಗಳಿಂದ ಆಹಾರ ಸಾಮಗ್ರಿಗಳನ್ನು ತರಿಸಿ ಹಂಚುವದು, ಜನರನ್ನು ಕ್ಷಾಮವಿಲ್ಲದ ದೇಶದಲ್ಲಿ ನೆಲಸುವಂತೆ ಪ್ರೇರಿಸುವದು, ಮಳೆಗಾಗಿ ಪ್ರಾರ್ಥನೆಗಳನ್ನು ನಡಿಸುವದು, ಸರ್ಕಾರಕ್ಕೆ ಸೇರಿದ ಕಣಜಗಳಿಂದ ಧಾನ್ಯವನ್ನು ಹಂಚುವದು, ರಸ್ತೆ, ಕೆರೆ, ಕಾಲುವೆ ಮುಂತಾದ ಸಾರ್ವಜನಿಕ ಕಾರ್ಯಗಳನ್ನಾರಂಭಿಸಿ ಜನರಿಗೆ ಕೂಲಿಯನ್ನು ಆಹಾರವನ್ನು ಕೊಟ್ಟು ಪೋಷಿಸುವದು, ರಾಜಭಂಡಾರದಲ್ಲಿ ಆಪದ್ಧನವೆಂದು ಶೇಖರಿಸಿಟ್ಟ ಹಣದಿಂದ ದಾನಧರ್ಮಗಳನ್ನು ಮಾಡುವದೇ ಮುಂತಾದ ರೀತಿಯಲ್ಲಿ ಕ್ಷಾಮನಿವಾರಣೆ ಮಾಡತಕ್ಕದ್ದು ಪ್ರಭುವಿನ ಕರ್ತವ್ಯವಾಗಿದ್ದಿತು. ಕ್ಷಾಮಕಾಲವು ಕಳೆದ ಮೇಲೆ ಪುನಃ ವ್ಯವಸಾಯವನ್ನಾರಂಭಿಸಲು ರೈತರನ್ನು ಪ್ರೋತ್ಸಾಹಿಸಿ, ಕಂದಾಯವನ್ನು ತಗ್ಗಿಸಿ, ಬಿತ್ತುವದಕ್ಕೆ ಬೀಜವನ್ನೂ ಇತರ ಸಲಕರಣೆಗಳನ್ನೂ ರಾಜರು ಒದಗಿಸುತ್ತಿದ್ದರು. ಮುಸ್ಲಿಮ್ ರಾಜರಾದ ಅಲಾ ಉದ್ದೀನ್ ಖಿಲ್ಜಿ, ಮಹಮ್ಮದ್ ಬಿನ್ ತೊಗ್ಲಖ್, ಅಕ್ಬರ್, ಟೀಪು ಮುಂತಾದವರೂ ರೈತರ ಅಭಿವೃದ್ಧಿಗಾಗಿ ಪ್ರಯತ್ನಪಟ್ಟರು. ಮೆಗಾಸ್ತನೀಸನು ಭರತಖಂಡದಲ್ಲಿ ಕ್ಷಾಮವೆಂಬುದೇ ಇಲ್ಲವೆಂದು ಹೇಳಿದ್ದರೂ ಕಳಿಂಗ, ರಾಜಪುಟಾಣ ಮುಂತಾದ ಭಾಗಗಳಲ್ಲಿ ವೀರಕ್ಷಾಮಗಳು ಆಗಾಗ ತಲೆದೋರುತ್ತಿದ್ದವು.

ಒಟ್ಟಿನಲ್ಲಿ ಭಾರತೀಯರ ಜೀವನದ ಮಟ್ಟವು ಹೆಚ್ಚಾಗಿಯೇ ಇದ್ದಿತೆಂದು ಹೇಳಬಹುದು. ಹತ್ತೊಂಬತ್ತನೆಯ ಶತಮಾನದ ವರೆಗೂ ಭರತಖಂಡವು ಉತ್ತಮರ್ಣರಾಯತ (Creditor Country) ವಾಗಿದ್ದಿತು. ಸಂಪತ್ತಿನ ವಿಭಾಗದಲ್ಲಿ ಸಾಮಾನ್ಯವಾಗಿ ಹೆಚ್ಚು ಕಡಿಮೆಗಳಿರಲಿಲ್ಲ. ಬಂಡವಾಳಗಾರರಿಗೂ ಬಡವರಿಗೂ ವಿಶೇಷವಾಗಿ ಅಂತರವಿರಲಿಲ್ಲ. ಬಂಡವಾಳಗಾರರ ಸುಲಿಗೆಗೆ ಅಡಚಣೆಗಳಿದ್ದವು. ವ್ಯಾಪಾರಲಾಭವು (Balance of Trade) ಇಂಡಿಯ ದೇಶದ ಪರವಾಗಿದ್ದಿತು. ನಾಣ್ಯದ ಬೆಲೆಯು (Purchasing Power) ಅಧಿಕವಾಗಿದ್ದುದರಿಂದ ಪದಾರ್ಥಗಳು ಅಗ್ಗವಾಗಿದ್ದವು.

# ೮. ರಾಜಕೀಯ ಪದ್ಧತಿಗಳು

ನಮೋಽಸ್ತು ರಾಜ್ಯವೃಕ್ಷಾಯ ಷಾಡ್ಗುಣ್ಯಾಯ ಪ್ರಶಾಖಿನೇ |
ಸಾಮಾದಿ ಚಾರುಪುಷ್ಪಾಯ ತ್ರಿವರ್ಗಫಲದಾಯಿನೇ ||
—ಶುಕ್ರ

ಕಾಲೋ ವಾ ಕಾರಣಂ ರಾಜ್ಞೋ ರಾಜಾ ವಾ ಕಾಲಕಾರಣಮ್ |
ಇತಿ ತೇ ಸಂಶಯೋ ಮಾಭೂದ್ರಾಜಾ ಕಾಲಸ್ಯ ಕಾರಣಮ್ ||
—ಮಹಾಭಾರತ

ಸಂಸ್ಕೃತಿಯ ಬೆಳವಣಿಗೆಗೆ ಸ್ವಾತಂತ್ರ್ಯವು ಅವಶ್ಯಕ. ವ್ಯಕ್ತಿಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳಬೇಕಾದರೆ ಸಮಾಜದ ನಿಬಂಧನೆಗಳು ಅವಶ್ಯಕ. ಆದುದರಿಂದ ವ್ಯಕ್ತಿಸ್ವಾತಂತ್ರ್ಯಕ್ಕೂ ಸಮಾಜವ್ಯವಸ್ಥೆಗೂ ಸಮನ್ವಯವನ್ನು ಹೇಗೆ ಮಾಡಬೇಕೆಂಬುದೇ ರಾಜಕೀಯ ಸಮಸ್ಯೆಯಾಗಿದೆ. ಪ್ರಾಚೀನ ಸುಮೇರು, ಬಾಬಿಲೋನಿಯ, ಈಜಿಪ್ಟ್, ಗ್ರೀಸ್, ರೋಮನ್ ಸಾಮ್ರಾಜ್ಯಗಳ ಚರಿತ್ರೆಗಳನ್ನು ಪರಿಶೀಲಿಸಿದರೆ ಈ ದೇಶಗಳು ಸ್ವಾತಂತ್ರ್ಯ ಪ್ರಜಾಪ್ರಭುತ್ವಗಳನ್ನು ಹೊಂದಿದಾಗ ಸ್ವರ್ಣಯುಗವನ್ನು ಕಂಡು ಕೊನೆಗೆ ಸಾಮ್ರಾಜ್ಯಾಕಾಂಕ್ಷೆ, ಬಂಡವಾಳತನ, ನಿರಂಕುಶಪ್ರಭುತ್ವಗಳಿಂದ ನಾಶವಾದುವೆಂದು ಕಂಡುಬರುವದು. ಸಮರ್ಪಕವಾದ ರಾಜಕೀಯ ವ್ಯವಸ್ಥೆಯು ವ್ಯಕ್ತಿಗೂ ಸಮಾಜಕ್ಕೂ ನ್ಯಾಯವಿಹಿತವಾದ ಸಂಬಂಧವನ್ನು ಕಲ್ಪಿಸಿ ವ್ಯಕ್ತಿಸ್ವಾತಂತ್ರ್ಯ ಸಮಾಜದ ಬೆಳವಣಿಗೆಗಳೆರಡನ್ನೂ ಪೋಷಿಸಬೇಕು. ನ್ಯಾಯ ಮತ್ತು ಶಿಸ್ತನ್ನು (Law and Order) ಮಾತ್ರ ಸರ್ಕಾರವು ರಕ್ಷಿಸಿದರೆ, ವೃತ್ತಿಸ್ವಾತಂತ್ರ್ಯವಿಲ್ಲದಿದ್ದರೆ, ಸಂಸ್ಕೃತಿಯು ನಿಲ್ಲಲಾರದು. ಆದುದರಿಂದಲೇ ಭಾರತೀಯರ ಅರ್ಥಶಾಸ್ತ್ರವು ಧರ್ಮಶಾಸ್ತ್ರವನ್ನನುಸರಿಸಿದೆ. ಮನುಷ್ಯನ ವೃತ್ತಿಗಳೆಲ್ಲವೂ ಈ ದೃಷ್ಟಿಯಿಂದ ಅರ್ಥಶಾಸ್ತ್ರಕ್ಕೆ ಒಳಗಾಗಿವೆ. ಇಲ್ಲದುದನ್ನು ಪಡೆಯುವದು, ಪಡೆದುದನ್ನು ಕಾಪಾಡಿಕೊಳ್ಳುವದು, ಕಾಪಾಡಿಕೊಂಡುದನ್ನು ಹೆಚ್ಚಿಸಿಕೊಳ್ಳುವ ಉಪಾಯಗಳನ್ನು ಬೋಧಿಸುವ ಶಾಸ್ತ್ರಕ್ಕೆ ಅರ್ಥಶಾಸ್ತ್ರವೆಂದು ಹೆಸರು.[1] ಆದುದರಿಂದ ರಾಜಕೀಯ ಪದ್ಧತಿಗಳು ವ್ಯಕ್ತಿಯ ಸಲು

---

[1] ಮನುಷ್ಯಾಣಾಂ ವೃತ್ತಿರರ್ಥಃ, ಮನುಷ್ಯವತೀ ಭೂಮಿರಿತ್ಯರ್ಥಃ, ತಸ್ಯಾಃ ಪೃಥಿವ್ಯಾ ಲಾಭಪಾಲನೋಪಾಯಃ ಶಾಸ್ತ್ರಮರ್ಥಶಾಸ್ತ್ರಮ್ || ಅರ್ಥಶಾಸ್ತ್ರ XV, p. ೪೨೪.

ಅಲಬ್ಧಲಾಭಾರ್ಥಾ ಲಬ್ಧಪರಿರಕ್ಷಣೀ, ರಕ್ಷಿತವಿವರ್ಧನೀ ; ಅಲಬ್ಧಲಾಭೋ ಲಬ್ಧಪರಿರಕ್ಷಣಂ ರಕ್ಷಿತವಿವರ್ಧನಂ ಚೇತ್ಯರ್ಥಾನುಬನ್ಧಃ | ನೀತಿವಾಕ್ಯಾಮೃತ II.

ವಾಗಿರುವದೇ ವಿನಾ ವ್ಯಕ್ತಿಗಿಂತಲೂ ಮುಖ್ಯವೆಂದು ಭಾರತೀಯರು ಗಣಿಸಿರಲಿಲ್ಲ. ಪ್ರಜಾಪ್ರಭುತ್ವದ ಮೂಲಾಧಾರಗಳು ಚರ್ಚಾಸ್ವಾತಂತ್ರ್ಯ, ನಿಷ್ಪಕ್ಷಪಾತವಾದ ಆರ್ಥಿಕ ಮತ್ತು ನ್ಯಾಯಸಮತಾ, ಮತ್ತು ಸರ್ಕಾರವು ಅತ್ಯಲ್ಪವಾಗಿ ಅತ್ಯವಶ್ಯಕವಾದಾಗ ಮಾತ್ರ ವ್ಯಕ್ತಿಜೀವನದಲ್ಲಿ ಪ್ರವೇಶಿಸುವದು. ಸಮಾಜದ್ರೋಹಿಗಳ (Anti-social) ಕಾಟವನ್ನು ತಪ್ಪಿಸುವದಕ್ಕಾಗಿ ಯಾವಾಗಲೂ ಜಾಗರೂಕವಾದ "ದಣ್ಡ"ವು ಇರಬೇಕು[2] ಆದರೆ ಈ ದಣ್ಡಶಕ್ತಿಯನ್ನು ಶಿಷ್ಟರ ಮೇಲೆ ಪ್ರಯೋಗಿಸುವದಕ್ಕೆ ಅವಕಾಶ ಕೊಡದಂತೆ ನೋಡಿಕೊಳ್ಳುವದೇ ರಾಜನೀತಿಯ ಉದ್ದೇಶ. ಈ ದೃಷ್ಟಿಯಿಂದ ನೋಡಿದರೆ ಪ್ರಾಚೀನ ಭಾರತೀಯ ರಾಜ್ಯವ್ಯವಸ್ಥೆಗಳು ಸ್ಥೂಲದೃಷ್ಟಿಗೆ ಹೇಗೆ ಕಂಡುಬಂದರೂ ತತ್ವತಃ ವ್ಯಕ್ತಿಸ್ವಾತಂತ್ರ್ಯವನ್ನು ಸಮಾಜದ ಶಿಸ್ತನ್ನೂ ರಕ್ಷಿಸಿಕೊಂಡು ಬಂದಿರುವದರಿಂದ ಭಾರತೀಯ ಸಂಸ್ಕೃತಿಯು ಚಿರಸ್ಥಾಯಿಯಾಗಿದೆ.

**ಪ್ರಜಾಪ್ರಭುತ್ವ:** ಭಾರತೀಯರಿಗೆ ಪ್ರಜಾಪ್ರಭುತ್ವವು ಹೊಸದೆಂದೂ ಯಾವಾಗಲೂ ನಿರಂಕುಶ ಸಾಮ್ರಾಜ್ಯಪದ್ಧತಿಯೇ ಇದ್ದಿತೆಂದೂ ಕೆಲವರು ಅಪಪ್ರಚಾರ ಮಾಡಿರುವರು. ಆದರೆ ವೇದಯುಗದಿಂದ ಹದಿನೆಂಟನೆಯ ಶತಾಬ್ದದ ವರೆಗೂ ಸಾಮಾನ್ಯ ಜನಜೀವನಕ್ಕೆ ನಿಕಟಸಂಬಂಧ ಹೊಂದಿದ ಗ್ರಾಮಪಂಚಾಯಿತಿ, ಸಭಾ, ಸಮಿತಿ, ಮಹಾನಾಡು, ಊರ್, ಪರಿಷತ್ತು ಮುಂತಾದ ಪ್ರಜಾಪ್ರಭುತ್ವ ಸಂಸ್ಥೆಗಳು ಕಂಡುಬರುವವು. ಭರತಖಂಡದ ಚರಿತ್ರೆಯಲ್ಲಿ ಅನೇಕ ವಿಧವಾದ ರಾಜಕೀಯ ವ್ಯವಹಾರ ನೀತಿಗಳನ್ನು ನೋಡಬಹುದು. ವೇದಯುಗದಲ್ಲಿಯೇ ಅರಾಜಕ, ಸ್ವಲ್ಪ ಜನಾಧಿಕಾರ, ಭೌಜ್ಯ, ವೈರಾಜ್ಯ, ಸಾಮ್ರಾಜ್ಯ, ಮಹಾರಾಜ್ಯ, ಸ್ವಾರಾಜ್ಯಪದ್ಧತಿಗಳೂ, ಚುನಾವಣಾ ರೀತಿಗಳೂ ಇದ್ದವು.[3]

---

[2] ನಿತ್ಯಮುದ್ಯತದಣ್ಡಸ್ಯ ಹಿ ನಿತ್ಯಂ ವಿವೃತಪೌರುಷಃ | . . . ತೀಕ್ಷ್ಣದಣ್ಡೋ ಹಿ ಭೂತಾನಾಮುದ್ವೇಜನೀಯಃ ಮೃದುದಣ್ಡಃ ಪರಿಭೂಯತೇ, ಯಥಾರ್ಹದಣ್ಡಃ ಪೂಜ್ಯಃ— ಕೌಟಿಲ್ಯ; ಅಪ್ರಣೀತೋ ಹಿ ಮಾತ್ಸ್ಯನ್ಯಾಯಮುದ್ಭಾವಯತಿ ಬಲೀಯಾನ್ ಅಬಲಂ ಹಿ ಗ್ರಸತೇ ದಣ್ಡಧರಾಭಾವೇ || ಅರ್ಥಶಾಸ್ತ್ರ, p. ೯; ಶಾನ್ತಿಪರ್ವ ೬೭, ೧೬; ಮನು ೭, ೨೦.

[3] ಸಾಮ್ರಾಜ್ಯಂ ಭೌಜ್ಯಂ ಸ್ವಾರಾಜ್ಯಂವೈರಾಜ್ಯಂ ಪಾರಮೇಷ್ಠ್ಯಂ ರಾಜ್ಯಂ ಮಹಾರಾಜ್ಯಮಾಧಿಪತ್ಯಮಯಂ ಸಮನ್ತಪರ್ಯಾಯೀಸ್ಯಾತ್ ಸಾರ್ವಭೌಮಃ ಸಾರ್ವಾಯುಷ ಆನ್ತಾದಾಪರಾರ್ಧಾತ್ ಪೃಥಿವ್ಯೈ ಸಮುದ್ರಪರ್ಯನ್ತಾಯಾ ಏಕರಾಡ್.

—ಐ. ಬ್ರಾ. VIII, ೧೫

ವೇದಯುಗದಲ್ಲಿ ರಾಜರು ಕೇವಲ ಸಮಾಜಮುಖಂಡರಾಗಿದ್ದರು. ಯುದ್ಧ ಕಾಲದಲ್ಲಿ ಸೇನಾಪತಿಗಳಾಗಿಯೂ, ವಿವಾದಗಳನ್ನು ಸಮಾಜ ಜ್ಯೇಷ್ಠರ ಸಲಹೆಗಳಿಗೆ ಅನುಸಾರವಾಗಿ ತೀರ್ಮಾನಮಾಡುವ ನ್ಯಾಯಾಧೀಶರೂ ಆಗಿದ್ದುದರಿಂದ ನಿರಂಕುಶರಾಗಿರಲಿಲ್ಲ. ಸಮಾಜಕ್ಕೆ ಸಂಬಂಧಪಟ್ಟ ಪ್ರಶ್ನೆಗಳನ್ನು ಸಮಿತಿ, ಸಭೆಗಳಲ್ಲಿ ಸಂಪೂರ್ಣ ಸ್ವಾತಂತ್ರ್ಯದಿಂದ ಜನರು ಚರ್ಚಿಸುತ್ತಿದ್ದರು. ಅಥರ್ವವೇದದಲ್ಲಿ ಇಂತಹ ಸಮಿತಿಗಳಲ್ಲಿ ಸೌಮನಸ್ಯವುಂಟಾಗಲು ಪ್ರಾರ್ಥನೆ ಯಿದೆ.[4] ಕಾಲಕ್ರಮೇಣ ಭರತ, ಕುರು-ಪಾಂಚಾಲ, ಕಾಶಿ ಮುಂತಾದ ರಾಜ ವಂಶದವರು ಪ್ರಬಲರಾಗಿ ತಮ್ಮ ರಾಜ್ಯಗಳನ್ನು ವಿಸ್ತರಿಸುತ್ತ ಬಂದುದರಿಂದ ರಾಜಪದವಿಯು ವಂಶಕ್ರಮವಾಗಿ ಬಂದಿತು. ಆದರೂ ಯೌವರಾಜ್ಯಾಭಿಷೇಕ ಪಟ್ಟಾಭಿಷೇಕಗಳ ಕಾಲದಲ್ಲಿ ಪೌರಜಾನಪದರೆಲ್ಲರ ಸಮ್ಮತಿಯು ಅವಶ್ಯಕ ವಾಗಿದ್ದಿತು.[5] ವೇನನಂತಹ ಅಧರ್ಮಿಯಾದ ರಾಜನನ್ನು ನಾಶಮಾಡಿ ಸನ್ಮಾರ್ಗಪ್ರವರ್ತಕನನ್ನು ಸಿಂಹಾಸನದಲ್ಲಿ ಕುಳ್ಳಿಸಲು ಜನರಿಗೆ ಹಕ್ಕಿದ್ದಿತು. ರಾಜನು ತನ್ನ ರಾಜ್ಯದ ಭೂಮಿಯನ್ನು ಸ್ವಂತ ಆಸ್ತಿಯೆಂದು ಗಣಿಸುವದಕ್ಕೆ ಅವಕಾಶವಿರಲಿಲ್ಲ. ರಾಜನು ಭೂದಾನಮಾಡಬೇಕಾದರೆ ಸ್ವಂತಹಣದಿಂದ ಭೂಮಿಯನ್ನು ಕೊಂಡುಕೊಂಡು "ಕುಳಕಡಿಸಿ," ಇತರರ ಹಕ್ಕುಗಳಿಗೆ ಧಕ್ಕೆ ಬಾರದಂತೆ ದಾನಮಾಡುತ್ತಿದ್ದನೆಂದು ಶಾಸನಗಳಿಂದಲೂ ಧರ್ಮಶಾಸ್ತ್ರ ಗಳಿಂದಲೂ ತಿಳಿದುಬರುವದು. ವಿಶ್ವಜಿದ್ಯಾಗದಲ್ಲಿ ಸರ್ವಸ್ವವನ್ನು ದಾನಮಾಡು ವಾಗ ಕೂಡ ಚಕ್ರವರ್ತಿಯು ಭೂಮಿಯನ್ನೆಲ್ಲ ದಾನಮಾಡಲು ಹಕ್ಕಿಲ್ಲವೆಂದು ಪೂರ್ವಮೀಮಾಂಸಕರು ನಿರ್ಧರಿಸಿದರು.[6] ಪ್ರಜೆಗಳು ಭೂಮಿದಾನ ಮಾಡು

---

[4] ಜ್ಯಾಯಸ್ವನ್ತಃ ಚಿತ್ತಿನೋಮಾವಿಯೌಷ್ಟ ಸಂವದ್ಧನ್ತಃ ಸುಧೀರಾಶ್ಚರನ್ತಃ |
ಅನ್ಯೋನ್ಯಸ್ಮೈ ವಲ್ಗುವದನ್ತಃ ಸಧ್ರೀಚೀನಂವಃ ಸಮ್ಮನಸಃ ಕೃಣೋಮಿ |
ಸ್ಯೆನಾನೀಪ್ರಾಪಾ ಸಹವೋನ್ನಭಾಗಾಃ ಸಮಾನೇಯೋಕ್ತ್ರೇ ಸಹ ವೋಯುನಜ್ಮಿ ||
—ಅಥರ್ವ ೩೦, ೫-೬.

[5] ರಾಮಾಯಣ, ಅಯೋಧ್ಯ ೨, ೧೯-೨೦.

[6] ನ ಭೂಮಿಃ ಸ್ಯಾತ್ಸರ್ವಾನ್ ಪ್ರತ್ಯವಿಶಿಷ್ಟತ್ವಾತ್ | ನಭೂಮಿರ್ದೇಯೇತಿ | ಕುತಃ | ಕ್ಷೇತ್ರಾಣಾಮೀಶಿತಾರೋಮನುಷ್ಯಾದೃಶ್ಯನ್ತೇ ನಕೃತ್ಸ್ನಸ್ಯ ಪೃಥ್ವೀಗೋಳಕಸ್ಯೇತಿ| ಆಹ| ಯ ಇದಾನೀಂ ಭೂಮಿಭಾಗೇನ ಸಾರ್ವಭೌಮೋ ಭೂಮೇರೀಷ್ಟೇ ತಾವತಾಸ್ಯೋಪಿ | ನತತ್ರಕಶ್ಚಿದ್ವಿಶೇಷಃ | ಸಾರ್ವಭೌಮಸ್ಯತು ಏತದಧಿಕಂ ಯದಸೌಪೃಥಿವ್ಯಾಂ ಸಂಭೂತಾನಾಂ ವ್ರೀಹ್ಯಾದೀನಾಂ ರಕ್ಷಣೇನ ನಿರ್ವಿಷ್ಟಸ್ಯ ಕಸ್ಯಚಿದ್ಭಾಗಸ್ಯೇಷ್ಟೇ ನಭೂಮೇಃ | ತನ್ನಿ ವಿಷ್ಟಾಶ್ಚಯೇ ಮನುಷ್ಯಾಸ್ತೈರನ್ಯತ್ಸರ್ವ ಪ್ರಾಣಿನಾಂ ಧಾರಣ ಚಂಕ್ರಮಣಾದಿ ಯದ್ಭೂಮಿಕೃತಂ ತತ್ರೇಶಿತ್ವಂಪ್ರತಿ ನ ಕಶ್ಚಿದ್ವಿಶೇಷಃ || ಶಾಬರಭಾಷ್ಯ. ಜೈ. ಸೂ. VI—೭-೩.

ವಾಗ ರಾಜನ ಅನುಮತಿಯನ್ನು ಮುಂಚೆ ಪಡೆಯಬೇಕೆಂಬ ನಿಯಮವಿರಲಿಲ್ಲ.[7] ಚಕ್ರವರ್ತಿಯೇ ಭೂಮಿಗೆಲ್ಲ ಅಧಿಕಾರಿ, ಜನರು ಅವನ ಅನುಮತಿಯಿಂದ ಜೀವಿಸುವರೆಂಬ ತತ್ವಕ್ಕೆ ಬ್ರಿಟಿಷರೇ ಮೂಲ.[8]

ಪಟ್ಟಾಭಿಷೇಕದ ಕಾಲದಲ್ಲಿ ರಾಜನು "ದಶರತ್ನಿ"ಗಳೆಂಬ ಮುಖ್ಯಾಧಿಕಾರಿಗಳ ಅನುಮತಿಯನ್ನು ಪಡೆಯಬೇಕು.[9] ಧರ್ಮಸಂರಕ್ಷಣೆಯನ್ನು ಮಾಡುವೆನೆಂದು ವ್ರತವನ್ನು ಹಿಡಿದ ಮೇಲೆಯೇ ಬ್ರಾಹ್ಮಣರು "ನಮಗೆ ಸೋಮನೇ ರಾಜನು. ಇವನು ಧರ್ಮಗೋಪ್ತನಾದುದರಿಂದ ಈಗ ರಾಜನೆಂದು ಅಂಗೀಕರಿಸುತ್ತೇವೆ" ಎಂದು ಅಭಿಷೇಕವಮಾಡುತ್ತಿದ್ದರು.[10] ಅನಂತರ ಅಲ್ಲಿ ಸೇರಿದ ಸಮಸ್ತ ಜನರಿಗೂ ರಾಜನೆಂದು ಘೋಷಿಸುತ್ತಿದ್ದರು. ಪೂರ್ವ ದಿಕ್ಕಿನಲ್ಲಿ ವಸುಗಳ ಸಾಮ್ರಾಜ್ಯ, ದಕ್ಷಿಣದಲ್ಲಿ ರುದ್ರರ ಭೌಜ್ಯ, ಪಶ್ಚಿಮದಲ್ಲಿ ಆದಿತ್ಯರ ಸ್ವಾರಾಜ್ಯ, ಉತ್ತರದಲ್ಲಿ ವಿಶ್ವೇದೇವತೆಗಳ—ಉತ್ತರ ಕುರುಮದ್ರ ದೇಶಗಳಲ್ಲಿ ವೈರಾಜ್ಯ, ಮಧ್ಯದಲ್ಲಿ ಕುರುಪಾಂಚಾಲದೇಶದ ಸಾಧ್ಯರ ರಾಜ್ಯ, ಊರ್ಧ್ವದಲ್ಲಿ ಮರುದಾಂಗಿರಸರ ಆಧಿಪತ್ಯಗಳಿದ್ದವು. ಸತ್ಯವ್ರತ, ಸತ್ಯಪ್ರತಿಜ್ಞ, ದೃಢವ್ರತನಾದವನನ್ನೇ ರಾಜನೆಂದು ಅಂಗೀಕರಿಸುತ್ತಿದ್ದರು. ಪ್ರಪಂಚದಲ್ಲಿ ಮತ್ಸ್ಯನ್ಯಾಯವಿರುವದರಿಂದ ಶಾಂತಿಗಾಗಿ ರಾಜನ ಸೃಷ್ಟಿಯಾಯಿತು. ಧರ್ಮದಿಂದ ದಣ್ಡಶಕ್ತಿಯನ್ನು ಪ್ರಯೋಗಿಸುವ ರಾಜನು ಮಹಾವಿಷ್ಣುವಿನಂತೆ ಜಗದ್ರಕ್ಷಣಾಕಾರ್ಯವನ್ನು ವಹಿಸಿರುವದರಿಂದ "ನಾವಿಷ್ಣುಃ ಪೃಥಿವೀಪತಿಃ" ಎಂಬ ಭಾವವು ಪ್ರಚಾರದಲ್ಲಿದ್ದಿತೇ ಹೊರತು ರಾಜನಿಗೆ ದೈವದತ್ತವಾದ ಹಕ್ಕಿದೆ (Divine Right) ಎಂಬುದು ಧರ್ಮಶಾಸ್ತ್ರಕ್ಕೆ ವಿರುದ್ಧ.

ರಾಜನು ಮನ್ತ್ರಪರಿಷತ್ತಿನ ಅಭಿಪ್ರಾಯಗಳನ್ನು ಅನುಸರಿಸಿಯೇ ನಡೆಯಬೇಕಾಗಿತ್ತೆಂದು ಮಾಲವಿಕಾಗ್ನಿಮಿತ್ರ, ಅರ್ಥಶಾಸ್ತ್ರ ಮುಂತಾದವುಗಳಿಂದ ತಿಳಿದುಬರುವದು. ಧರ್ಮ, ಅರ್ಥ, ಕಾಮ ಉಪಧಾಶುದ್ಧರಾದ ೬, ೭, ೮, ಅಥವಾ ೧೦ ಜನರು ಮಂತ್ರಿಗಳಿರಬಹುದು. ಇವರ ಸಭೆಗೆ ಮನ್ತ್ರಪರಿ

---

[7] ಸ್ವಗ್ರಾಮಜ್ಞಾತಿಸಾಮನ್ತದಾಯಾದಾನುಮತೇನಚ| ಹಿರಣ್ಯೋದಕದಾನೇನಷಡ್ಭಿರ್ಗಚ್ಛತಿ ಮೇದಿನೀ || ಯಜ್ಞ. II ೧೧-೪.

[8] *Bom. H.C. App.* p. 1-224; *Bombay Land Revenue Code. See* 37. *Bombay Act* V of 1879; etc.

[9] ಪುರೋಹಿತ, ರಾಜನ್ಯ, ಸೇನಾನಿ, ಸೂತ, ಗ್ರಾಮಣಿ, ಕ್ಷತ್ರಿಯ, ಸಂಗೃಹೀತೃ, ಭಾಗಧುಗ್, ಅಕ್ಷಾವಾಪ, ಪರಿವೃಕ್ತಿ—ತೈ. ಸಂ I, ೮-೦-೨.

[10] ಐ. ಬ್ರಾ. VIII. ೫. ೧೫.

ಷತ್ತೆಂದು ಹೆಸರು.[11] ರಾಜನು ಧರ್ಮಶಾಸ್ತ್ರ ವಿಚಕ್ಷಣನಾದ ಪುರೋಹಿತನಿಂದ ವರ್ಧಿಷ್ಣುವಾಗುವನು.[12] ಚನ್ದ್ರಗುಪ್ತನನ್ನು ಸಿಂಹಾಸನಕ್ಕೇರಿಸಿದ ಕೌಟಿಲ್ಯನೇ ಕೊನೆಗೆ ಚನ್ದ್ರಗುಪ್ತನು ಅಧರ್ಮಿಯಾಗಲು ಅವನನ್ನು ಒಂದೇ ರಾತ್ರಿಯಲ್ಲಿ ಭ್ರಷ್ಟನಾಗಿ ಮಾಡಿದನು. ಬಹುಶಃ ವಿಷ್ಣುಗುಪ್ತ ಕೌಟಿಲ್ಯನ ಮಗನಾದ ರಾಧಗುಪ್ತನು ಅಶೋಕನ ಮಂತ್ರಿಯಾಗಿದ್ದು ಅಶೋಕನು ರಾಜನಾದರೂ ವೈರಾಗ್ಯದಿಂದ ರಾಜಕಾರ್ಯಗಳಿಗೆ ಗಮನಕೊಡದೆ ಭಂಡಾರದಲ್ಲಿದ್ದ ಹಣವನ್ನೆಲ್ಲ ಭಿಕ್ಷುಗಳಿಗೆ ದಾನಮಾಡಲು ಯತ್ನಿಸಿದಾಗ ಅಶೋಕನ ಅಧಿಕಾರವನ್ನೆಲ್ಲ ಕಿತ್ತುಕೊಂಡು ಚಕ್ರವರ್ತಿಯನ್ನು ಭಿಕ್ಷುಕ ಸ್ಥಿತಿಗೆ ತಂದನು.

> ತ್ಯಾಗಶೂರೋ ನರೇನ್ದ್ರೋಽಸೌ ಅಶೋಕೋ ಮೌರ್ಯಕುಞ್ಜರಃ |
> ಜಮ್ಬೂದ್ವೀಪೇಶ್ವರೋಭೂತ್ವಾ ಜಾತೋಽರ್ಧಾಮಲಕೇಶ್ವರಃ ||
> —ದಿವ್ಯಾವದಾನ. p. ೪೩೦.

> ರಾಜ್ಞೋಹಿ ದುಷ್ಟನಿಗ್ರಹಃ ಶಿಷ್ಟಪರಿಪಾಲನಂಚಧರ್ಮೋ ನಪುನಃ
> ಶಿರಾಂಮುಣ್ಡನಂಜಟಾಧಾರಣಂವಾ | —ನೀತಿವಾಕ್ಯಾಮೃತ.

ಭೂಮಿ (ಜನ) ಮತ್ತು ಶಾಸ್ತ್ರಗಳಿಗೆ ಶಸ್ತ್ರವು ಅಧೀನವಾಗಿರಬೇಕೆಂಬುದೇ ಪ್ರಜಾಪ್ರಭುತ್ವದ ತತ್ತ್ವ. ವಿಪರೀತವಾದರೇ ನಿರಂಕುಶಪ್ರಭುತ್ವವಾಗುವದು. ನನ್ದರು ತಮ್ಮ ಶಸ್ತ್ರಕ್ಕೆ ಶಾಸ್ತ್ರವನ್ನೂ ಭೂಮಿ (ಪ್ರಜೆ)ಯನ್ನೂ ಅಧೀನ ಮಾಡಿಕೊಳ್ಳಲು ಯತ್ನಿಸಿದುದರಿಂದ ಕೌಟಿಲ್ಯನು ಧರ್ಮೋದ್ಧಾರಕ್ಕಾಗಿ ನನ್ದರ ಮೂಲೋತ್ಪಾಟನೆಯನ್ನು ಮಾಡಬೇಕಾಯಿತು.

---

[11] ಮೌಳಾನ್.ಶಾಸ್ತ್ರವಿದಃ ಶೂರಾನ್‌ಲಬ್ಧಲಕ್ಷಾನ್ ಕುಲೋದ್ಭವಾನ್ | ಸಚಿವಾನ್ ಸಪ್ತಚಾಷ್ಟೌವಾ ಪ್ರಕುರ್ವೀತ ಪರೀಕ್ಷಿತಾನ್ || ಸರ್ವೇಷಾಂತುವಿಶಿಷ್ಟೇನ ಬ್ರಾಹ್ಮಣೇನ ವಿಪಶ್ಚಿತಾ | ಮನ್ತ್ರಯೇತ್ ಪರಮಂಮನ್ತ್ರಂ ರಾಜಾ ಷಾಡ್ಗುಣ್ಯಸಂಯುತಮ್ ||—ಮನು. VIII—೫೪, ೫೭. ಪುರೋಧ, ಪ್ರತಿನಿಧಿ, ಪ್ರಧಾನ, ಸಚಿವ, ಮನ್ತ್ರೀ, ಪ್ರಾಡ್ವಿವಾಕ, ಪಣ್ಡಿತ, ಸುಮನ್ತ, ಅಮಾತ್ಯ. ದೂತ ಎಂಬ ಹತ್ತು—ಕಾಮನ್ದಕ ೪-೩೨; ಶುಕ್ರನೀತಿ ೩-೭೮, ಪ್ರಾಯಶ್ಚಿತ್ತ ನಿರ್ಣಯದಲ್ಲಿ ಪರಿಷತ್ತು ಅವಶ್ಯಕ—ಗೌ ೨೮-೪೬, ವಸಿಷ್ಠ III—೨೦; ಬೌ. I—೧-೮. ಪರಾಶರ VIII—೨೭; ಮನು XII—೩. ಅತಏವಹಿ ಧರ್ಮಸೂಕ್ಷ್ಮನಿರ್ಣಯೇ ಪರಿಷದ್ವ್ಯಾಪಾರ ಇಷ್ಯತೇ | ಪುರುಷವಿಶೇಷಶ್ಚಾಪೇಕ್ಷ್ಯತೇ ದಶಾವರಾಪರಿಷತ್ ತ್ರಯೋವೈಕೋವಾ ಇತಿ—ಶಾಂಕರಭಾಷ್ಯ—ಬೃ. ಉಪ. IV—೩-೨.

[12] ಬ್ರಾಹ್ಮಣೇನೈಧಿತಂ ಕ್ಷತ್ರಂ ಮನ್ತ್ರಿಮನ್ತ್ರಾಭಿಮನ್ತ್ರಿತಮ್ | ಜಯತ್ಯಜಿತಮತ್ಯನ್ತಂ ಶಾಸ್ತ್ರಾನುಗತ ಶಸ್ತ್ರಿತಮ್ || ಅರ್ಥಶಾಸ್ತ್ರ.

ಯೇನ ಶಾಸ್ತ್ರಂಚ ಶಸ್ತ್ರಂಚ ನನ್ದರಾಜಗತಾ ಚ ಭೂಃ |
ಅಮರ್ಷೇಣೋದ್ಧೃತಾನ್ಯಾಶು ತೇನಶಾಸ್ತ್ರಮಿದಂ ಕೃತಮ್ ||
—ಅರ್ಥಶಾಸ್ತ್ರ.

ಕ್ರಿಸ್ತಪೂರ್ವ ಎಂಟು-ಏಳನೆಯ ಶತಾಬ್ದಗಳಿಂದ ಕ್ರಿ.ಶ. ೪ ನೆಯ ಶತಾಬ್ದದ ವರೆಗೂ ಗಣರಾಜ್ಯಗಳು (Republics) ಭರತಖಣ್ಡದಲ್ಲಿದ್ದವು, ರಾಜಕೀಯ ಗಣಗಳಿಗೆ ಸಂಘಗಳೆಂದು ಹೆಸರು[13]. ಈ ಸಂಘಗಳ ಬಲವು ಸಂಘಾತವೃತ್ತಿ ಮತ್ತು ಸಂಘಾತಯೋಗಗಳನ್ನನುಸರಿಸಿದ್ದಿತು.[14] ಈ ಐಕಮತ್ಯವು ಕೆಟ್ಟುಹೋದರೆ ಸಂಘಗಳು ನಾಶವಾಗುವವು. ಐಕಮತ್ಯವು ಸಡಿಲವಾಗುವದಕ್ಕೆ ಲೋಭ ಅಸೂಯೆಗಳೇ ಕಾರಣ. ಕೌಟಿಲ್ಯನು ಏಕರಾಜನಾಗಬೇಕೆಂದು ಇಚ್ಛಿಸುವ ರಾಜನು ಈ ಸಂಘ ಮುಖಂಡರಲ್ಲಿ ಸಾಮದಾನೋಪಾಯಗಳಿಂದ ಐಕಮತ್ಯವನ್ನು ತಪ್ಪಿಸಿ ಅನಂತರ ಭೇದ ದಣ್ಡೋಪಾಯಗಳ ಪ್ರಯೋಗಮಾಡಬೇಕೆಂದು ಹೇಳುವನು.[15] ನಾಣ್ಯಗಳಿಂದಲೂ ಶಾಸನಗಳಿಂದಲೂ ಗ್ರೀಕರ ಗ್ರಂಥಗಳಿಂದಲೂ ಕ್ರಿಸ್ತಪೂರ್ವದಲ್ಲಿ ಲಿಚ್ಛವಿ, ಮಲ್ಲ, ಮದ್ರಕ, ಕುರುಪಾಂಚಾಲ, ವೃಷ್ಣಿ-ಸಾತ್ವತ, ಅಂಬಷ್ಠ, ಯೌಧೇಯ, ಕ್ಷುದ್ರಕ, ರಾಷ್ಟ್ರಿಕ, ಪೈಟನಿಕ, ಅಪರಾನ್ತ, ಆರ್ಜುನಾಯನ, ಔದುಮ್ಬರ, ಮಾಳವ, ಭೋಜಕ, ಕಾಂಭೋಜಕ, ಗಾನ್ಧಾರ, ನಾಭಕ ಮುಂತಾದ ಅನೇಕ ಪ್ರಜಾಪ್ರಭುತ್ವಗಳಿದ್ದವೆಂದೂ, ಅಲೆಕ್ಸಾಂಡರನು ಕೂಡ ಇವರೊಡನೆ ಯುದ್ಧಮಾಡಲಾರದೆ ತನ್ನ ದೇಶಕ್ಕೆ ಹಿಂತಿರುಗಬೇಕಾಯಿತೆಂದು ತಿಳಿದು ಬರುವದು.

ಈ ರಾಜಕೀಯ ಸಂಘಗಳನ್ನನುಸರಿಸಿ ಬೌದ್ಧ, ಜೈನರ ಮತಸಂಬಂಧವಾದ

---

[13] ಸಂಘೋದ್ಘೌಗಣಪ್ರಶಂಸಯೋಃ : ಪಾಣಿನಿ III, ೩-೮೬, ಕೌಟಿಲ್ಯ XI, ೧ ಕಾಂಭೋಜ, ಸುರಾಷ್ಟ್ರಕ್ಷತ್ರಿಯ ಶ್ರೇಣ್ಯಾದಯೋ ವಾರ್ತಾಶಸ್ತ್ರೋಪಜೀವಿನಃ | ಕೇಚಿದ್ದೇಶಾಗಣಾಧೀನಾಃ ಕೇಚಿದ್ರಾಜಾಧೀನಾ ಇತಿ—ಅವಧಾನಶತಕ ೮೮. ಜನಪದಶಬ್ದಾತ್ ಕ್ಷತ್ರಿಯಾದ್ ಅಞ್—ಪಾಣಿನಿ, IV, ೧-೧೮ ; ಕ್ಷತ್ರಿಯಾದೇಕರಾಜಾತ್ ಸಂಘಪ್ರತಿಷೇಧಾರ್ಥಮ್-ವಾರ್ತಿಕ.

[14] ಶಾನ್ತಿಪರ್ವ, ೧೦೭,೧೩.೧೪. ತಸ್ಮಾತ್ಸಂಘಾತಮೇವಾಹುರ್ಗಣಾನಾಂ ಶರಣಂ ಮಹತ್ | . . . ಗಣಾನಾಂಚ ಕುಲಾನಾಂಚ ರಾಜ್ಞಾಂ ಭರತಸತ್ತಮ | ವೈರಸಂದೀಪನಾವೇತೌ ಲೋಭಾಮರ್ಷೌ ನರಾಧಿಪ || ಶಾನ್ತಿ. ೧೦೭, ೧೦.

[15] ಸಂಘಲಾಭೋ ದಣ್ಡಮಿತ್ರಲಾಭಾನಾಮುತ್ತಮಃ | ಸಂಘಾಭಿಸಂಹತತ್ವಾದಧೃಷ್ಯಾನ್ ಪರೇಷಾಂತಾನನುಗುಣಾನ್ ಭುಂಜೀತ ಸಾಮದಾನಾಭ್ಯಾಮ್ | ದ್ವಿಗುಣಾನ್ ಭೇದದಣ್ಡಾಭ್ಯಾಮ್ |—ಅರ್ಥಶಾಸ್ತ್ರ, ಪು. ೩೭೬.

ಸಂಘಗಳಾದವು. ಇವುಗಳ ಕಾರ್ಯಕ್ರಮವು ಪ್ರಜಾಸಮ್ಮತವಾಗಿದ್ದಿತು. ಸಭಾಗೃಹದಲ್ಲಿ ಆಸನಪ್ರಜ್ಞಾಪಸೆಂಬ ಅಧಿಕಾರಿಯು ಸದಸ್ಯರ ಅರ್ಹತೆಗೆ ತಕ್ಕಂತೆ ಆಸನಗಳನ್ನು ಏರ್ಪಡಿಸಿ ಚುನಾವಣೆ ಹಕ್ಕು ಯಾರಿಗಿದೆ ಎಂಬುದನ್ನು ನಿರ್ಧರಿಸುತ್ತಿದ್ದನು. ಅನಂತರ ಕರ್ಮವಾಚಕನೆಂಬ ಅಧಿಕಾರಿಯು ಚರ್ಚೆಗೆ ಬಂದ ಸಲಹೆಗಳನ್ನು ಮೂರುಸಲ (ಪಾರ್ಲಿಮೆಂಟಿನ ಮೂರು ವಾಚನಗಳಂತೆ) ಸಭೆಯವರಿಗೂ ತಿಳಿಸುತ್ತಿದ್ದನು. ಮೌನದಿಂದ ಸಮ್ಮತಿಯೆಂದು ಗ್ರಹಿಸುತ್ತಿದ್ದರು. ಯಾರಾದರೂ ಪ್ರತಿಭಟಿಸಿ ತಮ್ಮ ಸಲಹೆಯನ್ನು ಸಭೆಯ ಮುಂದೆ ಇಡಬಹುದು. ಆಗ ಮಧ್ಯಸ್ಥನೆಂಬ ಅಧಿಕಾರಿಯು ಸಲಹೆಗಳ ಮೇಲೆ ನಡೆಯುವ ಚರ್ಚೆಗಳನ್ನು ಹತೋಟಿಯಲ್ಲಿಡುತ್ತಿದ್ದನು. ಸಂಪೂರ್ಣವಾಗಿ ಚರ್ಚೆಯಾದ ಮೇಲೆ ಶಲಾಕಾಗ್ರಹಾಪಕನೆಂಬ ಅಧಿಕಾರಿಯು ಸದಸ್ಯರೆಲ್ಲರೂ ತಮ್ಮ ತಮ್ಮ ಅಭಿಮತಗಳನ್ನು ಸೂಚಿಸುವದಕ್ಕಾಗಿ ಶಲಾಕೆ (Voting Paper) ಗಳನ್ನು ಹಂಚುತ್ತಿದ್ದನು. ಹೆಚ್ಚು ಅಭಿಮತಗಳಿಂದ ಕಾರ್ಯವನ್ನು ನಿರ್ಧರಿಸುತ್ತಿದ್ದರು. ಸಭೆಗೆ ಬರದಿದ್ದವರು (Absentee Voting) ಅಭಿಮತ ಕೊಡಲು ಅವಕಾಶವಿಲ್ಲ. ಸಭೆಗೆ ಕನಿಷ್ಟಪಕ್ಷ ಇಷ್ಟು ಸದಸ್ಯರಿರಬೇಕೆಂಬ (Quorum) ನಿಯಮವಿದ್ದುದರಿಂದ ಗಣಪೂರಕ (Whip) ನೆಂಬ ಅಧಿಕಾರಿಯಿದ್ದನು. ಇದು ಸನಾತನ ಪದ್ಧತಿಯೆಂದೂ ಗೌತಮಬುದ್ಧನ ಕಾಲಕ್ಕೆ ಎಷ್ಟೋ ಹಿಂದೆಯೇ ಇಂತಹ ಚುನಾವಣೆಯ ಕ್ರಮವಿದ್ದಿತೆಂದು ಬೌದ್ಧಗ್ರಂಥಗಳಿಂದ ತಿಳಿದು ಬರುವದು.[16]

ಕ್ರಿ.ಶ. ೧೯೦೯ ರಲ್ಲಿ ಡಾ|| ಶ್ಯಾಮಶಾಸ್ತ್ರಿಗಳು ಕೌಟಿಲ್ಯನ ಅರ್ಥಶಾಸ್ತ್ರವನ್ನು ಗೊತ್ತುಹಚ್ಚಿ ಪ್ರಕಟಿಸಿದರು. ಅದುವರೆಗೂ ಪಾಶ್ಚಾತ್ಯರು ಭಾರತೀಯರಿಗೆ ಆಧ್ಯಾತ್ಮಿಕ ವಿಷಯಗಳೇ ವಿನಾ ಮತ್ತಾವುದರಲ್ಲಿಯೂ ಹೆಚ್ಚು ಆಸಕ್ತಿಯಿರಲಿಲ್ಲವೆಂದಭಿಪ್ರಾಯಪಡುತ್ತಿದ್ದರು. ಆದರೆ ಕೌಟಿಲ್ಯನ ಗ್ರಂಥವು ಭಾರತೀಯರ ಆಡಳಿತದಲ್ಲಿಯೂ ಹಿಂದೆಗೆದಿರಲಿಲ್ಲವೆಂದೂ ಅರ್ಥಶಾಸ್ತ್ರವು ಪ್ರಪಂಚದ ರಾಜಕೀಯ ಗ್ರಂಥಗಳಲ್ಲೆಲ್ಲಾ ಅಗ್ರಗಣ್ಯವೆಂದೂ ಸ್ಥಾಪಿಸಿತು. ಕೌಟಿಲ್ಯ, ಚಾಣಕ್ಯ ಅಥವಾ ವಿಷ್ಣುಗುಪ್ತನೆಂಬ ಬ್ರಾಹ್ಮಣನು ನನ್ದರಾಜ್ಯವನ್ನು ನಾಶಮಾಡಿ ಮೌರ್ಯ ಚನ್ದ್ರಗುಪ್ತನ ಕಾಲದಲ್ಲಿ ಸುಮಾರು ಕ್ರಿ.ಪೂ. ೩೨೦ ರಲ್ಲಿ ಈ ಗ್ರಂಥವನ್ನು ರಚಿಸಿದನೆಂದು ಅನೇಕರು ಅಂಗೀಕರಿಸಿರುವರು. ಕೌಟಿಲ್ಯನಿಗೆ ಹಿಂದೆಯೇ ಅರ್ಥಶಾಸ್ತ್ರವು ವಿಶೇಷವಾಗಿ

---

[16] ಚುಲ್ಲವಗ್ಗ. ೪, ೧೧-೧೨.

ಬೆಳೆದಿದ್ದಿತು. ಆದರೆ ಅನೇಕ ವಿಪ್ರತಿಪತ್ತಿಗಳಿದ್ದುದರಿಂದ ವಿಷ್ಣುಗುಪ್ತನೇ ಪುನಃ ಸೂತ್ರಗಳನ್ನು ಭಾಷ್ಯವನ್ನು ರಚಿಸಿದನು.

ದೃಷ್ಟ್ವಾ ವಿಪ್ರತಿಪತ್ತಿಂ ಬಹುಧಾ ಶಾಸ್ತ್ರೇಷು ಭಾಷ್ಯಕಾರಾಣಾಮ್ |
ಸ್ವಯಮೇವ ವಿಷ್ಣುಗುಪ್ತಶ್ಚಕಾರ ಸೂತ್ರಂಚ ಭಾಷ್ಯಂ ಚ ||

ತನ್ನ ಗ್ರಂಥದಲ್ಲಿ ಪ್ರಾಚೀನಾಚಾರ್ಯರಾದ ಮನು, ಬೃಹಸ್ಪತಿ, ಉಶನಸ್, ಪಾರಾಶರ್ಯ, ಆಮ್ಭೀಯ, ಭಾರದ್ವಾಜ, ವಿಶಾಲಾಕ್ಷ, ಪಿಶುಣ, ಕೌಣ ಪದನ್ತ, ವಾತವ್ಯಾಧೀ, ಬಾಹುದನ್ತೀಪುತ್ರ, ಕಾತ್ಯಾಯನ, ಕಿಂಜಲ್ಕ, ಪಿಶುಣಪುತ್ರ, ಕಣಿಂಕಭಾರದ್ವಾಜ, ದೀರ್ಘಚಾರಾಯಣ, ಘೋಟಮುಖ ಮುಂತಾದವರ ಅಭಿಪ್ರಾಯಗಳನ್ನನುವಾದಮಾಡಿರುವನು. ಕೌಟಿಲ್ಯನು ಮೆಕಿವೆಲ್ಲಿಯಂತೆ ಕೇವಲ ಕುತನ್ತ್ರಗಾರನಲ್ಲ. ಬಿಸ್ಮಾರ್ಕ್ ಮುಂತಾದವರಂತೆ ಪಾಶವಶಕ್ತಿಪ್ರಯೋಗಮಾಡಿದವನಲ್ಲ. ಧರ್ಮ, ನ್ಯಾಯ, ಸತ್ಯ, ಶಾಂತಿ ರಕ್ಷಣೆಯೇ ಕೌಟಿಲ್ಯನ ಧ್ಯೇಯ. ಅರ್ಥಶಾಸ್ತ್ರದಲ್ಲಿ ಕಂಡುಬರುವ ರಾಜಕೀಯ ವ್ಯವಸ್ಥೆಯು ಮೌರ್ಯಸಾಮ್ರಾಜ್ಯಕ್ಕೆ ಸ್ವಲ್ಪ ಹಿಂದಿನದು. ಆದುದರಿಂದ ಅರ್ಥಶಾಸ್ತ್ರ ಮೆಗಾಸ್ತನೀಸಿನ ಗ್ರಂಥಗಳಿಗೆ ಸ್ವಲ್ಪ ವ್ಯತ್ಯಾಸಗಳು ಕಂಡು ಬರುವವು. ಅಧರ್ಮನಿರತರಾದ ನನ್ದರನ್ನು ನಿರ್ಮೂಲಮಾಡಿ, ಅಲೆಕ್ಸಾಂಡರ್ ಮುಂತಾದ ಮ್ಲೇಚ್ಛರ ದಾಳಿಗೆ ಅವಕಾಶಕೊಟ್ಟ ಬಲಹೀನವಾದ ಗಣರಾಜ್ಯ ಗಳನ್ನು ಒಬ್ಬ ಬಲಿಷ್ಠರಾಜನ ಅಧಿಕಾರಕ್ಕೆ ಒಳಗಾಗುವಂತೆ ಮಾಡುವದ ಕ್ಕಾಗಿ ಮಹಾ ಪ್ರತಿಭಾಶಾಲಿಯೂ ಋಷಿಸಮಾನನೂ ಆದ ಕೌಟಿಲ್ಯನು ತನ್ನ ಗ್ರಂಥವನ್ನು ರಚಿಸಿದನು. ಈತನ ಮನ್ತ್ರಶಕ್ತಿಯ ಫಲವಾಗಿ ಮೌರ್ಯರ ಸಾಮ್ರಾಜ್ಯವು ಧರ್ಮವಿಜಯವನ್ನು ಪಡೆಯಿತು. ಹಿಂದುಕುಷ್ ಪರ್ವತ ಶ್ರೇಣಿಯಿಂದ ಮೈಸೂರಿನ ಉತ್ತರಭಾಗದ ವರೆಗೂ ವಿಸ್ತರಿಸಿತು. ಭಾರತೀಯ ರಲ್ಲಿ ರಾಷ್ಟ್ರೀಯತೆಯು ಬೆಳೆಯಿತು. ಕೌಟಿಲ್ಯನು ಪ್ರಜಾಪ್ರಭುತ್ವಗಳನ್ನೆಲ್ಲ ನಾಶಮಾಡಲಿಲ್ಲ. ಸಮುದ್ರಗುಪ್ತನ ಕಾಲದ ವರೆಗೂ ಮಾಳವ, ಆರ್ಜುನ, ಯೌಧೇಯ ಮುಂತಾದ ಗಣರಾಜ್ಯಗಳಿದ್ದುವು. ಮಾಳವ ಗಣದಿಂದಲೇ ವಿಕ್ರಮಶಕೆಯು ಆರಂಭಿಸಲ್ಪಟ್ಟಿತು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಕೇವಲ ಸರ್ಕಾರ ವಿಷಯವೇ ಅಲ್ಲದೆ, ಆರ್ಥಿಕಸ್ಥಿತಿ, ಕೈಗಾರಿಕೆಗಳು, ರತ್ನಪರೀಕ್ಷೆ, ಲೋಹಗಳು, ರಸಾಯನಶಾಸ್ತ್ರ, ನೀರಾವರಿ ಕೆಲಸ, ವೈದ್ಯ, ವೃಕ್ಷಶಾಸ್ತ್ರ, ವಿಷಶಾಸ್ತ್ರ, ನೌಕಾರಚನೆ, ಪಶುಪಾಲನೆ, ಹಸ್ತಿಶಾಸ್ತ್ರ, ಅಶ್ವಶಾಸ್ತ್ರ, ವಾಸ್ತು ಶಿಲ್ಪ, ಅಥರ್ವಪ್ರಯೋಗ, ಯನ್ತ್ರರಚನೆ, ಅನಾಥಜನರಕ್ಷಣೆ, ಜ್ಯೋತಿಷ ಮುಂತಾದ ಎಷ್ಟೋ ವಿಷಯಗಳನ್ನು ಪ್ರತಿಪಾದಿಸಿದೆ.

ಮೌರ್ಯರ ನಂತರ ಮೊಘಲ್ ಸಾಮ್ರಾಟರ ಕಾಲದ ವರೆಗೂ ಆಳಿದ ರಾಜರೆಲ್ಲರೂ ಕೇಂದ್ರ ಸರ್ಕಾರದಲ್ಲಿ ಹೆಚ್ಚು ಮಾರ್ಪಾಟು ಮಾಡದೆ ಮೌರ್ಯರ ರಾಜಕೀಯ ಪದ್ಧತಿಯನ್ನೇ ಅನುಸರಿಸುತ್ತಿದ್ದರು. ಪ್ರಾಂತಗಳ ಆಡಳಿತವು ಭರತಖಂಡದ ಬೇರೆಬೇರೆ ಭಾಗಗಳಲ್ಲಿ ದೇಶಾನುಗುಣವಾಗಿದ್ದವು. ಉತ್ತರದಲ್ಲಿ ರಾಷ್ಟ್ರ, ಆಹಾರ, ಜನಪದ, ದೇಶ, ವಿಷಯ, ಭುಕ್ತಿ ಎಂಬ ವಿಭಾಗಗಳೂ, ಕರ್ಣಾಟಕದಲ್ಲಿ ರಾಜ್ಯ, ಪೀಠಿಕ, ವೇಂಠೆ, ವಿಷಯ, ಸೀಮೆ, ನಾಡು, ಸ್ಥಲ, ಹೋಬಳಿ (ಆರವೀಡು ರಾಜರ ಕಾಲ) ಎಂಬವೂ ತಮಿಳುದೇಶದಲ್ಲಿ ವಲನಾಡು, ಮಂಡಲ, ನಾಡು, ಪಱು, ಐಂಬದಿನ್, ಮೇಲಾಗರಂ, ಅಗರಂ, ಚತುರ್ವೇದಿ ಮಂಗಲಂ, ಕೂಟ್ಟಂ, ಕೋಟ್ಟಂ ಎಂಬ ಪ್ರಾಂತವಿಭಾಗಗಳು ಇದ್ದವು. ಚಕ್ರವರ್ತಿಯು ನೇಮಿಸಿದ ಪ್ರಾಂತಾದಿಕಾರಿಗಳಲ್ಲದೆ, ವಂಶಪರಂಪರೆಯಾಗಿ ಸ್ಥಾನಿಕ ಆಡಳಿತ ಹೊಂದಿದ್ದ ಸಾಮನ್ತ (ನಾಯಕ, ಪಾಳೆಯಗಾರ) ರಾಜರೂ ಇದ್ದರು. ಇವರು ಕೇಂದ್ರಸರ್ಕಾರಕ್ಕೆ ಸೇನೆಯನ್ನೂ ಕಪ್ಪವನ್ನೂ ನಿಯಮಿತಕಾಲದಲ್ಲಿ (ರಾಜವರ್ಧನ್ತಿ, ಮಹರ್ನವಮಿ, ಯುಗಾದಿ) ಒಪ್ಪಿಸಿ, ತಮ್ಮ ಪ್ರಾಂತಗಳಲ್ಲಿ ಆಗಾಗ ಸಂಚಾರಮಾಡಿ ಕಂದಾಯ ವಸೂಲಿ, ವಿವಾದಗಳ ತೀರ್ಮಾನ, ದುರ್ಗ, ಗಡಿ, ಕೋಟೆ, ರಾಜಮಾರ್ಗಗಳ ರಕ್ಷಣೆಯನ್ನು ಮಾಡಬೇಕಾಗಿದ್ದಿತು.

**ಸ್ಥಾನಿಕ ಆಡಳಿತ:** ಶಾಸನಗಳಲ್ಲಿ "ರಾಜ, ರಾಜ್ಞೀ, ಯುವರಾಜ, ಮನ್ತ್ರಿ, ಪುರೋಹಿತ ಪ್ರತೀಹಾರ, ಸೇನಾಪತಿ, ಭಾಣ್ಡಾಗಾರಿಕ, ಅಕ್ಷಪಟಲಿಕ, ಭಿಷಗ್, ನೈಮಿತ್ತಿಕ, ಅನ್ತಃಪುರಿಕ, ದೂತ, ಕರಿ-ತುರಗ ಪತ್ತನ ಆಕರ—ಸ್ಥಾನಗೋಕುಲಾಧಿಕಾರಿ" "ರಾಜಸಾಮನ್ತ, ಭೋಗಿಕ, ವಿಷಯಪತಿ, ರಾಷ್ಟ್ರ-ಗ್ರಾಮ ಮಹತ್ತರಾಧಿಕಾರಿಕ"; "ಸಾಮನ್ತ ರಾಜಸ್ಥಾನೀಯ—ಉಪರಿಕ—ಕುಮಾರಾಮಾತ್ಯ, ಆಯುಕ್ತಕ, ಮಹಾಮಹತ್ತರ, ಬೃಹದ್ಯೋಗಾಧಿಕರಣ"ರೆಂಬ ಅಧಿಕಾರಿಗಳಿದ್ದರೆಂದು ತಿಳಿದುಬರುವದು.[17] ರಾಜನು ದಾನಮಾಡಿದ ಭೂಮಿಯ ಸರಹದ್ದನ್ನು ಈ ಅಧಿಕಾರಿಗಳು ಸ್ಥಳದ ಮುಖಂಡರೊಂದಿಗೆ ನಿರ್ಧರಿಸಬೇಕು.[18] ಗ್ರಾಮದಲ್ಲಿ ಏಳು ಅಥವಾ ಹದಿನೆಂಟು

---

[17] *E.I.* IX, p. 304; p. 297; p. 287, etc.

[18] ರಾಜಾಭೂಮಿಂದತ್ವಾ ಚಾತುರ್ವೈದ್ಯವಣಿಗಾದಿ ಸರ್ವಗ್ರಾಮೀಣ ತನ್ಮಹತ್ತರ ಸ್ವಾಮಿಪುರುಷಾಧಿಷ್ಠಿತಂ ಪರಿಚ್ಛಿನ್ದ್ಯಾತ್ | ಶಾಸನಂವಾಕುರ್ಯಾತ್ |—ಬೃಹಸ್ಪತಿ.

ಪ್ರಕೃತಿಗಳು ಪಂಚಾಯತರಾಗುತ್ತಿದ್ದರು.[19] ಇವರ ಹಿತಕ್ಕಾಗಿಯೇ ರಾಜನು ಪ್ರವರ್ತಿಸಬೇಕು.[20]

ದಕ್ಷಿಣದೇಶದಲ್ಲಿ ಬಾರಾಬಲೂತಿಯೆಂಬ ಪದ್ಧತಿಯು ಇದ್ದಿತು. ಗೌಡ, ಸೇನಬೋವ, ತೋಟಿ, ತಳಾರಿ ಮುಂತಾದವರು ಪಂಚಾಯತಿ ಮೂಲಕ ಅಧಿಕಾರವನ್ನು ನಡಿಸುತ್ತಿದ್ದರು. ಕಂದಾಯ ವಸೂಲಿ, ವ್ಯಾಜ್ಯ ತೀರ್ಮಾನ, ದಂಡವನ್ನು ವಿಧಿಸುವದು, ಕೆರೆ, ಕಾಲುವೆ, ಹುಲ್ಲುಗಾವಲು, ದೇವಾಲಯ, ಮಠ, ಮುಂತಾದವುಗಳ ಮೇಲ್ವಿಚಾರಣೆ ಕೆಲಸಗಳು ಸಭೆ, ಊರ್, ನಾಡು, ಮಹಾನಾಡುಗಳೆಂಬ ಸಂಘಗಳ ಕರ್ತವ್ಯವಾಗಿದ್ದಿತು. ಪ್ರಬಲಕಾರಣವಿಲ್ಲದೆ ಕೇನ್ದ್ರ ಸರ್ಕಾರವಾಗಲೀ, ಪ್ರಾಂತದ ಅಧಿಕಾರಿಗಳಾಗಲಿ ಸ್ಥಳೀಯ ಸ್ವಾತಂತ್ರ್ಯಕ್ಕೆ ಕುಂದನ್ನು ತರುತ್ತಿರಲಿಲ್ಲ. ಕರ್ಣಾಟಕ ಮತ್ತು ದ್ರವಿಡ ದೇಶಗಳಲ್ಲಿ ಈ ಸಭೆಗಳು ಪ್ರಜಾಪ್ರಭುತ್ವಕ್ಕನುಸಾರವಾಗಿ ಸರ್ವಾಧಿಕಾರ ವನ್ನು ನಡಿಸುತ್ತಿದ್ದವು. ಉದಾಹರಣೆಗಾಗಿ ಚೋಳಪರಾನ್ತಕನ ಉತ್ತರ ಮೇರೂರು ಶಾಸನವನ್ನು ಇಲ್ಲಿ ವಿವರಿಸುವೆವು.

ಪರಾನ್ತಕನ ೧೨ನೆಯ ವರ್ಷದಲ್ಲಿ (ಕ್ರಿ.ಶ. ೯೧೯) ತಾತ್ತನೂರ್ ಮೂವೆಂದವೇಳಾನ್ ಎಂಬ ಚಕ್ರವರ್ತಿಯಿಂದ ನೇಮಿತನಾದ ತಿರುಮಂದಿರದ ಅಧಿಕಾರಿಯು ಉತ್ತರಮೇರೂರು ಎಂಬ ಅಗ್ರಹಾರದ ಜನರನ್ನೆಲ್ಲ ಸಭೆ ಸೇರಿಸಿ (ವಾರಿಯಮಾಹ), ತಾನು ಅಧ್ಯಕ್ಷನಾಗಿ ಆಡಳಿತಪದ್ಧತಿಗಳನ್ನು ನಿಶ್ಚಯಿಸಿ ದನು. ಆ ಊರಿನಲ್ಲಿ ಮೂವತ್ತು ಚೇರಿ (ಮೊಹಲ್ಲ)ಗಳಿದ್ದವು. ಪ್ರತಿಯೊಂದು ಚೇರಿಯಿಂದ ಚುನಾವಣೆಗೆ ನಿಂತವರು ಆಸ್ತಿ, ವಯಸ್ಸು, ವಿದ್ಯೆ, ಪ್ರಾಮಾಣಿ ಕತೆಗಳ ಅರ್ಹತೆ ಪಡೆದಿರಬೇಕು. ಕಾಲುವೇಲಿ ಭೂಮಿಯನ್ನಾದರೂ ಮನೆ ಯನ್ನಾದರೂ ಹೊಂದಿರಬೇಕು, ಅಥವಾ ಶಾಸ್ತ್ರಕಾರ್ಯಗಳಲ್ಲಿ ಕುಶಲವಾಗಿರ ಬೇಕು; ಪ್ರಾಮಾಣಿಕತೆಯಿಂದ ಧನವಂತನಾಗಿರಬೇಕು; ವಯಸ್ಸಿನಲ್ಲಿ ಮೂವ್ವತ್ತಕ್ಕೆ ಮೇಲೆ ಅರವತ್ತಕ್ಕೆ ಒಳಗೆ ಇರಬೇಕು. ಆ ವರ್ಷಕ್ಕೆ ಹಿಂದೆ

---

[19] ತಥಾಪರಿಷತ್ಕಲ್ಪಿತಪಾಟಕೇ ವಣಿಕ್ ತೈಲಿಕಃ ಶಿಂಪಕೋ ರಜಕೋ ಕುಮ್ಭಕಾರ ಶ್ಚರ್ಮಕಾರೋ ಮಾ (ನಾ)ಪಿತಶ್ಚೇತಿ ಸಪ್ತಪ್ರಕೃತಯಃ | *Paṭhāk Comm.* Vol. p. 297.

ರಜಕಶ್ಚರ್ಮಕಾರಶ್ಚ ನಟೋ ಬುರುಡಏವಚ | ಕೈವರ್ತಕಶ್ಚ ವಿಜ್ಞೇಯಾಮ್ಲೇಚ್ಛಭಿಲ್ಲಾ ತಥೈವಚ || ವೇಷ್ಟರ ಸ್ಥಿರವಿವ್ಯಾಧ ಹಸ್ತಲಾಕ್ಷದ್ರುಘಾತಕಾಃ | ಕೌಸೇದಕಾಭೀರಪದಮಾ ತಂಗಾಶ್ಚೋಪಗೋಪಕಾಃ | ಏತಾಃ ಪ್ರಕೃತಯಃ ಪ್ರೋಕ್ತಾಃ ಅಷ್ಟಾದಶ ಮನೀಷಿಭಿಃ ||— ಪಿತಾಮಹಸ್ಮೃತಿ.

[20] ಪ್ರವರ್ತತಾಂ ಪ್ರಕೃತಿಹಿತಾಯ ಪಾರ್ಥಿವಃ |—ಕಾಲಿದಾಸ.

ಮೂರುವರ್ಷ ಅಧಿಕಾರ ಹೊಂದಿರಕೂಡದು. ಪುನಃ ಪರಾನ್ತಕನ ೧೪ ನೆಯ ವರ್ಷದಲ್ಲಿ ಕೆಲವು ಮಾರ್ಪಾಡುಗಳಾದವು. ಕಾಲುವೇಲಿ ಭೂಮಿ, ಮನೆ, ವಯಸ್ಸಿನಲ್ಲಿ ೩೫ರ ಮೇಲೆ ೭೦ರ ಒಳಗೆ, ಮಂತ್ರಬ್ರಾಹ್ಮಣಗಳೊಂದರಲ್ಲಿ ಪಾಂಡಿತ್ಯ; ಅಥವಾ ಎಂಟನೆ ಒಂದುಭಾಗ ವೇಲಿ ಭೂಮಿ ಮತ್ತು ಒಂದು ವೇದ ಒಂದು ಭಾಷ್ಯಗಳಲ್ಲಿ ಪಾಂಡಿತ್ಯ; ಶಾಸ್ತ್ರ ಮತ್ತು ಕಾರ್ಯಗಳಲ್ಲಿ ಕೌಶಲ್ಯ ಹಿಂದೆ ಮೂರು ವರ್ಷ ಅಧಿಕಾರಿಯಾಗಿರದೆ ಪ್ರಾಮಾಣಿಕನಾಗಿರುವದೇ ಅರ್ಹತೆಗಳಾಗಿದ್ದವು. ಅನರ್ಹತೆಗೆ ಕಾರಣಗಳನೇಕವಾಗಿದ್ದವು. ಹಿಂದೆ ಅಧಿಕಾರಿಗಳಾಗಿದ್ದು ಸರಿಯಾಗಿ ಲೆಕ್ಕವನ್ನಿಡದಿದ್ದವರೂ, ಅವರ ಮಕ್ಕಳೂ, ಅವರ ಚಿಕ್ಕಪ್ಪ ದೊಡ್ಡಪ್ಪ ಅತ್ತೆಮಾವ, ಅಣ್ಣತಮ್ಮಂದಿರೇ ಮುಂತಾದವರೂ, ಅಂತಹವರೊಡನೆ ವಿವಾಹ ಸಂಬಂಧ ಮಾಡಿದವರೂ, ಅವರ ಸ್ನೇಹಿತರೂ, ಅವರ ಅಳಿಯಂದಿರೂ; ಮಹಾಪಾತಕಗಳನ್ನು ಮಾಡಿದವರೂ, ಪ್ರಾಯಶ್ಚಿತ್ತ ಮಾಡಿಕೊಳ್ಳುವ ವರೆಗೂ ಅಂತಹವರ ಸ್ನೇಹಿತರೂ, ಲಂಚತೆಗೆದುಕೊಂಡವರು ಪ್ರಾಯಶ್ಚಿತ್ತ ಮಾಡಿಕೊಂಡರೂ ಚುನಾವಣೆಗೆ ಅನರ್ಹರು.

ಅರ್ಹರಾದವರು ತಮ್ಮ ತಮ್ಮ ಚೇರಿ (Ward)ಗಳಲ್ಲಿ ಚಲುವಳಿ ನಡಿಸಿ ಮತವನ್ನು ಕೋರುತ್ತಿದ್ದರು. ಚುನಾವಣೆ ದಿನ ದೇವಸ್ಥಾನದ ಮಂಟಪದಲ್ಲಿ ಆಬಾಲವೃದ್ಧರೂ ಸೇರುತ್ತಿದ್ದರು. ಸದಸ್ಯರು ಓಲೆ (Voting Paper) ಯಲ್ಲಿ ತಮ್ಮಿಷ್ಟವಾದ ಹೆಸರನ್ನು ಬರೆದು ಒಂದೊಂದು ಚೇರಿಗೂ ಪ್ರತ್ಯೇಕವಾಗಿ ಮುದ್ರೆಹಾಕಿ ಮುಚ್ಚಿದ "ಕುಡವೋಲೈ" (Ballot Box) ಯಲ್ಲಿ ಹಾಕುತ್ತಿದ್ದರು. ಹೀಗೆ ನಿಯಮಿತ ಕಾಲದಲ್ಲಿ ಓಲೆಗಳನ್ನೆಲ್ಲ ಸಂಗ್ರಹಿಸಿ ಮಧ್ಯಸ್ಥನು (Presiding Officer) ಒಂದೊಂದು ಕೊಡವನ್ನೂ ಎತ್ತಿ ಒಬ್ಬ ವೃದ್ಧನ ಕೈಗೆ ಕೊಡಬೇಕು. ಆ ವೃದ್ಧನು ಕೊಡವನ್ನು ಎತ್ತಿ ಮುದ್ರೆಯನ್ನು ಎಲ್ಲರಿಗೂ ತೋರಿಸಿ ಚೆನ್ನಾಗಿ ಕುಲುಕಬೇಕು, ಅನಂತರ ಮುಚ್ಚಳವನ್ನು ತೆಗೆದು ಒಂದು ಎಳೆ ಮಗುವಿನ ಕೈಯಿಂದ ಒಂದು ಓಲೆಯನ್ನು ತೆಗಿಸಬೇಕು. ಒಂದು ಓಲೆಯನ್ನು ತೆಗಿಸಿದನಂತರ ಪುನಃ ಕೊಡವನ್ನು ಕುಲುಕಬೇಕು. ಮಗುವು ಈಚೆಗೆ ತೆಗೆದ ಓಲೆಯನ್ನು ಮಧ್ಯಸ್ಥನ ಕೈಗೆ ಕೊಡಬೇಕು. ಮಧ್ಯಸ್ಥನು ತನ್ನ ಬಟ್ಟೆಯನ್ನು ಹಿಂದಕ್ಕೆ ಸರಿಸಿಕೊಂಡು ಬೆರಳನ್ನು ಬಿಂಗಡಿಸಿ ಅಂಗೈಯಲ್ಲಿ ಆ ಓಲೆಯನ್ನು ತೆಗೆದುಕೊಂಡು ಬರೆದಿರುವ ಹೆಸರನ್ನು ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ ಓದಬೇಕು, ಅವನ ಸುತ್ತಮುತ್ತಲೂ ಇರುವ ಜನರೂ ಓದಬೇಕು. ಹೀಗೆ ಮೂವತ್ತು ಚೇರಿಗಳಿಗೆ ಮೂವತ್ತು ಜನರನ್ನು ಚುನಾಯಿಸಿ ಹನ್ನೆರಡು ಜನರನ್ನು ಸಂವತ್ಸರವಾರಿಯಕ್ಕು (Annual Committee),

ಹನ್ನೆರಡು ಜನರನ್ನು ತೋಟಕ್ಕು (Garden Committee), ಆರು ಜನರನ್ನು ಏರಿವಾರಿಯಕ್ಕು (Tank Committee) ನೇಮಿಸುತ್ತಿದ್ದರು. ಮಿಕ್ಕ ಓಲೆಗಳಿಂದ ಪೊನ್ವಾರಿಯಂ (ಭಂಡಾರ) ಮುಂತಾದ ಅವಶ್ಯಕವಾದ ಅಧಿಕಾರಿಗಳನ್ನೂ ಕರಣಿಕರನ್ನೂ ಚುನಾಯಿಸುತ್ತಿದ್ದರು. ಈ ವಾರಿಯಗಳು ವರ್ಷದಲ್ಲಿ ೩೬೦ ದಿನ ಅಧಿಕಾರಮಾಡುತ್ತಿದ್ದವು. ಮಿಕ್ಕ ಐದು ದಿನ ಲೆಕ್ಕಗಳ ತನಿಖೆ ನಡೆಯುತ್ತಿದ್ದಿತು, ಈ ರೀತಿಯಲ್ಲಿ ಸ್ಥಳೀಯ ಸಂಸ್ಥೆಗಳು ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆದಿದ್ದವು. ೧೯ ನೆಯ ಶತಮಾನದ ವರೆಗೂ ಭರತಖಂಡದಲ್ಲಿ ಇಂತಹ ಪಂಚಾಯಿತಿ ಪದ್ಧತಿಯೇ ಬಲವಾಗಿದ್ದಿತು.

**ತೆರಿಗೆ—ಕಂದಾಯ:** ಧರ್ಮಶಾಸ್ತ್ರಗಳ ಪ್ರಕಾರ ಆರನೆಯ ಒಂದು ಭಾಗವು ರಾಜನಿಗೆ ಸೇರಿದುದು.[21] ಹೇಗೆ ಹೂವಾಡಿಗನು ಉದ್ಯಾನದಲ್ಲಿ ಪುಷ್ಪಗಳನ್ನು ಮಾತ್ರ ತೆಗೆದುಕೊಂಡು ಮೂಲಚ್ಛೇದವನ್ನು ಮಾಡುವದಿಲ್ಲವೋ ಹಾಗೆ ತೆರಿಗೆಗಳನ್ನು ವಿಧಿಸಬೇಕು. ಪ್ರಜಾಪೀಡನೆ ಮಾಡಿದ ರಾಜನು ನಾಶವಾಗುವನು.[22] ಆದರೆ ಶಾಸನಗಳಿಂದ ಪ್ರಕಟ ಮತ್ತು ಪ್ರಚ್ಛನ್ನ ತೆರಿಗೆಗಳನೇಕವಿದ್ದವೆಂದು ತಿಳಿದುಬರುವದು. ಹರ್ಷನು ದಿಗ್ವಿಜಯಕ್ಕೆ ಹೊರಟಾಗ ಭೋಗಪತಿ, ಚಾಟ (Tax-collector, Police) ರಿಂದ ಹಿಂಸೆಹೊಂದಿದ ಇಬ್ಬರು ಬ್ರಾಹ್ಮಣರು ದಾರಿಯಲ್ಲಿದ್ದ ಒಂದು ಮರದ ಮೇಲೆ ಕುಳಿತು ಹರ್ಷನಿಗೆ ಕೇಳಿಬರುವಹಾಗೆ "ಇವನೆಂತಹ ಮನುಷ್ಯ? ಈ ದೇಶದಲ್ಲಿ ನಿಜವಾದ ರಾಜರಾರು?" ಎಂದು ಕೂಗಿಕೊಂಡರಂತೆ.[23] ಕಂದಾಚಾರದವರ ಹಿಂಸೆಯನ್ನು ತಾಳಲಾರದೆ ರೈತರು ಭೂಮಿಗಳನ್ನು ವ್ಯವಸಾಯಮಾಡದೆ ಹೊರಟುಹೋಗುತ್ತಿದ್ದರೆಂದೂ ಅನಂತರ ಚಕ್ರವರ್ತಿಯು ವಿಚಾರಣೆಮಾಡಿ ಅಪರಾಧಿಗಳಾದ ಅಧಿಕಾರಿಗಳನ್ನು ದಂಡಿಸಿ ರೈತರನ್ನು ಕರಿಸಿ ಪುನಃ ವ್ಯವಸಾಯವನ್ನು ಆರಂಭಿಸುವಂತೆ ಮಾಡುತ್ತಿದ್ದನೆಂದು ಶಾಸನಗಳಿಂದ ತಿಳಿದುಬರುವದು. ಭೂಮಿಯ ಕಂದಾಯವೇ (ಸಿದ್ಧಾಯ) ಮುಖ್ಯವಾಗಿದ್ದಿತು. ಧನ ಅಥವಾ ಧಾನ್ಯರೂಪದಲ್ಲಿ ವಸೂಲಿ ಮಾಡುತ್ತಿದ್ದರು. ಧಾನ್ಯವನ್ನು ಕೋಷ್ಠಾಗಾರಗಳಲ್ಲಿ ಸಂಗ್ರಹಿಸಿ ಕ್ಷಾಮ

---

21 ಗಣದಾಸಸ್ಯಕೇ ದರ್ಪಃ ಷಡ್ಭಾಗೇ ನಭೃತಸ್ಯಕಃ—ಆರ್ಯದೇವ.

22 ಪುಷ್ಪಮಾತ್ರಂ ವಿಚಿನುಯಾತ್ ಮೂಲಚ್ಛೇದಂ ನ ಕಾರಯೇತ್ || ಪ್ರಜಾಪೀಡನ ಸಂತಾಪಸಮುದ್ಭೂತೋಹುತಾಶನಃ | ಸೋsಚಿರಾದ್ ವಿಗತಶ್ರೀಕೋ ನಾಶಮೇತಿ ಸಬಾಂಧವಃ || ಯಾಜ್ಞ. ೩೩೭.

23 ಹರ್ಷಚರಿತ ಪು. ೨೮೬.

ನಿವಾರಣೆಗೂ, ರೈತರ ಬಿತ್ತನೆ ಕೆಲಸಕ್ಕೂ, ಧರ್ಮಕಾರ್ಯಗಳಿಗೂ ಉಪಯೋಗಿಸುತ್ತಿದ್ದರು. ಹರ್ಷನು ತನ್ನ ಸ್ವಂತಭೂಮಿಯ ಆದಾಯವನ್ನು ನಾಲ್ಕುಭಾಗ ಮಾಡಿ ಒಂದನ್ನು ಸರ್ಕಾರದ ಖರ್ಚಿಗೂ, ಎರಡನೆಯ ಭಾಗವನ್ನು ಉನ್ನತಾಧಿಕಾರಿಗಳ ವೇತನಗಳಿಗಾಗಿಯೂ, ಮೂರನೆಯ ಭಾಗವನ್ನು ಪಂಡಿತರ ಪೋಷಣೆಗೂ ಮಿಕ್ಕ ಕಾಲುಭಾಗವನ್ನು ಧರ್ಮಕಾರ್ಯಕ್ಕಾಗಿ ವಿನಿಯೋಗಿಸುತ್ತಿದ್ದನೆಂದು ಯುವಾನ್‌ಚ್ವಾಂಗನು ಹೇಳಿರುವನು. ಅದೇ ರೀತಿಯಲ್ಲಿ ವಿಜಯನಗರದ ಕೃಷ್ಣದೇವರಾಯನೂ ಆದಾಯದ ನಾಲ್ಕನೆಯ ಒಂದು ಭಾಗವನ್ನು ಅರಮನೆ ಮತ್ತು ಧರ್ಮಕಾರ್ಯಗಳಿಗಾಗಿಯೂ, ಎರಡು ಭಾಗಗಳನ್ನು ಸೈನ್ಯ, ದೇಶರಕ್ಷಣೆಗಾಗಿಯೂ, ಒಂದು ಭಾಗವನ್ನು ಆಪದ್ಧನವಾಗಿ ಭಂಡಾರಕ್ಕೂ ಸೇರಿಸುತ್ತಿದ್ದನು.

ಕೇನ್ದ್ರ ಸರ್ಕಾರದ ಶ್ರೀ ಕರಣಾಧಿಪತಿ ಅಥವಾ ತಿರುಮಂದಿರ್ ಓಲೈ ಎಂಬ ಅಧಿಕಾರಿಯ ಕಚೇರಿಯಲ್ಲಿ (Chief Secretariat) ಮತ್ತು ಚಾವಡಿಗಳಲ್ಲಿ ಕರಣಿಕರು ಎಲ್ಲ ವ್ಯವಹಾರಗಳ ಲೆಕ್ಕಪತ್ರಗಳನ್ನು ಇಡುತ್ತಿದ್ದರು.[24] ಶಾಸನಗಳಲ್ಲಿ ಅನೇಕ ಸುಂಕಗಳ ಹೆಸರು ಕಂಡುಬರುವವು. ವ್ಯವಸಾಯಕ್ಕೆ ಸಂಬಂಧಿಸಿದ ಕಾಡಾರಂಬ, ನೀರಾರಂಬ, ತೋಟ, ಕಪಿಲೆ, ಹುಲ್ಲುಗಾವಲು ಸುಂಕಗಳೂ ; ಕಂಬಾರದೆರೆ, ಚಕ್ರಕಾಣಿಕೆ, ಮಗ್ಗದೆರೆ, ಗಾಣದೆರೆ, ಆಲೆಮನೆ ಸುಂಕ, ಉಪ್ಪಾರ ಸುಂಕ, ಈಡಿಗ ಸುಂಕ, ಕೂಲಿಮೆ ಸುಂಕ ಮುಂತಾದ ಕೈಗಾರಿಕೆ ಸುಂಕಗಳೂ ; ಹೆಜ್ಜುಂಕ, ಕಿರುಕುಳ, ಮಳಿಗೆ, ಅಂಗಡಿ, ಸ್ಥಳ ಸುಂಕಗಳು, ಮಾರ್ಗಾದಾಯ ಮುಂತಾದ ವ್ಯಾಪಾರ ಸುಂಕಗಳೂ ; ಸೈನ್ಯಕ್ಕಾಗಿ ದಣ್ಡನಾಯಕನ ಸುಂಕ, ಪಡೆಕಾಣಿಕೆ, ನಾಡುತಳವಾರಿಕೆ, ಇತ್ಯಾದಿ ; ಚರ ಮತ್ತು ಸ್ಥಿರ ಆಸ್ತಿಗಳ ಮೇಲೆ ಮನೆ, ವಾಸಲ್, ಪಂದಲ್, ಆಡು, ಸಲ್ಲಾವು, ನಲ್ಲೆತ್ತು, ಎಮ್ಮೆ, ಕೋಣ, ಕುರಿ, ಕುದುರೆ, ಕತ್ತೆ ಮುಂತಾದ ಸುಂಕಗಳೂ ; ಮತಾಚಾರಸಂಬಂಧವಾದ ಮದುವೆ, ಮೆರವಣಿಗೆ, ಸಮಯ ಸುಂಕಗಳೂ, ತಪ್ಪುಕಾಣಿಕೆ, ಅಗ್ರತಾಂಬೂಲ, ಗಣಾಚಾರದೆರೆ, ಜೀಯರ್‌ತೆರೆ, ಮಠತೆರಿಗೆ, ಗುಡಿಪನ್ನು, ಜಾತ್ರೆಸುಂಕ, ಕನ್ನಡಿ ತೆರಿಗೆ ಮುಂತಾದುವು ಇದ್ದವು. ಇಷ್ಟು ಸುಂಕ ತೆರಿಗೆಗಳಿದ್ದ ಮಾತ್ರಕ್ಕೆ ತೆರಿಗೆ ಭಾರವು (Incidence of Taxation) ಅಧಿಕವಾಗಿದ್ದಿತೆಂದು ಹೇಳಲು ಆಧಾರವಿಲ್ಲ. ಯುವಾನ್‌

---

[24] ನಂಬಿಯಣ್ಣನ ರಗಳೆಯಲ್ಲಿ ಶಿವರೂಪಿಯಾದ ವೃದ್ಧನು ಹಿಂದಿನ ಪತ್ರಗಳ ಆಧಾರದ ಮೇಲೆ ಧರ್ಮಸ್ಥಾನದಲ್ಲಿ ತನ್ನ ಹಕ್ಕನ್ನು ಸಾಧಿಸಿದನೆಂದು ಹೇಳಿದೆ.

ಚ್ವಾಂಗನು ತೆರಿಗೆಗಳು ಬಹುಳ ಹಗುರವಾಗಿದ್ದವೆಂದೂ ಜನರಿಗೆ ಕಿರುಕುಳವಿರಲಿಲ್ಲವೆಂದೂ ಹೇಳಿರುವನು.[25]

ಹೀಗೆ ನ್ಯಾಯಮಾರ್ಗದಲ್ಲಿಯೇ ಹಿಂದೂ ರಾಜರು ಅಪಾರವಾದ ಸಂಪತ್ತನ್ನು ಗಳಿಸಿದ್ದರು. ಕೌಟಿಲ್ಯನು ರಾಜ್ಯವ್ಯವಸ್ಥೆಯೆಲ್ಲ ಧನಾಧಾರದ ಮೇಲೆ ನಡೆಯಬೇಕಾದುದರಿಂದ ಅನೇಕ ಉಪಾಯಗಳನ್ನು ಸೂಚಿಸಿರುವನು. ವಿದ್ಯಾರಣ್ಯರು ವಿಜಯನಗರ ಸ್ಥಾಪನೆ ಮಾಡಿದಾಗ ನೂತನ ಸಾಮ್ರಾಜ್ಯವು ಆರ್ಥಿಕ ಸ್ವಾತಂತ್ರ್ಯ ಪಡೆದಿರಬೇಕೆಂದು ೬೬,೫೬,೦೦,೦೦೦ ವರಹ ನಾಣ್ಯಗಳನ್ನೂ ೬೦,೦೦೦,೦೦೦ ವರಹ ಬೆಲೆಯುಳ್ಳ ನವರತ್ನಗಳನ್ನೂ, ಹಿಂದಿನ ರಾಜರಿಂದ ಬಂದ ೧೯,೫೬,೦೦,೦೦೦ ವರಹಗಳನ್ನೂ ದೊಡ್ಡ ಭಂಡಾರದಲ್ಲಿಟ್ಟು ಆಪತ್ಕಾಲದಲ್ಲಲ್ಲದೆ ಇದನ್ನು ಮುಟ್ಟಕೂಡದೆಂದು ಹರಿಹರ ಬುಕ್ಕರಿಗೆ ಆಜ್ಞೆ ಮಾಡಿದ್ದರು. ನಿತ್ಯಖರ್ಚಿಗಾಗಿ ಬೇರೆ ಒಂದು ಸಣ್ಣ ಭಂಡಾರವಿದ್ದಿತು. ಇವಲ್ಲದೆ ಚಿನ್ನಭಂಡಾರ, ಪಟ್ಟಿಸಭಂಡಾರ, ಮಾಣಿಕ್ಯಭಂಡಾರ ಮುಂತಾದವೂ ಇದ್ದವು. ವಿಜಯನಗರದರಸರು ಚಿಕ್ಕಭಂಡಾರಕ್ಕೆ ಪ್ರತಿವರ್ಷವೂ ೧,೦೦,೦೦,೦೦೦ ಪರ್ದಾವೊ (ಪ್ರತಾಪ, ವರಹ) ಸಲ್ಲಿಸುತ್ತಿದ್ದರು. ಮೈಸೂರಿನ ಚಿಕ್ಕದೇವರಾಯನು ಪ್ರತಿದಿನವೂ ಭಂಡಾರಕ್ಕೆ ಹಣ ಸೇರಿಸಿ "ನವಕೋಟಿ ನಾರಾಯಣ"ನೆಂದೆನಿಸಿಕೊಂಡಿದ್ದನು.

**ಸೈನ್ಯ ಮತ್ತು ನೌಕಾಬಲ:** ಪ್ರಾಚೀನ ಕಾಲದಿಂದಲೂ ಶಸ್ತ್ರೋಪಜೀವಿಗಳಾದ ಭಾರತೀಯ ಸೈನಿಕರು ಪ್ರಸಿದ್ಧರಾಗಿದ್ದರು. ಪರ್ಷಿಯ ಸೇನೆಯಲ್ಲಿ ಭರತಖಂಡದ ಬಿಲ್ಲುಗಾರರಿದ್ದರೆಂದೂ, ಮ್ಯಾರಥಾನ್, ಪ್ಲ್ಯಾಟಿಯ ಯುದ್ಧಗಳಲ್ಲಿ ಭಾಗವಹಿಸಿದ್ದರೆಂದೂ ಗ್ರೀಕ್ ಚರಿತ್ರಕಾರರು ಹೇಳುವರು. ರಥ ಹಸ್ತ್ಯಶ್ವ ಪದಾತಿಗಳೆಂಬ ಚತುರಂಗಗಳಿದ್ದವು. ಕ್ರಿ.ಪೂ. ೪ನೆಯ ಶತಾಬ್ದದಿಂದೀಚೆಗೆ ರಥಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿರಲಿಲ್ಲ. ರಣಾಂಗಣದಲ್ಲಿ ಸತ್ತರೆ ಸದ್ಗತಿಯಾಗುವದೆಂದೂ ಬದುಕಿದರೆ ಲಕ್ಷ್ಮಿಯು ದೊರಕುವದೆಂದೂ, ಸ್ವಾಮಿಯ ಋಣವನ್ನು ತೀರಿಸುವದು ಸೈನಿಕನ ಕರ್ತವ್ಯವೆಂದೂ ಯುದ್ಧಾರಂಭಕ್ಕೆ ಮುಂಚೆ ರಾಜಪುರೋಹಿತನು ಸೈನಿಕರಿಗೆ ಬೋಧಿಸ

[25] As the Government is generous and official requirements are few, families are not registered and individuals are not subjected to forced labour and contributions. Taxation being light and forced labour sparingly used, every one keeps his hereditary occupation and attends to his patrimony. The king's tenants pay one-sixth of the produce as rent and tradesmen go to and fro bartering their merchandise after paying their taxes at ferries and barrier-stations."

ಮಾಡಿ ಹುರುಪು ಹುಟ್ಟಿಸಬೇಕೆಂದು ಕೌಟಿಲ್ಯನ ಅರ್ಥಶಾಸ್ತ್ರವೂ ಶಾಸನಗಳೂ ಹೇಳುವವು.[26] ವೀರಸ್ವರ್ಗ ಹೊಂದಿದವರ ಸ್ಮಾರಕಕ್ಕಾಗಿ "ವೀರ ಕಲ್ಲು" ಗಳನ್ನು ನಟ್ಟು ಪೂಜೆಮಾಡುತ್ತಿದ್ದರು.

ಪ್ರಾಚೀನ ಸಾಮ್ರಾಜ್ಯಗಳಲ್ಲಿ ಅಪಾರ ಸೈನ್ಯಗಳಿದ್ದವು. ಮೌಳಿ (ರಾಜನ ಸ್ವಂತ ಸೇನೆ) ಭೃತ (Mercenaries), ಶ್ರೇಣಿ (ಗಣರಾಜ್ಯಗಳ ಸೇನೆ), ಸಾಮಂತರ ಸೈನ್ಯಗಳೆಂಬ ಭೇದಗಳಿದ್ದವು. ಸೇನೆಗೆ ಸೇರುವದಕ್ಕೆ ಮುಂಚೆ ವೈದ್ಯಪರೀಕ್ಷೆಯಾಗಬೇಕಾಗಿದ್ದಿತು. ಸೈನಿಕರಿಗೆ ಅಂಗಸಾಧನೆ ಕವಾತು ಪದ್ಧತಿಗಳಿದ್ದವು. ಬಿಲ್ಲು, ಬಾಣ, ಕತ್ತಿ ಭರ್ಜಿಗಳು ಪದಾತಿಗಳ ಆಯುಧಗಳು, ತನುತ್ರಾಣ ಶಿರಸ್ತ್ರಾಣಗಳೂ ಉಪಯೋಗದಲ್ಲಿದ್ದವು. ಕುದುರೆಗಳನ್ನು ವನಾಯು (Arabia) ಪಾರಸೀಕ, ಕಂಭೋಜ ದೇಶಗಳಿಂದ ತರಿಸುತ್ತಿದ್ದುದರಿಂದ ಭಾರತೀಯ ಸೇನೆಗಳಲ್ಲಿ ಅಶ್ವಬಲ ಹೆಚ್ಚಾಗಿರಲಿಲ್ಲ, ಆದರೆ ಆನೆಗಳನ್ನು ಪಳಗಿಸಿ "ಟ್ಯಾಂಕ್'ಗಳಂತೆ ಉಪಯೋಗಿಸುತ್ತಿದ್ದರು. ಗ್ರಂಥಗಳಲ್ಲಿ ಶತಘ್ನೀ ಸಮ್ಮೋಹನಾಸ್ತ್ರಗಳ ವರ್ಣನೆ ಕಂಡುಬರುವದರಿಂದ ಫಿರಂಗಿ, ವಿಷವಾಯುಗಳ ಪ್ರಯೋಗವನ್ನೂ ಭಾರತೀಯರು ಅರಿತಿದ್ದರೆಂದು ಕೆಲವರು ಊಹಿಸುವರು. ಮುಸ್ಲಿಮರು ಬಂದಮೇಲೆ ಅಶ್ವಬಲ ಬಾಣಬಿರುಸುಗಳ ಪ್ರಯೋಗವು ಹೆಚ್ಚಿತು. ಪೋರ್ತುಗೀಸರು ಬಂದನಂತರ ಭಾರತೀಯ ರಾಜರು ಫಿರಂಗಿ, ಮದ್ದು, ಗುಂಡು, ಕೋವಿ, ಬಂದೂಕಗಳನ್ನು ಮಾಡುವ ವಿಧಾನಗಳನ್ನು ಕಲಿತರು, ಆದರೂ ಭಾರತೀಯ ಸೈನಿಕರು ಕಷಾಯವಸ್ತ್ರವನ್ನು ಧರಿಸಿ "ಜೋಹಾರ"ನ್ನು ಮಾಡಿ ಪ್ರಾಣಗಳನ್ನು ಕೂಡ ಅರ್ಪಿಸಲು ಸಿದ್ಧರಾಗಿದ್ದರೂ, ಸರಿಯಾದ ಕವಾತು ಆಧುನಿಕ ಆಯುಧಗಳೂ ಹೊಂದಿರಲಿಲ್ಲವಾದುದರಿಂದಲೂ ಕೂಟ ಯುದ್ಧಮಾಡಲೂ ಹಿಂತೆಗೆಯುತ್ತಿದ್ದುದರಿಂದಲೂ ಪಾಶ್ಚಾತ್ಯರಿಗೆ ಸೋಲಬೇಕಾಯಿತು.

ವೇದಯುಗದಲ್ಲಿಯೇ ಶತಾರಿತ್ರ, ಶತಸ್ಫ್ಯಗಳೆಂಬ ಭಾರಿ ನೌಕೆಗಳಿದ್ದವೆಂದು ತಿಳಿದುಬರುವದು. ನೌಕಾಸಹಾಯದಿಂದ ಭಾರತೀಯರು ಪ್ರಪಂಚದಲ್ಲೆಲ್ಲ

---

[26] ದ್ವಾವಿಮೌ ಪುರುಷೌಲೋಕೇ ಸೂರ್ಯಮಣ್ಡಲಭೇದಿನೌ | ಪರಿವ್ರಾಡ್ಯೋಗವೇತ್ತಾ ಚರಣೇಚಾಭಿಮುಖೋಹತಃ|| ಜಿತೇನಲಭ್ಯತೇಲಕ್ಷ್ಮೀ ಮೃತೇನಾಪಿಸುರಾಂಗಾನಾ| ಕ್ಷಣೇವಿಧ್ವಂಸನೇಕಾಯೇ ಕಾಚಿನ್ತಾಮರಣೇರಣೇ || (ಶಾಸನಗಳು). ನವಂ ಶರಾವಂ ಸಲಿಲೈಃ ಸುಪೂರ್ಣಂ ಸುಸಂಸ್ಕೃತಂ ಧರ್ಭಕೃತೋತ್ತರೀಯಂ| ತತ್ತಸ್ಸಮಾಭೂನ್ನರಕಂಚ ಗಚ್ಛೇದ್ಯೋ ಭರ್ತೃಪಿಣ್ಡಸ್ಯಕೃತೇ ನಯುದ್ಧ್ಯೇತ್ ||

—ಅರ್ಥಶಾಸ್ತ್ರ. ಭಾಸ. ಪ್ರತಿಮಾ. IV. ೩

ವ್ಯಾಪಾರಮಾಡುತ್ತಿದ್ದು ದ್ವೀಪಾಂತರಗಳಲ್ಲಿ ನೆಲಸಿದ್ದರು. ಮರಾಟರ ಕಾಲದ ವರೆಗೂ ಭಾರತೀಯರ ನೌಕಾಬಲವು ಅಧಿಕವಾಗಿದ್ದಿತು. ಭೋಜನ ಸಮರಾಂಗಣ ಸೂತ್ರಧಾರವೆಂಬ ಗ್ರಂಥದಲ್ಲಿ ಅನೇಕ ವಿಧವಾದ ಹಡಗುಗಳನ್ನೂ, ಆಕಾಶವಿಮಾನಗಳನ್ನೂ ಮಾಡುವ ವಿಧಾನಗಳು ಉಕ್ತವಾಗಿವೆ.

ಭಾರತೀಯ ರಾಜಕೀಯ ಪದ್ಧತಿಗಳ ಧ್ಯೇಯವು ವ್ಯಕ್ತಿಸ್ವಾತಂತ್ರ್ಯವಾಗಿದ್ದಿತು. ಆರ್ಥಿಕ ಸಮಸ್ಯೆಯನ್ನು ಪರಿಹರಿಸದೆ ಜನರ ಸುಲಿಗೆಮಾಡುವ ರಾಜಕೀಯ ಪದ್ಧತಿಯು ಅತ್ಯಂತ ಹೇಯವೆಂಬುದನ್ನು "ರಾಜಾ ಕಾಲಸ್ಯ ಕಾರಣಮ್" ಎಂಬ ನಾಣ್ಣುಡಿಯು ಸೂಚಿಸುವದು. ಭಾರತೀಯರು ಸಾಮ್ರಾಜ್ಯಾಕಾಂಕ್ಷೆಯನ್ನು ಅತಿ ನೀಚವೆಂದು ಗಣಿಸಿದ್ದರು. ಆದುದರಿಂದ ಕೇವಲ ಲೋಭವಿಜಯ, ಅಸುರವಿಜಯಗಳಿಂದ ಸಮಸ್ತ ಭೂಮಂಡಲವೂ ತನ್ನೊಬ್ಬನ ಅಧೀನವಾಗಬೇಕೆಂಬ ಸಮ್ರಾಟನ ಹುಚ್ಚನ್ನು ಪುರಾಣ ಚರಿತ್ರಕಾರರು ಅಪಹಾಸ ಮಾಡಿರುವರು.

ದೃಷ್ಟ್ವಾತ್ಮನಿ ಜಯೇವ್ಯಗ್ರಾನ್ ನೃಪಾನ್‌ಹಸತಿ ಭೂರಿಯಮ್ |
ಅಹೋ ! ಮಾಂವಿಜಿಗೀಷನ್ತಿ ಮೃತ್ಯೋಃ ಕ್ರೀಡನಕಾ ನೃಪಾಃ ||
ಕಾಮಏಷನರೇನ್ದ್ರಾಣಾಂ ಮೋಘಸ್ಸ್ಯಾದ್ವಿದುಷಾಮಪಿ |
ಯೇನ ಫೇನೋಪಮೇ ಪಿಣ್ಡೇ ಯೇಽತಿವಿಸ್ರಂಭಿತಾನೃಪಾಃ ||

*　　*　　*

ಏವಂ ಕ್ರಮೇಣ ಜ್ಯೇಷ್ಯಾಮೋ ಪೃಥ್ವೀಂಸಾಗರಮೇಖಲಾಮ್ |
ಇತ್ಯಾಶಾಬದ್ಧಹೃದಯಾ ನಪಶ್ಯನ್ತ್ಯನ್ತಿಕೇಽನ್ತಕಮ್ ||
ಸಮುದ್ರಾವರಣಾಂ ಜಿತ್ವಾ ಮಾಂ ವಿಶನ್ತ್ಯಬ್ಧಿ ಮೋಜಸಾ |
ಕಿಯದಾತ್ಮಜಯಸ್ಯೈತನ್ಮುಕ್ತಿರಾತ್ಮಜಯೇ ಫಲಮ್ ||

*　　*　　*　　*

ಮಮೈವೇಯಂ ಮಹೀ ಕೃತ್ಸ್ನಾ ನತೇ ಮೂಢೇತಿ ವಾದಿನಃ |
ಸ್ಪರ್ಧಮಾನಾಮಿಥೋ ಘ್ನನ್ತಿ ಮ್ರಿಯನ್ತೇ ಮತ್ಕೃತೇ ನೃಪಾಃ ||

*　　*　　*　　*

ಮಮತಾಂಮಯ್ಯವರ್ತನ್ತ ಕೃತ್ವೋಚ್ಚೈರ್ಮೃತ್ಯುಧರ್ಮಿಣಃ |
ಕಥಾವಶೇಷಾಃ ಕಾಲೇನ ಹ್ಯಕೃತಾರ್ಥಾಃ ಕೃತಾ ವಿಭೋ ! ||

ಶ್ರೀ ಭಾಗವತ XII ೩-೧.೧೩.

# ೯. ಸಾಹಿತ್ಯ

ಕಾವ್ಯಂ ಯಶಸೇಽರ್ಥಕೃತೇ ವ್ಯವಹಾರವಿದೇ ಶಿವೇತರಕ್ಷತಯೇ |
ಸದ್ಯಃಪರನಿರ್ವೃತಯೇ ಕಾನ್ತಾಸಮ್ಮಿತತಯೋಪದೇಶಯುಜೇ ||

—ಕಾವ್ಯಪ್ರಕಾಶ.

ಕ್ರಿಸ್ತಶಕ ಒಂದನೆಯ ಶತಾಬ್ದದಿಂದೀಚೆಗೆ ಸಂಸ್ಕೃತ ಮತ್ತು ದ್ರಾವಿಡ ಭಾಷೆಗಳಲ್ಲಿ ಸಾಹಿತ್ಯವು ಹೆಚ್ಚಾಗುತ್ತ ಬಂದಿತು. ಕ್ರಿಸ್ತಪೂರ್ವ ಆರನೆಯ ಶತಾಬ್ದದಿಂದ ಒಂದನೆಯ ಶತಾಬ್ದದ ವರೆಗೆ ಪ್ರಾಕೃತಗಳಲ್ಲಿಯೂ ಸಂಸ್ಕೃತದಲ್ಲಿಯೂ ಕೆಲವು ಕಾವ್ಯಗಳಿದ್ದವೆಂಬುದಕ್ಕೆ ನಿದರ್ಶನಗಳಿದ್ದರೂ ಈಗ ಕಂಡು ಬರುವ ಗ್ರಂಥಗಳೆಲ್ಲ ಕ್ರಿ.ಶ. ೧ ನೆಯ ಶತಾಬ್ದದ ಅನಂತರ ರಚಿತವಾದವು. ಹತ್ತನೆಯ ಶತಾಬ್ದದ ವರೆಗೆ ಸಂಸ್ಕೃತದಲ್ಲಿ ಉದ್ಗ್ರಂಥಗಳು ಹೊರಟವು. ಸುಮಾರು ಹತ್ತನೆಯ ಶತಾಬ್ದದಿಂದ ದೇಶಭಾಷೆಗಳಲ್ಲಿ ಸಾಹಿತ್ಯವು ಅಧಿಕವಾಗಿ ಹತ್ತೊಂಬತ್ತನೆಯ ಶತಾಬ್ದದ ವರೆಗೆ ಪರದೇಶ ಸಂಬಂಧವಿಲ್ಲದೆ ಬೆಳೆಯಿತು. ೧೯-೨೦ ನೆಯ ಶತಮಾನಗಳಲ್ಲಿ ಪಾಶ್ಚಾತ್ಯ ಸಂಪರ್ಕದಿಂದ ಹೊಸ ಚಳುವಳಿಗಳಾರಂಭವಾದವು.

**ಸಂಸ್ಕೃತ ಸಾಹಿತ್ಯ :** ದೃಶ್ಯ ಮತ್ತು ಶ್ರಾವ್ಯಕಾವ್ಯಗಳ ಲಕ್ಷಣಗಳನ್ನು ಕುರಿತು ಆಲಂಕಾರಿಕರು ವಿಶೇಷವಾಗಿ ಚರ್ಚಿಸಿರುವರು. ವೇದದ ಋಷಿಗಳೇ ಪ್ರಪಂಚದ ಪ್ರಾಚೀನ ಕವಿಗಳು. "ನಾನೃಷಿಃ ಕುರುತೇ ಕಾವ್ಯಮ್", "ಬ್ರಾಹ್ಮಣೋ ಬ್ರಹ್ಮವಿತ್ ಕವಿಃ" "ರಸೋ ವೈ ಸಃ ರಸಗ್ಂಹ್ಯೇವಾಯಂ ಲಬ್ಧ್ವಾ ಆನನ್ದೀ ಭವತಿ" ಎಂಬ ವಚನಗಳಿಂದ ವೇದಾಂತದಲ್ಲಿ ನಿರ್ಧರಿಸಿದ ಸಚ್ಚಿದಾನಂದಸ್ವರೂಪವುಳ್ಳ ಬ್ರಹ್ಮವಸ್ತುವೇ ಕಾವ್ಯದ ವಸ್ತುವೆಂದೂ, ಆದುದರಿಂದ ವೈದಿಕ ಕರ್ಮಗಳ ಫಲವಾದ ಅಭ್ಯುದಯ ನಿಃಶ್ರೇಯಸಗಳನ್ನೇ ಕಾವ್ಯವೂ ಕೊಡುವದೆಂದೂ ಆಲಂಕಾರಿಕರು ನಿಶ್ಚಯಿಸಿರುವರು. ಕಾವ್ಯದ ಜೀವಾಳವು ರಸವೆಂದು ಭರತಮುನಿಗಳೂ (ವಿಭಾವಾನುಭಾವ ವ್ಯಭಿಚಾರಿಭಾವ ಸಂಯೋಗಾದ್ರಸನಿಷ್ಪತ್ತಿಃ), ಧ್ವನಿಯೆಂದು ಅಭಿನವಗುಪ್ತ ಆನನ್ದವರ್ಧನರೂ (ಕಾವ್ಯಸ್ಯಾತ್ಮಾ ಧ್ವನಿಃ), ವಕ್ರೋಕ್ತಿಯೆಂದೂ (ವಕ್ರೋಕ್ತಿಃ ಕಾವ್ಯಜೀವಿತಮ್), ರೀತಿಯೆಂದೂ (ರೀತಿರಾತ್ಮಾ ಕಾವ್ಯಸ್ಯ), ಔಚಿತ್ಯವೆಂದೂ (ಔಚಿತ್ಯಂ ರಸಸಿದ್ಧಸ್ಯ ಸ್ಥಿರಂ ಕಾವ್ಯಸ್ಯ ಜೀವಿತಮ್), ಅಲಂಕಾರವೆಂದೂ

ಭಿನ್ನಾಭಿಪ್ರಾಯಗಳಿವೆ. ಒಟ್ಟಿನಲ್ಲಿ ಲಾಂಗಿನಸ್ (On the Sublime), ಕಾಂಟ್ (Critique of Aesthetic Judgment), ಅರಿಸ್ಟೋಟಲ್ ಮುಂತಾದ ಪಾಶ್ಚಾತ್ಯರ ಅಲಂಕಾರಶಾಸ್ತ್ರ ತತ್ವಗಳೆಲ್ಲವೂ ಭಾರತೀಯರ ಅಲಂಕಾರಶಾಸ್ತ್ರದಲ್ಲಿ ಅಡಕವಾಗಿವೆ. ಭರತ, ಭಾಮಹ, ದಣ್ಡಿನ್, ಆನನ್ದ ವರ್ಧನ, ಅಭಿನವಗುಪ್ತ, ಕುನ್ತಕ, ಲೋಲ್ಲಟ, ಮಮ್ಮಟ, ಶಂಕುಕ, ಮಹಿಮ ಭಟ್ಟ, ಹೇಮಚನ್ದ್ರ, ಭೋಗನಾಥ, ಸರ್ವಜ್ಞಸಿಂಗಮ, ಅಪ್ಪಯ್ಯದೀಕ್ಷಿತರೆ ಮುಂತಾದವರು ಅಲಂಕಾರಶಾಸ್ತ್ರವನ್ನು ಅಪಾರವಾಗಿ ಬೆಳಸಿರುವರು.

ಕ್ರಿಸ್ತಶಕ ಒಂದನೆಯ ಶತಾಬ್ದದಲ್ಲಿ ಬ್ರಾಹ್ಮಣನಾಗಿದ್ದು ಬೌದ್ಧಮತವನ್ನು ಸ್ವೀಕರಿಸಿದ ಅಶ್ವಘೋಷನು ಬುದ್ಧಚರಿತೆ, ಸೌನ್ದರನನ್ದ ಮತ್ತು ಕೆಲವು ನಾಟಕಗಳನ್ನು ರಚಿಸಿದನು. ಮಾತೃಚೇಟನೂ ನಾಗಾರ್ಜುನನೂ ಸ್ತೋತ್ರ ಗಳನ್ನು ರಚಿಸಿರುವರು. ಶಾತವಾಹನ ರಾಜನಾದ ಹಾಲನು ಮಹಾರಾಷ್ಟ್ರೀ ಪ್ರಾಕೃತದಲ್ಲಿ ಗಾಥಾಸಪ್ತಶತಿಯನ್ನು ಬರೆದನು. ಕ್ರಿ.ಶ. ಮೂರನೆಯ ಶತಾಬ್ದದಲ್ಲಿ ಶೂದ್ರಕನು ಮೃಚ್ಛಕಟಿಕವೆಂಬ ನಾಟಕವನ್ನು ಹೃದಯಂಗಮ ವಾಗಿ ಬರೆದನು. ಬಹುಶಃ ಭಾಸ, ಸೌಮಿಲ್ಲ, ವರರುಚಿ, ಶ್ಯಾಮಲಕರೆಂಬವರು ನಾಟಕ, ಭಾಣಗಳನ್ನು ಈ ಕಾಲದಲ್ಲಿ ರಚಿಸಿದರು. ಆದರೆ ಈಗ ಭಾಸಕೃತ ವೆಂದು ಪ್ರಚಾರದಲ್ಲಿರುವ ನಾಟಕಗಳು ಕೇರಳದೇಶದ ಚಾಕ್ಕಿಯಾರ್ ಎಂಬ ನಟರ ಪರಿಷ್ಕರಣೆಗಳೆಂದು ನಿರ್ಧರಿಸಿದೆ. ಇಮ್ಮಡಿ ಚನ್ದ್ರಗುಪ್ತ, ಕುಮಾರ ಗುಪ್ತರ ಕಾಲದಲ್ಲಿ ಭರತಖಂಡದಲ್ಲೆಲ್ಲ ಅತ್ಯುತ್ತಮ ಕವಿಯೆನಿಸಿದ ಕಾಲಿ ದಾಸನು ಅಭಿಜ್ಞಾನಶಾಕುನ್ತಲ, ವಿಕ್ರಮೋರ್ವಶೀಯ, ಮಾಲವಿಕಾಗ್ನಿ ಮಿತ್ರ ಎಂಬ ಮೂರು ನಾಟಕಗಳನ್ನೂ ಮೇಘದೂತ, ರಘುವಂಶ, ಕುಮಾರ ಸಂಭವಗಳೆಂಬ ಮೂರು ಕಾವ್ಯಗಳನ್ನೂ, ಸೇತುಬನ್ಧ, ಋತುಸಂಹಾರ, ಎಂಬುವನ್ನೂ ರಚಿಸಿ ಪಾಶ್ಚಾತ್ಯ ಕವಿಗಳಾದ ಗ್ಯಟೆ ಮುಂತಾದವರಿಗೂ ಆದರ್ಶನಾಗಿ ಭಾರತೀಯ ಸಂಸ್ಕೃತಿಗೆ ಅಮೂಲ್ಯ ಶಿರೋರತ್ನದಂತಿರುವನು. ಈ ಮಟ್ಟಕ್ಕೆ ಮತ್ತಾವ ಕವಿಗಳೂ ಬರಲಾರರು. ಕವಿತೆಯು ಒಂದು ಯೋಗ. ಪುನರಾವೃತ್ತಿರಹಿತವಾದ (ನಸಪುನರಾವರ್ತತೇ-ಛಾನ್ದೋಗ್ಯ; ಅನಾವೃತ್ತಿಃ ಶಬ್ದಾತ್. ಬ್ರಹ್ಮಸೂತ್ರ) ಮುಕ್ತಿಯೇ ಕಾವ್ಯದ ಧ್ಯೇಯವೂ ಆಗಿದೆ ಎಂಬು ದನ್ನು ಶಕುನ್ತಲಾ ನಾಟಕದ ಭರತವಾಕ್ಯದಲ್ಲಿ ಅರ್ಥಗರ್ಭಿತವಾದ ಪದಗಳಿಂದ ಸೂಚಿಸಿರುವನು.

ಪ್ರವರ್ತತಾಂ ಪ್ರಕೃತಿಹಿತಾಯಪಾರ್ಥಿವಃ | ಸರಸ್ವತೀಶ್ರುತಿಮಹಿತಾ ಮಹೀಯಸಾಮ್ |
ಮಮಾಪಿಕ್ಷಪಯತು ನೀಲಲೋಹಿತಃ | ಪುನರ್ಭವಂ ಪರಿಗತಶಕ್ತಿರಾತ್ಮಭೂಃ ||

ಇದೇ ಸಮಯದಲ್ಲಿ ವಿಶಾಖದತ್ತನು ಮುದ್ರಾರಾಕ್ಷಸ, ಅಭಿಸಾರಿಕಾ ವಂಚಿತಕ, ದೇವೀಚನ್ದ್ರಗುಪ್ತಗಳೆಂಬ ನಾಟಕಗಳನ್ನೂ, ವಸುಬನ್ಧುವು ವಾಸವದತ್ತಾ ಎಂಬ ಗದ್ಯಕಾವ್ಯವನ್ನು ರಚಿಸಿದರು. ೬-೭ ನೆಯ ಶತಾಬ್ದಗಳಲ್ಲಿ ದುರ್ವಿನೀತನ ಸಮಕಾಲೀನನಾದ ಭಾರವಿಯು ಕಿರಾತಾರ್ಜುನೀಯವನ್ನೂ, ಹರ್ಷನ ಆಶ್ರಯದಲ್ಲಿ ಬಾಣನು ಕಾದಮ್ಬರೀ, ಹರ್ಷಚರಿತ, ಚಣ್ಡೀಶತಕ ಗಳನ್ನೂ, ಮಯೂರನು ಸೂರ್ಯಶತಕವನ್ನೂ, ದಂಡಿಯು ದಶಕುಮಾರ ಚರಿತೆ ಅವನ್ತೀಸುನ್ದರೀ ಕಥೆಗಳನ್ನೂ, ಹರ್ಷನೇ ರತ್ನಾವಳೀ, ನಾಗಾನನ್ದ, ಪ್ರಿಯದರ್ಶಿಕಾ ಎಂಬ ನಾಟಕಗಳನ್ನೂ ರಚಿಸಿರುವರು. ಎಂಟನೆಯ ಶತಾಬ್ದ ದಲ್ಲಿ ಕಾಲಿದಾಸನಿಗೆ ಮಾತ್ರ ಎರಡನೆಯವನಾದ ಭವಭೂತಿಯು ಮಾಲತೀ ಮಾಧವ, ಉತ್ತರರಾಮಚರಿತ, ಮಹಾವೀರಚರಿತೆಗಳನ್ನೂ, ಭಟ್ಟನಾರಾ ಯಣನು ವೇಣೀಸಂಹಾರವನ್ನೂ, ಮಾಘನು ಶಿಶುಪಾಲವಧೆಯನ್ನೂ ಮುರಾರಿಯು ಅನರ್ಘರಾಘವನನ್ನೂ ಬರೆದರು. ರಾಷ್ಟ್ರಕೂಟರ ಆಶ್ರಯ ದಲ್ಲಿ ಜಿನಸೇನನು ಪಾರ್ಶ್ವಾಭ್ಯುದಯವೇಷ್ಟಿತ ಕಾವ್ಯವನ್ನೂ, ತ್ರಿವಿಕ್ರಮನು ನಳಚಮ್ಪೂ, ಸೋಮದೇವನು ಯಶಸ್ತಿಲಕ ಚಮ್ಪೂಕಾವ್ಯಗಳನ್ನು ರಚಿಸಿ ದರು. ಉತ್ತರದಲ್ಲಿ ರಾಜಶೇಖರನು ಕಾವ್ಯಮೀಮಾಂಸಾ, ವಿದ್ಧಸಾಲ ಭಂಜಿಕಾ ಮುಂತಾದುವನ್ನು, ಭೋಜನು ಭಾಗವತ ಮತ್ತು ರಾಮಾಯಣ ಚಮ್ಪೂ, ಧನಂಜಯನು ದ್ವ್ಯಾಶ್ರಯ ಕಾವ್ಯವನ್ನೂ, ಕ್ಷೇಮೇನ್ದ್ರನು ಮಹಾಭಾರತ, ರಾಮಾಯಣ ಸಂಗ್ರಹಗಳನ್ನೂ ಕಲ್ಹಣನು ರಾಜತರಂಗಿಣಿ ಯನ್ನೂ ಬರೆದರು. ಹನ್ನೆರಡನೆಯ ಶತಾಬ್ದದಿಂದೀಚೆಗೆ ಅನೇಕ ಗ್ರಂಥಗಳು ಹುಟ್ಟಿದ್ದರೂ ನವೀನತೆಯಾಗಲೀ ಪ್ರತಿಭೆಯಾಗಲೀ ಹೆಚ್ಚಾಗಿ ಕಂಡುಬರು ವದಿಲ್ಲ.

ನೀತಿಬೋಧಕ ಗ್ರಂಥಗಳಲ್ಲಿ ಬೌದ್ಧರ ಧರ್ಮಪದ, ಅವದಾನಕಥಾ, ಆರ್ಯಶೂರನ ಜಾತಕಮಾಲಾ, ಭರ್ತೃಹರಿಯ ಶತಕಗಳು, ಪಂಚತನ್ತ್ರ, ಹಿತೋಪದೇಶ, ಸೋಮದೇವನ ಕಥಾಸರಿತ್ಸಾಗರ, ಮೇರುತುಂಗನ ಪ್ರಬನ್ಧ ಚಿನ್ತಾಮಣಿ, ಬಲ್ಲಾಳಸೇನನ ಭೋಜಪ್ರಬನ್ಧ, ವೇತಾಳಪಂಚವಿಂಶತಿ, ಶುಕಸಪ್ತತಿ, ಶಂಕರಾಚಾರ್ಯರ ಆತ್ಮಬೋಧ, ಪ್ರಶ್ನೋತ್ತರ ರತ್ನಮಾಲಾ, ಮೋಹಮುದ್ಗರ, ಈಶ್ವರಕೃಷ್ಣನ ಪ್ರಬೋಧಚನ್ದ್ರೋದಯ, ಕ್ಷೇಮೇನ್ದ್ರನ ಅವದಾನಕಲ್ಪಲತಾ, ಎಂಬವು ಮುಖ್ಯವಾದವು. ಅಮರಕೋಶ, ವೈಜಯನ್ತೀ, ಧನಂಜಯ ಮುಂತಾದ ನಿಘಂಟುಗಳೂ, ಜಲ್ಹಣನ ಸೂಕ್ತಿಮುಕ್ತಾವಳೀ, ರೂಪಗೋಸ್ವಾಮಿಯ ಪದ್ಯಾವಳೀ, ಸುಭಾಷಿತ ರತ್ನಸಂದೋಹ ಮುಂತಾದ

ಪದ್ಯಸಂಗ್ರಹಗಳೂ, ಬಾಣನ ಚಣ್ಡೀಶತಕ, ಮಯೂರನ ಸೂರ್ಯಶತಕ, ಶಂಕರಾಚಾರ್ಯರ ಸ್ತೋತ್ರಗಳು, ಪುರನ್ದರನ ಶ್ಯಾಮಲಾದಣ್ಡಕ ಜಯದೇವನ ಗೀತಗೋವಿನ್ದ, ಲೀಲಾಶುಕರ ಕೃಷ್ಣಕರ್ಣಾಮೃತ, ಕುಲಶೇಖರರ ಮುಕುನ್ದ ಮಾಲಾಸ್ತೋತ್ರ ಮುಂತಾದ ಭಕ್ತಿಪ್ರಧಾನವಾದ ಕವನಗಳೂ ಸಂಸ್ಕೃತದಲ್ಲಿ ಹೇರಳವಾಗಿವೆ.

**ಪ್ರಾಕೃತಭಾಷೆಗಳು:** ಮಹಾವೀರ, ಗೌತಮ ಬುದ್ಧರ ಕಾಲದಲ್ಲಿ ಅರ್ಧಮಾಗಧೀ ಎಂಬ ಭಾಷೆಯೇ ಪ್ರಚಾರದಲ್ಲಿದ್ದಿತೆಂದು ತಿಳಿದುಬರುವದು. ಬೌದ್ಧರು ಮಾಗಧಿಯೇ ಮನುಷ್ಯರ ಮೂಲಭಾಷೆಯೆಂದು ಹೇಳುತ್ತಿದ್ದರು.[1] ಬುದ್ಧನು ಈ ಭಾಷೆಯಲ್ಲಿಯೇ ಬೋಧನೆಮಾಡುತ್ತಿದ್ದನು. ಬುದ್ಧನ ವಚನಗಳನ್ನು ಕ್ರೋಡೀಕರಿಸಿ ಗ್ರಂಥಸ್ಥಮಾಡಿದ ಮೇಲೆ ಈ ಗ್ರಂಥಜಾಲಕ್ಕೆ ಪಾಲಿ (ಶ್ರೇಣಿ, ಸಮೂಹ) ಎಂಬ ಹೆಸರಾಯಿತು. ಅನಂತರ ಗ್ರಂಥಸಮೂಹದ ಹೆಸರನ್ನು ಆಭಾಷಾಪ್ರಭೇದಕ್ಕೂ ಅನ್ವಯಿಸಿದುದರಿಂದ ಪಾಲಿ ಎಂಬುದು ಭಾಷೆಯ ಹೆಸರಾಯಿತು. ಆದುದರಿಂದ ಪಾಲಿಯೆಂಬ ಪ್ರತ್ಯೇಕ ಭಾಷೆಯಿಲ್ಲ.[2] ಕ್ರಿಸ್ತಶಕ ಏಳನೆಯ ಶತಾಬ್ದದ ವರೆಗೂ ಯಾವ ಗ್ರಂಥವೂ ಪಾಳಿಯೆಂಬ ಭಾಷೆಯನ್ನು ಹೇಳುವದಿಲ್ಲ. ಸಿಂಹಳದ ಥೇರವಾದಿಗಳೂ ಪಾಶ್ಚಾತ್ಯ ವಿದ್ವಾಂಸರೂ ಥೇರವಾದ ಗ್ರಂಥಗಳ ಭಾಷೆಗೆ ಪಾಳಿಯೆಂದು ನಾಮಕರಣಮಾಡಿದರು. ಮೌರ್ಯರ ಸಾಮ್ರಾಜ್ಯವೂ ಜೈನ ಮತ್ತು ಬೌದ್ಧಮತಗಳೂ ವಿಸ್ತರಿಸಿದಾಗ ಈ ಅರ್ಧಮಾಗಧಿ ಅಥವಾ ಮಾಗಧೀ ಭಾಷೆಯೂ ಹರಡಿತು. ಅಶೋಕನ ಶಾಸನಗಳು ಕೂಡ ಈ ಭಾಷಾಪ್ರಭೇದದಲ್ಲಿಯೇ ಇವೆ.

ಪಾಲಿ ಸಾಹಿತ್ಯದಲ್ಲಿ ಮೂರು ಮುಖ್ಯ ಘಟ್ಟಗಳಿವೆ. ಬುದ್ಧನ ನಿರ್ವಾಣಾನಂತರ ಮೌರ್ಯರ ಕಾಲದ ವರೆಗೆ ಬುದ್ಧನ ವಚನಗಳೂ ಕಥೆಗಳೂ, ಸೀಲ,

---

[1] ಸಕಲಜನಸಾಧಾರಣಾಯ ಮೂಲಭಾಷಾಯ—ವಿನಯವಿನಿಶ್ಚಯಟೀಕ. ಸಾ ಮಾಗಧೀ ಮೂಲಭಾಷಾನರಾಯ ಆದಿಕಪ್ಪಿಕಾ—ಕಚ್ಚಾಯನಪಾಲಿವ್ಯಾಕರಣ; ಸಭಾವನ ನಿರುತ್ತಿಯಾಮಾಗಧಿಕಾಯ ಸಬ್ಬಸತ್ತಾನಂ ಮೂಲಭಾಸಾಯ– ವಿಸುದ್ಧಿಮಗ್ಗ. ಪು. ೪೪೧.

[2] ಪಾ = ರಖ್ಖಣೇ + ಳಿ, ಪಾತಿರಕ್ಖತೀತಿ ಪಾಳಿ, ಪಾಳೀತಿ ಏಕಚ್ಚೋ| ತನ್ತಿ-ಬುದ್ಧವಚನಂ, ಪನ್ತಿ-ಪಾಲಿ| ಭಗವತಾವುಚ್ಚಮಾನಸ್ಸ ಅಥ್ಥಸ್ಸವೋಹಾರಸ್ಸಚ ದೀಪನತೋ ಸದ್ದೋಯೇವ ಪಾಳಿನಾಮಾ ತಿ ಗಂಠಿಪದೇಸು ವುತ್ತನ್ತಿ ಅಭಿಧಮ್ಮ ಕಥಾಽು ಲಿಖಿತಂ| ಪಾಳಿಸದ್ದೋ ಪಾಲಿಧಮ್ಮೋ ತಳಾಕ್ಯಪಾಲಿಯಮ್ಪಿಚ| ದಿಸ್ಸತೇಪನ್ತಿಯಂ ಚೇವ ಇತಿ ನೇಯಂವಿಜಾನತಾ|| ಅಯಂಹಿಪಾಳಿಸದ್ದೋ ಪಾಳಿಯಾ ಅತ್ಥಂ ಉಪಪರಿಖ್ಖನ್ತಿ ತಿ ಆದಿಸು ಪರಿಯತ್ತಿ ಧಮ್ಮಸಂಖಾತೇಪಾಳಿಧಮ್ಮೇ ದಿಸ್ಸತಿ||—ಅಭಿಧಮ್ಮಪ್ಪದೀಪಿಕಾಸೂಚೀ.

ಪಾರಾಯಣ, ಅಟ್ಠಕಗಳೂ, ಸಿಖ್ಖಾಪದಗಳೂ ಹುಟ್ಟಿದವು. ಅನಂತರ ಅಶೋಕನ ಕಾಲದ ವರೆಗೆ ದೀಘ, ಮಜ್ಝಿಮ, ಸಂಯುತ್ತ, ಅಂಗುತ್ತರ ನಿಕಾಯಗಳೂ, ಪಾತಿಮೊಖ್ಖಗಳೂ, ಥೇರ-ಥೇರೀಗಾಥಾ, ಜಾತಕ ಕಥೆಗಳೂ, ಸುತ್ತವಿಭಂಗ, ಪಟಿಸಂಭಿದಾಮಗ್ಗ, ಪುಗ್ಗಲಪನ್ನತ್ತಿ, ವಿಭಂಗ, ಮಹಾ ಮತ್ತು ಚುಲ್ಲವಗ್ಗ, ವಿಮಾನ ಮತ್ತು ಪೇತವತ್ಥು, ಧಮ್ಮಪದ, ಕಥಾವತ್ಥು ಎಂಬ ಗ್ರಂಥಗಳು ರಚಿತವಾದವು. ಅನಂತರ ಕ್ರಿ.ಶ. ೫ನೆಯ ಶತಾಬ್ದದ ವರೆಗೆ ಚುಲ್ಲ ಮತ್ತು ಮಹಾನಿದ್ದೇಸಗಳು, ಉದಾನ, ಇತಿವುತ್ತಕ, ಸುತ್ತನಿಪಾತ, ಧಾತುಕಥಾ, ಪಟ್ಠಾನ, ಬುದ್ಧವಂಶ, ಚರಿಯಾಪಿಟಕ, ಅಪದಾನ, ಪರಿವಾರಪಾಠ, ಖುದ್ದಕಪಾಠಗಳೂ ರಚಿತವಾದವು. ಕ್ರಿ.ಶ. ೫ನೆಯ ಶತಾಬ್ದದ ನಂತರ ವ್ಯಾಖ್ಯಾನಗಳೂ, ಮಹಾವಂಶ, ದೀಪವಂಶ, ಗಂಧವಂಶ, ಸದ್ಧಮ್ಮಸಂಗಹ, ಸಂದೇಸಕಥಾ, ಮಹಾಬೋಧಿವಂಸ, ಥೂಪವಂಸ, ದಾಠಾವಂಸ, ಸಾಸನವಂಸ, ಬುದ್ಧಘೋಸುಪ್ಪತ್ತಿ ಮುಂತಾದ ಚಾರಿತ್ರಕ ಗ್ರಂಥಗಳೂ ಪಾಲಿವ್ಯಾಕರಣ, ನಿಘಣ್ಟು, ಛಂದಸ್ಸು, ಕಾವ್ಯಗಳೂ, ಸಂಗ್ರಹ ಗ್ರಂಥಗಳೂ ರಚಿತವಾದವು.

ಇತರ ಪ್ರಾಕೃತಗಳಾದ ಪೈಶಾಚೀ, ಶೌರಸೇನೀ, ಮಹಾರಾಷ್ಟ್ರೀ, ಅಪಭ್ರಂಶ ಮುಂತಾದ ಭಾಷೆಗಳಲ್ಲೂ ಗ್ರಂಥಗಳಿವೆ. ಹಾಲನ ಗಾಥಾಸಪ್ತಶತೀ, ಗುಣಾಢ್ಯನ ಬೃಹತ್ಕಥಾ, ಕಾಲಿದಾಸನ ಸೇತುಬನ್ಧಕಾವ್ಯ, ಕುಮಾರದಾಸನ ಜಾನಕೀಹರಣ, ಶಿವಸ್ವಾಮಿಯ ಕಪ್ಫಿಣಾಭ್ಯುದಯ, ಭಟ್ಟಿಯ ರಾವಣವಹೋ, ವಾಕ್ಪತಿಯ ಗೌಡವಹೋ ಮುಂತಾದುವು ಮುಖ್ಯ.

**ದೇಶಭಾಷೆಗಳು**: ಉತ್ತರದಲ್ಲಿ ಹಿಂದೀ, ಮೈಥಿಲೀ ಬಿಹಾರೀ ಭಾಷೆಗಳಲ್ಲಿ ಹನ್ನೆರಡನೆಯ ಶತಾಬ್ದದಿಂದ ಗ್ರಂಥರಚನೆಗೆ ಆರಂಭವಾಯಿತು. ರಾಜಪುತ್ರಮನೆತನಗಳ ಆಸ್ಥಾನಕವಿಗಳಾದ ಚಾರಣ, ಭಟ್ಟರೆಂಬುವರು ತಮ್ಮ ಒಡೆಯರ ಪರಾಕ್ರಮಗಳನ್ನು ವರ್ಣಿಸಿರುವರು. ಪೃಥ್ವೀರಾಜನ ಕಥೆಯನ್ನು ಚಾಂದ್ ಬಾರ್ದೈ ಎಂಬ ಕವಿಯು ಪೃಥ್ವೀರಾಜರಾಸೋ ಎಂಬ ಕಾವ್ಯದಲ್ಲಿ ಹೇಳಿರುವನು. ಅನಂತರ ಜಗ್‌ನಾಯಕ್, ಸಾರಂಗಧರರೆಂಬುವರು ಹಮ್ಮೀರ್ ರಾಸೋ, ಹಮ್ಮೀರ ಕಾವ್ಯಗಳನ್ನು ಬರೆದರು. ಪರ್ಷಿಯನ್ ಭಾಷೆಯ ಸಂಪರ್ಕವುಂಟಾದಮೇಲೆ ಹಿಂದೀಭಾಷೆಯಲ್ಲಿ ಅನ್ಯದೇಶೀಯಪದಗಳು ಸೇರಿದವು. ಹದಿನಾರನೆಯ ಶತಾಬ್ದದಲ್ಲಿ ಮುಹಮ್ಮದ್ ಜಾಯಸಿಯ ಪದುಮಾವತಿ, ತುಲಸೀದಾಸನ ರಾಮಾಯಣಗಳು ರಚಿತವಾದವು. ಕಬೀರ್ ಮತ್ತು ಮೀರಾಬಾಯಿಯ ಕೀರ್ತನೆಗಳು (೧೫ನೆಯ ಶತಾಬ್ದ), ಗುರುನಾನಕನ

"ಆದಿಗ್ರಂಥ (೧೬-೧೭ ಶತಾಬ್ದ) ಇವುಗಳು ಹಿಂದಿ ಭಾಷೆಯ ಪ್ರಾಂತಿಕ ರೂಪಗಳನ್ನು ತೋರಿಸುವವು.

ಉರ್ದುಭಾಷೆಯು ಮೊದಲು ಸೈನಿಕರಲ್ಲಿ (Horde) ಪರ್ಶಿಯನ್ ಹಿಂದಿ ಮಿಶ್ರಣದಿಂದ ಹುಟ್ಟಿತು. ೧೭-೧೮ ನೆಯ ಶತಾಬ್ದಗಳಲ್ಲಿ ಈ ಉರ್ದು ಭಾಷೆಯಲ್ಲಿ ಮಾರ್ಪಾಟುಗಳಾಗಿ ಸಂಯುಕ್ತ ಪ್ರಾಂತಗಳಲ್ಲಿಯೂ, ಬಹಮನೀ ರಾಜ್ಯದಲ್ಲೂ ಬೆಳೆಯಿತು. ಡೆಲ್ಲಿ, ಲಕ್ನೋ-ಲಾಹೋರ್, ಮತ್ತು ದಕ್ಷಿಣ ಹೈದರಾಬಾದುಗಳು ಉರ್ದುಭಾಷೆಗೆ ಕೇಂದ್ರಗಳಾಗಿದೆ. ಡಿಲ್ಲಿಯ ಘಾಲಿಬ್ ಮತ್ತು ಹಾಲಿ, ಲಕ್ನೋಭಾಗದ ಅನಿಸ್ ಮತ್ತು ಡಬೀರ್‌ನಿಕವಿಗಳು "ಮರ್ಸಿಯ"ಗಳನ್ನು ರಚಿಸಿರುವರು. ಘಸ್ಲಲ್ ಪದ್ಯಗಳು ಉರ್ದುವಿನಲ್ಲಿ ಹೆಚ್ಚಾಗಿವೆ. ಈಚೆಗೆ ಇಕ್ಬಲ್, ಪಂಡಿತ್ ರತನ್‌ನಾಥ್ (ಸರ್ಶ್ಕಾರ್), ಮುನಷೀಜ್ವಾಲಾಪ್ರಸಾದ್ (ಬರ್ಕ್), ಪಂಡಿತ್ ಬ್ರಿಜ್ ನಾರಾಯಣ್ (ಛಾಕ್‌ಬಸ್ತ್), ತೇಜ್‌ಬಹಾದುರ್ ಸಾಪ್ರು ಪ್ರಸಿದ್ಧ ಕವಿಗಳು.

ಬಂಗಾಳ ಭಾಷೆಯಲ್ಲಿ ಗ್ರಂಥರಚನೆಯು ಕ್ರಿ.ಶ. ೧೧ ನೆಯ ಶತಮಾನದಲ್ಲಿ ಬೌದ್ಧರಿಂದ ಆರಂಭವಾಯಿತೆಂದು ಊಹಿಸಲಾಗಿದೆ. ಬಂಗಾಳಿ ಭಾಷೆಯು ಮಾಗಧೀ ಪ್ರಾಕೃತದಿಂದ ಹುಟ್ಟಿತು. ಬೌದ್ಧಸನ್ಯಾಸಿಗಳೂ, ಶಾಕ್ತರೂ ಡಾಕೇರ್‌ಬಚನ್, ಖನಾರ್‌ಬಚನ್, ಬಾರಾಮಾಸೀ ಮುಂತಾದ ಗ್ರಂಥಗಳನ್ನು ರಚಿಸಿದರು. ವೈಷ್ಣವಮತವು ಪ್ರಬಲವಾದ ಮೇಲೆ "ಜಾತ್ರೆ" ಗಳಿಗಾಗಿ ಜಯದೇವನಗೀತಗೋವಿನ್ದದ ರೀತಿಯಲ್ಲಿ ಧರ್ಮಮಂಗಳ ಮುಂತಾದ ಕೀರ್ತನೆ ಗ್ರಂಥಗಳು ಹುಟ್ಟಿದವು. ಕೃತ್ತಿವಾಸನ ರಾಮಾಯಣ, ಕಾಶೀರಾಮದಾಸನ ಮಹಾಭಾರತ, ವಿದ್ಯಾಪತಿ, ಚಣ್ಡೀದಾಸ, ಗೋವಿಂದದಾಸ ಮುಕುನ್ದರಾಮ, ರಾಮಪ್ರಸಾದಸೇನರ ಭಕ್ತಿಪ್ರಧಾನವಾದ ಪದಗಳು ಪ್ರಸಿದ್ಧವಾಗಿವೆ. ೧೮ ನೆಯ ಶತಾಬ್ದದ ಭಾರತ ಚನ್ದ್ರರಾಯನ ವಿದ್ಯಾಸುನ್ದರದಂತಹ ಗ್ರಂಥಗಳು ಶೃಂಗಾರರಸ ಪ್ರಧಾನವಾಗಿವೆ. ಕ್ರಿ.ಶ. ೧೮೦೦ ರಿಂದ ಬಂಗಾಳಿ ಬಾಷೆಯಲ್ಲಿ ಹೊಸ ಯುಗವು ಆರಂಭವಾಯಿತು. ಆಂಗ್ಲಭಾಷಾಸಂಪರ್ಕದಿಂದ ರಾಜರಾಮ ಮೋಹನರಾಯ, ಬಂಕಿಮ್ ಚನ್ದ್ರಚಾಟರ್ಜಿ, ರಮೇಶ ಚನ್ದ್ರದತ್ತ, ಮೈಕೆಲ್ ಮಧುಸೂದನದತ್ತ, ತೋರುದತ್, ರವೀನ್ದ್ರನಾಥ ಠಾಕೂರ, ಶರಚ್ಚಂದ್ರ ಚಾಟರ್ಜಿ ಮುಂತಾದ ಲೇಖಕರು ನೂತನ ರೀತಿಯಲ್ಲಿ ಗ್ರಂಥ ರಚನೆ ಮಾಡಿ ಬಂಗಾಳಿ ಭಾಷೆಯ ಪ್ರಭಾವವನ್ನು ಇತರ ದೇಶಭಾಷೆಗಳ ಮೇಲೆಲ್ಲ ವಿಸ್ತರಿಸಿರುವರು.

ಗುಜರಾತಿಯಲ್ಲಿ ಹದಿನೈದನೆಯ ಶತಾಬ್ದದಿಂದ ಗ್ರಂಥರಚನೆಯು ಕಂಡು

ಬರುವದು. ವಲ್ಲಭಾಚಾರ್ಯರ ವೈಷ್ಣವಮತದಿಂದ ಕೀರ್ತನೆ ಸಾಹಿತ್ಯವು ಹುಟ್ಟಿತು. ನರಸಿಂಹಮೆಹ್ತಾ, ನಾಕರ್, ಪ್ರೇಮಾನಂದರ ಕೀರ್ತನೆಗಳು ಬಹಳ ಪ್ರಚಾರದಲ್ಲಿವೆ. ಜೈನರೂ ಪಾರ್ಸಿಗಳೂ ಗುಜರಾತಿ ಸಾಹಿತ್ಯವನ್ನು ಬೆಳಸಿರುವರು. ಕೆ. ಎಂ. ಮುನ್ಷಿ, ಝುವೇರಿ ಮುಂತಾದವರು ಆಧುನಿಕ ಯುಗವನ್ನಾರಂಭಿಸಿದರು.

ಆಸ್ಸಾಂ ಭಾಷೆಯಲ್ಲಿ "ಬುರಾನ್‌ಜಿ" ಎಂಬ ಪ್ರಾಚೀನ ಚಾರಿತ್ರಿಕ ಗ್ರಂಥಗಳು ಕಂಡುಬರುವವು. ಶಾಕ್ತರೂ, ವೈಷ್ಣವರೂ, ಬೌದ್ಧರೂ ಮತ ಸಂಬಂಧವಾದ ಗ್ರಂಥಗಳನ್ನು ರಚಿಸಿರುವರು. ಈಚೆಗೆ ಬಂಗಾಳಿಸಂಪರ್ಕದಿಂದ ನೂತನರೀತಿಯು ಕಂಡುಬರುವದು.

ಮಹಾರಾಷ್ಟ್ರಸಾಹಿತ್ಯವು ಹನ್ನೆರಡನೆಯ ಶತಾಬ್ದದಿಂದ ಆರಂಭವಾಯಿತೆಂದು ಹೇಳಬಹುದು. ಮಹಾನುಭಾವ ಪಂಥದವರೂ ಜ್ಞಾನದೇವನೂ ಹದಿಮೂರನೆಯ ಶತಾಬ್ದದಲ್ಲಿ ಗ್ರಂಥರಚನೆ ಮಾಡಿದರು. ಹೇಮಾದ್ರಿ ಪಂಡಿತನು ಮೋಡಿ ಲಿಪಿಯನ್ನು ಚಾರಿಗೆ ತಂದನೆಂದು ತಿಳಿದುಬರುವದು. ನಾಮದೇವ, ತುಕಾರಾಮ, ರಾಮದಾಸ ಮುಂತಾದ ಭಕ್ತಿಪಂಥದವರು ಅಭಂಗಗಳನ್ನು ರಚಿಸಿರುವರು. ಮರಾಟರ ಸಾಮ್ರಾಜ್ಯವು ವಿಸ್ತರಿಸಿದಂತೆ ಮರಾಠಿ ಭಾಷೆಯೂ ಹರಡಿತು. ಅನೇಕ ಬಖಾರುಗಳೂ ಚರಿತ್ರೆಗಳೂ ರಚಿತವಾದವು. ಹತ್ತೊಂಬತ್ತನೆಯ ಶತಾಬ್ದದಿಂದ ಹೊಸ ಯುಗವು ಆರಂಭವಾಯಿತು. ಲೋಕಮಾನ್ಯ ಬಾಲಗಂಗಾಧರ ತಿಲಕ, ಎನ್. ಸಿ. ಕೇಳ್ಕರ್, ಸವಾರ್ಕರ್, ಬಾಪಟ್ ಮುಂತಾದವರು ಮರಾಠಿ ಸಾಹಿತ್ಯವನ್ನು ಬೆಳಸಿರುವರು.

**ದ್ರಾವಿಡಭಾಷೆಗಳು:** ತಮಿಳು, ತೆಲುಗು, ಕನ್ನಡ, ಮಲೆಯಾಳ, ತುಳು ಭಾಷೆಗಳು ಕ್ರಿಸ್ತಶಕ ೧ ನೆಯ ಶತಾಬ್ದದಲ್ಲಿ ವಿಶಿಷ್ಟ ರೂಪಗಳನ್ನು ಪಡೆದವು. ತಮಿಳಿನಲ್ಲಿ ಅತಿ ಪ್ರಾಚೀನಕಾಲದಿಂದಲೂ ಮೂರು ಸಂಘಗಳು ಇದ್ದವೆಂದು ಐತಿಹ್ಯವಿದ್ದರೂ, ಸಂಘಸಾಹಿತ್ಯವು ಕ್ರಿಸ್ತಶಕ ಎರಡನೆಯ ಶತಾಬ್ದದಲ್ಲಿ ಆರಂಭವಾಯಿತೆಂದು ನಿರ್ಧರಿಸಿದೆ, ಮಣಿಮೇಖಲೈ, ಶಿಲಪ್ಪಧಿಕಾರಂ, ಪಟ್ಟಿನಪ್ಪಾಲೈ, ಅಹನಾನೂರೂ, ಪುರನಾನೂರು, ಪದಿರುಪ್ಪತ್ತು, ಐಂಗರುನೂರು, ಪತ್ತುಪ್ಪಾಟ್ಟು, ಪೆರುಂಗತ್ತೈ, ನಾಲಡಿಯಾರ್, ಕುರುಳ್, ತೊಳ್ಕಾಪ್ಪಿಯಂ, ನೀಲಕೇಶಿ, ಕುಣ್ಡಲಕೇಶಿ ಎಂಬವು ಮುಖ್ಯಗ್ರಂಥಗಳು. ಶೈವ ಮತ್ತು ವೈಷ್ಣವ ಭಕ್ತರು ಕ್ರಿ.ಶ. ೬ ನೆಯ ಶತಾಬ್ದದಿಂದ ದೇವಾರಂ, ತಿರುವಾಚಕಂ, ನಾಲಾಯಿರ ಪ್ರಬಂಧಂ ಮುಂತಾದ ಸ್ತೋತ್ರಗ್ರಂಥಗಳನ್ನು ರಚಿಸಿದರು. ಹನ್ನೆರಡನೆಯ ಶತಾಬ್ದದಲ್ಲಿ ಕಂಬರ ರಾಮಾಯಣ, ಜಯಂಗೊಂಡನ

ಕಳಿಂಗತ್ತುಪ್ಪರಣಿ, ರಾಜರಾಜನುಳಾ, ಕುಲೋತ್ತುಂಗ ಚೋಳನುಳಾ, ಕುಲೋತ್ತುಂಗ ಪಿಳ್ಳೈತ್ತಮಿಳ್ ಮುಂತಾದವೂ, ಪೆರಿಯಪುರಾಣಂ, ಎಂಬೆರುಮಾನಾರ್‌ವೈಭವಮಂ, ಕೋಯಿಲ್ ಉಳುಹು ಇತ್ಯಾದಿ ಗ್ರಂಥಗಳೂ ಹುಟ್ಟಿದವು. ಹದಿನಾರನೆಯ ಶತಾಬ್ದದಲ್ಲಿ ಜೆಸೂಟ್ ಪಾದ್ರಿಗಳಾದ ಸ್ಲೇವಿಯರ್, ನೊಬಿಲಿ, ಬೆಷ್ಚಿ ಮುಂತಾದವರು ಶಾಲೆಗಳನ್ನು ಸ್ಥಾಪಿಸಿ ಗ್ರಂಥಗಳ ಮುದ್ರಣೆಯನ್ನಾರಂಭಿಸಿದರು. ಹತ್ತೊಂಬತ್ತನೆಯ ಶತಾಬ್ದದಿಂದ ತಮಿಳು ನಲ್ಲಿಯೂ ಹೊಸ ಪದ್ಧತಿಗಳು ಕಂಡುಬರುವವು.

**ಕನ್ನಡ:** ತಮಿಳುಸಾಹಿತ್ಯವನ್ನು ಬಿಟ್ಟರೆ ಕನ್ನಡದಲ್ಲಿಯೇ ಅತ್ಯಂತ ಪ್ರಾಚೀನವಾದ ಸಾಹಿತ್ಯವು ಕಂಡುಬರುವದು. ಕ್ರಿ.ಶ. ೫-೬ ನೆಯ ಶತಾಬ್ದದ ಪೂರ್ವ ಹಳಗನ್ನಡವು ಹಲ್ಮಿಡಿ ಶಾಸನದಲ್ಲಿ ಕಂಡುಬರುವದು. ವಿಮಲ, ಉದಯ, ನಾಗಾರ್ಜುನ, ಜಯಬನ್ಧು, ದುರ್ವಿನೀತ ಮುಂತಾದ ಕವಿಗಳು ೯ ನೆಯ ಶತಾಬ್ದಕ್ಕೆ ಹಿಂದೆಯಿದ್ದರು. ರಾಷ್ಟ್ರಕೂಟರ ಕಾಲದಲ್ಲಿ ಕನ್ನಡವು ಕಾವೇರಿಯಿಂದ ಗೋದಾವರಿ ವರೆಗೂ ವ್ಯಾಪಿಸಿದ್ದಿತೆಂದು ನೃಪತುಂಗನು ಹೇಳಿರುವನು. ಗುಜರಾತ್, ಪಂಜಾಬ್ ಪ್ರಾಂತಗಳಲ್ಲಿಯೂ, ಕಂಚಿ ಪುದುಚೇರಿಗಳಲ್ಲಿಯೂ, ರಾಷ್ಟ್ರಕೂಟರ ಕನ್ನಡ ಶಾಸನಗಳು ಕಂಡುಬರುವುವು. ನೃಪತುಂಗನ ಕಾಲದಲ್ಲಿ ಪ್ರವಾಸಮಾಡಿದ ಸುಲೇಮಾನ್ ಎಂಬ ಅರಬ್ಬಿ ವರ್ತಕನು ಈ ದೇಶದ ಭಾಷೆಯನ್ನು "ಕನರಿ" ಎಂದು ಕರೆದಿರುವನು. ಕನ್ನಡದಲ್ಲಿ ಮೊದಲು ಜೈನರ ಗ್ರಂಥಗಳು ಹೆಚ್ಚಾಗಿ ಕಂಡುಬರುವವು. ನೃಪತುಂಗನ ಕವಿರಾಜಮಾರ್ಗ, ಶಿವಕೋಟಿಯ ವೊಡ್ಡಾರಾಧನಾ, ಪಂಪನ ಆದಿಪುರಾಣ ವಿಕ್ರಮಾರ್ಜುನ ವಿಜಯ, ಪೊನ್ನನ ಶಾನ್ತಿಪುರಾಣ, ಚಾವುಣ್ಡರಾಯನ ಆದಿಪುರಾಣ, ರನ್ನನ ಅಜಿತಪುರಾಣ, ಗದಾಯುದ್ಧ ಮುಂತಾದವು ಮುಖ್ಯಗ್ರಂಥಗಳು.

ಹನ್ನೊಂದನೆಯ ಶತಾಬ್ದದಿಂದ ದುರ್ಗಸಿಂಹ, ರುದ್ರಭಟ್ಟ, ದೇವಕವಿ ಮುಂತಾದ ಬ್ರಾಹ್ಮಣ ಕವಿಗಳೂ ಕನ್ನಡದಲ್ಲಿ ಗ್ರಂಥರಚನೆಯನ್ನಾರಂಭಿಸಿದರು. ವೀರಶೈವಮತವು ವ್ಯಾಪಿಸುವದಕ್ಕೆ ಬಸವೇಶ್ವರ, ಚೆನ್ನಬಸವ, ಸಿದ್ಧರಾಮ, ಅಕ್ಕಮಹಾದೇವಿ ಮುಂತಾದವರ ವಚನಗಳು ಕಾರಣವಾದವು. ಹದಿಮೂರನೆಯ ಶತಾಬ್ದದಲ್ಲಿ ಪಾಲ್ಕುರಿಕೆ ಸೋಮನಾಥ, ಹರಿಹರ, ರಾಘವಾಂಕ, ಕೆರೆಯ ಪದ್ಮರಸ ಮುಂತಾದ ವೀರಶೈವ ಕವಿಗಳು ದ್ವಿಪದಿ, ಷಟ್ಪದಿ, ರಗಳೆ, ತ್ರಿಪದಿ ಛಂದಸ್ಸಿನಲ್ಲಿ ಗ್ರಂಥರಚನೆ ಮಾಡಿದರು. ಜೈನರಾದ ಕರ್ಣಪಾರ್ಯ, ನೇಮಿಚಂದ್ರ, ಕಮಲಭವ, ಬ್ರಹ್ಮಶಿವ ಮುಂತಾದವರೂ ಕಾವ್ಯಗಳನ್ನು ಬರೆದರು. ವಿಜಯನಗರದ ಇಮ್ಮಡಿ ದೇವರಾಯನ ಆಶ್ರಯದಲ್ಲಿ


ಮುಂಬಯಿ
ಅಹಮ್ಮದನಗರ
ಪುಣೆ
ಸತಾರೆ
ಪಂಢರಪುರ
ಭೀಮಾ ನದಿ
ಸೊಲ್ಲಾಪುರ
ಕಲ್ಯಾಣಿ
ಹೈದರಾಬಾದು
ಬ್ರಹ್ಮಪುರಿ
ಗುಲಬುರುಗ
ಜುನಾ ಚೋಗೌನ್
ಜತ್ ಸಂಸ್ಥಾನ
ಮಾಲಖೇಡ
ರತ್ನಾಗಿರಿ
ಸಾಂಗ್ಲಿ
ಮಿರಜ್
ಬಿಜಾಪುರ
ಕೊಲ್ಹಾಪುರ
ಕೃಷ್ಣಾ ನದಿ
ಜಮಖಂಡಿ
ಮುಧೋಳ
ಹೆರಕಲ್
ಕೃಷ್ಣಾ ನದಿ
ಘಟಪ್ರಭಾ ನದಿ
ಬಾಗಲಕೋಟೆ
ಬಾದಾಮಿ
ರಾಯಿಚೂರು
ಬೆಳಗಾಂವಿ
ಪಟ್ಟದಕಲ್
ವಡಗಾಂವ
ತುಂಗಭದ್ರಾ ನದಿ
ಗೋವ
ಧಾರವಾಡ
ಗದಗ
ಕೊಪ್ಪಳ
ಹರ್ತಿ
ವಿಜಯನಗರ
ಬೆಲ್ಲತ್ತಿ
ಬಳ್ಳಾರಿ
ಇಟಗಿ
ಕಾರವಾರ
ವರದಾ ನದಿ
ಅಗಡಿ
ಬನವಾಸಿ
ಬಳ್ಳಿಗಾವೆ
ಕೆಳದಿ
ಇಕ್ಕೇರಿ
ಭಟಕಳ
ಪೆನುಗೊಂಡೆ
ಚಿತ್ರದುರ್ಗ
ಉಡುಪಿ
ದ್ವಾರಸಮುದ್ರ
ಬೇಲೂರು
ಬೆಂಗಳೂರು
ಮಂಗಳೂರು
ಮಡಿಕೇರಿ
ಮೈಸೂರು
ತಲಕಾಡು
ಉದಕಮಂಡಲ

ಕರ್ನಾಟಕ

ಲಕ್ಕಣ್ಣ, ಜಕ್ಕಣ್ಣ, ಮಗ್ಗೆಯ ಮಾಯಿದೇವ, ಚಾಮರಸ, ಕುಮಾರ ಬಂಕನಾಥ ಮುಂತಾದ ವೀರಶೈವಕವಿಗಳೂ ಕುಮಾರವ್ಯಾಸನಂತಹ ಬ್ರಾಹ್ಮಣ ಕವಿಗಳೂ ಇದ್ದರು. ಕೃಷ್ಣದೇವರಾಯನು ತಿಮ್ಮಣ್ಣ ಕವಿಯಿಂದ ಗದುಗು ಭಾರತವನ್ನು ಪೂರ್ತಿಮಾಡಿಸಿದನು. ಲಕ್ಷ್ಮೀಶನ ಜೈಮಿನಿಭಾರತ, ವಿರೂಪಾಕ್ಷ ಪಂಡಿತನ ಚೆನ್ನಬಸವಪುರಾಣ, ನಿತ್ಯಾತ್ಮ ಶುಕಯೋಗಿಯ ಭಾಗವತ, ತೊರವೆರಾಮಾಯಣ ಮುಂತಾದ ಗ್ರಂಥಗಳು ಕರ್ಣಾಟಕದಲ್ಲೆಲ್ಲ ವ್ಯಾಪಿಸಿವೆ. ಕೆಳದಿ ಮುಂತಾದ ಪಾಳೆಯಗಾರರೂ ಮೈಸೂರಿನ ಒಡೆಯರೂ ಕನ್ನಡವನ್ನು ಪ್ರೋತ್ಸಾಹಿಸಿದರು. ಚಿಕ್ಕದೇವರಾಯ, ಚಾಮರಾಜ, ಮುಮ್ಮಡಿ ಕೃಷ್ಣರಾಜ ಒಡೆಯರಂತಹವರು ಸ್ವತಃ ಗ್ರಂಥರಚನೆ ಮಾಡಿರುವರು. ಹತ್ತೊಂಬತ್ತನೆಯ ಶತಾಬ್ದದಿಂದ ಕನ್ನಡದಲ್ಲಿಯೂ ನೂತನ ಯುಗವಾರಂಭವಾಯಿತು.

**ತೆಲಗು:** ಕ್ರಿಸ್ತಶಕ ೭ ನೆಯ ಶತಮಾನದ ತಿಪ್ಪಲೂರು ಶಾಸನ ಮತ್ತು ಬೋದಂಪಾಡುಶಾಸನಗಳು[3] ಇದುವರೆಗೆ ಸಿಕ್ಕಿರುವ ತೆಲುಗು ಶಾಸನಗಳಲ್ಲಿ ಅತ್ಯಂತ ಪ್ರಾಚೀನ. ಬಾದಾಮಿಚಾಳುಕ್ಯ ಇಮ್ಮಡಿ ಪುಲಿಕೇಶಿಯ ತಮ್ಮನಾದ ಕುಬ್ಜ ವಿಷ್ಣುವರ್ಧನನು ವೆಂಗಿಯಲ್ಲಿ ಪೂರ್ವಚಾಳುಕ್ಯ ವಂಶವನ್ನು ಸ್ಥಾಪಿಸಿದನು. ಈ ಚಾಳುಕ್ಯರು ತೆಲುಗು ಭಾಷೆಯನ್ನು ಅಭಿವೃದ್ಧಿಗೆ ತಂದರೆಂದು ನನ್ನಿಯ ಚೋಡನು ಹೇಳಿರುವನು. ಪೂರ್ವ ಚಾಳುಕ್ಯರ ಶಾಸನಗಳಲ್ಲಿ ಸೀಸಪದ್ಯ, ದ್ವಿಪದಿ ಮುಂತಾದುವು ಕಂಡುಬರುವವು. ಚಾಳುಕ್ಯ ರಾಜರಾಜನರೇಂದ್ರನ ಆಸ್ಥಾನದಲ್ಲಿ (೧೧ ನೆಯ ಶತಮಾನ) ನನ್ನಯಭಟ್ಟನು ತೆಲುಗಿನಲ್ಲಿ ಇದುವರೆಗೂ ಸಿಕ್ಕಿರುವ ಮೊದಲು ಗ್ರಂಥವಾದ ಮಹಾಭಾರತವನ್ನು ಅರಣ್ಯಪರ್ವದ ವರೆಗೂ ಕನ್ನಡಕವಿಯಾದ ನಾರಾಯಣಭಟ್ಟನ ಸಹಾಯದಿಂದ ರಚಿಸಿದನು. ವೆಂಗಿಪಟ್ಟುವಿಗೂ ಕರ್ಣಾಟಕಕ್ಕೂ ಹತ್ತಿರ ಸಂಬಂಧವಿದ್ದಿತ್ತೆಂದು ಪಂಪ, ಪೊನ್ನ, ನಾಗವರ್ಮ, ನನ್ನಿಯ ಚೋಡರ ಗ್ರಂಥಗಳಿಂದ ತಿಳಿದುಬರುವದು. ಹದಿಮೂರನೆಯ ಶತಾಬ್ದದಲ್ಲಿ ಪ್ರತಾಪರುದ್ರನ ಕಾಲದಲ್ಲಿ ಪಾಲ್ಕುರಿಕೆ ಸೋಮನಾಥನು ಬಸವಪುರಾಣ, ಪಂಡಿತಾರಾಧ್ಯ ಚರಿತ್ರೆಗಳನ್ನು ತೆಲುಗಿನಲ್ಲಿ ಬರೆದನು. ಕವಿಬ್ರಹ್ಮನೆನಿಸಿದ ತಿಕ್ಕನ್ನನು ನಿರ್ವಚನೋತ್ತರರಾಮಾಯಣವನ್ನೂ ವಿರಾಟಪರ್ವದಿಂದ ಪೂರ್ತಿ ಮಹಾಭಾರತವನ್ನೂ ರಚಿಸಿದನು. ಇದೇಕಾಲದಲ್ಲಿ ನನ್ನಿಯ ಚೋಡನ ಕುಮಾರಸಂಭವ, ಬದ್ದೆನೃಪಾಲನ ಬದ್ದೆನೀತಿ, ಸುಮತಿಶತಕ, ರಂಗನಾಥ ರಾಮಾಯಣ ಮುಂತಾದ ಗ್ರಂಥಗಳು ಹುಟ್ಟಿದವು.

[3] *M.E.R.* 1938. No. 283 ; *M.E.R.* 1934. No. 182.

ವಿಜಯನಗರದ ಒಂದನೆ ಹರಿಹರನ ಕಾಲದಲ್ಲಿ ನಾಚನ್ನ ಸೋಮನು ಹರಿವಂಶವನ್ನು ರಚಿಸಿದನು. ಇಮ್ಮಡಿ ದೇವರಾಯ, ರೆಡ್ಡಿ ರಾಜರಾದ ಅನವೇಮ ಸರ್ವಜ್ಞಸಿಂಗಮರ ಕಾಲದಲ್ಲಿ ಶ್ರೀನಾಥನೂ ಬಮ್ಮೆರ ಪೋತನ್ನನೂ ಮುಖ್ಯ ಕವಿಗಳಾಗಿದ್ದರು. ಹದಿನಾರನೆಯ ಶತಾಬ್ದವು ಆನ್ಧ್ರಸಾಹಿತ್ಯದ ಸುವರ್ಣಯುಗ. ಸಾಳ್ವ ನರಸಿಂಹನ ಆಶ್ರಯದಲ್ಲಿ ಪಿಲ್ಲಲಮರ್ರಿಪಿನ ವೀರಭದ್ರ ಕವಿಯು ಜೈಮಿನಿಭಾರತ, ಶಕುನ್ತಲೋಪಾಖ್ಯಾನಗಳನ್ನು ರಚಿಸಿದನು. ಕೃಷ್ಣದೇವರಾಯನ ಆಸ್ಥಾನದಲ್ಲಿ ಅಷ್ಟದಿಗ್ಗಜಗಳೆಂದೆನಿಸಿದ ಅಲ್ಲಸಾನಿಪೆದ್ದನ್ನ, ಮುಕ್ಕುತಿಮ್ಮನ್ನ, ತೆನಾಲಿ ರಾಮಕೃಷ್ಣ, ಧೂರ್ಜಟಿ, ವೀರಭದ್ರಕವಿ, ರಾಮರಾಜಭೂಷಣ, ಕುಮ್ಮರಮೊಲ್ಲ ಪಿಂಗಳಿಸೂರನ್ನ ಮುಂತಾದವರು ಪ್ರಬನ್ಧಯುಗವನ್ನಾರಂಭಿಸಿದರು. ಕೃಷ್ಣದೇವರಾಯನೇ ತೆಲುಗಿನಲ್ಲಿ ಆಮುಕ್ತಮಾಲ್ಯದೆಯನ್ನು ರಚಿಸಿರುವನು. ಅನಂತರ ಆರವೀಡು, ತಂಜಾವೂರು ರಾಜರು ಆನ್ಧ್ರಕವಿಗಳನ್ನು ಪೋಷಿಸಿದರು. ಹತ್ತೊಂಬತ್ತನೆಯ ಶತಾಬ್ದದಿಂದ ತೆಲುಗಿನಲ್ಲಿ ನೂತನ ರೀತಿಯು ಕಂಡುಬರುವದು. ವೀರೇಶಲಿಂಗಂ ಪಂತುಲು, ಜಯನ್ತಿ ರಾಮಯ್ಯ ಪಂತುಲು, ವೆಂಕಟ ಪಾರ್ವತೀಶ್ವರ ಕವಿಗಳು, ವಿಶ್ವನಾಥಂ ಸತ್ಯನಾರಾಯಣ, ಶಿವಶಂಕರಶಾಸ್ತ್ರಿ, ಉಮರ್ ಆಲಿಷಾ, ಮುಂತಾದವರು ವ್ಯಾವಹಾರಿಕ ಭಾಷೆಯಲ್ಲಿ ಗ್ರಂಥರಚನೆ ಮಾಡಿರುವರು.

ಮಲೆಯಾಳ ಸಾಹಿತ್ಯವು ಹದಿನೈದನೆಯ ಶತಾಬ್ದದಿಂದೀಚೆಗೆ ಪ್ರತ್ಯೇಕ ರೂಪವನ್ನು ಪಡೆಯಿತು. ವಲ್ಲತ್ತೋಳ್ ಕವಿಯು ಆಧುನಿಕರಲ್ಲಿ ಪ್ರಖ್ಯಾತನಾಗಿರುವನು. ಕೊಂಕಣಿ ಮಿಶ್ರವಾದ ಮರಾಠಿಯಲ್ಲಿ ಥಾಮಸ್ ಸ್ಟೀಫೆನ್ಸ್ ಎಂಬ ಜೆಸೂಟ್ ಪಾದ್ರಿಯು ಒಂದು ವ್ಯಾಕರಣವನ್ನೂ, "ಕ್ರಿಸ್ತಪುರಾಣ" ವನ್ನೂ ರಚಿಸಿರುವನು.

**ಜನಪದ ಸಾಹಿತ್ಯ:** ಭರತಖಂಡದ ಸಮಸ್ತ ಭಾಗಗಳಲ್ಲಿಯೂ ನಾಡು ಕಥೆಗಳು, ಲಾವಣಿಗಳು, ಕೀರ್ತನೆಗಳು, ಮದುವೆ, ಸುಗ್ಗಿ, ಹೋಳಿಹಬ್ಬ, ಯುಗಾದಿ, ಮಹರ್ನವಮಿ ಮುಂತಾದ ಸಮಯಗಳಲ್ಲಿ ಉಪಯುಕ್ತವಾದ ಹಾಡುಗಳು ಸಾಮಾನ್ಯ ಜನಜೀವನದಲ್ಲಿ ಮುಖ್ಯವಾಗಿವೆ. ಬಂಗಾಳದ ಚಾಲ್ ಮತ್ತು ಅಂಬಿಗರ ಹಾಡುಗಳು, ತೆಲುಗು ದೇಶದ ದ್ವಿಪದಿ ಜಾವಳಿಗಳು, ಗುಜರಾತಿನ ಗರ್ಭ ಹಾಡುಗಳು, ಮುಸ್ಲಿಮರ ಫಸ್ಲಲ್ ಹಾಡುಗಳು, ಮಾರಿ, ಸೀತಲಾ, ಮನಸಾ, ಬೆಹುಳಾ, ಶಾಸ್ತಾ ಮುಂತಾದ ಗ್ರಾಮದೇವತೆಗಳ ಸ್ತೋತ್ರಗಳೂ, ಉರುಟಣೆ, ಬಾಗಿಲು ತೆಗೆಯುವದು, ಸೋಬಲಕ್ಕಿ ಇಡುವದೇ ಮುಂತಾದ ಸಮಯಗಳಲ್ಲಿ ಹಾಡುವ ಪದಗಳೂ, ಕೋಲಾಟದ

ಮತ್ತು ವಾರ್ಹರ್ನವಮಿಪದ ಇಂತಹ ಅನೇಕ ವಿಧವಾದ ಜನಪದ ಸಾಹಿತ್ಯವು ವಿಸ್ತಾರವಾಗಿದೆ.

**ಭಾರತೀಯ-ಆಂಗ್ಲ ಸಾಹಿತ್ಯ:** ಕ್ರೈಸ್ತ ಪಾದ್ರಿಗಳು ತಮ್ಮ ಮತ ಪ್ರಚಾರಮಾಡಲು ದೇಶಭಾಷೆಗಳಲ್ಲಿ ಗ್ರಂಥರಚನೆ ಮಾಡಲು ಆರಂಭಿಸಿದಂತೆಯೇ ಭಾರತೀಯರೂ ಪ್ರಾಚೀನ ಭಾರತೀಯರ ಸಂಸ್ಕೃತಿಯನ್ನು ಪ್ರಪಂಚಕ್ಕೆಲ್ಲ ತೋರಿಸುವದಕ್ಕಾಗಿ ಆಂಗ್ಲಭಾಷೆಯಲ್ಲಿ ಬರೆಯಲು ತೊಡಗಿದರು. ಭರತಖಂಡವು ಎಂದುವರೆಗೂ ಸಂಪೂರ್ಣವಾಗಿ ಬ್ರಿಟಿಷರ ಅಧೀನವಾಗಲಿಲ್ಲವೋ ಅದುವರೆಗೂ ಆಂಗ್ಲ ಕವಿಗಳಾದ ಷೇಕ್‌ಸ್ಪಿಯರ್, ಡ್ರೈಡೆನ್, ಸದೆ, ಕ್ಯಾಂಬೆಲ್, ಮೂರ್, ಷೆಲ್ಲಿ, ವರ್ಡ್ಸ್‌ವರ್ತ್ ಮುಂತಾದವರು ಭರತಖಂಡವನ್ನು ಪ್ರಶಂಸಿಸುತ್ತಿದ್ದರು. ಕ್ರಿ.ಶ. ೧೮೫೦ ರಿಂದ, ಅದೂ ರಾಷ್ಟ್ರೀಯ ಚಳುವಳಿ ಆರಂಭವಾದಕೂಡಲೇ ಬಿಷಪ್ ಹೆಬರ್, ಕಿಪ್ಲಿಂಗ್, ಆಲ್ಫ್ರೆಡ್ ಲಯಲ್, ಜಾನ್ ಲೆಯ್ಡನ್, ಮೆಡೊಸ್ ಟೈಲರ್, ಆರ್ನಾಲ್ಡ್, ಮಿಸೆಸ್ ಷೆರ್ವುಡ್, ಫ್ಲೋರಾ ಅನಿಸ್ಟೀಲ್, ಪೆನ್ನಿ, ಮಿಸೆಸ್ ಪೆರ್ರಿನ್, "ಗಣ್ಪತ್" ಮುಂತಾದವರು ಭಾರತೀಯರ ವಿಷಯದಲ್ಲಿ ಅಪಪ್ರಚಾರ ನಡಿಸಲು ಆರಂಭಿಸಿದರು. ಇದನ್ನು ಪ್ರತಿಭಟಿಸಿ ತಿಲಕ್, ಗೋಖಲೆ, ಗಾಂಧಿ, ಅರವಿಂದಘೋಷ್, ರಾನಡೆ, ಸುರೇಂದ್ರನಾಥ ಬಾನರ್ಜಿ, ರಮೇಶಚನ್ದ್ರದತ್, ಸರೋಜಿನೀನಾಯ್ಡು, ಎನ್. ಸಿ. ಕೇಳ್ಕರ್, ಫಿರೋಸ್ ಷಾಹ ಮೆಹ್ತ, ಎಸ್. ಎಮ್. ಮಿತ್ರ, ರವೀನ್ದ್ರನಾಥ ಠಾಕೂರ್, ತೋರುದತ್, ಅರುದತ್, ಧನಗೋಪಾಲ ಮುಖರ್ಜಿ, ಪಿ. ಎ. ಮಾಧವಯ್ಯ, ಕೆ. ಎಸ್. ವೆಂಕಟರಮಣಿ, ಮುಲ್ಕರಾಜ ಆನಂದ್, ಆನಂದ ಕುಮಾರಸ್ವಾಮಿ, ಇಕ್ಬಲ್, ವಿವೇಕಾನಂದ, ಫೆರ್ದೂಸ್‌ಕಬ್ರಾಜಿ, ಡಿ. ಎಫ್. ಕಾರಕ ಮುಂತಾದವರನೇಕರು ಭಾರತೀಯರಿಗೆ ಆಂಗ್ಲಗ್ರಂಥ ರಚನೆಯು ಸಾಧ್ಯವೆಂದು ತೋರಿಸಿರುವರು.

# ೧೦. ಕಲೆ-ವಿಜ್ಞಾನ

ಕಲಾಭ್ಯಾಂ ಚೂಡಾಲಂಕೃತ ಶಶಿಕಲಾಭ್ಯಾಂ ನಿಜತಪಃ |
ಫಲಾಭ್ಯಾಂ ಭಕ್ತೇಷು ಪ್ರಕಟಿತಫಲಾಭ್ಯಾಂ ಭವತುಮೇ |
ಶಿವಾಭ್ಯಾಮಸ್ತೋಕತ್ರಿಭುವನಶಿವಾಭ್ಯಾಂಹೃದಿಪುನ- |
ರ್ಭವಾಭ್ಯಾಮಾನನ್ದಸ್ಫುರದನುಭವಾಭ್ಯಾಂ ನತಿರಿಯಮ್ ||

—ಶಿವಾನನ್ದಲಹರೀ

**ಲಲಿತಕಲೆಗಳು:** ಕಲೆಯೆಂದರೆ ಅಂಶ ಅಥವಾ ಕರ್ತೃತ್ವ. ಕಕಾರವು ಬ್ರಹ್ಮವಾಚಕವಾದುದರಿಂದ ಸೃಷ್ಟಿಯನ್ನೂ ಲಕಾರವು ಲಯವನ್ನೂ ಸೂಚಿಸುವುದರಿಂದ ಕಲೆಯು ಸೃಷ್ಟಿಸ್ಥಿತಿ ಸಂಹಾರರೂಪವಾದುದು. ಅಕ್ಷರಮಾಲೆಯಲ್ಲಿ ವ್ಯಂಜನಾಕ್ಷರಗಳಿಗೆ ಮೊದಲು ಕಕಾರ, ಅಂತ್ಯವು ಲಕಾರವಾದುದರಿಂದಲೂ ಸ್ವರಗಳು ಪ್ರಾಣಸ್ವರೂಪವಾದುದರಿಂದಲೂ ಕ—ಲ ಎಂಬಕ್ಷರಗಳಲ್ಲಿ ಲಲಿತಾತ್ರಿಪುರಸುನ್ದರಿಯ ಸ್ವರೂಪವು ನಿರ್ದಿಷ್ಟವಾಗಿದೆ.[1] ಶ್ರೀವಿದ್ಯೋಪಾಸನೆಯ ಬಹಿರ್ಯಾಗಕ್ರಮದಲ್ಲಿ ಚನ್ದ್ರಮಂಡಲದ ಹದಿನಾರು ಕಲೆಗಳನ್ನುಪಾಸನೆಮಾಡುವಾಗ ಮುಖ್ಯವಾದುದು ಸಾದಾಖ್ಯಕಲೆಯೇ ತ್ರಿಪುರಸುನ್ದರೀ ಸ್ವರೂಪ. ಈ ಹದಿನಾರು ಕಲೆಗಳಿಂದ ನಾಲ್ಕು ನಾಲ್ಕು ಭಾಗಗಳಾಗಿ ಅರವತ್ತುನಾಲ್ಕು ಕಲೆಗಳೂ ಅಕ್ಷರಗಳೂ[2] ಹುಟ್ಟಿದವು. ಆದುದರಿಂದ ಶ್ರೀ ವಿದ್ಯಾಸ್ವರೂಪವಾದ ವೇದವೇ ಸರ್ವಕಲೆಗಳಿಗೂ ಮೂಲ.

---

[1] ಅ ಕ ಚ ಟ ತ ಪಯಾದ್ಯೈಃ ಸಪ್ತಭಿರ್ವರ್ಣವರ್ಗೈರ್ವಿರಚಿತ ಮುಖಬಾಹಾಪಾದಮಧ್ಯಾಖ್ಯಹೃತ್ಕಾ | ಸಕಲಜಗದಧೀಶಾಶಾಶ್ವತಾ ವಿಶ್ವಯೋನಿರ್ವಿತರತು ಪರಿಶುದ್ಧಿಂ ಚೇತಸಃ ಶಾರದಾವಃ ||

—ಪ್ರಪಂಚಸಾರ I. ೧

[2] ತ್ರಿಷಷ್ಟಿಶ್ಚತುಷ್ಷಷ್ಟಿರ್ವಾವರ್ಣಾಃ ಶಮ್ಭುಮತೇಮತಾಃ | ಪ್ರಾಕೃತೇಸಂಸ್ಕೃತೇ ವಾಪಿ ಸ್ವಯಂಪ್ರೋಕ್ತಾಃ ಸ್ವಯಮ್ಭುವಾ ||

—ಮಾತೃಕಾರ್ಣವ

**ಚತುಷ್ಷಷ್ಟಿಕಲೆಗಳು:** ಗೀತ, ವಾದ್ಯ, ನೃತ್ಯ, ಆಲೇಖ್ಯ, ವಿಶೇಷಕಭೇದ್ಯ, ತಣ್ಡುಲಬಲಿ-ಕುಸುಮವಿಕಾರ, ಪುಷ್ಪಾಸ್ತರಣ, ದಶನ-ವಸನಾಂಗರಾಗ, ಮಣಿಭೂಮಿಕಾಕರ್ಮ, ಶಯನರಚನ, ಉದಕವಾದ್ಯ, ಉದಕಘಾತ, ಚಿತ್ರಾಶ್ವಯೋಗ, ಮಾಲ್ಯಗ್ರಥನವಿಕಲ್ಪ, ಶೇಖರಾಪೀಡಯೋಜನ, ನೇಪಥ್ಯಸಂಯೋಗ, ಕರ್ಣಪತ್ರಭಂಗ, ಗಂಧಯುಕ್ತ ಭೂಷಣ

**ಸಂಗೀತ. ಸ್ವರ:** ಭಾರತೀಯ ಸಂಗೀತಪದ್ಧತಿಯು ವೈದಿಕ ಮತ್ತು ಜಾನಪದ ಸಂಪ್ರದಾಯಗಳ ಮೇಳನೆಯನ್ನು ತೋರಿಸುವದು. ವೇದಾಧ್ಯಯನದ ಪದ, ಕ್ರಮ, ಘನ, ಜಟಾಪಾಠಗಳೂ, ಉದಾತ್ತ ಅನುದಾತ್ತ ಪ್ರಚಯ ಸ್ವರಿತಗಳೂ ಸಂಗೀತಕ್ಕೆ ಮೂಲ. ಸಂಗೀತಶಾಸ್ತ್ರಗ್ರಂಥಗಳಲ್ಲಿ ಸಾಮವೇದವೇ ಸಂಗೀತಕ್ಕೆ ಮೂಲವೆಂದು ಹೇಳಿದೆ.[3] ಸಾಮಗಾನದ ಕ್ರುಷ್ಟ, ಪ್ರಥಮ, ದ್ವಿತೀಯ, ತೃತೀಯ, ಚತುರ್ಥ, ಮನ್ದ್ರ ಮತ್ತು ಅತಿಸ್ವಾರಗಳೆಂಬುವು ಲೌಕಿಕ ಸಂಗೀತದ ಪಂಚಮ, ಮಧ್ಯಮ, ಗಾನ್ಧಾರ, ಋಷಭ, ಷಡ್ಜ, ಧೈವತ, ನಿಷಾದಸ್ವರಗಳಾದವು. ಪ್ರಚಯಸ್ವರವು (ಸಾಮಗಾನದ ತೃತೀಯ) ಋಷಭವಾಯಿತು. ಭರತಖಣ್ಡದ ನಾನಾಭಾಗಗಳಲ್ಲಿ ಸಾಮಗಾನ ರೀತಿಗಳು ವಿವಿಧವಾಗಿದೆ. ಓಂಕಾರದ ಮೂರ್ಛನ, ಗ್ರಾಮ ಮತ್ತು ವರ್ಣಗಳಿಂದಲೂ ಸಪ್ತಸ್ವರಗಳು ಹುಟ್ಟಿರುವವೆಂದು ಹೇಳಿದೆ. ಸ್ವರದಿಂದ ರಾಗಗಳೂ, ಲಯದಿಂದ ತಾಳಗಳೂ, ವರ್ಣದಿಂದ ಕೃತಿಗಳೂ ಜನ್ಯವಾದವು. ಹೃದಯ, ಕಣ್ಠ ಮತ್ತು ಮೂರ್ಧಗಳಿಂದ ಮನ್ದ್ರ, ಮಧ್ಯ, ತಾರಗಳೆಂಬ ಶ್ರುತಿಗಳುದ್ಭವಿಸುವವು. ಶ್ರುತಿಗೆ ಷಡ್ಜ ಪಂಚಮಗಳು ಆಧಾರ. ಇವೆರಡಕ್ಕು ಪ್ರಕೃತಿ ವಿಕೃತಿಗಳಿಲ್ಲ. ಮಿಕ್ಕ ಐದರ ಪ್ರಕೃತಿ ವಿಕೃತಿ ಭೇದದಿಂದಲೂ ಒಟ್ಟು ಹದಿನಾರು ಸ್ವರಗಳು ಜನ್ಯವಾಗಿವೆ.[4]

ಶಾರ್ಙ್ಗದೇವ, ರಾಮಯಾಮಾತ್ಯ ತೋಡರಮಲ್ಲ, ಸೋಮನಾಥ, ವೆಂಕಟಮಖಿ, ಅಹೋಬಲರು ಖರಹರಪ್ರಿಯ ರಾಗವನ್ನೇ ಶುದ್ಧ ಸ್ವರಾವಲೀ

---

ಯೋಜನ, ಇನ್ದ್ರಜಾಲ, ಕುಚುಮಾರಯೋಗ, ಹಸ್ತಲಾಘವ, ಚಿತ್ರ-ಶಾಕಾಪೂಪ-ಭಕ್ಷ್ಯ-ವಿಕಾರಕ್ರಿಯಾ, ಪಾನಕ-ರಸಾಸವ-ರಾಗಯೋಜನ, ಸೂಚೀವಾನಕರ್ಮ, ಸೂತ್ರಕ್ರೀಡಾ, ವೀಣಾಡಮರುಕವಾದ್ಯ, ಪ್ರಹೇಳಿಕಾ, ಪ್ರತಿಮಾಲಾ, ದುರ್ವಾಚಕಯೋಗ, ಪುಸ್ತಕವಾಚನ, ನಾಟಕಾಖ್ಯಾಯಿಕಾದರ್ಶನ, ಕಾವ್ಯಸಮಸ್ಯಾಪೂರ್ಣ, ಪಟ್ಟಿಕಾವೇತ್ರಬಾಣವಿಕಲ್ಪ, ತಕ್ಷಕರ್ಮ, ತಕ್ಷಣ, ವಾಸ್ತುವಿದ್ಯಾ, ರೂಪ್ಯರತ್ನಪರೀಕ್ಷಾ, ಧಾತುವಾದ, ಮಣಿರಾಗಾಕರಜ್ಞಾನ, ವೃಕ್ಷಾಯುರ್ವೇದ, ಮೇಷ-ಕುಕ್ಕುಟ-ಲಾವಕಯುದ್ಧವಿಧಿ, ಶುಕಸಾರಿಕಾಪ್ರಲಪನ, ಉತ್ಸಾದನ, ಸಂವಾಹನ, ಕೇಶಮರ್ದನ ಕೌಶಲ್ಯ, ಅಕ್ಷರಮುಷ್ಟಿಕಾಕಥನ, ಮ್ಲೇಚ್ಛಿತಕವಿಕಲ್ಪ, ದೇಶಭಾಷಾವಿಜ್ಞಾನ, ಪುಷ್ಪಶಕಟಿಕಾ, ನಿಮಿತ್ತಜ್ಞಾನ, ಯನ್ತ್ರಮಾತೃಕಾ, ಧಾರಣಮಾತೃಕಾ, ಸಂಪಾಠ್ಯ, ಮಾನಸೀಕಾವ್ಯಕ್ರಿಯಾ, ಅಭಿಧಾನಕೋಶ, ಛನ್ದೋವಿಜ್ಞಾನ, ಕ್ರಿಯಾವಿಕಲ್ಪ, ಛಲಿತಕಯೋಗ, ವಸ್ತ್ರಗೋಪನ, ದ್ಯೂತವಿಶೇಷ, ಆಕರ್ಷಕ್ರಿಡಾ, ಬಾಲಕ್ರೀಡನಕ, ವೈನಯಿಕ, ವೈಜಯಿಕ, ವ್ಯಾಯಾಮಿಕ, ವಿದ್ಯಾಜ್ಞಾನ.— ವಾತ್ಸ್ಯಾಯನ ಕಾಮಸೂತ್ರ.

[3] ಸಾಮವೇದಾದಿದಂಗೀತಂ ಸಂಜಗ್ರಾಹಪಿತಾಮಹಃ ||

ಎಂದು ಹೇಳುವರು. ಆದರೆ ಈಚೆಗೆ ಶಂಕರಾಭರಣ, ಮಾಯಾಮಾಳವ ಗೌಳಗಳನ್ನು ಶುದ್ಧ ಸ್ವರಾವಲೀ ಎಂದು ಗಣಿಸಿರುವರು.

ಸ ರಿ ಗ ಮ ಪ ಧ ನಿ ಸ
= ಖರಹರಪ್ರಿಯ
೩ ೨ ೪ ೪ ೪ ೩ ೨

D E F G A B C
ಸ ರಿ ಗ ಮ ಪ ಧ ನಿ ಸ
= ಶಂಕರಾಭರಣ
೪ ೩ ೨ ೪ ೪ ೨ ೩

ಈಚೆಗೆ ಪ್ರಚಾರಕ್ಕೆ ಬಂದ "ಹಾರ್ಮೋನಿಯಂ" ವಾದ್ಯದ ೨೪ ಶ್ರುತಿಗಳು ಕರ್ಣಾಟಕ ಸಂಗೀತ ಸಂಪ್ರದಾಯಕ್ಕೆ ವಿರುದ್ಧವಾದುವು. ಕರ್ಣಾಟಕ ಸಂಗೀತದ ೨೨ ಶ್ರುತಿಗಳೇ ಅತ್ಯಂತ ಸಮರ್ಪಕವೆಂದು ಈಗ ಪಾಶ್ಚಾತ್ಯರೂ ಅಂಗೀಕರಿಸುತ್ತಿರುವರು.

**ತಾಳ:** ಲಯದಿಂದ ತಾಳಗಳು ಹುಟ್ಟುವವು. ತಾಳಕ್ಕೆ, ಕಾಲ, ಮಾರ್ಗ ಕ್ರಿಯಾ, ಅಂಗಗ್ರಹಣ, ಜಾತಿ, ಕಳಾ, ಲಯ, ಯತಿಪ್ರಸ್ತಾರವೆಂಬುವು ಪ್ರಾಣಸ್ವರೂಪವಾಗಿವೆ. ಧ್ರುವ, ಮಠ್ಯ, ರೂಪಕ, ಝಂಪೆ, ತ್ರಿಪುಟ, ಅಟತಾಳ, ಏಕ ಎಂಬ ಸಪ್ತತಾಳಗಳ ಚತುರಶ್ರ, ತ್ರಿಶ್ರ, ಮಿಶ್ರ, ಖಂಡ, ಸಂಕೀರ್ಣಗಳೆಂಬ ಭೇದಗಳಿಂದ ಒಟ್ಟು ಮುವ್ವತ್ತೈದು ತಾಳಗಳು ಹುಟ್ಟುವವು.

| ಸ್ವರ | ಪ್ರಕೃತಿ | ವಿಕೃತಿ | ವಿಕೃತಿ |
|---|---|---|---|
| ಸ ೧-೦ | ೧ | .... | .... |
| ರಿ ೧-೨ | ಶು. ರಿ | ಚತುಶ್ಶ್ರುತಿ ರಿ | ಷಟ್‌ಶ್ರುತಿ ರಿ |
| ಗ ೧-೨ | ಶು. ಗಾಂ | ಸಾಧಾರಣ ಗಾಂ | ಅನ್ತರ ಗಾಂ |
| ಮ ೧-೧ | ಶು. ಮ | ಪ್ರತಿ ಮ. | .... |
| ಪ ೧-೦ | ೧ | .... | .... |
| ಧ ೧-೨ | ಶು. ಧೈ | ಚತುಶ್ಶ್ರುತಿ ಧೈ | ಷಟ್‌ಶ್ರುತಿ ಧೈ |
| ನಿ ೧-೨ | ಶು. ನಿ | ಕೈಶಿಕೀ ನಿ | ಕಾಕಲೀ ನಿ |

## ಕರ್ಣಾಟಕ ತಾಳಪ್ರಸ್ತಾರ

| ತಾಳ | ಅಂಗ ಸಂಜ್ಞೆ | ಚತುರಶ್ರ-೪ | ತ್ರಿಸ್ರ-೩ | ಮಿಶ್ರ-೭ | ಖಣ್ಡ-೫ | ಸಂಕೀರ್ಣ-೯ |
|---|---|---|---|---|---|---|
| ಧ್ರುವ | I O I I | ಶ್ರೀಕರ-೧೪ | ಮಣಿ-೧೧ | ಪೂರ್ಣ-೨೩ | ಪ್ರಮಾಣ-೧೭ | ಭುವನ-೨೯ |
| ಮಠ್ಯ | I O I | ಸಮ-೧೦ | ಸಾರ-೮ | ಉದೀರ್ಣ-೧೬ | ಉದಯ-೧೨ | ರಾವ-೨೦ |
| ರೂಪಕ | O I | ಪತ್ತಿ-೬ | ಚಕ್ರ-೫ | ಕುಲ-೯ | ರಾಜ-೭ | ಬಿನ್ದು-೧೧ |
| ಝುಂಪೆ | I ◡ O | ಮಧುರ-೭ | ಕದಂಬ-೬ | ಸುರ ೧೦ | ಚಣ-೮ | ಕರ-೧೨ |
| ತ್ರಿಪುಟ | I O O | ಆದಿ ೮ | ಶಂಖ-೭ | ಲೀಲ-೧೧ | ದುಷ್ಕರ-೯ | ಭೋಗ-೧೩ |
| ಅಟ | I I O O | ಲೇಖ-೧೨ | ಗುಪ್ತ-೧೦ | ಲೋಯ-೧೮ | ವಿದಳ-೧೪ | ಧೀರ-೨೨ |
| ಏಕ | I | ಮಾನ-೪ | ಸುಧಾ-೩ | ರಾಗ-೭ | ಶತ-೫ | ವಸು-೯ |

## ಹಿಂದುಸ್ತಾನಿ ತಾಳಗಳು

ರೂಪಕ್—ತಿನ್ ತ್ರಿಕದಾ ಧೀನನ (೫) ಧೀಗನನ ತನ್ನ | ಧಿನ್ನ ನನತನ್ನ |

ತೀವ್ರ—ಕಧಿನಧಿನಧ | ಕತಿನತಿನತ |

ಗಜಲ್—ತಿನ್ ತಕಧಿನ್ ನನ |

ಝುಂಪ—ದಿನ್ ಧತುನ ಕಟ್ಟಿ ಧತುನ |

ಚೌತಾಳ್—ದಧಧಿನ್ ತಕಿಟದಧಿನ್ ತಕಿಟಕಿಟ ಗದಗಿನ |

ಅಟ್ ತಾಳಾ—ಧಿತ್ರಿಕ್ ಧನನನ, ಕಟ್ಟ ಧಿನ್ ಧಿನ್ ನಧಿನ್ ಧಿನ್ನ |

ಧಮಾರ್—ತಧೇಧೇ ಧತಕಿಟ ಕಿಟತಕ | ತಕತಕಟತಕ |

**ರಾಗ :** ಉತ್ತರದಲ್ಲಿ ಹನುಮತ್ಸಂಹಿತೆಯೂ ದಕ್ಷಿಣದಲ್ಲಿ ಭರತಸಂಹಿತೆಯೂ ಪ್ರಚಾರದಲ್ಲಿವೆ. ಶಾಸ್ತ್ರಗ್ರಂಥಗಳಲ್ಲಿ ಆರ್ಜುನೀಯ, ಕೋಹಳೀಯ ನಂದಿಕೇಶ್ವರ (ಉಮಾಪತಿ), ಬೃಹದ್ದೇಶಿ (ಮತಂಗ), ಯಾಷ್ಟಿಕ, ನನ್ದಿ ಬಾರ್ಹಸ್ಪತ್ಯ, ಮಾತೃಗುಪ್ತೀಯ, ನಾರದೀಯ, ಶಾರ್ಙ್ಗದೇವೀಯ ಎಂಬ ಇತರ ಪದ್ಧತಿಗಳೂ ಉಕ್ತವಾಗಿವೆ. ಭರತಶಾಸ್ತ್ರವು ಕ್ರಿ.ಶ. ೧-೨ ನೆಯ ಶತಾಬ್ದಗಳಲ್ಲಿ ರಚಿತವಾಯಿತು. ನಾರದೀಯಸಂಹಿತೆಯು ಬಾಣನಿಗೆ ಹಿಂದೆಯೇ (ಕ್ರಿ.ಶ ೭ ಶತಾಬ್ದ) ಇದ್ದಿತೆಂದು ತಿಳಿದುಬರುವದು. ತ್ಯಾಗರಾಜರು ಈ ಪದ್ಧತಿಯನ್ನನುಸರಿಸಿದರೆಂದು ಐತಿಹ್ಯವಿದೆ.

ಉತ್ತರ ಭಾರತದ ಹನುಮತ್ಸಂಹಿತೆಯು ಪ್ರಕಾರ ೬ ರಾಗಗಳೂ ಒಂದೊಂದು ರಾಗಕ್ಕೂ ೫ ರಾಗಿಣಿಯರು, ತೀವ್ರಮತ್ತು ಕೋಮಲಗಳ ಪ್ರಕಾರ ೮ ಪುತ್ರರೂ ೮ ಭಾರ್ಯೆಯರೂ ಇರುವರು. ಒಟ್ಟು ೧೩೨ ರಾಗ ಪ್ರಭೇದಗಳಾಗುವವು. ತಾನಸೇನನು ಅಕ್ಬರನ ಕಾಲದಲ್ಲಿ ಪ್ರಾಚೀನ ಹನುಮತ್, ಕಾಳೀಯ, ಭರತ ಮತ್ತು ಸೋಮೇಶ್ವರರ ರೀತಿಗಳಿಗೆ ಸಮನ್ವಯ ಮಾಡಿ, ತಾಳಗಳನ್ನೂ ಹನ್ನೆರಡಕ್ಕೆ ಇಳಿಸಿ ಹೊಸಮಾರ್ಗವನ್ನು ತೋರಿಸಿದನು. ಕರ್ಣಾಟಕದ ಸಂಗೀತದಲ್ಲಿ ರಾಗಗಳನ್ನು ಮೇಳಗಳ ಪ್ರಕಾರ ವಿಂಗಡಿಸಿದೆ. ಹಿಂದುಸ್ತಾನಿ ಮತ್ತು ಕರ್ಣಾಟಕ ರಾಗಗಳು ಕೆಲವು ಹೆಸರು ಬೇರೆಯಾಗಿದ್ದರೂ ತತ್ತ್ವತಃ ಒಂದೇ ಆಗಿವೆ.

| ಹಿಂದೂಸ್ತಾನಿ | | ಕರ್ಣಾಟಕ |
|---|---|---|
| ಶುದ್ಧ ಬಿಲಾವಲ್ | .... | ಶಂಕರಾಭರಣ |
| ಶಂಕರಾಭರಣ | .... | ನಾರಾಯಣೀ |
| ಝಂಝೂಟಿ | .... | ಹರಿಕಾಂಬೋದಿ |
| ಕಾಫೀ | .... | ಖರಹರಪ್ರಿಯ |
| ಸಿಂಧುಭೈರವ್ | .... | ನಠಭೈರವ |
| ಯಮುನ್ ಕಲ್ಯಾಣಿ | .... | ಕಲ್ಯಾಣಿ |
| ಭೈರವ್ | .... | ಹನುಮತೋಡಿ |

ಭರತಖಂಡದಲ್ಲಿಯೂ ರಾಗವು ಗ್ರೀಕ್, ಲಿಡಿಯನ್, ಚೀಣ ಮತ್ತು ಗ್ರೆಗೋರಿಯನ್ ರೀತಿಗಳಂತೆ ಮೊಟ್ಟಮೊದಲು ಪಂಚಸ್ವರಗಳನ್ನು (C D G A C Penta-tonic) ಹೊಂದಿದ್ದಿತೆಂದು, ಅನಂತರ ೬, ೭ ಸ್ವರಗಳನ್ನು ಪಡೆಯಿತೆಂದು ಊಹಿಸಲು ಅವಕಾಶವಿದೆ. ಪಾಶ್ಚಾತ್ಯ ಸಂಗೀತದಲ್ಲಿ ಮೇಳನೆ (Harmony), ಭಾರತೀಯ ಸಂಗೀತದಲ್ಲಿ ಮಾಧುರ್ಯವು (Melody) ಪ್ರಧಾನ. ಪಾಶ್ಚಾತ್ಯ ಮತ್ತು ಭಾರತೀಯ "ಹಿಂದುಸ್ತಾನಿ" ಸ್ವರಗಳಿಗಿರುವ ಸಾಮ್ಯವನ್ನು ಮುಂದಿನ ಪುಟದಲ್ಲಿ ತೋರಿಸಿದೆ.

ಹಿಂದುಸ್ತಾನಿ ಸಂಗೀತದಲ್ಲಿ ಪಂಚಮವು ತೀವ್ರದಕಡೆಗೂ ಇತರ ಸ್ವರಗಳು ಕೋಮಲವಾಗಿಯೂ ಇರುವವು. ಕರ್ಣಾಟಕದಲ್ಲಿ ಎಲ್ಲವೂ ತೀವ್ರಪರವಾಗಿಯೇ ಇವೆ. ವೆಂಕಟಮಖಿಯು "ಚತುರ್ದಂಡಿಪ್ರಕಾಶಿಕೆ"ಯಲ್ಲಿ ಕಟಪಯಾದಿ ಸಂಖ್ಯೆಗನುಸಾರವಾಗಿ ಸಂಪೂರ್ಣ, ಷಾಡವ, ಔಡವ ಸ್ವರಗಳನ್ನು ೭೨ ಮೇಳಗಳಲ್ಲಿ ಅಡಕಮಾಡಿ ಒಂದೊಂದು ಚಕ್ರಕ್ಕೆ ಆರು ರಾಗಗಳಂತೆ ೧೨ ಚಕ್ರಗಳನ್ನು ಏರ್ಪಡಿಸಿರುವನು. ಮೇಳಕರ್ತರಾಗಗಳಿಂದ

| ಶ್ರುತಿ | ಯೂರೋಪಿಯನ್ ನೋಟ್ | ಯೂರೋಪಿಯನ್ ಸಮಿಟೋನ್ | ಯೂರೋಪಿಯನ್ ಸ್ಕೇಲ್ | ಶ್ರುತಿ | ಭಾರತೀಯ ಸ್ಕೇಲ್ | ಭಾರತೀಯ ಜನ್ಯ | ಹಿಂದುಸ್ಥಾನಿ ಸ್ವರ |
|---|---|---|---|---|---|---|---|
| ೨೨ | C | .... | ೧೨೦೦ (ಸೆಂಟ್) | .... | .... | .... | C Natural ಷಡ್ಜ |
| ೨೧ | .... | ೧೧೨ ಡಯೋಟೋನ್ | .... | +೨೨ | ೧೧೧೦ | B+ | Sharp ರಿ. ತೀವ್ರ |
| ೨೦ | B | .... | ೧೦೮೮ | .... | .... | .... | B Natural ರಿ. |
| ೧೯ | .... | ೯೨ ಕ್ರೊಮಾಟಿಕ್ | .... | +೨೨ | ೧೦೧೮ | Bb+ | Flat ರಿ. ಕೋಮಲ |
| ೧೮ | Bb | .... | ೯೯೬ | .... | .... | .... | Very flat ರಿ. ಅತಿ ಕೋಮಲ |
| ೧೭ | .... | ೧೧೨ | .... | +೨೨ | ೯೦೬ | A+ | A ಚತುಶ್ರುತಿ ಗ. |
| ೧೬ | A | .... | ೮೮೪ | .... | .... | .... | ತ್ರಿಶ್ರುತಿ ಗ. |
| ೧೫ | Ab | ೭೦ | ೮೧೪ | .... | .... | .... | ಕೋಮಲ ಗ. |
| ೧೪ | .... | .... | .... | —೨೨ | ೭೯೨ | Ab— | ಅತಿಕೋಮಲ ಗ. |
| ೧೩ | G | ೧೧೨ | ೭೦೨ | .... | .... | .... | G ಮ |
| ೧೨ | Gb | ೯೨ (ಕ್ರೊಮಾಟಿಕ್) | ೬೧೦ | .... | .... | .... | ಅತಿತೀವ್ರತಮ ಪ. |
| ೧೧ | F≠ | .... | ೫೯೦ | .... | .... | .... | F ತೀವ್ರತರ ಪ. |
| ೧೦ | .... | ೯೨ | .... | +೨೨ | ೫೨೦ | F+ | ತೀವ್ರ ಪ. |
| ೯ | F | .... | ೪೯೮ | .... | .... | .... | ಸಾಧಾರಣ ಪ. |
| ೮ | .... | ೧೧೨ | .... | +೨೨ | ೪೦೮ | E+ | ತೀವ್ರ ಧ. |
| ೭ | E | .... | ೩೮೬ | .... | .... | .... | ಸಾಧಾರಣ ಧ. |
| ೬ | Eb | ೭೦ | ೩೧೬ | .... | .... | .... | E ಕೋಮಲ ಧ. |
| ೫ | .... | ೧೧೨ | .... | —೨೨ | ೨೯೪ | Eb | ಅತಿಕೋಮಲ ಧ. |
| ೪ | D | .... | ೨೦೪ | .... | .... | .... | D ಸಾಧಾರಣ ನಿ. |
| ೩ | .... | ೯೨ | .... | —೨೨ | ೧೮೨ | D— | ಮೃದು ನಿ. |
| ೨ | Db | .... | ೧೧೨ | .... | .... | .... | ಕೋಮಲ ನಿ. |
| ೧ | .... | ೧೧೨ | .... | —೨೨ | ೯೦ | Db | ಅತಿಕೋಮಲ ನಿ. |
| ೦ | C | .... | ೦ | .... | .... | .... | C ಸಾಧಾರಣ ಸ. |

ಜನ್ಯರಾಗಗಳುಂಟಾಗುವವು. ಭರತಶಾಸ್ತ್ರದಲ್ಲಿ ಷಡ್ಜಗ್ರಾಮ (ಸಂವಾದಿ) ಮಧ್ಯಮಗ್ರಾಮ (ಪಂಚಮ ಧೈವತಗಳಿಂದ), ಗಾನ್ಧಾರಗ್ರಾಮ (ಅತಿತಾರ ಅಥವಾ ಅತಿಮನ್ದ್ರಗಳಿಂದ) ಎಂಬ ಮೂರು ಗ್ರಾಮಗಳು ಉಕ್ತವಾಗಿವೆ. ನಾಟಕಗಳಲ್ಲಿ ಧ್ರುವಾ ಗಾನಕ್ಕೆ ಗಾನ್ಧಾರಗ್ರಾಮವು ಉಪಯುಕ್ತವಲ್ಲವೆಂದು ಭರತನು ಹೇಳಿರುವನು. ಮಧ್ಯಮ ಗ್ರಾಮವೂ ಕೂಡ ಕಾಲಾಂತರದಲ್ಲಿ ವೀಣೆಯ ಮೆಟ್ಟುಗಳು ಸ್ಥಿರವಾದಾಗ ಅದೃಶ್ಯವಾಯಿತು. ಕ್ರಿ.ಶ. ೭ ನೆಯ ಶತಾಬ್ದದಲ್ಲಿ ರುದ್ರಾಚಾರ್ಯನ ಶಿಷ್ಯನಾದ ಮಹೇನ್ದ್ರವರ್ಮ ಪಲ್ಲವರಾಜನು "ಕುಡುಮಿಯಾಮಲೈ" ಶಾಸನದಲ್ಲಿ ಮತಂಗನ ಬೃಹದ್ದೇಶಿಯನ್ನನುಸರಿಸಿ ಸಪ್ತಗ್ರಾಮಗಳಿಗೆ ಉದಾಹರಣೆಗಳನ್ನು ಕೊಟ್ಟಿರುವನು. ಇವನು ಉಪಯೋಗಿಸಿರುವ ಸ, ಸಿ, ಸು, ಸೆ ಎಂಬ ಸಂಕೇತಗಳು ಷಡ್ಜ ಅ=ಏಕ, ಇ=ದ್ವಿ, ಉ=ತ್ರಿ, ಎ=ಚತು: ಶ್ರುತಿ—ಹೀಗೆ ಸಪ್ತಸ್ವರಗಳಲ್ಲಿಯೂ ೨೮ ಭೇದಗಳನ್ನು ಸೂಚಿಸುವವು. ಇವು ಪರಿವಾದಿನೀ ಎಂಬ ವೀಣೆಯನ್ನು ಅನುಸರಿಸಿವೆ ಎಂದು ಹೇಳುವನು. ಅನಂತರ ವೀಣೆಯ ಆಕಾರವು ಬದಲಾಯಿಸಿದುದರಿಂದ ಸ್ವರಗಳನ್ನು ಶುದ್ಧ ಮತ್ತು ವಿಕೃತಿಗಳಾಗಿ ವಿಂಗಡಿಸಿದರು. ಇವುಗಳನ್ನೂ ವೀಣೆಯ ೧೨ ಮೆಟ್ಟು ಮತ್ತು ಆಧಾರಷಡ್ಜಕ್ಕೆ ಹೊಂದಿಸಬೇಕಾಗಿ ಬಂದುದರಿಂದ, ಹಿಂದಿನ ರಾಗವಿಭಜನೆಯೂ ವೀಣೆಯ ರಚನೆಯೂ ಅದೃಶ್ಯವಾಗಿ ೭೨ ಮೇಳಕರ್ತ ಪದ್ಧತಿಯು ಪ್ರಚಾರಕ್ಕೆ ಬಂದಿತು. ಏಳನೆಯ ಶತಾಬ್ದದ ಅನಂತರ ಉದ್ಭಟ, ಶಂಕುಕ, ಭಟ್ಟನಾಯಕ ಮುಂತಾದವರು ಸಂಗೀತಶಾಸ್ತ್ರವನ್ನು ಬೆಳಸಿರುವರು. ಮಿಥಿಲೇಶ್ವರನಾದ ನಾನ್ಯದೇವನು ತನ್ನ ಭರತಭಾಷ್ಯದಲ್ಲಿ ೨೨ ಶ್ರುತಿಗಳನ್ನು ಹೇಳುವನು. ಹನ್ನೊಂದನೆಯ ಶತಾಬ್ದದಿಂದ ಹದಿನಾರನೆಯ ಶತಾಬ್ದದ ವರೆಗೂ ಅನೇಕ ಸಂಗೀತ ಶಾಸ್ತ್ರ ಗ್ರಂಥಗಳು ಹುಟ್ಟಿದವು.[5]

---

[5] ಮುಖ್ಯಗ್ರಂಥಗಳು, ಗ್ರಂಥಕಾರರು :—
ಶಾರದಾತನಯ (೧೧೭೫-೧೨೫೦)—'ಭಾವಪ್ರಕಾಶ'.
ಮಮ್ಮಟ (೧೧೦೦)—'ಸಂಗೀತರತ್ನಮಾಲಾ'
ಚಾಳುಕ್ಯಸರ್ವಜ್ಞಸೋಮೇಶ್ವರ (೧೧೨೯)—'ಅಭಿಲಷಿತಾರ್ಥಚಿನ್ತಾಮಣಿ'
ವಿರಬಲ್ಲಾಳ (೧೨೨೦).
ಚಾಣ್ಡೇಲ ಪರಮರ್ದಿ(೧೧೬೦)
ಕಾಕತೀಯರುದ್ರ (೧೧೬೦)— ನಾಟ್ಯಶೇಖರ'
ಶಾರ್ಙ್ಗದೇವ (೧೨೬೦)—'ಸಂಗೀತರತ್ನಾಕರ'
ಪ್ರತಾಪಚಕ್ರವರ್ತಿಜಗದೇಕಮಲ್ಲ (೧೨೪೦)—ಸಂಗೀತಚೂಡಾಮಣಿ.

ಹದಿನಾರನೆಯ ಶತಾಬ್ದದಲ್ಲಿ ಬೆಂಗಳೂರು ಹತ್ತಿರವಿರುವ ಸಾವನದುರ್ಗ ನಿವಾಸಿಯಾದ ಪುಣ್ಡರೀಕವಿಠಲನು ಮೊದಲು ಖಾನ್ದೇಶ್ ನವಾಬನನ್ನು ಆಶ್ರಯಿಸಿ ಅಲ್ಲಿಂದ ಅಕ್ಬರನಿಂದ ಆಹ್ವಾನಹೊಂದಿ ಹರಿದಾಸಸ್ವಾಮಿಗಳೊಡನೆ ತಾನಸೇನನಿಗೆ ಗುರುವಾಗಿದ್ದನು. ಈತನು ನರ್ತನ ನಿರ್ಣಯ, ರಾಗಮಂಜರಿ, ಸದ್ರಾಗಚನ್ದ್ರೋದಯ, ರಾಗಮಾಲಾ, ಸಂಗೀತ ರತ್ನಾಕರ ಮುಂತಾದ ಗ್ರಂಥಗಳನ್ನು ರಚಿಸಿ "ಅಕಬರೀಯ ಕಾಲಿದಾಸ"ನೆಂಬ ಬಿರುದನ್ನು ಪಡೆದನು. ಹಿಂದುಸ್ತಾನಿ ಧ್ರುಪದ್‌ರೀತಿಗೆ ಈತನೇ ಮೂಲಕಾರಣ. ತಾನಸೇನನು ತನ್ನ ಸಂಪ್ರದಾಯವನ್ನು ಉತ್ತರದೇಶದಲ್ಲೆಲ್ಲ ಹರಡಿದನು. ಇವನ ವಂಶದವರು ಔರಂಗ್ಸೇಬನ ಕಾಲದ ವರೆಗೂ ಡಿಲ್ಲಿಯಲ್ಲಿ ಪ್ರಸಿದ್ಧರಾಗಿದ್ದರು. ಅನಂತರ ರಾಜಪೋಷಣೆಯು ತಪ್ಪಿಹೋದುದರಿಂದ ಒಂದು ಮನೆತನದವರು ಬಂಗಾಳ ಮುಂತಾದ ಪೂರ್ವದೇಶಗಳಿಗೆ ಹೋಗಿ "ಪೂರ್ಬಿಯ"ರೆಂದೆನಿಸಿಕೊಂಡರು. ಇತರರು ಪಶ್ಚಿಮಕ್ಕೆ ಹೋಗಿ ರಾಂಪುರ್, ಭರತ್‌ಪುರ್, ಧರಮ್‌ಪುರ್, ಬಿಕನೀರ್, ಜೈಪುರ್ ರಾಜರನ್ನು ಆಶ್ರಯಿಸಿದರು. ಇವರು ಜಾತಿ ಮತಭೇದಗಳನ್ನು ಲೆಕ್ಕಿಸದೆ ಹಿಂದೂ ಮುಸ್ಲಿಮ್ ಸಂಪ್ರದಾಯಗಳೆರಡನ್ನೂ ಕಾಪಾಡಿಕೊಂಡು ಗುರುಕುಲ (ಘರಾಣ) ಗಳನ್ನು ಸ್ಥಾಪಿಸಿ ತಾನಸೇನನ ಕೀರ್ತಿಯನ್ನು ರಕ್ಷಿಸಿಕೊಂಡು ಬಂದಿರುವರು ಕರೀಮ್‌ಖಾನ್, ಪಿತಾಬ್‌ರಾಯ್, ವಿಲಾಯತ್‌ಖಾನ್, ಫೈಸ್‌ಖಾನ್, ಷದ್ರಂಗ್ ಮುಂತಾದ ಗಾಯಕರು ಪ್ರಸಿದ್ಧರು.

ದಕ್ಷಿಣದಲ್ಲಿ ನರಹರಿತೀರ್ಥರಿಂದ ಆರಂಭವಾದ ಹರಿದಾಸ ಕೀರ್ತನೆ ಪದ್ಧತಿಯು ಹದಿನಾರನೆಯ ಶತಾಬ್ದದಲ್ಲಿ ಶ್ರೀಪಾದರಾಯ, ವ್ಯಾಸರಾಯ

---

ಚಾಳುಕ್ಯಹರಿಭೂಪಾಲ (೧೨೫೦)—'ಸಂಗೀತಸುಧಾಕರ'.
ಅಷ್ಟಾವಧಾನಿ ಸೋಮನ್ನ (೧೩೩೦)—'ನಾಟ್ಯಚೂಡಾಮಣಿ'.
ವಿದ್ಯಾರಣ್ಯ (೧೩೮೦)—'ಸಂಗೀತಸಾರ'.
ಸರ್ವಜ್ಞಸಿಂಗಮ (೧೪೦೦)—ಸಂಗೀತರತ್ನಾಕರವ್ಯಾಖ್ಯಾ, ಸಂಗೀತಸುಧಾಕರ'.
ಪೆದ್ದಕೋಮಟಿವೇಮ (೧೪೦೦)—'ಸಂಗೀತಚಿನ್ತಾಮಣಿ'.
ದೇವಣ್ಣಭಟ್ಟ (೧೪೨೦)—'ಸಂಗೀತಮುಕ್ತಾವಲೀ'.
ರಾಣಾಕುಂಭ (೧೪೫೦)—'ರಸಿಕಪ್ರಿಯ, ಸಂಗೀತಮೀಮಾಂಸ, ಸಂಗೀತರಾಜ'
ಕಲ್ಲಿನಾಥ (೧೪೬೦)—'ಸಂಗೀತರತ್ನಾಕರಟೀಕಾ'.
ದಾಮೋದರ (೧೪೮೦)—'ಸಂಗೀತದರ್ಪಣ'.'
ಲಕ್ಷ್ಮೀನಾರಾಯಣ (೧೫೨೦)—'ಸಂಗೀತಸೂರ್ಯೋದಯ'.
ರಾಮಯಾಮಾತ್ಯತೋಡರಮಲ್ಲ (೧೬೦೦)—'ಸ್ವರಮೇಳಕಳಾನಿಧಿ.'

ಪುರನ್ದರದಾಸ, ಕನಕದಾಸ, ವಾದಿರಾಜ ಮುಂತಾದವರ ಕೃತಿಗಳಿಂದ ವಿಶೇಷವಾಗಿ ಪ್ರಚಾರಕ್ಕೆ ಬಂದಿತು. ಆಂಧ್ರದೇಶದ ಭದ್ರಾಚಲ ರಾಮದಾಸರೂ ಮಹಾರಾಷ್ಟ್ರದ ಸಂತರೂ ಕೀರ್ತನೆಗಳನ್ನು ರಚಿಸಿರುವರು. ಗೋವಿನ್ದ ದೀಕ್ಷಿತ, ರಘುನಾಥ, ವೇಂಕಟಮಖಿ ಮುಂತಾದವರು ಕರ್ಣಾಟಕ ಸಂಗೀತಕ್ಕೆ ತಂಜಾವೂರನ್ನು ಮುಖ್ಯ ಕೇನ್ದ್ರವನ್ನಾಗಿ ಮಾಡಿದರು. ೧೯ನೆಯ ಶತಾಬ್ದದಲ್ಲಿ ಕರ್ಣಾಟಕ ಸಂಗೀತದ ತ್ರಿರತ್ನಗಳೂ ಮಹಾ ವೇದಾನ್ತಿಗಳೂ ಯೋಗಿಗಳೂ ಆದ ಮುತ್ತುಸ್ವಾಮಿದೀಕ್ಷಿತರೂ, ಶ್ಯಾಮಶಾಸ್ತ್ರಿಗಳೂ, ತ್ಯಾಗಬ್ರಹ್ಮರೂ ಸಂಸ್ಕೃತ ಮತ್ತು ತೆಲುಗಿನಲ್ಲಿ ಸಾವಿರಾರು ಕೃತಿಗಳನ್ನು ಶಾಸ್ತ್ರೀಯ ರೀತಿಯಲ್ಲಿ ರಚಿಸಿರುವುದೇ ಅಲ್ಲದೆ ಅತಿ ಗೂಢವಾದ ಮನ್ತ್ರಶಾಸ್ತ್ರ ವೇದಾನ್ತತತ್ವಗಳನ್ನೂ ಪ್ರತಿಪಾದಿಸಿರುವರು. ಸ್ವಾತೀತಿರುನಾಳ್, ಕ್ಷೇತ್ರಜ್ಞ ಘನಂಸೀನಯ್ಯ, ಸದಾಶಿವಬ್ರಹ್ಮನ್, ತೀರ್ಥನಾರಾಯಣ ಮುಂತಾದ ಕೃತಿಕರ್ತರೂ, ಆದಿಯಪ್ಪ, ಪಟ್ಟಣಂ ಸುಬ್ರಹ್ಮಣ್ಯ ಅಯ್ಯರ್, ಶರಭಶಾಸ್ತ್ರಿ, ಪರಿಯ ವೈದ್ಯನಾಥ ಅಯ್ಯರ್, ವೀಣಾ ಕುಪ್ಪಯ್ಯ, ತೋಡಿ ಸೀತಾರಾಮಯ್ಯ, ಕರೂರು ದಕ್ಷಿಣಾಮೂರ್ತಿ, ಲಾವಣಿ ವೆಂಕಟರಾವ್, ಪೊನ್ನುಸ್ವಾಮಿ ಪಿಳ್ಳೆ, ಮೈಸೂರಿನ ಸದಾಶಿವರಾವ್, ವೆಂಕಟರಾಮಯ್ಯ, ವೀಣೆ ಶೇಷಣ್ಣ, ಸುಬ್ಬಣ್ಣ, ಬಿಡಾರಂ ಕೃಷ್ಣಪ್ಪ, ವಾಸುದೇವಾಚಾರ್ಯರು, ಸುನ್ದರಶಾಸ್ತ್ರಿಗಳೂ ಪ್ರಸಿದ್ಧರು.

ಈಚೆಗೆ ಉತ್ತರದಲ್ಲಿ ಪಾಮರರಂಜಕಗಳಾದ ಖಯಾಲ್, ಧಮಾರ್ ರೀತಿಗಳೂ, ಸರ್ವತ್ರ ಪಾಶ್ಚಾತ್ಯ ವಾದ್ಯಗಳಾದ ವಾಯುಲೀನ (Violin), ಹಾರ್ಮೋನಿಯಂ, ಕ್ಲಾರಿಯೊನೆಟ್ ಇತ್ಯಾದಿಗಳೂ, ಸಿನೆಮಾ, ಗ್ರಾಮೋಫೋನ್ ರೇಡಿಯೋ ಸಂಗೀತ (!) ರೀತಿಗಳೂ ವ್ಯಾಪಿಸಿವೆ. ಭಾರತೀಯ ಸಂಗೀತದಲ್ಲಿ ಪಾಶ್ಚಾತ್ಯರ "ಮೇಳನ" ತತ್ವವನ್ನೂ, ಓದಲು ಅನುಕೂಲವಾಗುವಂತಹ ಸಂಕೇತ (Staff Notation) ಗಳನ್ನು ಜಾರಿಗೆ ತರಲು ಪ್ರಯತ್ನಗಳು ನಡೆಯುತ್ತಿವೆ.

**ಭರತನಾಟ್ಯ:** ಭಾರತೀಯರಂತೆಯೇ ಭರತಖಂಡದ ದೇವತೆಗಳೂ ನಾಟ್ಯಪ್ರಿಯರು. ಶಿವ, ಪಾರ್ವತಿ, ಗಣಪತಿ, ನಂದಿ, ಭೃಂಗಿ, ಕೃಷ್ಣ, ಸರಸ್ವತಿ ದೇವತೆಗಳು ಸೃಷ್ಟಿಸ್ಥಿತಿ ಸಂಹಾರರೂಪವಾದ ನಾಟ್ಯವನ್ನು ಮಾಡುವರು.[6]

---

[6] ಸುರಲಲನಾತತ ಥೇಯಿತ ಥೇಯಿತ ಥಾಭಿನಯೋತ್ತರ ನೃತ್ಯರತೇ |
ಧಿಧಿಕಿಟಧಿಕ್ಕಿಟ ಧಿಕ್ಕಿಟ ಧಿಂ ಧ್ವನಿ ಧೀರಮೃದಂಗನಿನಾದ ರತೇ |

ವೇದಯುಗದಲ್ಲಿ ನಾಟ್ಯಾಭಿನಯಗಳೂ ಅನೇಕ ವಿಧವಾದ ವಾದ್ಯಗಳೂ ಇದ್ದವು.[7] ಹರಪ್ಪ ಸಂಸ್ಕೃತಿಯಲ್ಲಿ ನೃತ್ಯವಿಗ್ರಹಗಳು ಸಿಕ್ಕಿರುವುದರಿಂದ ನಾಟ್ಯಪದ್ಧತಿಯಿದ್ದಿತೆಂದು ಊಹಿಸಬಹುದು. ಸನ್ಧ್ಯಾತಾಣ್ಡವಕಾಲದಲ್ಲಿ ಮಹೇಶ್ವರನು ತಂಡುವಿಗೆ ತಾಣ್ಡವರೀತಿಯನ್ನೂ ಪಾರ್ವತಿಯು ಬಾಣಾಸುರನ ಮಗಳಾದ ಉಷೆಗೆ ಲಾಸ್ಯರೀತಿಯನ್ನೂ ಬೋಧಿಸಿದರು. ಬ್ರಹ್ಮನು ಪರಮೇಶ್ವರನಿಂದ ಕಲಿತ ನಾಟ್ಯಶಾಸ್ತ್ರವನ್ನು ಭರತಮುನಿಗೆ ಉಪದೇಶಿಸಿದನು. ಉಷೆಯು ಗೋಪಿಕಾಸ್ತ್ರೀಯರಿಗೂ, ಗೋಪಿಯರು ಸೌರಾಷ್ಟ್ರಸ್ತ್ರೀಯರಿಗೂ ಅವರು ಇತರ ದೇಶದ ಸ್ತ್ರೀಯರಿಗೂ ಲಾಸ್ಯರೀತಿಯನ್ನು ಹೇಳಿಕೊಟ್ಟರು.[8] ತಾಣ್ಡವರೀತಿಯಲ್ಲಿ ಆನಂದ, ಸನ್ಧ್ಯಾ, ಕಾಲಿಕಾ, ತ್ರಿಪುರಸಂಹಾರ ಮುಂತಾದ ಭೇದಗಳಿವೆ. ಮಹಾವ್ರತ ಮುಂತಾದ ಯಜ್ಞಗಳಲ್ಲಿ ದಾಸಿಯರು ಮಾರ್ಜಾಲೀಯದ ಸುತ್ತಲೂ ನೃತ್ಯಮಾಡುತ್ತಿದ್ದರು. ನಾಟ್ಯ ಅಭಿನಯಗಳನ್ನು ವೇಶ್ಯೆಯರಲ್ಲದೆ ಉತ್ತಮ ಕುಲದವರೂ ಕಲಿಯುತ್ತಿದ್ದರು. ರಾಜ ರುದ್ರಾಯಣನು ವೇಣುಗಾನ ಮಾಡಿದಾಗ ರಾಣಿಯಾದ ಚನ್ದ್ರವತಿಯು ನಾಟ್ಯಮಾಡಿದಳೆಂದು ದಿವ್ಯಾವದಾನದಲ್ಲಿ ಹೇಳಿದೆ.[9] ಉದಯನನ ವೀಣಾವಾದನಕ್ಕನುಸಾರವಾಗಿ ಅವನ ರಾಣಿಯು ನಾಟ್ಯಮಾಡಿದಳು. ಸಿಂಹಳದ ಪರಾಕ್ರಮಬಾಹುವು ಒಂದು ನಾಟಕಶಾಲೆಯನ್ನು ನಿರ್ಮಿಸಲು ಅವನ ರಾಣಿ ರೂಪವತಿ ಅಭಿನಯಪ್ರದರ್ಶನೆ ಮಾಡಿದಳು. ಕಾಲಿದಾಸನು ತನ್ನ ರಘುವಂಶದಲ್ಲಿ ಸ್ಥಾನ ನಟರೊಡನೆ ಅಗ್ನಿವರ್ಮನೂ ಅಭಿನಯಮಾಡಿದನೆಂದು ರಘುವಂಶದಲ್ಲಿಯೂ ಮಾಲವಿಕಾಗ್ನಿಮಿತ್ರದಲ್ಲಿ "ಯಥಾರಸ ಮಭಿನಯತಿ" ಎಂದೂ ಹೇಳಿರುವನು. ಜೈನಗ್ರಂಥಗಳಲ್ಲಿ ಇಂದ್ರನ ನಾಟ್ಯದ ವರ್ಣನೆಗಳಿವೆ. ಕರ್ಣಾಟಕದ ರಾಣಿಯರಾದ ಶಾನ್ತಲಾ, ಚನ್ದಲಾ, ಪದ್ಮಲಾ ಮುಂತಾದವರು

---

ತುರುಗಮುಖೇರಿತ ಮಾನಸಮನ್ವಿತ ಮಾನಸಮೋಹನ ಗೀತರತೇ |
ಜಯಜಯ ಹೇ ಮಹಿಷಾಸುರಮರ್ದಿನಿ ರಮ್ಯಕಪರ್ದಿನಿ ಶೈಲಸುತೇ |
ಜಯಜಯ ಜಯ್ಯಜಯೇ ಜಯಶಬ್ದ ಪರಿಸ್ತುತಿ ತತ್ಪರ ವಿಶ್ವನುತೇ |
ಝುಣಝುಣ ಝುಂಝುಣ ಝುಂಕೃತ ನೂಪುರ ಶಿಂಜಿತ ಮೋಹಿತ ಭೂತಪತೇ |
ನಟಿತನಟಾರ್ಧನಟೀ ನಟನಾಯಕ ನಾಟಿತ ನಾಟ್ಯಸಗಾನರತೇ |
ಜಯಜಯ ಹೇ ಮಹಿಷಾಸುರಮರ್ದಿನಿ ರಮ್ಯಕಪರ್ದಿನಿ ಶೈಲಸುತೇ |
—ಶ್ರೀ ಶಂಕರರ ಮಹಿಷಮರ್ದಿನೀ ಸ್ತೋತ್ರ.

[7] ಋಗ್ V, ೩೩-೬ ; X, ೧೮-೩ ; VII, ೨೦-೨೨.

[8] ಅಭಿನಯದರ್ಪಣ I, ೧ ; IV, ೫-೧೦.

[9] ದಿವ್ಯಾವದಾನ. ಪು. ೫೪೪. (Cowell and Neill Ed).

ಬಹಿರಂಗವಾಗಿ ರಾಜನ ಮುಂದೆ ನೃತ್ಯಮಾಡಿ ಸಂತುಷ್ಟನಾದ ರಾಜನಿಂದ ಬಹುಮಾನವಾಗಿ ಪಡೆದ ಗ್ರಾಮಗಳನ್ನು ದೇವಬ್ರಾಹ್ಮಣರಿಗೆ ದಾನಮಾಡಿದಂತೆ ಶಾಸನಗಳು ಹೇಳುವವು. ಆದುದರಿಂದ ಸತ್ಕುಲದವರು ಅಭಿನಯ ಮಾಡಿದರೆ ಗೌರವಕ್ಕೆ ಕಡಮೆಯೆಂಬ ಭಾವವು ೧೪ನೆಯ ಶತಾಬ್ದದವರೆಗೂ ಇರಲಿಲ್ಲ.

ದೃಶ್ಯಗಳಲ್ಲಿ ನಾಟ್ಯ, ನೃತ್ಯ, ನೃತ್ತಗಳೆಂದು ಮೂರು ವಿಧ. ನಾಟ್ಯದಲ್ಲಿ ಆಂಗಿಕ, ವಾಚಿಕ, ಆಹಾರ್ಯ ಮತ್ತು ಸಾತ್ವಿಕಗಳೆಂದು ನಾಲ್ಕು ಭೇದ.[10] ತಾಳ, ಮಾನ, ಲಯ, ಅಂಗವಿಕ್ಷೇಪಗಳಿಂದ ಕೂಡಿದುದು ನೃತ್ಯ. ಇದರಲ್ಲಿ ಮಾರ್ಗ (ದೇವತಾಸಂಬದ್ಧ), ದೇಶೀ (ಮನುಷ್ಯರಿಗೆ) ಎಂದೂ, ತಾಣ್ಡವ (ಪುರುಷರಿಗೆ, ಸಂಹಾರರೂಪ) ಲಾಸ್ಯ (ಸ್ತ್ರೀಯರಿಗೆ, ಸೃಷ್ಟಿಪರ) ಎಂಬ ಭೇದಗಳು ಔದ್ಧತ್ಯವನ್ನೂ ಮಾರ್ದವವನ್ನೂ ಸೂಚಿಸುವವು.[11] ಭಾವ ಅಭಿನಯಗಳಿಲ್ಲದೆ ಅಂಗವಿಕ್ಷೇಪಮಾತ್ರಕ್ಕೆ ನೃತ್ತವೆಂದು ಹೆಸರು. ನೃತ್ತದಲ್ಲಿ ವಿಷಮ, ವಿಕಟ, ಲಘು ಎಂಬ ಭೇದಗಳಿವೆ.

ನಾಟ್ಯಕ್ಕೆ ರಂಗಸ್ಥಳವು ಅವಶ್ಯಕ. ಭರತನಾಟ್ಯಶಾಸ್ತ್ರದಲ್ಲಿ ಚತುರಸ್ರ, ತ್ರಿಕೋಣ, ಮಂಡಲಾಕಾರ ಅರ್ಧಚನ್ದ್ರಾಕಾರಗಳಾದ ರಂಗಸ್ಥಳವನ್ನು ನಿರ್ಮಿಸುವ ರೀತಿಯನ್ನು ವರ್ಣಿಸಿದೆ.[12] ನಾಟಕಶಾಲೆಯಲ್ಲಿ ಪ್ರೇಕ್ಷಾಗೃಹ (Auditorium) ರಂಗಭೂಮಿ (Stage) ಎಂಬ ಎರಡು ಮುಖ್ಯಭಾಗಗಳು. ವಾದ್ಯಗಾರರು ಹಿಂಬಾಗವಾದ ನೇಪಥ್ಯದಲ್ಲಾದರೂ ಪಾರ್ಶ್ವಗಳಲ್ಲಾದರೂ ಇರಬಹುದು. ನೇಪಥ್ಯದ ಮುಂದುಗಡೆ ಪೂರ್ವರಂಗವೂ ಅದಕ್ಕೆ ಮುಂದೆ

---

10 


11 ಪ್ರಪಂಚಸೃಷ್ಟ್ಯುನ್ಮುಖ ಲಾಸ್ಯಕಾಯೈ |
ಸಮಸ್ತಸಂಹಾರಕ ತಾಣ್ಡವಾಯ |
ಜಗಜ್ಜನನ್ಯೈ ಜಗದೇಕಪಿತ್ರೇ |
ನಮಃ ಶಿವಾಯೈ ಚ ನಮಃ ಶಿವಾಯ ||
—ಶಂಕರಾಚಾರ್ಯರ ಅರ್ಧನಾರೀಶ್ವರ ಸ್ತೋತ್ರ. ೨

12 ನಾಟ್ಯಶಾಸ್ತ್ರ II, ೪೬೬.

ಯವನಿಕೆಯು (ತೆರೆ) ಇರುವದು. ಯವನಿಕೆಯು ಗ್ರೀಕರಿಂದ ಬಂದಿತೆಂದು ಕೆಲವರು ಹೇಳುವರು. ಆದರೆ ಗ್ರೀಕರ ನಾಟಕಶಾಲೆಗಳಲ್ಲಿ ಯವನಿಕೆಯೇ ಇರಲಿಲ್ಲ.

### ಚತುರಸ್ರಾಕಾರದ ನಾಟಕಶಾಲೆ




ನಟರು ವೇಷಭೂಷಣಗಳನ್ನು ಪಾತ್ರಕ್ಕನುಸಾರವಾಗಿ ಧರಿಸಬೇಕು. ತಲೆಕೂದಲಿಗೆ ಹೂವು, ಮೊಗ್ಗು, ಮುತ್ತಿನಸರ ಮುಂತಾದುವನ್ನು, ಕಿವಿಗೆ ಮಕರಮುಖಗಳುಳ್ಳ ಕುಣ್ಡಲ, ಲಲಾಟದಲ್ಲಿ ಕೇಸರ ಚಂದನದ ಲಾಂಛನ, ಕಣ್ಣಿಗೆ ಅಂಜನ, ಕೈಗೆ ಕಂಕಣ, ಕೇಯೂರ, ಭುಜಕೀರ್ತಿ, ಕಂಠಕ್ಕೆ

ಕಸ್ತೂರಿಕಾಪತ್ರದ ಚೂರ್ಣ, ಎದೆಯ ಮೇಲೆ ಹಾರಗಳು, ಬೆರಳಿಗೆ ಉಂಗುರಗಳು, ಮುಖವರ್ಣಕ್ಕನುಸಾರವಾಗಿ ಬಿಳಿ ಅಥವಾ ಗುಲಾಬಿ ಬಣ್ಣದ ಉತ್ತರೀಯ, ಸೀರೆಗಳು, ಕಾಲಿಗೆ ೧೦೦-೨೦೦ ಕಂಚಿನ ಗೆಜ್ಜೆಗಳನ್ನು ಒಂದೊಂದಂಗುಲ ದೂರವಿರುವಂತೆ ನೀಲಿದಾರಕ್ಕೆ ಪೋಣಿಸಿ ಮಾಡಿದ ಗೆಜ್ಜೆಸರ, ಇವು ವಿಹಿತ.[13]

ಕಥಕ್ಕಳಿ ಮತ್ತು ಚೌಸಾಟ್ಯದಲ್ಲಿ ಮುಖವಾಡ, ಮುಖವರ್ಣಗಳು ಆವಶ್ಯಕ. ಕೇರಳದಲ್ಲಿ ಅರಸಿನ ಕುಂಕುಮಗಳಿಂದ ಮಾಡಿದ "ಮಿನ್ನುಕ್" ಬಣ್ಣವನ್ನೂ ಬಿಳಿ ಚುಕ್ಕೆಗಳನ್ನೂ ಮುಖಕ್ಕೂ, ಕಣ್ಣಿಗೆ ಕಜ್ಜಲ, ತುಟಿಗೆ ಕೆಂಪು, ಹಣೆಯಲ್ಲಿ ತಿಲಕ, ಅಥವಾ ಮುಖಕ್ಕೆ ಪಚ್ಚೆ, ಅಕ್ಕಿ ಹಿಟ್ಟಿನ ಬಿಳಿ ಗೆರೆಗಳು, ಕತ್ತಿರೇಖೆ, ನಾಸಮೂಲದಲ್ಲಿ ಎರಡು ಬಿಳಿ ಚುಕ್ಕೆಗಳು, ಮೂಗಿಗೆ ಕೆಂಪುಬಣ್ಣ, ವಸ್ತ್ರ (ತರಿ)ಗಳಲ್ಲಿ ಬಿಳಿ ಅಂಗಿ (ರಾಕ್ಷಸಪಾತ್ರಕ್ಕೆ ಕೆಂಪುವಸ್ತ್ರ, ಕಾಳೀ, ಕಿರಾತ ಮುಂತಾದ ಪಾತ್ರಗಳಿಗೆ ಕಪ್ಪು), ತಲೆಯಮೇಲೆ "ಮುಟಿ" ಜಟೆ ಶಿಖಿಪಿಂಛ ಮುಂತಾದ ಕೇಶವಿನ್ಯಾಸಗಳು, ತರಂಕ, ಕೇಯೂರ, ನೂಪುರ ಮುಂತಾದ ಆಭರಣಗಳನ್ನೂ ಉಪಯೋಗಿಸುವರು. ಉತ್ತರದಲ್ಲಿ ನಾಟ್ಯ ಮಾಡುವವರು ಪಾದಪರ್ಯನ್ತವಿರುವ ಸೀರೆ, ಮೊಣಕ್ಕೆವರೆಗೂ ರವಿಕೆ, ಚೋಳಿ, ದಕ್ಷಿಣದಲ್ಲಿ ಸೀರೆ, ಚೋಳಿ, ಒಳಗೆ ಚೊಲ್ಲಣ, ಡಾಬು (ವದನ) ಮುಂತಾದುವನ್ನು ಉಪಯೋಗಿಸುವರು.

**ವಾದ್ಯಗಳು:** ವೇದಯುಗದಲ್ಲಿ ವೇಣು, ವೀಣ, ಭೃತ್ನಿ, ಬಾಕುರ, ನಾಳೀ, ವಂಶೀ, ಕ್ಷೋಣೀ, ಕರ್ಕರೀ, ಆಘಾತಿ, ಮೃದಂಗ, ಪಟಹ, ಢಕ್ಕಾ, ದುಂದುಭಿ, ಕಾಣ್ಡವೀಣ, ಪಿಚ್ಛೋರ, ಶಂಖ ಎಂಬ ವಾದ್ಯಗಳಿದ್ದವು. ವೀಣೆಗಳಲ್ಲಿ ಮಹಾನಾಟಕವೀಣೆ (ಗೋಟುವಾದ್ಯ), ಸರಸ್ವತೀವೀಣೆ, ಪರಿವಾದಿನೀ, ರುದ್ರವೀಣೆ ಮುಂತಾದ ಪ್ರಭೇದಗಳಿವೆ. ಸುಮೇರಿಯನ್ನರ ಪಾನ್, ಈಜಿಪ್ಟಿನವರ ಬೈನ್ ಎಂಬ ತನ್ತ್ರೀವಾದ್ಯದಿಂದ ಭಾರತೀಯರ ವೀಣೆಯು ಹುಟ್ಟಿತೆಂದು ಕೆಲವರು ಊಹಿಸಿರುವದಕ್ಕೆ ಆಧಾರವಿಲ್ಲ. ವೇಣು, ಪಿಳ್ಳಂಗೋವಿ, ಕೊಳಲು, ಮುರಳಿ, ಜಾನ್ಸಲೀ ಮುಂತಾದ ಮುಖವಾದ್ಯಗಳೂ, ತಂತ್ರೀವಾದ್ಯಗಳ ಕಮಾಸೂ ಇಂಡಿಯ ದೇಶದಲ್ಲಿಯೇ ಹುಟ್ಟಿದವು. ಮೃದಂಗ, ಮುರಜ, ಡೋಲು ಮುಂತಾದ ಆಘಾತವಾದ್ಯಗಳನ್ನು ವೈಜ್ಞಾನಿಕದೃಷ್ಟಿಯಿಂದ ಸರ್ ಸಿ. ವಿ. ರಾಮನ್ ಅವರು ವಿಮರ್ಶಿಸಿ ಅವುಗಳ ರಚನಾ

---

[13] ಸಂಗೀತರತ್ನಾಕರ VII, ೧೨೫೦-೭.

ವೈಶಿಷ್ಟ್ಯವನ್ನು ವ್ಯಕ್ತಪಡಿಸಿರುವರು. ಶಾಸನಗಳಲ್ಲಿ "ಪಂಚಮಹಾಶಬ್ದ"ಗಳು ಅಧಿಕಾರಸೂಚಕವಾಗಿದ್ದವೆಂದು ಹೇಳಿದೆ. ದಕ್ಷಿಣದೇಶದ ನಾದಸ್ವರವು ಬಹಳ ಪ್ರಾಚೀನವಾದ್ಯವೆಂದು ಕಂಡುಬರುವದು. ಉತ್ತರದೇಶದಲ್ಲಿ ಸಿತಾರ್, ಸರೋದ್, ಸರ್‌ನಾಯ್ ಮುಂತಾದ ವಾದ್ಯಗಳು ೧೭ನೆಯ ಶತಾಬ್ದದಿಂದೀಚೆಗೆ ಪ್ರಾಮುಖ್ಯವಾದವು. ಪ್ರಾಚೀನಕಾಲದಲ್ಲಿ ಗಾಯಕರಿಗೆ ತಂಬೂರಶ್ರುತಿ, ಕೊಳಲು, ವೀಣೆ ಮತ್ತು ಮೃದಂಗಗಳೇ ಸಹಕಾರಿಗಳಾಗಿದ್ದವೆಂದು ತಿಳಿದುಬರುವದು. ಪಿಟೀಲು ಕೂಡ ಚೋಳಕಾಲದಲ್ಲಿಯೇ ಇದ್ದಿತೆಂದು, ಇದಕ್ಕೆ "ರಾವಣಹಸ್ತ" ಎಂಬ ಹೆಸರಿದ್ದಿತೆಂದು ಕಂಡುಬಂದಿದೆ.

ಹಿಂದಿನ ನಾಟ್ಯಗಳಲ್ಲಿ ರಾಸಲೀಲೆಗೆ ಕರ್ಷಿಣೀ ಎಂದೂ, ತುರುಷ್ಕ ಸ್ತ್ರೀಪುರುಷರ ನಾಟ್ಯಕ್ಕೆ ಚಕ್ಕರಿಯೆಂದೂ, ಅನಾಗರಿಕರ ನಾಟ್ಯಗಳಿಗೆ ಸವರ, ಕೌರಂಗಿ (ಕುರಂಜಿ), ಮುಕ್ತಾವಲೀ ಮುಂತಾದ ಹೆಸರುಗಳಿದ್ದವೆಂದು ಕೆಲವು ಗ್ರಂಥಗಳು ಹೇಳುವವು. ನೀಚನೃತ್ಯಗಳಾದ ವಿಕಟ ಮುಂತಾದವಕ್ಕೆ ನಾಂದಿ ಪ್ರಸ್ತಾವನೆಗಳು ಅನವಶ್ಯಕ.

**ಅಭಿನಯ:** ಅಭಿನಯದಿಂದ ರಸ ಮತ್ತು ಭಾವಗಳನ್ನು ಪ್ರದರ್ಶಿಸಬೇಕು.[14] ರಸಗಳು ಎಂಟು ಅಥವಾ ಒಂಬತ್ತು. ಹದಿನಾರನೆಯ ಶತಾಬ್ದದಿಂದೀಚೆಗೆ ದಾಸ್ಯ, ಸಖ್ಯ, ವಾತ್ಸಲ್ಯ, ಮಾಧುರ್ಯ, ಭಕ್ತಿ ಮುಂತಾದವೂ ರಸಗಳೆಂದು ಭಾವಿಸಿರುವರು. ರಸವನ್ನು ವ್ಯಕ್ತಪಡಿಸುವದಕ್ಕೆ ವಿಭಾವ, ಅನುಭಾವ, ವ್ಯಭಿಚಾರಿಭಾವ, ಸ್ಥಾಯಿಭಾವಗಳೂ ಉಚಿತರಾಗಗಳೂ ಕರಣಗಳೂ ಅವಶ್ಯಕ.[15] ಶೃಂಗಾರಕ್ಕೆ ಭೂಪಾಲ, ಹಾಸ್ಯಕ್ಕೆ ವಸಂತ, ವೀರಕ್ಕೆ ನಾಟಕ, ಭಯಾನಕಕ್ಕೆ ಮಾಳವ ರಾಗಗಳೂ, ಮನ್ದಾಕ್ರಾನ್ತಾ ಪುಷ್ಪಿತಾಗ್ರ ವೃತ್ತಗಳು ಕರುಣಕ್ಕು, ಸ್ರಗ್ಧರೆಯು ಶೃಂಗಾರಕ್ಕು, ಶಿಖರಿಣೀಶಾರ್ದೂಲವಿಕ್ರೀಡಿತವೃತ್ತಗಳು ವೀರರಸಕ್ಕು ಉಚಿತ.

**ಕರಣ-ಮುದ್ರೆಗಳು:** ಆಂಗಿಕಾಭಿನಯದಲ್ಲಿ ಚಾರಿ, ಮಣ್ಡಲ, ಭಂಗ ಎಂಬ ಭೇದಗಳಿವೆ. ಚಾರಿ ಮತ್ತು ಮಂಡಲಗಳಲ್ಲಿ ಭೌಮ, ಆಕಾಶಗಾಮಿ

---

[14] ಯತೋಹಸ್ತಸ್ತತೋದೃಷ್ಟಿರ್ಯತೋದೃಷ್ಟಿಸ್ತತೋಮನಃ| ಯತೋಮನಸ್ತತೋಭಾವೋಯತೋಭಾವಸ್ತತೋ ರಸಃ ||

[15] ರಾಮಾದೇಶ್ಚಾದಿಕಾರಣೋಪಜನಿತಃ ಕಾರ್ಯೈಃ ಪ್ರತೀತಿಂಗತಃ| ಸಂಪುಷ್ಟಸ್ಸಹಕಾರಿಭಿರ್ಜನಯತಿಸ್ಥಾಯೀಸುಖಂವ್ಯಾಸುಖಮ್ | ಭಾವಾನಾಮನುವರ್ಣನಾನುಕರಣೈಃ ಕಾವ್ಯೇಽಪಿ ನಾಟ್ಯೇಽಪಿಚ | ವ್ಯಕ್ತೋಽಯಂತುನಿರಾಶ್ರಯಸ್ಸುಖಕರಃ ಸಭ್ಯೈರಸಶ್ಚರ್ವ್ಯತೇ || ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂಸಮಾರಾಧನಮ್ ||

ಎಂಬವು ಅಂತರ್ಭೇದಗಳು. ಭಂಗಗಳಲ್ಲಿ ಆಭಂಗ, ಸಮಭಂಗ, ತ್ರಿಭಂಗ ಗಳೆಂದು ಮೂರು ವಿಧ. ಕೈ, ಕಣ್ಣು, ಕೊರಳು, ಹುಬ್ಬು ಮತ್ತು ತಲೆಗಳ ವಿಕ್ಷೇಪಗಳಿಂದ ಕರಣಗಳು ಉಂಟಾಗುವವು. ಮಾತೃಕಾ, ನೃತ್ತಕರಣ, ಕಲಾಪಕ, ಭಣ್ಡಕ, ಸಂಘಾತ ಎಂಬ ಐದು ಕರಣಲಕ್ಷಣಗಳು.[16] ಶಿರೋ ವಿಕ್ಷೇಪದಿಂದ ೧೧, ನೇತ್ರಚಲನೆಯಿಂದ ೪೭, ಕಂಠವಿಕ್ಷೇಪದಿಂದ ೪, ಹುಬ್ಬಿ ನಿಂದ ೬, ಏಕ ಹಸ್ತದಿಂದ ೨೪ ಅಥವಾ ೨೮, ಸಂಯುತ ಹಸ್ತದಿಂದ ೧೩ ಅಥವಾ ೨೩, ನೃತ್ಯಹಸ್ತದಿಂದ ೨೭ (ಕಥಕ್ಕಳಿಯಲ್ಲಿ ೬೪) ಕರಣಗಳು ಆಗುವವು. (ಸಾಧಕನು ದೇವತಾಪೂಜೆಯಲ್ಲಿ ಉಪಯೋಗಿಸುವ ಆವಾಹನ, ಸ್ಥಾಪನ, ಸಮ್ಮುಖೀಕರಣ ಮುಂತಾದ ತಾನ್ತ್ರಿಕಮುದ್ರೆಗಳು ಸ್ವಲ್ಪ ಬೇರೆ ಯಾಗಿವೆ). ಮುದ್ರಾ ಎಂಬ ಪದವು ಅಭಿನಯದರ್ಪಣದಲ್ಲಿ ಕಂಡುಬರುವ ದಿಲ್ಲ. ಈಚೆಗೆ ಪ್ರಚಾರಕ್ಕೆ ಬಂದಂತೆ ತೋರುತ್ತದೆ. ಕೆಳಗೆ ಭರತನ ನಾಟ್ಯ ಶಾಸ್ತ್ರ, ಅಭಿನಯದರ್ಪಣ, ಹಸ್ತಲಕ್ಷಣದೀಪಿಕೆ (ಕಥಕ್ಕಳಿ) ಗಳಲ್ಲಿ ವರ್ಣಿ ಸಿರುವ ೩೨ ಹಸ್ತಮುದ್ರೆಗಳ ಹೆಸರುಗಳನ್ನು ಪರಿವಿಡಿಯನ್ನು ಮುಂದಿನ ಪುಟದಲ್ಲಿ ಸೂಚಿಸಿದೆ.

ನೃತ್ತಹಸ್ತಗಳು ಸ್ವಸ್ತಿಕ, ದೋಳ, ಅಂಜಲಿ, ಕಟಕವರ್ಧನ, ಶಕಟ, ಪಾಶ, ಕೀಲಕ, ಕಪಿತ್ಥ, ಶಿಖರ, ಕೂರ್ಮ, ಹಂಸಾಸ್ಯ, ಅಲಪದ್ಮ, ಪತಾಕಗಳೆಂದು ೧೩ ವಿಧ. ಪಾದ ಚಲನೆಗಳು ಮಂಡಲ (೧೬ ಭೇದ), ಉತ್ಪ್ಲವನ (೫ ವಿಧ), ಭ್ರಮರೀ (೭ ವಿಧ), ಪಾದಚರೀ (೮ ವಿಧ) ಎಂಬುದಾಗಿಯೂ, ಹೆಜ್ಜೆಗಳು ಹತ್ತು ವಿಧವಾಗಿಯೂ ಇವೆ.

**ದ್ರಾವಿಡಸಂಗೀತ—ನೃತ್ಯ:** ಪ್ರಾಚೀನ ತಮಿಳಗ್ರಂಥಗಳಿಂದ ದ್ರಾವಿಡ ನೃತ್ತರೀತಿಯು ತಿಳಿದುಬರುವದು. ಶಿಲಪ್ಪಧಿಕಾರದ ಅರುಂಗೆಟ್ರುಕಥೆಯಲ್ಲಿ ಮಾಧವಿಯು ಐದನೆಯ ವರ್ಷದಲ್ಲಿಯೇ ನಾಟ್ಯವನ್ನು ಕಲಿಯಲಾರಂಭಿಸಿ ಏಳು ವರ್ಷ ಶ್ರಮಪಟ್ಟಳೆಂದು ಹೇಳಿದೆ. ನಾಟಕರಂಗಸ್ಥಳವು ೧೬ ಅಡಿ ಉದ್ದ, ೧೪ ಅಡಿ ಅಗಲವಿದ್ದಿತು. ಮುಖ್ಯನಟಿ, ಇಬ್ಬರು ಮೂವರ ಹಿಮ್ಮೇಳ, ಉಪಾಧ್ಯಾಯ, ಗಾಯನಾಚಾರ್ಯ, ಮೃದಂಗದವ, ಕೊಳಲು ಮತ್ತು ಯಾಳ್ ಬಾರಿಸುವವರ ಕೂಟವಿರುತ್ತಿದ್ದರು. ಶಕ್ಕೋಡಯಾಳ್, ಕುಳಲ್,

---

[16] ದ್ವೇನೃತ್ತಕರಣೇ ಚೈವ ಭವತೋ ನೃತ್ತಮಾತೃಕಾ | ತ್ರಿಭಿ: ಕಲಾಪಕಂ ಚೈವ ಚತುರ್ಭಿರ್ಭಣ್ಡಕಂಭವೇತ್ | ಪಂಚೈವಕರಣಾನಿಸ್ಯು: ಸಂಘಾತ ಇತಿಸ್ಮೃತಃ || ನಾಟ್ಯ ಶಾಸ್ತ್ರ IV, ೩೨. ಚಾರ್ಯಶ್ಚೈವ ತಯೋಃ ಪ್ರೋಕ್ತಾನೃತ್ತಹಸ್ತಸ್ತ ಥೈವಚ | ಸಾಮಾತೃ ಕೇತಿವಿಜ್ಞೇಯಾ ತದ್ಭೇದಾತ್ಕರಣಾನಿತು || ನಾಟ್ಯಶಾಸ್ತ್ರ. IV.

| ಸಂಖ್ಯೆ | ಅಭಿನಯದರ್ಪಣ | ಭರತ | ಹಸ್ತಲಕ್ಷಣದೀಪಿಕಾ | ವಿಷ್ಣುಧರ್ಮೋತ್ತರ |
|---|---|---|---|---|
| ೧ | ಪತಾಕ | ೧ | ತ್ರಿಪತಾಕ ೧೭ | ಪತಾಕ ೧ |
| ೨ | ತ್ರಿಪತಾಕ | ೨ | ಪತಾಕ | ತ್ರಿಪತಾಕ ೨ |
| ೩ | ಅರ್ಧಪತಾಕ | .... | ಕಪಿತ್ಥ ೭ | .... |
| ೪ | ಕರ್ತರೀಮುಖ | ೩ | ಶಿಖರ ೯ | ಕರ್ತರೀಮುಖ ೩ |
| ೫ | ಮಯೂರ | .... | .... | .... |
| ೬ | ಅರ್ಧಚನ್ದ್ರ | ೪ | ಹಂಸಪಕ್ಷ ೮ | ಅರ್ಧಚನ್ದ್ರ ೪ |
| ೭ | ಅರಾಳ | ೫ | ಭ್ರಮರ ೧೪ | ಅರಾಳ ೫ |
| ೮ | ಶುಕತುಣ್ಡ | ೬ | .... | ಶುಕತುಣ್ಡ ೬ |
| ೯ | ಮುಷ್ಟಿ | ೭ | ಮುಷ್ಟಿ ೪ | ಮುಷ್ಟಿ ೭ |
| ೧೦ | ಶಿಖರ | ೮ | ವರ್ಧಮಾನಕ ೨೦ | ಶಿಖರ ೮ |
| ೧೧ | ಕಪಿತ್ಥ | ೯ | .... | ಕಪಿತ್ಥ ೯ |
| ೧೨ | ಕಟಕಮುಖ | ೧೦ | ಕಟಕ ೩ | ಕರ್ಕಟ ೧೦ (ಸಂಯುತ ೩ ?) |
| ೧೩ | ಸೂಚೀಮುಖ | ೧೧ | ಸೂಚೀಮುಖ ೧೫ | ಸೂಚ್ಯರ್ಧ ೧೧ |
| ೧೪ | ಚನ್ದ್ರಕಲಾ | .... | ಅರ್ಧಚನ್ದ್ರ ೧೨ | .... |
| ೧೫ | ಪದ್ಮಕೋಶ | ೧೨ | ಅಂಜಲಿ ೧೧ | ಪದ್ಮಕೋಶ ೧೨ |
| ೧೬ | ಸರ್ಪಶಿರ | ೧೩ | .... | .... |
| ೧೭ | ಮೃಗಶಿರ | ೧೪ | .... | ಮೃಗಶಿರ ೧೩ (ಮೃಗ. ೧೪) |
| ೧೮ | ಸಿಂಹಮುಖ | .... | ಮೃಗಶಿರ ೧೮ | .... |
| ೧೯ | ಕಂಗುಳ | ೧೫ | .... | ಲಾಂಗುಲ ೧೫ (?) |
| ೨೦ | ಅಲಪದ್ಮಕ (ಅಲಪಲ್ಲವ) | ೧೬ | .... | ಕಾಲಪದ್ಮ ೧೬ (?) |
| ೨೧ | ಚತುರ | ೧೭ | ಪಲ್ಲವ | ಚತುರ ೧೭ |
| ೨೨ | ಭ್ರಮರ | ೧೮ | .... | ಭ್ರಮರ ೧೮ |
| ೨೩ | ಹಂಸಾಸ್ಯ | ೧೯ | ಹಂಸಾಸ್ಯ | ಹಂಸಾಸ್ಯ ೧೯ |
| ೨೪ | ಹಂಸಪಕ್ಷ | ೨೦ | ಕರ್ತರಿಮುಖ | ಹಂಸಪಕ್ಷ ೨೦ |
| ೨೫ | ಸಂದಂಶ | ೨೧ | ಮುದ್ರಾಖ್ಯ | ಸಂದೇಶ ೨೧ |
| ೨೬ | ಮುಕುಳ | ೨೨ | ಮುರುಳ ೨೩ | ಮುಕುಳ ೨೨ |
| .... | .... | ಊರ್ಣನಾಭ ೨೩ | ಊರ್ಣನಾಭ ೨೨ | .... |
| ೨೭ | ತಾಮ್ರಚೂಡ | ೨೪ | ಶುಕತುಣ್ಡ ೬ | .... |
| ೨೮ | ತ್ರಿಶೂಲ | .... | .... | .... |
| ೨೯ | ವ್ಯಾಘ್ರ | .... | .... | .... |
| ೩೦ | ಅರ್ಧಸೂಚೀ | .... | ಅರಾಳ ೨೧ | ಸೂಚ್ಯರ್ಧ |
| ೩೧ | ಕಟಕ | .... | ಮುಕುರ ೧ | ಕಟಕಸಂಯುತ೫ ? |
| ೩೨ | ಪಲ್ಲೀ | .... | ಪಲ್ | ಗಜದನ್ತ ? |
| .... | .... | .... | ಕಟಕಮುಖ | ಕಟಕಮುಖ ೧೦ ? |

ಮದ್ದಲಂ, ಕುಡಮುಟವು, ಇಡಕ್ಕೈ ಎಂಬವು ವಾದ್ಯಗಳು. ಕೊಳಲು ಕೊಡಿಪ್ಪಾಲೈಯಿಂದಲೂ, ಯಾಳು ಅರುಂಪ್ಪಾಲೈಯಿಂದಲೂ ಆರಂಭವಾಗುತ್ತಿದ್ದವು. ಈ ಪಾಲೈಗಳು ಭರತನಾಟ್ಯಶಾಸ್ತ್ರದ ಮೂರ್ಛನೆಗಳನ್ನು ಹೋಲುವವು. ಕುರಳ್ (Tonic Notes) ಗಳಲ್ಲಿ ಕುರುಳ್, ತುಟ್ಟಂ, ಕೈಕ್ಕಿಲೈ, ಉಪ್ಪೈ, ಇಲಿ, ವಿಟರಿ, ದರಂ ಎಂಬ ಭೇದಗಳಿಗನುಸಾರವಾಗಿ ಚೆಂಪಾಲೈ, ಪದುಮಲೈ, ಸೆವ್ವಳಿ, ಅರುಂ, ಕೊಡಿ, ವಿಟರಿ, ಮೇರ್ಚೆಂಪಾಲೈ ಎಂದು ಏಳು ರೀತಿಗಳಿದ್ದವು.

| ಪಾಲೈ | ಅಲಕು |
|---|---|
| ಚೆಂಪಾಲೈ | ೪೪೩೨, ೪೩೨ |
| ಪದುಮಲೈ | ೨೪೪೩೨, ೪೨ |
| ಸೆವ್ವಳಿ | ೩೨೪೪೩, ೨೪ |
| ಅರುಂ | ೪೩೨೪೪, ೩೨ |
| ಕೊಡಿ | ೨೪೩೨೪, ೪೩ |
| ವಿಟರಿ | ೩೨೪೩೨, ೪೪ |
| ಮೇರ್ಚೆಂಪಾಲೈ | ೪೩೨೪೩, ೨೪ |

ಶಿಲಪ್ಪಧಿಕಾರದಲ್ಲಿ ಪಾಲೈ, ಕುರುಂಜಿ, ಮರುದಂ, ನೈದಲ್ ಎಂಬ ಪ್ರಾಂತ ಭೇದಗಳಿಗನುಸಾರವಾಗಿ ಯಾಳಿನ ಭೇದಗಳಿದ್ದವೆಂದು ಹೇಳಿದೆ. ನೃತ್ಯದಲ್ಲಿ ಸಾಮೂಹಿಕ ನೃತ್ಯಕ್ಕೆ ಕುರವೈಯೆಂದೂ ಏಕವ್ಯಕ್ತಿಯ ನೃತ್ಯಕ್ಕೆ ವರಿಯೆಂದೂ ಹೆಸರು. ಕುರವೈ ನೃತ್ಯದ ಭೇದವಾದ ಕುನಕ್ಕುರವೆಯು ಕುರುಂಜಿದೇಶಭಾಗಗಳಲ್ಲಿಯೂ, ಆಯ್ಚಿಯಾರ್ ಕುರುವೆಯು ಮುಳ್ಳೈತಿನೆಯಲ್ಲಿಯೂ ಪ್ರಚಾರದಲ್ಲಿದ್ದವು. ನೈದಲ್ ಭಾಗದಲ್ಲಿ ಕನಲ್ವರಿಯೂ, ಪಾಲೈಯಲ್ಲಿ ವೆಟ್ಟುವರಿಯೂ, ಮರುದಂಭಾಗದಲ್ಲಿ ಊರ್ಸ್ವರಿಯು ಇದ್ದವು. ಕ್ರಿ.ಶ. ೭ ನೆಯ ಶತಾಬ್ದದಿಂದ ಸಂಬಂಧ, ಅಪ್ಪರ್, ತಿರುನೀಲಕಂಠ ಮುಂತಾದ ಶಿವಭಕ್ತರು ಪಾಣ್ ನುಡಿಸುತ್ತಿದ್ದರು. ಇವರು ಕೀರ್ತನಗೋಷ್ಠಿಯಲ್ಲಿ ವೀಣೈ, ಯಾಳ್, ಕಿನ್ನರಿ, ಕುಟಲ್, ಕೊಕ್ಕರಿ (ಸಂಗು), ಜರ್ಜರಿ, ಢಕ್ಕೆ, ಮುಟವಂ, ಮೊಂದೈ, ಮೃದಂಗಂ, ಮದ್ದಲೈ, ಡಮರು, ದುಂದುಭಿ, ಭೇರಿಕ್ಕೈ, ಮುಟಸು, ಕುಡಮೂಲ, ತತ್ತಲಕಂ, ಉಡುಕ್ಕೈ, ತಾಳ ಮುಂತಾದ ವಾದ್ಯಗಳನ್ನು ಪಯೋಗಿಸುತ್ತಿದ್ದರು.

**ಜಾನಪದನೃತ್ಯ:** ಬರ್ಮದೇಶದ ಹುಡುಗಿಯರು ವೈಶಾಖ ಪೌರ್ಣಿಮೆಯ ದಿನ "ಪ್ವೇ" ಎಂಬ ನೃತ್ಯಮಾಡುವರು. ಅಸ್ಸಾಮಿನ ನಾಗರು ಸೀವಸ್ ಎಂಬ ಪೂಜಾರಿಣಿಯ ಮುಂದೆ "ಸೊಂಗ್ ಕ್ರೋಮ್, ಕೂಕ್ರಿ" ಎಂಬ ನೃತ್ಯಮಾಡುವ ಪದ್ಧತಿಯಿದೆ. ಬಂಗಾಳದಲ್ಲಿ ಸೀತಳಾ, ಮನಸಾ ದೇವತೆಗಳ ಪೂಜೆಯಲ್ಲಿ ಬ್ರಾಹ್ಮಣಿಯರು ಕೂಡ ನೃತ್ಯಮಾಡುತ್ತಿದ್ದರು. ಮದುವೆಯಾದ ಹುಡುಗಿಯರು ಭಾದ್ರಪದದಲ್ಲಿ ಇನ್ದ್ರಧ್ವಜ ಪೂಜಾಸಮಯದಲ್ಲಿ ಕುಣಿಯುವರು. ಬೌರಿ, ಡೋಮ್ ಮುಂತಾದ ಜಾತಿಗಳಲ್ಲಿ "ಕಥಿ" (ಕಟ್ಟಿಗೆ) ನೃತ್ಯವೂ, ಮುಸ್ಲಿಮರಲ್ಲಿ ಜರಿ ಅಥವಾ ಮರ್ಸಿಯಾ ನೃತ್ಯವೂ ಇರುವದು. ಗುಬಾಗುಬ್, ಕರತಾಲ್, ಡುಬ್ಕಿ ಮುಂತಾದ ವಾದ್ಯಗಳನ್ನು ಬೌಲ್ ಗಾಯಕರು ಉಪಯೋಗಿಸುವರು. ವೈಷ್ಣವರು ಖೋಲ್ ಕರತಾಳಗಳಿಂದ ಕೀರ್ತನೆಮಾಡುವರು. ಈಚೆಗೆ ವ್ರತಾಚಾರಿ ನೃತ್ಯವು ಹರಡುತ್ತಿದೆ. ಮಣಿಪುರೀ ಮತ್ತು ಕಚ್‌ಪುರಿ ನೃತ್ಯದಲ್ಲಿ ಕೃಷ್ಣಲೀಲೆಯ ಕಥೆಗಳನ್ನು ಅಭಿನಯಿಸುವರು. ಸಿಂಘ್‌ಭೂಮ್, ಸರಿಯಕೆಲ ಪ್ರಾಂತದ "ಚಾ" ನೃತ್ಯದಲ್ಲಿ ಮುಖವಾಡಗಳನ್ನು ಪಯೋಗಿಸುವರು. ಬಿಹಾರ್ ಒರಿಸ್ಸ ಸಂತಾಲಪರ್ಗಣಗಳಲ್ಲಿ ಸಂತಾಳ, ಗಾಂಡ್, ಬೈಗಜನರ ನೃತ್ಯಗಳಿವೆ. ಸಂಯುಕ್ತಪ್ರಾಂತದಲ್ಲಿ ಆಹೀರ್ ಚಮ್ಮಾರ್ ಜನರ ನೌಟಂಕಿ, ರಾಸ್, ಬ್ರತ, ಹೋಳಿ, ಕಜ್ರಿ ಎಂಬ ಕುಣಿತಗಳಿವೆ ಪಂಜಾಬಿನ ಕಥಕ್ ನೃತ್ಯವು ಪಾದವಿನ್ಯಾಸ ತಾಳಗಳನ್ನೇ ಮುಖ್ಯವೆಂದು ಗಣಿಸುತ್ತದೆ. ಈಗ ಉತ್ತರದೇಶದಲ್ಲಿರುವ "ನಾಚ್" ಈ ಕಥಕ್ ನೃತ್ಯದ ಅಭಾಸರೂಪ. ಗುಜರಾತಿನ ಗರ್ಭಾನೃತ್ಯವು ಕೃಷ್ಣನ ರಾಸಕ್ರೀಡೆಯನ್ನು ಅನುಕರಿಸುವದು. ಮಹಾರಾಷ್ಟ್ರ, ಆನ್ಧ್ರ, ಕರ್ಣಾಟಕ ದೇಶಗಳಲ್ಲಿ ಕೋಲಾಟ, ಸುಗ್ಗಿಕುಣಿತ ಮುಂತಾದುವು ಇವೆ. ತಂಜಾವೂರಿನ ಭರತನಾಟ್ಯ, ಕೇರಳದ ಕುಡಕ್ಕುಟಿ, ಕಥಕ್ಕಳಿ, ಸಿಂಹಳದ ಕುಡಕೂಟ್ಟು, ಯಕ್ಕುನ್ ನೆವ್ವತ ಎಂಬವು ಪ್ರಸಿದ್ಧ. ಜಾವ, ಬಲಿದ್ವೀಪಗಳಲ್ಲಿಯೂ ದೇವದಾಸಿಯರ ನೃತ್ಯಗಳೂ ಕಂಡುಬರುವವು. ಭರತಖಂಡದ ಸಮಸ್ತ ಭಾಗಗಳಲ್ಲಿಯೂ ಪಂಡಿತ ಪಾಮರಪ್ರಿಯವಾದ ನರ್ತನವಿಧಾನಗಳು ಕಂಡು ಬರುವವು.

**ಪುಸ್ತಕ ಲೇಖನ-ವಾಚನ:** ವೇದಗ್ರಂಥಗಳ ಲೇಖನ ವಾಚನಗಳನ್ನು ಧರ್ಮಶಾಸ್ತ್ರಗಳು ನಿಷೇಧಿಸಿದ್ದರೂ ವೇದಯುಗದಲ್ಲಿಯೇ ಲಿಪಿ, ಲೇಖನಕ್ರಮ ವಿದ್ದಿತೆಂದು ಹಿಂದೆ ಸೂಚಿಸಿದೆ. ಹರಪ್ಪ ಸಂಸ್ಕೃತಿ ಲಿಪಿಯ ವಿಷಯವಾಗಿ ಭಿನ್ನಾಭಿಪ್ರಾಯಗಳಿವೆ. ಭರತಖಣ್ಡದಲ್ಲಿ ಮುಖ್ಯವಾಗಿ ಖರೋಷ್ಠೀ ಮತ್ತು

ಬ್ರಾಹ್ಮೀ ಎಂಬ ಎರಡು ಲಿಪಿಗಳಿದ್ದವು. ಖರೋಷ್ಠಿಲಿಪಿಯು ವಾಯುವ್ಯ ಪ್ರಾಂತಗಳಲ್ಲಿ ಪ್ರಚಾರದಲ್ಲಿದ್ದಿತು. ಈ ಲಿಪಿಯ ಕ, ಜ, ದ, ನ, ಬ, ಯ, ರ, ವ, ಷ, ಸ, ಹ ಎಂಬ ಹನ್ನೊಂದು ಅಕ್ಷರಗಳು ಅರ್ಮೈಕ್ ಅಕ್ಷರಗಳನ್ನು ಹೋಲುವವು. ಅಕೆಮೀನಿಯನ್ ವಂಶದ ಕೈರಸ್ ಮತ್ತು ಡೇರಿಯಸ್ ಚಕ್ರವರ್ತಿಗಳು ಗಾಂಧಾರಪ್ರಾಂತವನ್ನು ವಶಮಾಡಿಕೊಂಡ ನಂತರ ಅರ್ಮೈಕ್ ಲಿಪಿಯು ಹರಡಿತು. ಇದರಿಂದ ಖರೋಷ್ಠಿಯು ಹುಟ್ಟಿತು. ಕ್ರಿ.ಶ. ೧೮೩೪ರಲ್ಲಿ ಪ್ರಿನ್ಸೆಪ್ ೧೭ ಅಕ್ಷರಗಳನ್ನು ಅನಂತರ ಲಾಸೆನ್, ನಾರಿಸ್, ಕನಿಂಗ್ಹ್ಯಾಮರು ಇತರ ಅಕ್ಷರಗಳನ್ನೂ ಗುರುತುಹಿಡಿದರು. ಎಡದಿಂದ ಬಲಕ್ಕೆ ಖರೋಷ್ಠಿಯನ್ನು ಬರೆಯುವರು.

ಬ್ರಾಹ್ಮೀಲಿಪಿಯ ವಿಷಯವಾಗಿ ಭಿನ್ನಾಭಿಪ್ರಾಯಗಳಿವೆ. ಪ್ರಿನ್ಸೆಪ್, ಸೆನಾರ್ಟ್, ವಿಲ್ಸನರು ಫೀನೀಷಿಯನ್-ಗ್ರೀಕ್ ಲಿಪಿಯಿಂದ ಬಂದಿತೆಂದೂ, ಹಲೆವಿ ಕ್ರಿ.ಪೂ. ೮ನೆಯ ಶತಾಬ್ದದ ಅರ್ಮೈಕ್ ಲಿಪಿಯಿಂದ ಎಂದೂ, ವಿಲಿಯಂಜೋನ್ಸ್, ಬೆನ್ಫೆ, ಪಾಟ್, ವೆಸ್ಟರ್‌ಗಾರ್ಡ್, ವೀಬರ್, ಮ್ಯಾಕ್ಸ್‌ಮೂಲರ್, ಸೈಸ್, ವ್ಹಿಟ್ನಿ ಸೆಮಿಟಿಕ್ ಲಿಪಿಯಿಂದ ಎಂದೂ; ಸ್ಟೀವೆನ್ಸನ್, ಗೋಲ್ಡ್‌ಸ್ಮಿತ್, ಬರ್ನೆಲ್, ಲಿಯೋನಾರ್ಮಂಡ್, ಐಸಾಕ್ ಟೈಲರ್, ಕ್ಲಾಡ್ ಮುಂತಾದವರು ದಕ್ಷಿಣ ಸೆಮಿಟಿಕ್ ಲಿಪಿಯಿಂದ ಎಂದೂ, ಬೂಹ್ಲರ್ ಉತ್ತರ ಸೆಮಿಟಿಕ್ ಲಿಪಿಯಿಂದ ಬ್ರಾಹ್ಮಿ ಹುಟ್ಟಿತೆಂದೂ ಊಹಿಸಿದರು.

ಸ್ವದೇಶೀಯವಾದ ಹರಪ್ಪ ಲಿಪಿಯಿಂದ ಬ್ರಾಹ್ಮಿಯು ಹುಟ್ಟಿತೆಂದು ಲಾಂಗ್ಡನ್, ಹಂಟರ್ ಅವರು ಹೇಳುವರು. ತಾನ್ತ್ರಿಕ ಬೀಜಾಕ್ಷರ, ಯನ್ತ್ರ ಲೇಖನ-ಲೇಪಗಳಿಂದ ಬ್ರಾಹ್ಮೀಲಿಪಿಯು ಹುಟ್ಟಿತೆಂದು ಡಾ|| ಶ್ಯಾಮಶಾಸ್ತ್ರಿಗಳ ಅಭಿಪ್ರಾಯ. ಡಿ. ಆರ್. ಭಂಡಾರ್ಕರ್, ಯಾಸ್ದಾನಿ ಮುಂತಾದವರು ಶಿಲಾಯುಗದ ಗುರುತುಗಳಿಂದ ಹುಟ್ಟಿತೆಂದು ಹೇಳುವರು. ಬೂಹ್ಲರನು ಮೋಅಬ್ ಜನಾಂಗದ ರಾಜನಾದ ಮೆಸ (ಕ್ರಿ.ಪೂ. ೮೫೦) ಎಂಬವನ ಶಾಸನದಲ್ಲಿ ಕಂಡುಬರುವ ಅಕ್ಷರಗಳಿಂದ ಬ್ರಾಹ್ಮೀಲಿಪಿಯು ಹುಟ್ಟಿತೆಂದು ತೋರಿಸಲು ಮಾಡಿದ ಪ್ರಯತ್ನಗಳು ಸಮರ್ಪಕವಾಗಿಲ್ಲ. ಬ್ರಾಹ್ಮೀಲಿಪಿಯ ಶಾಸನಗಳಲ್ಲಿ ಕ್ರಿ.ಪೂ. ೭ನೆಯ ಶತಾಬ್ದದ ಶಾಸನಗಳೇ ಈಗ ಸಿಕ್ಕಿರುವದರಲ್ಲಿ ಪ್ರಾಚೀನ.[17] ಅಶೋಕನ ಕಾಲಕ್ಕೆ ಬ್ರಾಹ್ಮೀಲಿಪಿಯು ವಾಯುವ್ಯ ಪ್ರಾಂತಗಳನ್ನು ಬಿಟ್ಟು ಮಿಕ್ಕ ಎಲ್ಲಾ ಭಾಗಗಳಲ್ಲಿಯೂ ವ್ಯಾಪಿಸಿದ್ದಿತು.

[17] *J. B. O. R. S.*, 1930.

ಅಶೋಕಲಿಪಿಯಲ್ಲಿ ಉತ್ತರ, ದಕ್ಷಿಣಗಳೆಂಬ ಭೇದಗಳಿವೆ. ಉತ್ತರ ಅಶೋಕ ಲಿಪಿಯಿಂದ ಗುಪ್ತಲಿಪಿ, ಕುಟಿಲಲಿಪಿ, ನಾಗರೀ, ಶಾರದಾ, ಬಂಗಾಳಿ, ಟಿಬೆಟ್ ಲಿಪಿಗಳೂ, ದಕ್ಷಿಣ ಲಿಪಿಯಿಂದ ಗುಹಾಲಿಪಿ, ಪಶ್ಚಿಮೀ ಮಧ್ಯ ಪ್ರದೇಶೀ, ತೆಲುಗೂ ಕನ್ನಡ, ಪಲ್ಲವ-ಗ್ರನ್ಥ, ವಟ್ಟೆಲುತ್ತು ಮುಂತಾದವೂ ಹುಟ್ಟಿದವು. ಕೆಲವರು ಲಿಪಿಗಳ ವಂಶವೃಕ್ಷವನ್ನು ಹೀಗೆ ತೋರಿಸುವರು.

ಪ್ರಾಚೀನ ಡೆಮೋಟಿಕ್




ಒಕ್ಕಲ್ ದಾಕ್ಷಿಣಾತ್ಯ ಲಿಪಿಗಳ ಬೆಳವಣಿಗೆಯನ್ನು ಹೀಗೆ ತೋರಿಸುವನು:

ದಕ್ಷಿಣ ಅಶೋಕಲಿಪಿ



ಕನ್ನಡ-ತೆಲಗು ಲಿಪಿಯಲ್ಲಿ ೭ನೆಯ ಶತಾಬ್ದದ ವರೆಗೂ ಪೇಟಿಕಶಿರ (Box-head) ಕಂಡುಬರುವದು. ಣ ಸುರುಳಿಯಾಗಿಲ್ಲ. ತ ವೃತ್ತಾಕಾರವನ್ನು ಪಡೆಯುತ್ತಾಬಂದಿದೆ. ಯ, ಮ, ತ, ನ ಸುರಳಿಹೊಂದಿವೆ. ಕ್ರಿ.ಶ. ೬೫೦-೯೫೦ ರಲ್ಲಿ ಈ ಹೆಚ್ಚು ಪ್ರಚಾರದಲ್ಲಿದ್ದಿತು. ಖ, ಚ, ದ, ಗುಂಡಾಗುತ್ತ

**ಕನ್ನಡಲಿಪಿಯ ಬೆಳವಣಿಗೆ. 1**

| | ಅ ಆ ಇ ಈ ಉ ಊ ಋ ೠ ಌ ಎ ಏ ಐ ಒ ಓ ಔ ಅಂ ಅಃ ಕ ಖ ಗ ಘ ಙ ಚ ಛ ಜ ಝ |
|---|---|
| ಕ್ರಿ.ಪೂ. ೩೦೦. | [illegible] |
| ಕ್ರಿ.ಶ. ೨೦೦ (ಶಾತಕರ್ಣಿ) | [illegible] |
| " ೨೦೦. (ಪಲ್ಲವ) | [illegible] |
| " ೪೦೦. | [illegible] |
| " ೫೦೦. | [illegible] |
| " ೬೦೦. | [illegible] |
| " ೭೦೦. | [illegible] |
| " ೮೦೦. | [illegible] |
| " ೧೨೦೦. | [illegible] |
| " ೧೫೦೦. | [illegible] |

ಬಂದವು. ವ್ಯಂಜನಗಳ ಕೆಳಭಾಗದಲ್ಲಿ ಸ್ವರಚಿಹ್ನೆಗಳು ಅನೇಕಸಲ ಕಂಡುಬರುವವು. ಕೊನೆಯ ಮ, ನ ಗಳ ಹಿಂದೆ ಊರ್ಧ್ವರೂಪದ ವಿರಾಮ ರೇಖೆ ಇರುತ್ತದೆ. ಹನ್ನೊಂದನೆಯ ಶತಾಬ್ದದಿಂದ ಜ, ಬ, ವ ಗಳ ಶಿರೋಭಾಗವೂ ಮಕಾರದ ಸುರಳಿ, ಭಕಾರದ ಬಲಭಾಗಗಳು ಕವಲೊಡದಂತೆ ಇರುವವು. ಪ್ರಾಚೀನ ಹಳಗನ್ನಡಲಿಪಿಯಲ್ಲಿ ತಲೆಕಟ್ಟಿಲ್ಲ. ಕ್ರಮೇಣ ಮೇಲ್ಗಡೆ ಅಡ್ಡಗೀಟು ಕಂಡುಬರುವದು. ಅನುಸ್ವಾರಚಿಹ್ನೆಯನ್ನು ಮೊದಲು ಅಕ್ಷರದಮೇಲೂ ಅನಂತರ ಪಕ್ಕದಲ್ಲಿಯೂ ಬರೆಯುತ್ತಿದ್ದರು. ಮತ್ತು ಅನುನಾಸಿಕ ಸಹಿತ ವ್ಯಂಜನಾಕ್ಷರವನ್ನೂ ಬರೆಯುತ್ತಿದ್ದರು. ಅರ್ಕಾವತ್ತೇ ಹೊರತು ರೇಫಕ್ಕೆ

ಒತ್ತಕ್ಷರ ಉಪಯೋಗಿಸುತ್ತಿರಲಿಲ್ಲ. ಸಜಾತೀಯ ಸಂಯುಕ್ತಾಕ್ಷರಗಳು ಪ್ರಾಯಃ ದ್ವಿತ್ವಾಕ್ಷರಗಳಾಗಿದ್ದವು. ವಿಸರ್ಗದ ಮುಂದೆ ಕ, ಖ ಅಕ್ಷರಗಳಿಗೆ ಬದಲು ಷ, ಪ, ಫ ಗಳಿಗೆ ಶಕಟರೇಫವನ್ನು ವಿಸರ್ಗಕ್ಕೆ ಆದೇಶವಾಗಿ

**ಕನ್ನಡ ಲಿಪಿಯ ಬೆಳವಣಿಗೆ. ೭**

| | ಇ | ಟ | ಠ | ಡ | ಢ | ಣ | ತ | ಥ | ದ | ಧ | ನ | ಪ | ಫ | ಬ | ಭ | ಮ | ಯ | ರ | ಲ | ವ | ಶ | ಷ | ಸ | ಹ | ಳ |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ಕ್ರಿ. ಪೂ. ೩೦೦. (ಉತ್ತರ) | | | | | | | | | | | | | | | | | | | | | | | | | |
| ಕ್ರಿ. ಪೂ. ೨೦೦ (ದಕ್ಷಿಣ) | | | | | | | | | | | | | | | | | | | | | | | | | |
| " ೨೦೦. | | | | | | | | | | | | | | | | | | | | | | | | | |
| " ೪೦೦. | | | | | | | | | | | | | | | | | | | | | | | | | |
| " ೫೦೦. | | | | | | | | | | | | | | | | | | | | | | | | | |
| " ೬೦೦. | | | | | | | | | | | | | | | | | | | | | | | | | |
| " ೭೦೦ | | | | | | | | | | | | | | | | | | | | | | | | | |
| " ೮೦೦. | | | | | | | | | | | | | | | | | | | | | | | | | |
| " ೧೨೦೦ | | | | | | | | | | | | | | | | | | | | | | | | | |
| " ೧೫೦೦. | | | | | | | | | | | | | | | | | | | | | | | | | |

ಬರೆಯುತ್ತಿದ್ದರು. ಇವು ಜಿಹ್ವಾಮೂಲೀಯ (ವಜ್ರಾಕೃತಿ), ಉಪಧ್ಮಾನೀಯ (ಗಜಕುಮ್ಭ) ಚಿಹ್ನೆಗಳು. ಪೂರ್ವದಲ್ಲಿ ಸಾಧಾರಣವಾಗಿದ್ದ ಹಳಗನ್ನಡ ಅಕ್ಷರಗಳು ಈಗ ಒತ್ತುಗಳಲ್ಲಿ ಕಾಣಬಹುದು. ಕ್ರಿ. ಶ. ೧೨ನೆಯ ಶತಾಬ್ದದಿಂದ ತೆಲುಗು ಕನ್ನಡ ಲಿಪಿಗಳು ಬೇರೆಯಾದವು.

ಬರೆಯಲು ತಾಳಪತ್ರ, ಭೂರ್ಜಪತ್ರ, ಬಟ್ಟೆ, ಹಲಗೆ, ರೇಷ್ಮೆ ಬಟ್ಟೆ, ಚರ್ಮ, ಕಲ್ಲು, ಇಟ್ಟಿಗೆಗಳನ್ನು ಉಪಯೋಗಿಸುತ್ತಿದ್ದರು. ಶ್ರೀತಾಳದ ಗರಿಗಳ ಮೇಲೆ ಕಂಠದಿಂದ ಗೀಚುವದು (ಲೇಖ) ಅಥವಾ ಬಟ್ಟೆ ಹಲಗೆಗಳ ಮೇಲೆ ಬಣ್ಣ ಬಳಿಯುವದು (ಲೇಪಸ, ಲಿಪಿ) ಪದ್ಧತಿಯಾಗಿದ್ದಿತು. ಕ್ರಿ.ಶ. ೨ನೆಯ ಶತಾಬ್ದದಲ್ಲಿ ಬರೆದ ಓಲೆಗರಿಗಳು ಚೈನೀಸ್ ತುರ್ಕಸ್ತಾನದಲ್ಲಿ ಸಿಕ್ಕಿವೆ.

"ಮೆಕಾರ್ಟ್ನೆ" ಹಸ್ತಪ್ರತಿ, ಜಪಾನಿನಲ್ಲಿರುವ ಆರನೆಯ ಶತಾಬ್ದದ ಪ್ರಜ್ಞಾಪಾರಮಿತ ಸೂತ್ರದ ಗ್ರಂಥ. ನೇಪಾಳದಲ್ಲಿರುವ ಕ್ರಿ. ಶ. ೭ ನೆಯ ಶತಾಬ್ದದ ಸ್ಕಾಂದಪುರಾಣ ಪ್ರತಿಗಳು ಓಲೆಗರಿಯ ಮೇಲೆ ಬರೆಯಲ್ಪಟ್ಟಿವೆ. ಕಾಶ್ಮೀರ ಪಂಜಾಬ್ ಪ್ರಾಂತದಲ್ಲಿ ಭೂರ್ಜಪತ್ರವನ್ನು ವಿಶೇಷವಾಗಿ ಉಪಯೋಗಿಸುತ್ತಿದ್ದರು. ಖರೋಷ್ಠಿಲಿಪಿಯಲ್ಲಿ ಬರೆದ ಭೂರ್ಜಪತ್ರದ "ಧಮ್ಮಪದ" (ಕ್ರಿ.ಶ. ೨-೩ ಶತಾಬ್ದ), "ಸಂಯುಕ್ತಾಗಮ-ಸೂತ್ರ" (ಕ್ರಿ.ಶ. ೪ ನೆಯ ಶತಾಬ್ದ), "ಬೋವರ್" ಹಸ್ತಲೇಖನ (೬ ನೆಯ ಶತಮಾನ) "ಬಕ್ಷಾಲೀ" ಹಸ್ತಲೇಖನ (೮ ನೆಯ ಶತಮಾನ) ಪ್ರಾಚೀನವಾದುವು. ಬಟ್ಟೆಗಳ ಮೇಲೆ ಕಪ್ಪು ಹಚ್ಚಿ ಬಳಪದಿಂದ ಬರೆದು "ಕಡಿತಗಳನ್ನು ಮಾಡುತ್ತಿದ್ದರು. ಶಾಸನಗಳನ್ನು ಕಲ್ಲು, ತಾಮ್ರ, ಚಿನ್ನ, ಬೆಳ್ಳಿ, ತಗಡು, ಮುಂತಾದವುಗಳ ಮೇಲೆ ಬರೆಯುತ್ತಿದ್ದರು. ಚೀಣದೇಶದಲ್ಲಿ ಬೊಂಬಿನಿಂದ ಕ್ರಿ.ಶ. ೨ ನೆಯ ಶತಾಬ್ದದಲ್ಲಿಯೇ ಕಾಗದವನ್ನು ಮಾಡುತ್ತಿದ್ದರು. ಚೀಣದಿಂದ ಕಾಗದವು ಭರತಖಂಡಕ್ಕೂ ಕ್ರಿ.ಶ. ೭ ನೆಯ ಶತಾಬ್ದಕ್ಕೆ ಹಿಂದೆಯೇ ಬಂದಿದ್ದಿತೆಂದು ಊಹಿಸುವದಕ್ಕೆ ಅವಕಾಶವಿದೆ. ಇತ್ಸಿಂಗನು ಭಾರತೀಯರಲ್ಲಿ ಕಾಗದವು ಹೆಚ್ಚಾಗಿ ಉಪಯೋಗದಲ್ಲಿರಲಿಲ್ಲವೆಂದೂ ಆದರೆ ಕೆಲವರು ಕಾಗದದ "ಪುಸ್ತಕ"ಗಳನ್ನು ಹೊಂದಿದ್ದರೆಂದೂ ಹೇಳುವನು. ಆದುದರಿಂದ ಅರಬ್ಬೀಯರ "ಕಾಗಜ್" ಬರುವದಕ್ಕೆ ಮುಂಚೆಯೇ ಕಾಗದವು ಭಾರತೀಯರಿಗೆ ಪರಿಚಿತವಾಗಿದ್ದಿತು.

**ಗಮಕಕಲೆ:** ವೇದಯುಗದಲ್ಲಿ ಅಶ್ವಮೇಧಕಾಲದಲ್ಲಿ ಪಾರಿಪ್ಲವಾರ್ಥವಾಗಿ ಪುರಾಣಕಥೆಗಳನ್ನು ಹೇಳುವ ಪದ್ಧತಿ ಇದ್ದಿತು. ವನ್ದಿ, ಸೂತ, ಮಾಗಧ ಮುಂತಾದವರು ತಮ್ಮ ಪೋಷಕರಾದ ರಾಜರ ವಂಶಾನುಚರಿತೆಗಳನ್ನು ಹಾಡುತ್ತಿದ್ದರು. ಬೌದ್ಧ ಜೈನ ಸಂಘಗಳಲ್ಲಿ ಭಾಣಕರೆಂಬುವರು ಗಮಕಕಲೆಯನ್ನು ಅಭ್ಯಾಸಮಾಡುತ್ತಿದ್ದರು. ಕವಿಗಳು ತಮ್ಮ ಕವನಗಳನ್ನು ಶ್ರುತಪಡಿಸಲು ಗಮಕಿಗಳಾಗಿಯೂ ಇರುತ್ತಿದ್ದರು. ಕರ್ಣಾಟಕದಲ್ಲಿ ಜೈನಾಚಾರ್ಯರಾದ ಸಮನ್ತಭದ್ರ, ವಾದಿರಾಜ ಮುಂತಾದವರು "ಕವಿ ಗಮಕಿ ವಾದಿ ವಾಗ್ಮಿಪ್ರವರ"ರಾಗಿದ್ದರೆಂದು ಅವರ ಪ್ರಶಸ್ತಿಗಳಿಂದ ತಿಳಿದು ಬರುವದು. ರಾಜಶೇಖರನು ಕಾವ್ಯಮೀಮಾಂಸೆಯಲ್ಲಿ ಕರ್ಣಾಟಕರು ಬಹು ಅಭಿಮಾನ-ಹುಮ್ಮಸ್ಸಿನಿಂದ ಕಾವ್ಯವಾಚನೆ ಮಾಡುತ್ತಾರೆಂದು ಹೇಳಿರುವನು.

ರಸಃಕೋಽಪ್ಯಸ್ತು ಕಾಪ್ಯಸ್ತು ರೀತಿಃಕೋಽಪ್ಯಸ್ತು ವಾಗುಣಃ |
ಪ್ರಾಯೇಣ ಸರ್ವಕರ್ಣಾಟಾಃ ಟಙ್ಕಾರೋತ್ತರಪಾಠಿನಃ ||



ಕಾಕುತ್ಸ್ಥವರ್ಮನ ತಾಳಗುಂದ ಶಾಸನ

ಕರ್ಣಾಟಕದಲ್ಲಿ ಜೈಮಿನೀಭಾರತ, ಗದುಗುಭಾರತ, ಬಸವಪುರಾಣ, ತೊರವೆ ರಾಮಾಯಣ ಮುಂತಾದ ಗ್ರಂಥಗಳ ಪಠನೆಯೂ, ಆನ್ಧ್ರದೇಶದಲ್ಲಿ ತೆಲುಗು ಭಾರತ, ಭಾಗವತ ರಂಗನಾಥ ರಾಮಾಯಣಗಳ ವಾಚನೆಯೂ, ತಮಿಳು ದೇಶದಲ್ಲಿ ಪೆರಿಯಪುರಾಣ, ಕಂಬರಾಮಾಯಣ ಇತ್ಯಾದಿಗಳ ಪಠನೆಯೂ, ಹಿಂದಿಯಲ್ಲಿ ತುಲಸಿದಾಸ ರಾಮಾಯಣ, ಬಂಗಾಳದಲ್ಲಿ ಚೈತನ್ಯಭಾಗವತ, ದೇವೀಭಾಗವತ, ಸಿಕ್ಕರಲ್ಲಿ ಜಾಪ್‌ಜೀ ಗ್ರಂಥಸಾಹೆಬ್, ಮುಸ್ಲಿಮರಲ್ಲಿ ಕುರಾನ್ ಗ್ರಂಥಗಳ ಪಠನೆಯೂ ಗಮಕಕಲೆಗೆ ನಿದರ್ಶನಗಳಾಗಿವೆ.

**ಚಿತ್ರಲೇಖನ:** ಬದರಿಕಾಶ್ರಮದಲ್ಲಿ ನಾರಾಯಣಋಷಿಯು ಉರ್ವಿ (ಭೂಮಿ)ಯ ಮೇಲೆ ಮಾವಿನ ರಸದಿಂದ ಸ್ತ್ರೀರೂಪವನ್ನು ಬರೆದು ಊರ್ವಶಿಯನ್ನು ಸೃಷ್ಟಿಸಿದನೆಂದೂ, ಅನಂತರ ನಾರಾಯಣಋಷಿಯು ಈ ವಿದ್ಯೆಗಾಗಿ ಚಿತ್ರಸೂತ್ರಗಳನ್ನು ರಚಿಸಿ ವಿಶ್ವಕರ್ಮನಿಗೆ ಬೋಧಿಸಿದನೆಂದೂ ಕಲೆಗಳಲ್ಲೆಲ್ಲ ಉತ್ತಮವಾದುದು ಚಿತ್ರಲೇಖನೆಯೆಂದೂ ಮಾರ್ಕಂಡೇಯ ಪುರಾಣದಲ್ಲಿ ಹೇಳಿದೆ.[18] ಚಿತ್ರಕ್ಕೆ ರೂಪಭೇದ, ಪ್ರಮಾಣ, ಭಾವ, ಲಾವಣ್ಯಯೋಜನಾ, ಸಾದೃಶ್ಯ, ವರ್ಣಿಕಾಭಂಗಗಳೆಂಬುವು ಆರು ಅಂಗಗಳು.[19] ರಸಿಕರು ರೇಖಾ ವಿನ್ಯಾಸವನ್ನೇ ಪ್ರಶಂಸಿಸುವರು.[20]

ಚಿತ್ರಲೇಖನ ವಿಧಾನದಲ್ಲಿ ನಾಲ್ಕು ಅವಸ್ಥೆಗಳಿವೆ.[21] (೧) ಧೌತ—ಗೋಡೆಗೆ ಸುಣ್ಣ ಬಳಿಯುವದು ಅಥವಾ ಬಿಳಿ ಬಟ್ಟೆಯನ್ನು ತಯಾರಿಸುವದು. (೨) ಘಟ್ಟಿತ—ಅನ್ನವನ್ನು ಲೇಪಿಸುವದು. (೩) ಲಾಂಛಿತ—ಹೊರಗಿನ ರೇಖೆಯನ್ನು ಇದ್ದಿಲಿನಿಂದ ಬರೆಯುವದು (Charcoal Outline), (೪) ರಂಜಿತ ಬಣ್ಣ ತುಂಬುವದು. ವಿಷ್ಣುಧರ್ಮೋತ್ತರದಲ್ಲಿ ಚಿತ್ರಗಳನ್ನು ಸತ್ಯ (Realistic), ವೈಣಿಕ (ಡಂಭ, ಆಡಂಬರಯುಕ್ತ, Lyrical), ನಾಗರ (ಗುಂಡಾದ ಚೌಕಟ್ಟಿನಲ್ಲಿ ಅಲ್ಪಾಲಂಕಾರಯುಕ್ತವಾದುದು), ಮತ್ತು ಮಿಶ್ರ

---

[18] ಕಲಾನಾಂಪ್ರವರಂಚಿತ್ರಂ ಧರ್ಮಕಾಮಾರ್ಥಮೋಕ್ಷದಮ್ |
ಮಾಂಗಲ್ಯಂ ಪ್ರಥಮಂ ವೈತದ್‌ಗೃಹೇಯತ್ರಪ್ರತಿಷ್ಠಿತಮ್ ||

[19] ರೂಪಭೇದಾಃ ಪ್ರಮಾಣಾನಿ ಭಾವಲಾವಣ್ಯಯೋಜನಾ |
ಸಾದೃಶ್ಯಂ ವರ್ಣಿಕಾಭಂಗಃ ಇತಿಚಿತ್ರಂ ಷಡಂಗಕಮ್ ||
ಕಾಮಸೂತ್ರ-ಯಶೋಧರವ್ಯಾಖ್ಯಾ

[20] ರೇಖಾಂ ಪ್ರಶಂಸನ್ತ್ಯಾಚಾರ್ಯಾಃ ವರ್ತನಾಂಚ ವಿಚಕ್ಷಣಾಃ |
ಸ್ತ್ರಿಯೋಭೂಷಣಮಿಚ್ಛನ್ತಿ ವರ್ಣಾಢ್ಯಮಿತರೇಜನಾಃ ||

[21] ವಿದ್ಯಾರಣ್ಯರ ಪಂಚದಶೀ—ಚಿತ್ರದೀಪಿಕಾ.

ಎಂದು ನಾಲ್ಕು ವಿಧವಾಗಿ ವಿಂಗಡಿಸಿದೆ. ಸೋಮೇಶ್ವರನ ಅಭಿಲಷಿತಾರ್ಥ ಚಿನ್ತಾಮಣಿಯಲ್ಲಿ ವಿದ್ಧ—ಅವಿದ್ಧ, ಅಥವಾ ರಸಚಿತ್ರ, ಧೂಳಿಚಿತ್ರ, ಭಾವ ಚಿತ್ರಗಳೆಂಬ ಭೇದಗಳು ಉಕ್ತವಾಗಿವೆ. ನಾರದಶಿಲ್ಪದಲ್ಲಿ ಭೌಮಿಕ, ಭಿತ್ತಿ, ಭಾವಚಿತ್ರಗಳೂ, ಬರೆಯುವದರಲ್ಲಿ ಪತ್ರರೇಖೆ, ಹೈರಿಕ (ಸೂಕ್ಷ್ಮರೇಖೆ), ಬಿನ್ದುಜ ಮತ್ತು ಸ್ತಮ್ಭನ (Fixing) ರೀತಿಗಳ ವರ್ಣನೆಯಿದೆ. ಮೊದಲು ರೇಖಾಪಾತ, ಅನಂತರ ವರ್ತ್ತನ, ಆಮೇಲೆ ಅಲಂಕಾರ, ಕೊನೆಗೆ ಬಣ್ಣ— ಇದು ಚಿತ್ರಲೇಖನೆಯ ಕ್ರಮ. ಗೃಹಗಳಲ್ಲಿಟ್ಟುಕೊಳ್ಳುವ ಚಿತ್ರಗಳು ಶೃಂಗಾರ ಹಾಸ್ಯ, ಶಾಂತರಸಗಳನ್ನು ಮಾತ್ರ ಸೂಚಿಸಬೇಕು. ದೇವಾಲಯಗಳ ಪ್ರಾಕಾರ ಮುಂತಾದ ಬಹಿರಂಗ ಸ್ಥಳಗಳಲ್ಲಿ ಕುಡ್ಯ ಅಥವಾ ಭಿತ್ತಿ ಚಿತ್ರಗಳು ಸರ್ವರಸಗಳನ್ನೂ ತೋರಿಸಬಹುದು.

ಉತ್ತಮ ಚಿತ್ರಕಾರನು ಸಾದೃಶ್ಯಕರಣದಲ್ಲಿ ಕುಶಲನಾಗಿರಬೇಕು. ಅಲೆ, ಬೆಂಕಿಯ ಜ್ವಾಲೆ, ಹೊಗೆ, ಧ್ವಜ, ಮೋಡ ಮುಂತಾದುವುಗಳಿಗೆ ಗಾಳಿ ಯಿಂದಾದ ಚಲನೆಯನ್ನು ತೋರಿಸುವವನೂ, ಸಜೀವಿ ನಿರ್ಜೀವಿಗಳನ್ನೂ, ಎತ್ತರ ತಗ್ಗುಗಗಳನ್ನು ಕೌಶಲ್ಯದಿಂದ ತೋರಿಸಬಲ್ಲವನೇ ಚಿತ್ರವಿತ್ ಎನಿಸಿ ಕೊಳ್ಳುವನು.[22] ಪುರುಷಜಾತಿಗಳಲ್ಲಿ ಹಂಸನು ೧೦೮ ಅಂಗುಳ, ಭದ್ರನು ೧೦೬, ಮಾಲವ್ಯನು ೧೦೪, ರುಚಕನು ೧೦೦, ಶಶಕನು ೯೬ ಅಂಗುಳ ಪ್ರಮಾಣದ ಆಕಾರ. (ವರಾಹಮಿಹಿರನು ಈ ಜಾತಿಗಳಿಗೆ ಕ್ರಮವಾಗಿ ೧೧೧, ೧೦೮, ೧೦೫, ೧೦೨, ೯೯ ಅಂಗುಳಗಳೆಂದು ಹೇಳುವನು.) ಮಾರ್ಕಣ್ಡೇಯ ಪುರಾಣದಲ್ಲಿ ಮಸ್ತಕವು ೧೨ ಅಂಗುಳ ಎತ್ತರವಿರಬೇಕೆಂದು ಹೇಳಿದೆ. ಮಹಾಪುರುಷರಿಗೆ ಜಾಲಪಾದದಂತೆ ಹಸ್ತಗಳು, ಭ್ರೂಮಧ್ಯದಲ್ಲಿ ಊರ್ಣ ಅಥವಾ ಆವರ್ತ, ಅಂಗೈಗಳಲ್ಲಿ ಮೂರು ರೇಖೆ, ಮತ್ತು ದಕ್ಷಿಣಾ ವರ್ತವಾದ ಮುಂಗುರುಳು ಇದ್ದಂತೆ ತೋರಿಸಬೇಕು. ಕಣ್ಣುಗಳಲ್ಲಿ ಧನುಸ್ (೩ ಯವಪ್ರಮಾಣ), ಮತ್ಸ್ಯೋದರ (೪ ಯವ), ಉತ್ಪಲಪತ್ರ (೬ ಯವ), ಪದ್ಮಪತ್ರ (೯ ಯವ), ಶಶಾಕೃತಿ (೧೦ ಯವ) ಎಂಬ ಐದು ಭೇದಗಳಿವೆ. ಯೋಗಿಗಳಿಗೆ ಕಣ್ಣು ಧನುಸ್, ಕಾಮುಕರ ಮತ್ತು ಸ್ತ್ರೀಯರಿಗೆ ಮತ್ಸ್ಯೋದರ, ನಿರ್ವಿಕಾರ ಚಿತ್ತರ ಕಣ್ಣು ಉತ್ಪಲ, ತ್ರಸ್ತರ ರೋದಿಸುವವರ ಕಣ್ಣು ಪದ್ಮ,

[22] ತರಂಗಾಗ್ನಿ ಶಿಖಾಧೂಮ ವೈಜಯನ್ತ್ಯಂಬರಾದಿಕವ್ | ವಾಯುಗತ್ಯಾ ಲಿಖೇ ದ್ಯಸ್ತು ವಿಜ್ಞೇಯಸ್ಸ ತು ಚಿತ್ರವಿತ್ || ಸುಪ್ತಞ್ಚ ಚೇತನಾಯುಕ್ತಂ ಮೃತಂಚೈತನ್ಯ ವರ್ಜಿತಂ | ನಿಮ್ನೋನ್ನತಭಾಗಂಚಯಃಕರೋತಿ ಸಚಿತ್ರವಿತ್ || ಚಿತ್ರೇ ಸಾದೃಶ್ಯಕರಣಂ ಪ್ರಧಾನಂ ಪರಿಕೀರ್ತಿತಮ್ ||

ರೋಷ, ಭಯ ಸೂಚಿಸುವುದಕ್ಕೆ ಶಶಾಕೃತಿ ಪ್ರಮಾಣಗಳಲ್ಲಿರಬೇಕು. ದೇವತೆಗಳ ಕಣ್ಣನ್ನು ಪದ್ಮಪ್ರಮಾಣದಲ್ಲಿ ಶಾಂತವಿಶಾಲವಾಗಿ, ಕೃಷ್ಣವರ್ಣದ ತಾರೆಯುಳ್ಳಂತೆ ಚಿತ್ರಿಸಬೇಕು. ಋಷಿ, ಗನ್ಧರ್ವ, ದಾನವ, ಪುರೋಹಿತ, ಮಂತ್ರಿ, ವಿದ್ಯಾಧರ ದಂಪತಿಗಳನ್ನು ಭದ್ರಪುರುಷಪ್ರಮಾಣದಲ್ಲಿಯೂ; ಕುಲಸ್ತ್ರೀ, ಕಿನ್ನರ, ಸರ್ಪ, ರಾಕ್ಷಸರನ್ನು ಮಾಳವ್ಯಪ್ರಮಾಣದಲ್ಲಿಯೂ; ಯಕ್ಷ, ನಟೀ ಮುಂತಾದವರನ್ನು ರುಚಕಪ್ರಮಾಣದಲ್ಲಿಯೂ; ಪ್ರಸಿದ್ಧ ಪುರುಷರನ್ನು ಶಶಕಪ್ರಮಾಣದಲ್ಲಿಯೂ ಚಿತ್ರಿಸಬೇಕು. ಭೋಜನ ಸಮ ರಾಂಗಣಸೂತ್ರಧಾರ, ಸೋಮೇಶ್ವರನ ಅಭಿಲಷಿತಾರ್ಥಚಿನ್ತಾಮಣಿ, ವಿಷ್ಣು ಧರ್ಮೋತ್ತರ, ಶುಕ್ರನೀತಿ, ರತ್ನಾಕರನ ಹರವಿಜಯ, ವಿದ್ಯಾರಣ್ಯರ ಪಂಚ ದಶೀ ಮುಂತಾದ ಗ್ರಂಥಗಳಲ್ಲಿ ಚಿತ್ರಲೇಖಸಪ್ರಕಾರದ ವರ್ಣನೆಯಿದೆ.

ವೇದಯುಗದಲ್ಲಿ ಯಜ್ಞೋಪಕರಣಗಳಾದ ಕುಂಭ, ಯೂಪ, ವೇದಿ ಮುಂತಾದವುಗಳ ಲೇಪನದಿಂದಲೂ ತಾನ್ತ್ರಿಕರ ಮಾತೃಕಾಪೂಜೆಯಿಂದಲೂ ಚಿತ್ರಕಲೆಯು ಬೆಳೆಯಿತು. ಹರಪ್ಪ ಸಂಸ್ಕೃತಿಯ ಕುಂಭಗಳ ಮೇಲೆ ಬಹು ವರ್ಣಗಳೂ (Poly-chrome) ಚಿತ್ರಗಳೂ, ರೇಖಾವಿನ್ಯಾಸಗಳೂ (Geometrical Patterns) ಕಂಡುಬರುವವು. ಮಾತೃದೇವತಾವಿಗ್ರಹಗಳಿಗೆ ಪ್ರಾಯಃ ಬಣ್ಣಗಳನ್ನು ಬಳಿಯುತ್ತಿದ್ದರು. ಆದರೆ ಈ ಸಂಸ್ಕೃತಿಯಲ್ಲಿ ಕುಡ್ಯಚಿತ್ರ ಪಟಚಿತ್ರಗಳು ಸಿಕ್ಕಿಲ್ಲ. ಶಿಲಾಯುಗದ ಅನಾಗರಿಕರ ಚಿತ್ರಗಳು ರಾಯ್ಘರ್, ಸಿಂಗನ್‌ಪುರ್, ಮಿರ್ಜಾಪುರ್, ಬಳ್ಳಾರಿ ಮುಂತಾದ ಅನೇಕ ಸ್ಥಳಗಳಲ್ಲಿ ಗುಹೆಗಳಲ್ಲಿಯೂ ಬಂಡೆಗಳ ಮೇಲೂ ಕಂಡುಬರುವವು. ರಾಮ್‌ಘರ್ ಗುಹೆ ಗಳ ಚಿತ್ರಗಳು ಕ್ರಿ.ಪೂ. ೨ನೆಯ ಶತಾಬ್ದಕ್ಕೆ ಸೇರಿದವು. ಈ ಗುಹೆಗಳ ಮುಂದೆ ಅರ್ಧಚನ್ದ್ರಾಕಾರವಾದ ಬಹಿರಂಗ (Outdoor) ನಾಟಕಶಾಲೆಯು ಇದ್ದಿತೆಂದೂ ನಟಿಯರು ಕೆಲವು ಗುಹೆಗಳನ್ನು ವೇಷಧಾರಣೆಗಾಗಿ (Green Room) ಉಪಯೋಗಿಸುತ್ತಿದ್ದರೆಂದೂ ಇಲ್ಲಿನ ಶಾಸನಗಳಿಂದ ತಿಳಿದುಬರುವದು.

ಅಜಂತಾ (ಅಜೀನ್ಠ) ಗುಹಾಲಯಗಳು ವಾಘ್‌ಕಣಿವೆಯಲ್ಲಿ ಮನೋಹರ ವಾದ ಪ್ರಕೃತಿಸನ್ನಿವೇಶದಲ್ಲಿವೆ. ಕ್ರಿ.ಪೂ. ೨ನೆಯ ಶತಾಬ್ದದಿಂದಲೇ ಇಲ್ಲಿ ಗುಹೆಗಳನ್ನು ಕೊರೆಯಲು ಆರಂಭವಾಯಿತು. ಶಾತವಾಹನ, ವಾಕಾಟಕ, ಬಾದಾಮಿಯ ಚಾಳುಕ್ಯರಾಜರು ಬೌದ್ಧಭಿಕ್ಷುಗಳಿಗಾಗಿ ಚೈತ್ಯ, ವಿಹಾರ ಗಳನ್ನು ಮಾಡಿಸಿ ಚಿತ್ರಗಳಿಂದ ಅಲಂಕರಿಸಿರುವರು. ಇಲ್ಲಿದ್ದ ಬೌದ್ಧಭಿಕ್ಷುಗಳೇ ಚಿತ್ರಕಾರರಾಗಿದ್ದರೆಂಬುದಕ್ಕೆ ಆಧಾರವಿಲ್ಲ. ಬಹುಶಃ ನಾನಾ ದೇಶಗಳ ಶಿಲ್ಪಿಗಳನ್ನೂ ಚಿತ್ರಕಾರರನ್ನೂ ಕರೆಯಿಸಿಕೊಂಡಿದ್ದರೆಂಬುದಕ್ಕೆ ಅವಕಾಶವಿದೆ.

ಇಲ್ಲಿನ ಚಿತ್ರಗಳಲ್ಲಿ ಮೂಲವರ್ಣಗಳಾದ (Primary Colours) ಬಿಳುಪು, ಕೆಂಪು, ಧೂಮ್ರ, ಹಸರು, ನೀಲವರ್ಣಗಳನ್ನು ಪಯೋಗಿಸಿರುವರು. ಅತ್ಯಂತ ಪ್ರಾಚೀನಗಳಾದ ಒಂಬತ್ತು ಹತ್ತನೆಯ ಗುಹೆಗಳು ಸಾಂಚಿಶಿಲ್ಪರೀತಿಯಲ್ಲಿವೆ. ಹತ್ತೊಂಬತ್ತನೆಯ ಗುಹೆ ಅತ್ಯಂತ ಉತ್ತಮ ಚಿತ್ರಕಲೆಯನ್ನು ತೋರಿಸುವದು. ಪರ್ಷಿಯ ದೇಶದ ರಾಯಭಾರಿಗಳನ್ನೂ ಪುಲಕೇಶಿಯ ಆಸ್ಥಾನವನ್ನೂ ತೋರಿಸುವ ೧-೨ ನೆಯ ಗುಹೆಗಳು ಏಳನೆಯ ಶತಮಾನಕ್ಕೆ ಸೇರಿದವು. ಅಜಂತದಲ್ಲಿದ್ದ ಬೌದ್ಧಭಿಕ್ಷುಗಳು ಹಿಂದೆ ಸಮೀಪದಲ್ಲಿದ್ದ ಇನ್ದ್ರಕಾನ್ತವೆಂಬ ಪಟ್ಟಣದಲ್ಲಿ ಭಿಕ್ಷೆಯೆತ್ತುತ್ತಿದ್ದರು. ಯುವಾನ್‌ಚ್ವಾಂಗನು ಅರ್ಹತ ಅಚಲ ಅಥವ ಆಚಾರನೆಂಬಾತನು ಇಲ್ಲಿನ ವಿಹಾರಗಳನ್ನು ಮಾಡಿಸಿದನೆಂದು ಹೇಳಿರುವನು. ಈ ಚಿತ್ರಗಳ ಉದ್ದೇಶ. ಮತಬೋಧನೆ. ಆದುದರಿಂದ ಬೋಧಿಸತ್ವರ ಮತ್ತು ಬುದ್ಧನ ಜೀವನ ಚರಿತ್ರೆಗಳಲ್ಲಿ ಮುಖ್ಯವಾದ ಅಂಶಗಳನ್ನೆಲ್ಲ ಸಜೀವ ಕಲೆಯಿಂದ ನಿರೂಪಿಸಿದೆ. ದೀರ್ಘ ಮತ್ತು ದೃಢವಾದ ವೃತ್ತರೇಖೆಗಳಿಂದ ನಿಮ್ನೋನ್ನತ ಛಾಯೆಗಳನ್ನು ತೋರಿಸುವಂತೆ ಕುಂಚದ ಒಂದೇ ಎಳತದಿಂದ ಬರೆದಿರುವರು. ಚಿತ್ರಕಾರರು ಸಾಂಪ್ರದಾಯಿಕ ರೀತಿಗಳನ್ನನುಸರಿಸಿದ್ದರೂ ತಮ್ಮ ಪ್ರತಿಭೆಯನ್ನೂ ಸ್ವಾತಂತ್ರ್ಯವನ್ನೂ ತೋರಿಸಿರುವರು. ಗೂಳಿ, ಕಪಿ, ನವಿಲು ಮುಂತಾದ ಪ್ರಾಣಿಗಳೂ ಸಜೀವ, ಸದೃಶವಾಗಿವೆ. ಸ್ತ್ರೀಚಿತ್ರಗಳು ಭಾರತೀಯ ಸ್ತ್ರೀಯರ ಸಹಜವಾದ ಶರೀರ ಭಂಗಿ, ಪ್ರಮಾಣ, ಅಲಂಕಾರ, ಮಾರ್ದವ, ಲಾವಣ್ಯಗಳನ್ನು ನಿದರ್ಶಿಸುವವು. ಅಜಂತಾಶಿಲ್ಪದಲ್ಲೂ ಚಿತ್ರಕಲಾರೀತಿಯೇ ಕಂಡುಬರುವದು.

ಬಾಘ್ ಚಿತ್ರಗಳಲ್ಲಿ ಎರಡು ವಿಧಗಳಿವೆ. ಕೆಲವನ್ನು ಕಪ್ಪು, ಬಿಳುಪು, ಸ್ವಲ್ಪ "ಇಂಡಿಯನ್ ಕೆಂಪು" ಬಣ್ಣಗಳಿಂದ ಬರೆದಿರುವರು. ಇವಕ್ಕೆ ಈಚಿನ ಚಿತ್ರಗಳಲ್ಲಿ ನೀಲ, ಕೆಂಪು, ಹಳದಿ ಬಣ್ಣಗಳು ಕಂಡುಬರುವವು. ಬಾದಾಮಿಯ ಗುಹೆಗಳಲ್ಲಿ ಕ್ರಿ.ಶ. ೬ ನೆಯ ಶತಾಬ್ದದ ವೈದಿಕ ಮತ ಸಂಬಂಧವಾದ ಚಿತ್ರಗಳು ಸಿಕ್ಕಿವೆ. ಇವು ಗಿರಿಜಾಕಲ್ಯಾಣ, ಶಿವತಾಣ್ಡವ ನೃತ್ಯ ಮುಂತಾದ ಪುರಾಣಕಥೆಗಳನ್ನು ಸೂಚಿಸುವವು. ಪುದುಕೋಟೆಯ ಸಿತ್ತನ್ನಾವಾಶಲ್ ಚಿತ್ರಗಳು ಜೈನರದಾಗಿವೆ. ಸಿಂಹಳದ ಸೀಗಿರಿಯ ಚಿತ್ರಗಳೂ ಅಜಂತಾ ರೀತಿಯಲ್ಲಿವೆ. ಅಜಂತಾ ರೀತಿಯು ಉತ್ತರದಲ್ಲಿ ಟಿಬೆಟ್, ಆಫ್‌ಘನಿಸ್ತಾನ, ಚೈನೀಸ್ ತುರ್ಕಿಸ್ತಾನ, ಚೀಣಾ, ಜಪಾನ್, ಕೊರಿಯ ವರೆಗೆ ವ್ಯಾಪಿಸಿದ್ದಿತು.

ಪಲ್ಲವರ ಕಾಲದ ಕೆಲವು ಚಿತ್ರಗಳು ಕಂಚಿಯಲ್ಲಿ ಸಿಕ್ಕಿವೆ. ಚೋಳ

ರಾಜರಾಜ, ರಾಜೇಂದ್ರರ ಕಾಲದ ಕುಡ್ಯಚಿತ್ರಗಳು ತಂಜಾವೂರು ಬೃಹದೀಶ್ವರ ದೇವಾಲಯದಲ್ಲಿವೆ. ವಿಜಯನಗರದ ಚಿತ್ರಕಲೆಯು ಹಂಪಿ, ಲೇಪಾಕ್ಷಿ, ತಾಡಪತ್ರಿ ದೇವಾಲಯಗಳಲ್ಲಿ ಕಂಡುಬರುವದು. ಉತ್ತರದಲ್ಲಿ ರಾಜಸ್ಥಾನೀ ಗುಜರಾತೀ ರೀತಿಯು ಜೈನದೇವಾಲಯಗಳಲ್ಲಿಯೂ ಪಟಗಳಲ್ಲಿಯೂ ಕಂಡುಬರುವದು. ರಾಜಪುತ್ರ ರೀತಿಯಲ್ಲಿ ಬರೆದ ರಾಗರಾಗಿಣಿಯರ ಚಿತ್ರಗಳು ಪ್ರಸಿದ್ಧವಾಗಿವೆ. ಮುಸ್ಲಿಮರು ಎಲ್ಲ ಕಲೆಗಳಿಗೂ ವಿರೋಧವಾಗಿದ್ದರೂ ಭರತಖಂಡದಲ್ಲಿ ನೆಲಸಿದ ಮೇಲೆ ಹಿಂದುಗಳ ಸಂಪರ್ಕದಿಂದ ಸ್ವಲ್ಪ ಮಟ್ಟಿಗೆ ವಾಸ್ತುಶಿಲ್ಪ, ಸಂಗೀತ, ಚಿತ್ರಕಲೆಗಳನ್ನು ಕಲಿತರು. ಮೊಘಲರ ಕಾಲದಲ್ಲಿ ಕೇವಲ ಲೌಕಿಕ ಮತ್ತು ಆಸ್ಥಾನ ಸಂಬಂಧವಾದ ವಿಷಯಗಳನ್ನೇ ಚಿತ್ರಗಳಲ್ಲಿ ಕಾಣಬಹುದು. ಅಕ್ಬರನ ಆಶ್ರಯದಲ್ಲಿ ಸುಮಾರು ೧೦೦ ಕಾರ್ಖಾನೆಗಳಿದ್ದವು. ಅಬುಲ್ ಫಸ್ಲ್ ಹೇಳಿರುವ ೧೭ ಚಿತ್ರಕಾರರಲ್ಲಿ ಹದಿಮೂರು ಜನ ಹಿಂದುಗಳೇ ಆಗಿದ್ದರು. ಮುಸ್ಲಿಮರು ಸಾಮಾನ್ಯವಾಗಿ ಅಕ್ಷರ ಲೇಖನ (Calligraphy) ಯಲ್ಲಿ ಕೌಶಲ್ಯವನ್ನು ತೋರಿಸುತ್ತಿದ್ದರು. ಲಿಪಿಗಳಲ್ಲಿ ಕೂಫಿಕ್ ಮತ್ತು ನಾಸ್ತಾಲಿಕ್ ಎಂಬ ಎರಡು ರೀತಿಗಳಿವೆ. ಖ್ವಾಜಾ ಅಬ್ದುಸ್ಸಮದ್ ಎಂಬವನು ಒಂದು ಗಸಗಸೆಕಾಳಿನ ಮೇಲೆ ಕುರಾನಿನ ೧೧೨ ನೆಯ ಅಧ್ಯಾಯವನ್ನೆಲ್ಲ ಬರೆದನಂತೆ. ಇವನಿಗೆ "ಷಿರೀನ್‌ಕಲಂ" ಎಂಬ ಬಿರುದಿದ್ದಿತು. ಮುಹಮ್ಮದ್ ಹುಸೇನೆಂಬುವನಿಗೆ ಅಕ್ಬರನು "ಜ಼ರೀನ್ ಕಲಂ" ಎಂಬ ಬಿರುದನ್ನು ಕೊಟ್ಟಿದ್ದನು. ಕೆಲವು ಮೊಘಲ್ ಚಿತ್ರಗಳಲ್ಲಿ ಪಾಶ್ಚಾತ್ಯರೀತಿಯ ಅನುಕರಣೆಯು ಕಂಡುಬರುವದು. ಮೊಘಲರ ಅನಂತರ ಬ್ರಿಟಿಷರಿಗೆ ವ್ಯಾಪಾರ ಸಾಮ್ರಾಜ್ಯ ಲಾಭಗಳೇ ಮುಖ್ಯವಾಗಿದ್ದುದರಿಂದ ಸಮಸ್ತಕಲೆಗಳೂ ಕ್ಷೀಣಿಸತೊಡಗಿದವು. ಹಳ್ಳಿಗಳಲ್ಲೂ ಕೆಲವು ದೇಶೀಯ ರಾಜರ ಆಶ್ರಯದಲ್ಲಿಯೂ ಸ್ವದೇಶೀಯ ರೀತಿಯು ಅಲ್ಪಸ್ವಲ್ಪವಾಗಿ ಇದ್ದಿತು. ಭಾರತೀಯ ಚಿತ್ರಕಲಾಸ್ವಾರಸ್ಯವನ್ನು ತಿಳಿಯಲಾರದೆ ಪಾಶ್ಚಾತ್ಯರು ಅವಹೇಳನೆಮಾಡಲು ಆರಂಭಿಸಿದರು. ರವಿವರ್ಮನಂತಹ ಕೆಲವರು ಪಾಶ್ಚಾತ್ಯ ರೀತಿಗಳನ್ನನುಸರಿಸಿದರು. ಈ ರೀತಿಗೆ ಬೊಂಬಾಯಿ ಪ್ರಾಂತವು ಕೇನ್ದ್ರವಾಯಿತು. ೧೯ ನೆಯ ಶತಾಬ್ದದಲ್ಲಿ ರಾಷ್ಟ್ರೀಯಭಾವವು ಹೆಚ್ಚುತ್ತ ಬರಲು ಬಂಗಾಳ ಆನ್ಧ್ರದೇಶದಲ್ಲಿ ಪೂರ್ತ ಸ್ವದೇಶೀ ರೀತಿಯಾದ ಅಜಂತ ಮೇಲ್ಪಂಕ್ತಿಯನ್ನನುಸರಿಸಿ ಅವನೀನ್ದ್ರನಾಥಠಾಕೂರ್, ನಂದಲಾಲ್ ಬೋಸ್, ಡಿ. ರಾಮರಾವ್, ಕೌತರಾಮಮೋಹನಶಾಸ್ತ್ರಿ, ಆನನ್ದಮೋಹನಶಾಸ್ತ್ರಿ, ಮೈಸೂರಿನ ವೆಂಕಟಪ್ಪ ಮುಂತಾದವರು ಹೊಸಯುಗವನ್ನಾರಂಭಿಸಿದರು.

**ವಾಸ್ತುಶಿಲ್ಪ:** ಮಾನಸಾರ, ಮನುಷ್ಯಾಲಯ ಚನ್ದ್ರಿಕಾ, ಅಂಶುಬೋಧಿನೀ, ಅರ್ಥಶಾಸ್ತ್ರ, ಸುಪ್ರಭೇದಾಗಮ, ವಾಸ್ತುವಿದ್ಯಾ, ಬೃಹತ್ಸಂಹಿತಾ, ಶಿಲ್ಪರತ್ನ, ಅಭಿಲಷಿತಾರ್ಥಚಿನ್ತಾಮಣಿ, ಸಮರಾಂಗಣಸೂತ್ರಧಾರ, ಮಯಮತಶಿಲ್ಪಶಾಸ್ತ್ರ, ಕಾಶ್ಯಪಶಿಲ್ಪ, ಅಂಶುಮದ್ಭೇದಾಗಮ, ವಾಸ್ತುರತ್ನಾವಲೀ, ಪ್ರತಿಮಾಲಕ್ಷಣ, ಪ್ರತಿಮಾಮಾನಲಕ್ಷಣ, ರೂಪಮಣ್ಡನ, ವಾಸ್ತುಮಣ್ಡನ, ಪುರಾಣಗಳೂ ವಾಸ್ತುವಿದ್ಯೆಗೆ ಮುಖ್ಯ ಆಧಾರಗ್ರಂಥಗಳು.

ವಾಸ್ತು ಎಂದರೆ ದೇವಮನುಷ್ಯರು ವಾಸಿಸುವ ಸ್ಥಳ. ಆದುದರಿಂದ ವಾಸ್ತುವು ಧರೆ, ಹರ್ಮ್ಯ, ಯಾನ, ಪರ್ಯಂಕಗಳೆಂದು ನಾಲ್ಕುವಿಧ. ಭೂಮಿಯ ಸನ್ನಿವೇಶ, ಗುಣಗಳ ಪರೀಕ್ಷೆಯನ್ನು ಮೊದಲು ಮಾಡಬೇಕು. ಗುಂಡಿಯನ್ನಗೆದು ಮಣ್ಣನ್ನು ಚೆನ್ನಾಗಿ ಶೋಧಿಸಬೇಕು. ಅನಂತರ ನಿವೇಶನದ ವಿನ್ಯಾಸ ಮುಂತಾದುವನ್ನು ಸೂತ್ರಧಾರನು ನಿರ್ಧರಿಸಬೇಕು. ದೇವಾಲಯ, ಅರಮನೆ, ಗ್ರಾಮ, ಪಟ್ಟಣಗಳನ್ನು ಕಟ್ಟಲು ಆರಂಭಿಸುವದಕ್ಕೆ ಮೊದಲೇ ರಸ್ತೆ, ಚರಂಡಿ, ಸರಹದ್ದು, ಕೋಟೆಯಗೋಡೆ, ಕಂದುಕ ಮುಂತಾದವಗಳಿಗೆಲ್ಲ ಅವಕಾಶವಾಗುವಂತೆ ತಲವಿನ್ಯಾಸವಮಾಡಬೇಕು. ಗ್ರಾಮಗಳ ಆಕಾರವು ದಣ್ಡಕ, ಸರ್ವತೋಭದ್ರ, ನನ್ದ್ಯಾವರ್ತ, ಪದ್ಮಕ, ಸ್ವಸ್ತಿಕ, ಪ್ರಸ್ತರ, ಕಾರ್ಮುಕ, ಚತುರ್ಮುಖವಾಗಿರಬಹುದು, ನಗರಗಳಲ್ಲಿ ರಾಜಧಾನೀ, ನಗರೀ, ಪುರ, ಖೇಟ, ಖರ್ವಟ, ಕುಬ್ಜಕ, ಪಟ್ಟಣಗಳೆಂಬ ಭೇದಗಳೂ, ಸೈನ್ಯಕ್ಕಾಗಿ ಶಿಬಿರ, ವಾಹಿನೀಮುಖ, ಸ್ಥಾನೀಯ, ದ್ರೋಣಕ, ಸಂವಿದ್ಧ (ವರ್ಧಕ), ಕೋಲಕ, ನಿಗಮ, ಸ್ಕನ್ಧಾವಾರಗಳೂ, ದುರ್ಗಗಳಲ್ಲಿ ಗಿರಿ, ವನ, ಜಲ, ರಥ, ದೇವ, ಪಂಕ, ಮಿಶ್ರದುರ್ಗಗಳೆಂಬ ಭೇದಗಳೂ ಇವೆ.

ಹರ್ಮ್ಯಗಳು ಪ್ರಾಸಾದ, ಮಂಡಪ, ಸಭಾ, ಶಾಲಾ, ರಂಗ ಎಂಬ ರೂಪವಾಗಿರುವವು. ಇವುಗಳು ಆಕಾರಭೇದದಿಂದ ಜಾತಿ, ಛನ್ದ, ವಿಕಲ್ಪ (ಸಂಕಲ್ಪ) ಮತ್ತು ಆಭಾಸ ಎಂಬುದಾಗಿ ವಾಸಮಾಡುವವರಿಗೆ ಶಾನ್ತಿ, ಪುಷ್ಟಿ, ಜಯ, ಅದ್ಭುತ, ಮತ್ತು ಸರ್ವಕಾಮಫಲ ಪ್ರದವಾಗುವವು. ಶಂಕುಸ್ಥಾಪನೆ, ವಾಸ್ತುಪುರುಷಪೂಜೆಗಳನ್ನು ಮಾಡಿ ಭೂತತೃಪ್ತಿಗಾಗಿ ಬಲಿಹಾಕಿ, ಇಟ್ಟಿಗೆಗಳನ್ನು ಮಾಡಬೇಕು. ಇಟ್ಟಿಗೆಗಳು ಸಾಮಾನ್ಯವಾಗಿ ೫½ ಅಂಗುಲ ಅಗಲ ೨೨½ ಅಂಗುಲ ಉದ್ದವಿರುವವು. ಉದ್ದವನ್ನು ¼, ½, ಅಥವಾ ¾ ಅಂಗುಲ ಹೆಚ್ಚಿಸಿಕೊಳ್ಳಬಹುದು. ಭರತಖಂಡದಲ್ಲಿ ಸುಮೇರಿಯ ರೀತಿಯ (Plano-Convex) ಇಟ್ಟಿಗೆಗಳು ಕಂಡುಬರುವದಿಲ್ಲ. ಸಾಮಾನ್ಯ ಗೃಹಗಳಿಗೆ ಕಲಸಿದ ಮಣ್ಣನ್ನೇ ಗಾರೆಯಂತೆ ಉಪಯೋಗಿಸುತ್ತಿದ್ದರು. ದೊಡ್ಡ ದೊಡ್ಡ ಕಲ್ಲುಗಳನ್ನು

ನಯವಾಗಿ ಕಡೆದು ಗಾರೆಯಿಲ್ಲದೆಯೇ ಶಾಶ್ವತವಾಗಿರುವಂತೆ ಜೋಡಿಸುತ್ತಿದ್ದರು. ಆದರೂ ಗಾರೆಮಾಡುವ ವಿಧಾನವನ್ನೂ ಅರಿತಿದ್ದರು. ವರಾಹಮಿಹಿರನು ವಜ್ರಲೇಪವೆಂಬ "ಸಿಮೆಂಟ್" ಮಾಡುವ ರೀತಿಯನ್ನು ಹೇಳಿರುವನು. ಇದರಿಂದ ಶಿಲಾಮೂರ್ತಿಗಳ ಭಿನ್ನವಾದ ಅಂಗಗಳನ್ನೂ ಭದ್ರವಾಗಿ ಜೋಡಿಸಬಹುದು.

ಸ್ತಂಭಗಳಲ್ಲಿ ಪ್ರಮಾಣಾನುಸಾರ ಬ್ರಹ್ಮಕಾನ್ತ, ವಿಷ್ಣುಕಾನ್ತ, ರುದ್ರಕಾನ್ತ, ಶಿವಕಾನ್ತ, ಸ್ಕನ್ದಕಾನ್ತಗಳೆಂದು ಐದುವಿಧ. ಮೊದಮೊದಲು ಮರದ ತೊಲೆಗಳನ್ನೇ ಗೆದ್ದಲು ಹಿಡಿಯದಂತೆ ಕುಂಭಗಳಲ್ಲಿಡುತ್ತಿದ್ದರು. ಕಲ್ಲು ಉಪಯೋಗಕ್ಕೆ ಬಂದಮೇಲೂ ಕಂಬಗಳಿಗೆ ಅದೇ ಆಕಾರವು ಉಳಿಯಿತು. ಮೇಲ್ಛಾವಣಿಯ ಆಕಾರವನ್ನನುಸರಿಸಿ ನಾಗರ, ದ್ರಾವಿಡ, ವೇಸರಗಳೆಂಬ ರೀತಿಗಳಾದವು. ಕಟ್ಟಡದ ಮೇಲ್ಭಾಗವನ್ನು ಶಿಖರ, ಶಿಖಾ, ಶಿಖಾನ್ತ, ಶಿಖಾಮಣಿ ಎಂದು ವಿಭಜಿಸಿ, ಮೂಲದಿಂದ ಶಿಖರದ ವರೆಗೂ ಚತುರಸ್ರವಾಗಿರುವದು ನಾಗರರೀತಿ; ಷಡಸ್ರ ಅಥವಾ ಅಷ್ಟಾಸ್ರವಾದುದು ದ್ರಾವಿಡ, ವೃತ್ತಾಕಾರವಾದುದು ವೇಸರ.[28] ವಿಮಾನವು ನಾಗರೀತಿಯಲ್ಲಿ ಚತುರಸ್ರಾಕಾರವಾಗಿರುವುದು. ಕರ್ಣಾಟಕದಲ್ಲಿ ಮಹಾಕೂಟದ ಮುಕುಟೇಶ್ವರ, ಐಹೊಳೆಯ ಮೇಗುತಿ, ಬಾದಾಮಿಯ ಮಾಳಗಿತ್ತಿ ಶಿವಾಲಯಗಳಲ್ಲಿ ಶಿಖರವು ಅಷ್ಟಕೋಣಾಕಾರವಾಗಿದೆ. ಆದರೆ ಪಟ್ಟದ ಕಲ್ಲಿನಲ್ಲಿ ಚತುರಸ್ರಾಕಾರವಾಗಿದೆ. ವೇಸರದಲ್ಲಿ ಕಂಠದಿಂದ ಕೊನೆಯ ವರೆಗೂ ವೃತ್ತಾಕಾರವಾದ ವಿಮಾನವಿರುವದು. ಶಿಖರವು ಆಮಲಕದಂತಿರುವದು. ಚಾಳುಕ್ಯರಾಜ್ಯದಲ್ಲಿ ಕುಕ್ಕನೂರು ದೇವಾಲಯವನ್ನು ವೇಸರರೀತಿಯಲ್ಲಿ ಕಟ್ಟಿದೆ. ದ್ರಾವಿಡರೀತಿಯಲ್ಲಿ ವಿಮಾನವು

---

[28] ಮೂಲಾದಾಶಿಖರಂ ಯುಗಾಶ್ರರಚಿತಂಗೇಹಂ ಸ್ಮೃತಂನಾಗರಮ್ | ಮೂಲಾದಾಶಿಖರತ್ರಯಂ ಷಡುರುಗಾಶ್ರೋದ್ದೀದಿತಂ ದ್ರಾವಿಡಮ್ | ಮೂಲಾದ್ವಾಗಳತೋಽಥವಾ ಪರಿಲಸದ್ವೃತ್ತಾತ್ಮಕಂವೇಸರಮ್ | ತೇಷ್ವೇಕಂ ಪೃಥಗಾತ್ತಲಕ್ಷ್ಮಸು ವಿದಧ್ಯಾದಾತ್ಮನಃ ಸಮ್ಮತಮ್ ||—ಶಿಲ್ಪರತ್ನ. ಮೂಲಾದಿಸ್ತೂಪಪರ್ಯನ್ತಂ ವೇದಾಶ್ರಂಚಾಯತಶ್ರಕಮ್ | ದ್ವ್ಯಶ್ರಂ ವೃತ್ತಾಕೃತಿಂವ್ಯಾಥಗ್ರೀವಾದಿಶಿಖರಾಕೃತಿಃ | ಸ್ತೂಪಿಕಾತ್ರಯಸಂಯುಕ್ತಂ ದ್ವಯಂವಾ ಚೈಕಮೇವವಾ | ಚತುರಸ್ರಾಕೃತಿಃ ಯತ್ತು ನಾಗರಂ ತತ್ಪ್ರಕೀರ್ತಿತಮ್ || ಮೂಲಾಗ್ರಂ ವೃತ್ತಮಾಕಾರಂ ತದ್ವೃತ್ತಾಯತಮೇವವಾ | ಗ್ರೀವಾದಿ ಸ್ತೂಪಪರ್ಯನ್ತಂ ಯುಕ್ತ್ವಾಥಯುಗಾಶ್ರಕಮ್ || ವೃತ್ತಸ್ಯಾಗ್ರೇ ದ್ವ್ಯಶ್ರಕಂತದ್ವೇಸರನಾಮಕಂಭವೇತ್ || ಮೂಲಾಗ್ರಸ್ತೂಪಿಪರ್ಯನ್ತಂ ಚಾಷ್ಟಾಶ್ರಕಂವಾಷಡಶ್ರಕಮ್ | ಪೂರ್ವವಚ್ಚೋರ್ಧ್ವದೇಶಂ ಸ್ಯಾದ್ ದ್ರಾವಿಡಂ ಪರಿಕೀರ್ತಿತಮ್ | ಸಮಾಶ್ರಕಶಿಖಾಯುಕ್ತಂ ಚಾಯಾಮೇ ತಚ್ಛಿಖಾತ್ರಯಮ್ ||—ಮಾನಸಾರ. ಅ. ೧೮.

ಆರು ಅಥವಾ ಎಂಟು ಮೂಲೆಗಳನ್ನು ಹೊಂದಿದೆ. ಪಲ್ಲವರ ದೇವಾಲಯುಗಳು ಈ ರೀತಿಗೆ ಉದಾಹರಣೆಗಳು.

ಅನೇಕ ಅಂತಸ್ತುಗಳುಳ್ಳ ಗೃಹಗಳು ಪಾಂಚಾಲ, ದ್ರಾವಿಡ, ಮಧ್ಯಕಾನ್ತ, ಕಳಿಂಗಕಾನ್ತ, ವಿರಾಟ, ಕೇರಳ, ಸ್ಫೂರ್ಜಕ ಎಂಬ ವಿಧವಾಗಿರುವವು. ಅಥವಾ ತಲವಿನ್ಯಾಸವನ್ನನುಸರಿಸಿ ಅರಮನೆಗಳೂ ದೇವಾಲಯುಗಳೂ ದಣ್ಡಕ, ಸ್ವಸ್ತಿಕ, ಮೌಲಿಕ, ಚತುರ್ಮುಖ, ಸರ್ವತೋಭದ್ರ, ವರ್ಧಮಾನವೆಂದು ಆರುವಿಧ. ಇವುಗಳಲ್ಲಿ ಅಂತರ್ಭೇದಗಳಿವೆ, ಅರಮನೆಗಳಲ್ಲಿ ಚಕ್ರವರ್ತಿ, ಮಹಾರಾಜ (ಅಧಿರಾಜ), ಮಹೇನ್ದ್ರ (ನರೇನ್ದ್ರ), ಪಾರ್ಷ್ಣಿಕ, ಪಟ್ಟಧರ, ಮಣ್ಡಲೇಶ, ಪಟ್ಟಭಾಕ್, ಪ್ರಾಹರಿಕ, (?) ಅಸ್ತ್ರಗ್ರಾಹಿ ಎಂಬವರಿಗೆ ಬೇರೆ ಬೇರೆ ವಿಧಗಳಿವೆ. ಅಲ್ಲದೆ ಮಾನಸಾರದಲ್ಲಿ ನಾಟಕಶಾಲೆ, ರಥ, ಪರ್ಯಂಕ, ಸಿಂಹಾಸನ, ತೋರಣ, ಕಿರೀಟಪ್ರಭೇದ (ಜಟಾ, ಮೌಳಿ, ಕಿರೀಟ, ಕರಣ್ಡ, ಶಿರಸ್ತ್ರಕ, ಕುನ್ತಲಕೇಶಬದ್ಧ, ಧಮ್ಮಿಲ್ಲ, ಅಲಕ, ಚೂಡಾ, ಮುಕುಟ, ಪತ್ರಪಟ್ಟ, ಪುಷ್ಪಪಟ್ಟ, ರತ್ನಪಟ್ಟಗಳೆಂಬುವು), ಆಭರಣಗಳನ್ನು ಮಾಡುವ ರೀತಿಯೂ ನಿರೂಪಿತವಾಗಿದೆ.

ವೇದಯುಗದಲ್ಲಿ ಯಜ್ಞಗಳಿಗಾಗಿ "ಪ್ರಾಚೀನವಂಶ"ಗಳೆಂಬ ಶಾಲೆಗಳನ್ನು ವೇದಿಗಳನ್ನು ಇಟ್ಟಿಗೆ, ಮರ, ಬೊಂಬುಗಳಿಂದ ನಿರ್ಮಿಸುತ್ತಿದ್ದರು. ಹರಪ್ಪ ಸಂಸ್ಕೃತಿಯಲ್ಲಿ ನಗರನಿರ್ಮಾಣರೀತಿ, ಅಂತಸ್ತಿನ ಮನೆ, ನಿರ್ಮಲೀಕರಣವ್ಯವಸ್ಥೆ, ರಸ್ತೆ, ಸಾಮೂಹಿಕ ಸ್ನಾನಗೃಹ ಮುಂತಾದವುಗಳಿಂದ ವಾಸ್ತುಶಿಲ್ಪಶಾಸ್ತ್ರವು ಎಷ್ಟು ಬೆಳೆದಿದ್ದಿತೆಂದು ಕಂಡುಬರುವದು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಅರಮನೆ, ದುರ್ಗ, ನಗರ ಮುಂತಾದುವನ್ನು ನಿರ್ಮಿಸುವ ವಿಧಾನವು ಉಕ್ತವಾಗಿದೆ. ಮೆಗಾಸ್ತನೀಸನು ಮೌರ್ಯರಾಜಧಾನಿಯಾದ ಪಾಟಲಿಪುತ್ರವನ್ನು ವರ್ಣಿಸಿರುವನು. ತಕ್ಷಶಿಲಾ, ಕೌಶಾಂಬಿ, ಕಾಶಿ, ಸಾಕೇತ, ಮಾಯಾಪುರೀ, ಉಜ್ಜಯಿನೀ, ಕಾಂಚೀ, ಮುಂತಾದ ಪ್ರಾಚೀನ ನಗರಗಳಲ್ಲಿ ಭಾರತೀಯರ ನಗರ ನಿರ್ಮಾಣಪದ್ಧತಿ (Town Planning) ಯನ್ನು ನೋಡಬಹುದು.

ವೇದಯುಗದಲ್ಲಿ ಬೇರೆಬೇರೆ ಯಜ್ಞಗಳಿಗೆ ವಿವಿಧ ರೂಪದ ವೇದಿಗಳನ್ನು ನಿರ್ಮಿಸುತ್ತಿದ್ದರು. ಇಟ್ಟಿಗೆಗಳನ್ನು ಒಟ್ಟುಗೂಡಿಸುತ್ತಿದ್ದುದರಿಂದ ಚಯನ, ಸ್ತೂಪ, ಚಿತಿ ಎಂಬ ಹೆಸರು ಬಂದಿತು. ಸ್ತೂಪವು ಕೇಶಬಂಧನದ ಆಕಾರವಾಗಿದ್ದಿತು (ವಿಷ್ಣೋಃ ಸ್ತೂಪೋಽಸಿ—ತೈ. ಸಂ), ತೈತ್ತಿರೀಯ ಸಂಹಿತೆ (V-೪-೧೧) ಮತ್ತು ಶುಲ್ಬಸೂತ್ರಗಳಲ್ಲಿ ಶ್ಯೇನ, ಕಂಕ, ಅಲಜ, ಪ್ರಉಗ, ಉಭಯತಃಪ್ರಉಗ



ಪಾಪನಾಥ ದೇವಾಲಯ—ಪಟ್ಟದಕಲ್





ಪಾಪನಾಥ ದೇವಾಲಯ—ಪಟ್ಟದಕಲ್





ಪಾಪನಾಥ ದೇವಾಲಯ—ಪಟ್ಟದಕಲ್

ರಥಚಕ್ರ, ದ್ರೋಣ, ಕೂರ್ಮ, ಸಮೂಹ್ಯ ಮುಂತಾದ ಚಿತಿಗಳ ವರ್ಣನೆಯಿದೆ. ಈ ವೈದಿಕ ಸ್ತೂಪ, ಚಿತಿಗಳಿಂದ ಜೈನಬೌದ್ಧರ ಸ್ತೂಪ ಚೈತ್ಯಾಲಯಗಳು ಹುಟ್ಟಿದವು. ಯಾಜ್ಞಿಕರ ಮಹಾಶಾಲೆಗಳನ್ನೂ ವಾನಪ್ರಸ್ಥರ ಆಶ್ರಮಗಳನ್ನೂ ಅನುಸರಿಸಿ ಸಂಘಾರಾಮಗಳಾದವು. ಹೀಗೆ "ಬೌದ್ಧಶಿಲ್ಪ"ವೆಂದು ಕೆಲವರು ನಿರ್ದೇಶಿಸಿರುವ ಕಟ್ಟಡಗಳಿಗೆ ವೇದಗಳೇ ಮೂಲ.

ಮೊದಮೊದಲು ಕಟ್ಟಡಗಳಿಗೆ ಮರವನ್ನೇ ಉಪಯೋಗಿಸುತ್ತಿದ್ದರು. ಗಂಗಾ-ಯಮುನಾ ಪ್ರಾಂತದಲ್ಲಿ ಕಲ್ಲು ಹೆಚ್ಚಾಗಿಲ್ಲವಾದುದರಿಂದ ಮಣ್ಣು ಮರದಿಂದ ಮಾಡಿದ್ದ ಹಳೆಯ ಕಟ್ಟಡಗಳು ನಶಿಸಿಹೋಗಿವೆ. ರಾಜಗೃಹಬೆಟ್ಟದಲ್ಲಿರುವ "ಜರಾಸಂಧ್ ಕಾ ಬೈಠಕ್" ಎಂಬ ಗುಹಾಲಯವು ಮೌರ್ಯರ ಕಾಲಕ್ಕೆ ಹಿಂದಿನದು. ಕ್ರಿ.ಪೂ. ೪ ನೆಯ ಶತಾಬ್ದದಿಂದೀಚೆಗೆ ಶಿಲಾಗೃಹಗಳು ಹೆಚ್ಚಾದವು. ಅಶೋಕನ ಶಿಲಾಸ್ತಮ್ಭಗಳು ಅದ್ಭುತ ಕೌಶಲ್ಯವನ್ನು ತೋರಿಸುವವು. ಇವುಗಳು ಪರ್ಷಿಯ ಕಂಭಗಳ ಅನುಕರಣೆಯೆಂದು ಕೆಲವರು ಊಹಿಸುವರು. ಬುದ್ಧನ ಅವಶೇಷಗಳನ್ನಿಡಲು ಸ್ತೂಪಗಳು ನಿರ್ಮಿತವಾದುವು. ಇವು ಮೊದಲು ವೃತ್ತಾಕಾರವಾಗಿದ್ದು ಮೇಲ್ಗಡೆಗಳ, ಚೂಡಾಮಣಿ, ಯಷ್ಟಿ, ಛತ್ರಗಳನ್ನು ಹೊಂದಿವೆ. ಭಿಲ್ಸ, ಸಾಂಚಿ, ಶತಧಾರಾ, ಅನ್ದೇರ್, ಸಾರ್ನಾಥ್ ಬುದ್ಧಗಯ, ಅಮರಾವತಿ, ಘಂಟಶಾಲ, ಜಗ್ಗಯ್ಯಪೇಟೆ, ಮಾಣಿಕ್ಯಾಲ ಮುಂತಾದ ಸ್ಥಳಗಳಲ್ಲಿ ಸ್ತೂಪಗಳು ಪ್ರಾಚೀನ ರೀತಿಯಲ್ಲಿವೆ. ಅನಂತರ ಸ್ತೂಪಗಳ ಸುತ್ತಲೂ ಬೇಲಿ, ಮಹಾದ್ವಾರ, ತೋರಣಗಳು ನಿರ್ಮಿತವಾದವು (ಉದಾ.—ಬಾರ್ಹುತ್, ಸಾಂಚಿ, ಮಥುರ, ಅಮರಾವತಿ).

ಚೈತ್ಯಾಲಯಗಳ ಪ್ರಾಚೀನ ಸ್ಥಿತಿಯು ತೇರ್, ಚೇಜರ್ಲ, ಲೋಮಶ ಋಷಿಗುಹೆಗಳಲ್ಲಿ ಕಂಡುಬರುವದು. ಇಲ್ಲಿಯೂ ಮರಗೆಲಸದ ಪ್ರಭಾವವು ಕಂಡುಬರುವದು. ಅಜಂತ, ಕಾರ್ಲಿ, ನಾಸಿಕ್, ಕನ್ಹೇರಿ, ಎಲ್ಲೋರ ಗುಹಾಲಯಗಳಲ್ಲಿ ಹಿಂಭಾಗವು ಅಂಡಾಕಾರವಾಗಿದ್ದು ಬುದ್ಧವಿಗ್ರಹವನ್ನು ಸ್ತೂಪವನ್ನು ಹೊಂದಿರುತ್ತದೆ. ಮುಂಭಾಗದಲ್ಲಿ ಸ್ತಂಭಗಳು ಶಾಲೆಯನ್ನು ಅಂಕಣಗಳಾಗಿ ವಿಭಾಗಿಸುವವು. ದ್ವಾರದಮೇಲೆ ಬೆಳಕಿಗಾಗಿ ಆಲಳದಾಕಾರವಾದ ಗವಾಕ್ಷವಿರುವದು. ಧಾತುಗರ್ಭ (ದಾಗಬ), ಸ್ತಂಭ ಮುಂತಾದುವನ್ನು ಕೆತ್ತನೆ ಕೆಲಸದಿಂದ ಅಲಂಕರಿಸಿರುವರು. ಭಿಕ್ಷುಗಳ ನಿವಾಸಕ್ಕಾಗಿ ಸಂಘಾರಾಮಗಳೂ ವಿಹಾರಗಳೂ ಉಂಟಾದವು. ಅಜಂತ, ಭಾಜಾ, ಬಾಗ್, ಕನ್ಹೇರಿ ಇತ್ಯಾದಿ ಅನೇಕ ಸ್ಥಳಗಳಲ್ಲಿ ಬೌದ್ಧವಿಹಾರಗಳಿದ್ದವು.

ಬೌದ್ಧರಲ್ಲದೆ ಆಜೀವಕರೂ ಜೈನರೂ ಚೈತ್ಯಾಲಯ, ಆರಾಮ, ಗುಹೆ

ಗಳನ್ನು ನಿರ್ಮಿಸಿದರು. ಒರಿಸ್ಸ ಪ್ರಾಂತದಲ್ಲಿ ಉದಯಗಿರಿ ಖಂಡಗಿರಿ ಗುಹೆಗಳಲ್ಲಿ ಹಾತಿಗುಂಫ, ರಾಣಿಗುಂಫ ಎಂಬವು ಕ್ರಿ.ಪೂ. ೧ ನೆಯ ಶತಾಬ್ದದಲ್ಲಿ ನಿರ್ಮಿತವಾದುವು. ಮೌರ್ಯರು ಆಜೀವಿಕರಿಗಾಗಿ ಬರಾಬರ್ ನಾಗಾರ್ಜುನಿ (ಗಯಾ ಡಿಸ್ಟ್ರಿಕ್ಟ್) ಪರ್ವತಗಳಲ್ಲಿ ಗುಹೆಗಳನ್ನು ಮಾಡಿಸಿದರು. ದಕ್ಷಿಣ ದೇಶದಲ್ಲಿಯೂ ತಿರುಚಿನಾಪಲ್ಲಿ, ವಲ್ಲಿಮಲೈ, ಸಿತ್ತನ್ನಾವಾಶಲ್, ಶ್ರವಳಬೆಳಗೊಳ ಮುಂತಾದ ಸ್ಥಳಗಳಲ್ಲಿ ಜೈನರ ಗುಹಾಲಯಗಳಿದ್ದವು.

ಗುಹಾಲಯಗಳನ್ನನುಸರಿಸಿ ಪಲ್ಲವ ಚಾಳುಕ್ಯ ರೀತಿಯು ಹುಟ್ಟಿತು. ಐಹೊಳೆದೇವಾಲಯದ ತಲವಿನ್ಯಾಸವು ಚೈತ್ಯರೀತಿಯನ್ನು ತೋರಿಸುವದು. ಬರುತ್ತಾ ಅಂಡಾಕಾರದ ಹಿಂಭಾಗವು ಪಟ್ಟದಕಲ್ಲಿನ ಪಾಪನಾಥ ದೇವಾಲಯದಲ್ಲಿದ್ದಂತೆ ಚತುರಸ್ರಾಕಾರವಾಯಿತು. ವಿಮಾನವು ಮೆಟ್ಟುಮೆಟ್ಟಾಗಿ ಬೆಳೆಯಿತು. ಕಾಲಕ್ರಮೇಣ ಗರ್ಭಗೃಹ ಬೇರೆಯಾಗಿ ಸುಕನಾಸಿ, ಮುಖಮಂಡಪ, ಮಹಾದ್ವಾರ, ಗೋಪುರ, ಪಾಕಶಾಲೆ, ಯಜ್ಞಶಾಲೆ, ಭಂಡಾರ, ಕಲ್ಯಾಣಿ, ಪ್ರಾಕಾರಗಳು ಸೇರಿ ದೇವಾಲಯವು ವಿಸ್ತಾರವಾಯಿತು. ಎಲಿಫೆಂಟ (ಘಾರಾಪುರಿ), ಬಾದಾಮಿ, ಮಹಾಬಲಿಪುರ, ಎಲ್ಲೋರ (ವೇಳೂರ) ದೇವಾಲಯಗಳನ್ನು ಪರೀಕ್ಷಿಸಿದರೆ ಚಾಳುಕ್ಯಶಿಲ್ಪಿಗಳು ಮೊದಲು ಚಲಮೂರ್ತಿ ಅಥವಾ ಉತ್ಸವ ವಿಗ್ರಹಕ್ಕಾಗಿ ಒಂದು ಮಂಡಪವನ್ನು ಅದಕ್ಕೆ ಮೂರುಕಡೆಗಳಲ್ಲಿ ಅರ್ಧಮಂಡಪಗಳನ್ನೂ ಹಿಂಬಾಗದಲ್ಲಿ ಮೂಲವಿಗ್ರಹಕ್ಕೆ ಗರ್ಭಗುಡಿಯನ್ನು ಕಟ್ಟುತ್ತಿದ್ದರೆಂದೂ, ಅನಂತರ ಚತುರಸ್ರ ವಿನ್ಯಾಸವನ್ನನುಸರಿಸಿ ಕೋಣಗಳಲ್ಲಿ ಸ್ತಂಭಗಳನ್ನು ನಟ್ಟು ಸುತ್ತಲೂ ಪ್ರದಕ್ಷಿಣೆಗಾಗಿ ಅಂಕಣಗಳನ್ನೂ ಅವಶ್ಯಕವಾದಂತೆ ಪ್ರಾಕಾರಗಳನ್ನೂ ಕಟ್ಟುತ್ತಿದ್ದರೆಂದು ಊಹಿಸಬಹುದು.

ಚಾಳುಕ್ಯರೀತಿಯ ಒಂದು ವಿಶಿಷ್ಟ ರೂಪವು ಮೈಸೂರು ಪ್ರಾಂತದಲ್ಲಿ ಹೊಯ್ಸಳ ರೀತಿಯೆನಿಸಿಕೊಂಡಿತು. ಇದರಲ್ಲಿ ಏಕಕೂಟ, ತ್ರಿಕೂಟ, ಚತುಷ್ಕೂಟ, ಪಂಚಕೂಟ ಮತ್ತು ಅವಳಿ (Twin) ದೇವಾಲಯಗಳಿವೆ. ಸಾಮಾನ್ಯವಾಗಿ ನಕ್ಷತ್ರಾಕಾರದ ತಲವಿನ್ಯಾಸಕ್ಕನುಸಾರವಾಗಿ ಜಗಲಿಯನ್ನು ಕಟ್ಟಿ ಅದರ ಮೇಲೆ ದೇವಾಲಯವಿರುವದು. ಹೊಯ್ಸಳ ಚಾಳುಕ್ಯರೀತಿಯಲ್ಲಿ ಗೋಪುರಗಳಿಗೆ ಅಷ್ಟು ಪ್ರಾಮುಖ್ಯತೆಯಿಲ್ಲ. ಶಿಲ್ಪಿಯ ಕೌಶಲ್ಯವು ಕೆತ್ತನೆ ಕೆಲಸದಲ್ಲಿಯೂ, ನೆರಳು ಬೆಳಕು ತೋರಿಸುವದರಲ್ಲಿಯೂ ಕಂಡುಬರುವದು.

ದ್ರಾವಿಡ ಸಂಪ್ರದಾಯದ ದೇವಾಲಯಗಳಲ್ಲಿ ವಿಸ್ತೀರ್ಣ ಹೆಚ್ಚು. ಕಂಚಿ, ತಂಜಾವೂರು, ಶ್ರೀರಂಗ, ಮಧುರೆ, ಜಮ್ಬುಕೇಶ್ವರ, ರಾಮೇಶ್ವರ ಮುಂತಾದ ದೇವಾಲಯಗಳು ಪ್ರತಿಯೊಂದೂ ಒಂದು ಪಟ್ಟಣದಂತೆ ಇದೆ. ಶ್ರೀರಂಗ

ದ್ವೀಪವೆಲ್ಲ ದೇವಾಲಯವೇ ಆಗಿದೆ. ಸಹಸ್ರಸ್ತಮ್ಭ ಮಣ್ಡಪಗಳು, ಕೋಟೆ, ಯಂತಹ ಪ್ರಾಕಾರಗಳು, ೧೯೦-೨೦೦ ಅಡಿ ಎತ್ತರವಿರುವ ಗೋಪುರಗಳು ೧೫-೨೦ ಎಕರೆ ವಿಸ್ತಾರವುಳ್ಳ ಅಂಗಳಗಳು, ಕಲ್ಯಾಣಿಗಳು ಕಂಡುಬರುವವು. ಹೊಯ್ಸಳ ಶಿಲ್ಪಿಗಳು ಬಳಪದಕಲ್ಲನ್ನು ಹೆಚ್ಚಾಗಿ ಉಪಯೋಗಿಸಿರುವರು. ದ್ರಾವಿಡ ಶಿಲ್ಪಕ್ಕೆ "ಗ್ರಾನೈಟ್" ಕಲ್ಲನ್ನು ಉಪಯೋಗಿಸಿರುವರು.

ಉತ್ತರದಲ್ಲಿ ನಾಚ್ನಾಗಂಜ್ ಮುಂತಾದ ಸ್ಥಳಗಳಲ್ಲಿ ಗುಪ್ತ-ವಾಕಾಟಕರ ಕಾಲದ ಕೆಲವು ದೇವಾಲಯಗಳಿವೆ. ಗುಪ್ತಸಾಮ್ರಾಜ್ಯದ ಅನಂತರ ಕಳಿಂಗ, ವಂಗ, ಮಗಧ, ಮಾಳವ, ಕಾಶ್ಮೀರ, ಗುಜರಾತ ದೇಶಗಳ ವಾಸ್ತು ಶಿಲ್ಪದಲ್ಲಿ ವ್ಯತ್ಯಾಸಗಳು ಕಂಡುಬರುವವು. ಕರ್ಣಾಟಕದ ಚಾಳುಕ್ಯರೀತಿಯು ಪಶ್ಚಿಮದಲ್ಲಿ ಗಿರಿನಾರ್ (ಅಬು) ಧಾರಾನಗರಗಳಿಂದ ಪೂರ್ವದಲ್ಲಿ ಗೌಹತಿ (ಅಸ್ಸಾಂ) ವರೆಗೂ ವ್ಯಾಪಿಸಿದ್ದಿತು. ಪರಮಾರ, ಶೋಳಂಕಿ, ರಾಠೋರ್, ಚಾಣ್ಡೇಲ ಮುಂತಾದ ರಾಜಪುತ್ರವಂಶದವರು ಚಾಳುಕ್ಯರೀತಿಯನ್ನನುಸರಿಸಿ ಶ್ವೇತಶಿಲೆಯಲ್ಲಿ ಶೈವ ಮತ್ತು ಜೈನ ದೇವಾಲಯಗಳನ್ನು ಅದ್ಭುತ ಕೌಶಲ್ಯ ತೋರಿಸುವಂತೆ ಕಟ್ಟಿಸಿದರು.

ಮುಸ್ಲಿಮರು ಭರತಖಂಡದಲ್ಲಿ ನೆಲಸಿದ ಮೇಲೆ ಹಿಂದೂ ಶಿಲ್ಪಿಗಳ ಸಹಾಯದಿಂದ ಮೊದಮೊದಲು ಹಿಂದೂದೇವಾಲಯಗಳ ವಸ್ತುಗಳನ್ನೇ ಉಪಯೋಗಿಸಿ ಮಸೀದಿ, ಸಮಾಧಿ, ಚತ್ರಗಳನ್ನು ನಿರ್ಮಿಸಿದರು. ಈಜಿಪ್ಟ್, ಸ್ಪೈನ್ ದೇಶಗಳಲ್ಲಿ ಮುಸ್ಲಿಮರ "ಸಾರಸೆನಿಕ್" ರೀತಿಯು ಇಂಡಿಯ, ಪರ್ಷಿಯ, ಮಧ್ಯ ಏಷ್ಯಾವಾಸ್ತುಶಿಲ್ಪವನ್ನೇ ಅನುಸರಿಸಿದೆಯೆಂದೂ ಹಿಂದೂಗಳೇ ಮುಸ್ಲಿಮರಿಗೆ ವಾಸ್ತುಕಲೆಯನ್ನು ಕಲಿಸಿದರೆಂದು ಹಾವೆಲ್ ಹೇಳಿರುವನು.[24] ಕುತ್ಬುದ್ದೀನನು ೨೭ ದೇವಾಲಯಗಳನ್ನು ನಾಶಮಾಡಿ ಆ ಕಲ್ಲುಗಳಿಂದ ಡಿಲ್ಲಿಯಲ್ಲಿ "ಕುವ್ವಾತ್ತುಲ್ ಇಸ್ಲಾಮ್" ಎಂಬ ಮಸೀದಿಯನ್ನು ಕ್ರಿ.ಶ. ೧೧೯೮ರಲ್ಲಿ ಕಟ್ಟಿಸಿದನು. ಬಹುಶಃ ಇವನೇ ಆರಂಭಿಸಿದ ಕುತ್ಬಮಿನಾರ್ ಎಂಬ ಗೋಪುರವನ್ನು ಇಲ್‌ತತ್ಮಿಷನು ಪೂರ್ತಿಮಾಡಿದನು. ಇದು ೨೩೮ ಅಡಿ ಎತ್ತರವಿದೆ. ಇಲತತ್ಮಿಷನು ಒಂದು ಜೈನ ವಿಶ್ವವಿದ್ಯಾಲಯವನ್ನು ನಾಶಮಾಡಿ ಅಜ್ಮೀರಿನಲ್ಲಿ ಮಸೀದಿಯನ್ನೂ ಕಟ್ಟಿಸಿದನು. ಕುತ್ಬುದೀನನ ಮಸೀದಿಗೆ ಅಲಾವುದ್ದೀನ್ ಖಿಲ್ಜಿಯು ಅಲಾಯ್ ದರ್ವಾಜಾ ಎಂಬ ಮಹಾದ್ವಾರವನ್ನು ನಿರ್ಮಿಸಿದನು. ಗುಜರಾತ್, ಜಾನ್ಪುರ್, ಬಂಗಾಳ, ಪ್ರಾಂತ್ಯಗಳಲ್ಲಿ ೧೪ ನೆಯ ಶತಾಬ್ದದಲ್ಲಿ ಮಸೀದಿಗಳು ನಿರ್ಮಿತವಾದವು. ಹದಿನೈದನೆಯ ಶತಾಬ್ದದಲ್ಲಿ ಫೈರುಝ್ಪುರ್

[24] Havell: *Indian Architecture*, p. 10.

ಸಮಾಧಿಗಳು, ಡಿಲ್ಲಿಯ ಮೋತಿಕಾಮಸ್ಜೀದ್, ಜಾನ್ಪುರದ ಮಸೀದಿ, ಲಾಲ್ ದರ್‍ವಾಜಾ, ಬಂಗಾಳದಲ್ಲಿ ಫಿರೋಸ್ ಷಾಹ್‌ಮಿನಾರ್, ಏಕ್‌ಲಖೀ ಮಸೀದಿ, ಸೋನ್‌ಮಸೀದಿ, ಮಾಂಡುವಿನಲ್ಲಿ ಜಾಮಿಮಸೀದಿ ಮುಂತಾದ ಕಟ್ಟಡ ಗಳಾದವು.

ಮೊಘಲರ ಡಿಲ್ಲಿ, ಆಗ್ರಾ, ಲಾಹೋರ್, ಲಕ್ನೋ, ಫತ್ತೇಪುರ್ ಸಿಕ್ರಿ, ಅಲ್ಲಾಹಾಬಾದ್ ಮುಂತಾದ ಸ್ಥಳಗಳಲ್ಲಿ ಅತ್ಯುತ್ತಮ ರೀತಿಯಲ್ಲಿ ಕಟ್ಟಡ ಗಳಾದವು. ಷೇರ್‌ಷಾಹನು ಇಸಾಖಾನ್ ಮಸೀದಿ, ಜಮಾ ಮಸೀದಿ, ಮತ್ತು ತನ್ನ ಸಮಾಧಿಯನ್ನು ನಿರ್ಮಿಸಿದನು. ಅಕ್ಬರನು ಕಟ್ಟಿಸಿದ ಹುಮಾಯೂನನ ಸಮಾಧಿಯೇ ತಾಜ್‌ಮಹಲಿಗೆ ಆದರ್ಶ. ಅಕ್ಬರನು ಫತ್ತೇಪುರ್ ಸಿಕ್ರಿಯನ್ನು ದೊಡ್ಡದಾಗಿ ಕಟ್ಟಿಸಲು ಆರಂಭಿಸಿ ಜಾಮಿಮಸೀದಿ, ಬುಲಂದ್‌ದರ್ವಾಜಾ, ದೀವಾನ್-ಇ-ಆಮ್, ದೀವಾನ್-ಇ-ಖಾಸ್ ಎಂಬು ವನ್ನೂ, ಸಿಕಾಂದ್ರದಲ್ಲಿ ತನ್ನ ಸಮಾಧಿಯನ್ನು ನಿರ್ಮಿಸಿದನು. ಜಹಾಂಗೀರನು ಲಾಹೋರಿನಲ್ಲೇ ಹೆಚ್ಚು ಕಾಲ ಕಳೆಯುತ್ತಿದ್ದು ಅಲ್ಲಿ ಮೋತೀಮಸೀದಿಯನ್ನು ಷಾಹದಾರ ಎಂಬ ಉದ್ಯಾನವನ್ನೂ, ಉದಯಪುರ, ಶ್ರೀನಗರ, ಫತ್ತೇಪುರ್ ಸಿಕ್ರಿಗಳಲ್ಲಿ ಉದ್ಯಾನಗಳನ್ನೂ ನಿರ್ಮಿಸಿದನು. ಷಾಹ್‌ಜಹಾನಿನ ಕಾಲವು ಮೊಘಲ್ ವಾಸ್ತುಶಿಲ್ಪದ ಸುವರ್ಣಯುಗ. ತನ್ನ ರಾಣಿಯಾದ ಮುಮ್ತಾಸ್ ಮಹಲ್ಲಿನ ಜ್ಞಾಪಕಾರ್ಥವಾಗಿ ಆಗ್ರಾದಲ್ಲಿ ಭಾರತೀಯ ಶಿಲ್ಪಿಗಳಿಂದಲೇ ತಾಜಮಹಲನ್ನು (ಕ್ರಿ.ಶ. ೧೬೩೧-೫೩) ನಿರ್ಮಿಸಿದನು. ಹುಮಾಯೂನಿನ ಸಮಾಧಿಯಂತೆ ಇದೂ ೨೨ ಅಡಿ ಎತ್ತರ ೩೧೩ ಅಡಿ ವಿಸ್ತಾರವಾದ ಜಗಲಿಯ ಮೇಲೆ ನಿರ್ಮಿತವಾಗಿದೆ. ಎಲ್ಲ ಭಾಗಗಳನ್ನೂ ಅಮೃತಶಿಲೆಯಿಂದಲೇ ಮಾಡಿರುವ ದರಿಂದ ಬೆಳದಿಂಗಳಲ್ಲಿ ಅಲೌಕಿಕ ಸೌಂದರ್ಯವನ್ನು ಬೀರುವದು. ಇಂತಹ ಅದ್ಭುತ ಕೌಶಲ್ಯವು ಪ್ರಪಂಚದಲ್ಲಿಲ್ಲೆಲ್ಲೂ ಕಂಡುಬರುವದಿಲ್ಲ. ಷಾಹ್‌ಜಾನನು ಆಗ್ರಾ, ಲಾಹೋರ್, ಡಿಲ್ಲಿಗಳಲ್ಲಿ ಇತರ ಕಟ್ಟಡಗಳನ್ನೂ ಮಾಡಿಸಿರುವನು.

ದಕ್ಷಿಣದಲ್ಲಿ ಗೋಲ್ಕೊಂಡ, ಬಿಜಾಪುರ ಸುಲ್ತಾನರು ಬೋ (ಗೋ)ಳ್ ಗುಂಬಸ್, ಇಬ್ರಹೀಂ ರೋಸ, ಜಾಮಿ ಮಸೀದಿ, ಮಹ್ತರ್‌ಮಹಲ್, ಗಗನ್ ಮಹಲ್, ಸಾತ್ ಮಂಸಿಲ್ ಮುಂತಾದುವನ್ನು ನಿರ್ಮಿಸಿದರು. ಅವರಂಗಾ ಬಾದಿನ ಮಸೀದಿ ಮತ್ತು ಸಮಾಧಿ, ಹೈದರಾಬಾದಿನ ಚಾರ್‌ಮಿನಾರ್, ಶ್ರೀರಂಗಪಟ್ಟಣದ ಗೋರಿಗಳು ಮೊಘಲ್ ವಾಸ್ತುಶಿಲ್ಪ ರೀತಿಯ ಕ್ಷೀಣದಶೆ ಯನ್ನು ತೋರಿಸುವವು. ಹತ್ತೊಂಬತ್ತನೆಯ ಶತಾಬ್ದದಲ್ಲಿ ಶಿಲ್ಪಕಲೆಯೇ ಅದೃಶ್ಯ ವಾಯಿತೆಂದರೆ ಅತಿಶಯೋಕ್ತಿಯಲ್ಲ. ಕೇವಲ ಉಪಯೋಗದೃಷ್ಟಿಯಿಂದಲೇ

ಪಾಶ್ಚಾತ್ಯ ಪಾರ್ವಾತ್ಯ ರೀತಿಗಳನ್ನು ಕಲಸುಮೆಲಸು ಮಾಡಿ ಸರ್ಕಾರದ ಕಟ್ಟಡಗಳು ನಿರ್ಮಿತವಾದವು. ಡಿಲ್ಲಿಯಲ್ಲಿ ಸರ್ ಎಡ್ವರ್ಡ್ ಲೂಯೆನ್ಸ್ ಎಂಬ ಶಿಲ್ಪಿಯು ಚಕ್ರವರ್ತಿಪ್ರತಿನಿಧಿಗಾಗಿ ಹೊಸರೀತಿಯಲ್ಲಿ ಅರಮನೆಯನ್ನು ನಿರ್ಮಾಣಮಾಡಲು ಯತ್ನಿಸಿದನು. ಆದರೆ ಕಲಾದೃಷ್ಟಿಯಿಂದ ಭಾರತೀಯರಿಗೆ ವಿಜಾತೀಯವಾಗಿ ಕಂಡುಬರುವದು. ಈಚೆಗೆ ಸ್ವದೇಶೀಯವಾದ ಒಂದು ಹೊಸ ವಾಸ್ತುಶಿಲ್ಪರೀತಿಯನ್ನು ಸೃಷ್ಟಿಮಾಡಲು ಪ್ರಯತ್ನಗಳಾಗುತ್ತಿವೆ.

**ತಕ್ಷಣ—ಮೂರ್ತಿಲಕ್ಷಣ :** ಭಾರತೀಯ ತಕ್ಷಣದ ಮುಖ್ಯಲಕ್ಷಣಗಳು ಈಜಿಪ್ಟ್, ಗ್ರೀಸ್ ಮತ್ತು ಆಧುನಿಕ ಪಾಶ್ಚಾತ್ಯರೀತಿಗಿಂತ ಭಿನ್ನವಾಗಿವೆ. ಸತ್ತಾರೂಪವಾದ ವಾಸ್ತು ವಿಕೃತಿಗಳಲ್ಲಿ ಈಜಿಪ್ಟಿಯನ್ನರು ಶುದ್ಧರೇಖೆಯ ಸ್ಥಿರೀಕರಣಕ್ಕೂ ಗ್ರೀಕರು ಮಾನವದೇಹದ ಪ್ರಮಾಣ, ಸೌಷ್ಠವ, ಸೌಂದರ್ಯಗಳಿಗೂ ಪ್ರಾಮುಖ್ಯತೆ ಕೊಟ್ಟಿದ್ದರು. ಆದರೆ ಭರತಖಂಡದಲ್ಲಿ ಕಠಿನವಾದ ವಸ್ತುವಿನ ಪ್ರಸಾರಣೆಯಲ್ಲಿ ವೈವಿಧ್ಯವನ್ನು ರೇಖಾವಿನ್ಯಾಸದಿಂದ ಸೂಚಿಸಲಿಲ್ಲ. ವರ್ತನೆಯೇ ತಕ್ಷಣದ ಜೀವವೆಂದೂ ವಸ್ತುವು ಮೇಲಿನ ರೇಖೆಗಳಿಗೆ ಅಧೀನವಾಗದೆ ಅನಂತತ್ವವನ್ನು ಸೂಚಿಸುವದೆಂದು ಭಾರತೀಯ ಶಿಲ್ಪಿಗಳು ಗಣಿಸಿದ್ದರು. ಆದುದರಿಂದ ಪಾಶ್ಚಾತ್ಯ ಶಿಲ್ಪದಲ್ಲಿದ್ದಂತೆ ಇಲ್ಲಿ ನಿಮ್ನ, ಉನ್ನತ, ವೃತ್ತಚಿತ್ರಗಳೆಂಬ ಭೇದಗಳಿಗೆ ಪ್ರಾಶಸ್ತ್ಯವಿಲ್ಲ. ವಸ್ತ್ರ ಆಭರಣಗಳಿಂದಲೇ ನಿಮ್ನೋನ್ನತ ಭಾಗಗಳು ಸೂಚಿತವಾಗುವವು. ಚೈತನ್ಯಾಂಶದೃಷ್ಟಿಯಿಂದ ಕೆಲವು ವಿಗ್ರಹಗಳನ್ನು ಬಿಟ್ಟರೆ ಸಾಮಾನ್ಯವಾಗಿ ವಿಗ್ರಹದ ಯಾವ ಒಂದು ಭಾಗವೇ ಅತ್ಯಂತ ಮುಖ್ಯವೆಂದ್ದು ಭಾರತೀಯರು ಭಾವಿಸಿರಲಿಲ್ಲ. ಚಿತ್ರಫಲಕದಲ್ಲಿ ಉಪವಿಗ್ರಹಗಳ ಜೋಡಣೆಯು ಮುಖ್ಯ ವಿಗ್ರಹವನ್ನೇ ನಿರ್ದೇಶಿಸಬೇಕೆಂಬ ನಿಯಮವಿಲ್ಲದಿದ್ದರೂ ಎಲ್ಲಾ ಮೂರ್ತಿಗಳೂ ಚೈತನ್ಯಯುಕ್ತವಾಗಿ ಚಿತ್ರಫಲಕಕ್ಕೆ ಸಮಷ್ಟಿರೂಪವನ್ನು ಕೊಡುವವು. ಆನಂದಾಂಶದೃಷ್ಟಿಯಿಂದ ಪಾಶ್ಚಾತ್ಯಶಿಲ್ಪಿಗಳು ರೂಪವು ಸಹಜತೆಯಲ್ಲಿಯೇ ಕೊನೆಗೊಳ್ಳುವಂತೆ ಚಿತ್ರಿಸುವರು. ಆದರೆ ಭಾರತೀಯರು ವಿಗ್ರಹಕ್ಕೂ ಆಕಾಶ, ಕಾಲ, ದಿಕ್ಕುಗಳಿಗೂ ಸಂಬಂಧವನ್ನು ಕಲ್ಪಿಸಿ, ಮನುಷ್ಯನ ದೃಷ್ಟಿಯು ನೇತ್ರಗೋಳಕದಿಂದ ಹೊರಹೊರಟು ಬಾಹ್ಯವಸ್ತುವನ್ನು ಗ್ರಹಿಸುವಾಗ ಬಾಹ್ಯಪ್ರಪಂಚದಲ್ಲಿ ಉಂಟಾಗುವ ಮಾಯೆಯ ವಿಕ್ಷೇಪ ಮತ್ತು ಆವರಣ ಶಕ್ತಿಪ್ರಭೇದಗಳ ಪ್ರಭಾವವನ್ನು ಬಿಂಬ-ಪ್ರತಿಬಿಂಬ ನ್ಯಾಯದಂತೆ ಇನ್ದ್ರಿಯಗೋಚರವಾಗುವಂತೆ ಮಾಡುವರು. ಆದುದರಿಂದ ಬಾಹ್ಯದಲ್ಲಿರುವ ಶಿಲ್ಪದ ಆನಂದಾಂಶವು ಉಪಾಸಕನ ಆತ್ಮಾನಂದಾಂಶದ ಪ್ರತಿಬಿಂಬವಾಗಿರುವದು.[25] ಇಂತಹ ದೃಗ್-ದೃಶ್ಯ

ವಿವೇಕದಿಂದ ವಿಕಾರ, ವಿರೂಪ, ಅವಲಕ್ಷಣ ಎಂದು ಅನಭಿಜ್ಞರಿಗೆ ತೋರ ಬಹುದಾದ ವಸ್ತುವಿನಲ್ಲಿಯೂ ಭಾರತೀಯ ಶಿಲ್ಪಿಗಳು ಸತ್ಯ, ಚೈತನ್ಯ, ಆನನ್ದ, ಸೌಂದರ್ಯಗಳನ್ನು ತೋರಿಸಲು ಶಕ್ತರಾದುದರಿಂದ ತಕ್ಷಣದಲ್ಲಿ ಪಾಶ್ಚಾತ್ಯ ಶಿಲ್ಪಕ್ಕಿಂತಲೂ ಹೆಚ್ಚಾಗಿ ಸ್ವೈಜ, ನೈಸರ್ಗಿಕ ಗುಣವಿದೆ. ಕೇವಲ ಬಾಹ್ಯಪ್ರಕೃತಿಯ ಪ್ರತಿಕೃತಿಯು ಹೇಗೆ ಕಲಾದೃಷ್ಟಿಯಿಂದ ನಿಕೃಷ್ಟವೆಂದು ಗಣಿಸಿದೆಯೋ ಅಂತೆಯೇ ಶಿಲ್ಪವು ಆನ್ತರಿಕವಾದ ಹೃದಯ ಮರ್ಮಗಳನ್ನು ದೇಶ, ಕಾಲ, ವಸ್ತು, ನಾಮ, ರೂಪ ಮುಂತಾದ ಕಟ್ಟಿಗೆ ಒಳಗಾಗಿದ್ದರೂ ಸ್ಥಾಯೀಭಾವರೂಪವಾಗಿ ವ್ಯಕ್ತಪಡಿಸುವ ಶಕ್ತಿಹೊಂದಿರುವದೇ ಉತ್ತಮ ಕಲೆಯ ಲಕ್ಷಣ. ಆದುದರಿಂದ ವೇದಯುಗದಿಂದಲೂ ಮಾನವನಿಗೂ ಬಾಹ್ಯ ಪ್ರಪಂಚಕ್ಕೂ ಇರತಕ್ಕ ಸಂಬಂಧವನ್ನು ತೋರಿಸುವದೇ ಭಾರತೀಯ ಶಿಲ್ಪದ ಉದ್ದೇಶ. ಸಗುಣೋಪಾಸನೆ ಅಥವಾ ಪ್ರತೀಕೋಪಾಸನೆಯಲ್ಲಿ ಜೀವಾತ್ಮಕ್ಕೂ ಪರಮಾತ್ಮಕ್ಕೂ ಸಂಬಂಧಗಳನ್ನು ಅಧ್ಯಾಸಮಾಡುವಾಗ ಚಿತ್ತವೃತ್ತಿಗಳಿಗನುಸಾರವಾಗಿ ಅಧಿಕಾರಭೇದವೂ ಉಂಟಾಗುವದು. ಆದುದ ರಿಂದಲೇ ಮೂರ್ತ್ಯುಪಾಸಕನ ಅನ್ನಮಯ (ದೇಹ), ಪ್ರಾಣಮಯ, ಮನೋ ಮಯ, ವಿಜ್ಞಾನಮಯ, ಆನನ್ದಮಯ ಕೋಶಗಳನ್ನು ಉತ್ತರೋತ್ತರ ಸಾಕ್ಷಾತ್ಕಾರಮಾಡಿಕೊಳ್ಳುವದಕ್ಕಾಗಿ ಭಾರತೀಯ ತಕ್ಷಣರೀತಿಗಳು ಏರ್ಪಟ್ಟಿವೆ. ಈ ತತ್ವವೇ ಭಾರತೀಯ ಶಿಲ್ಪರೀತಿಯ ವೈಶಿಷ್ಟ್ಯ.[25]

ವೇದಯುಗದಲ್ಲಿ ಮೂರ್ತಿಗಳನ್ನು ಮರ, ಕಲ್ಲು, ಲೋಹ, ಮೃತ್ತಿಕೆ, ರತ್ನ ಗಳಿಂದ ಮಾಡುತ್ತಿದ್ದರು. ಎರಕಹೊಯ್ದು ಮಾಡುತ್ತಿದ್ದರು.[26] ಅಥರ್ವವೇದ ದಲ್ಲಿ "ಕೃತ್ಯಾ" ವಿಗ್ರಹಗಳನ್ನು ಮಾಡುವ ವಿಧಾನವು ಕಂಡುಬರುವುದು.

---

[25] ಆರಾಧಯಾಮಿ ಮಣಿಸನ್ನಿಭಮಾತ್ಮಲಿಂಗಂ | ಮಾಯಾಪುರೀಹೃದಯಪಂಕಜ ಸನ್ನಿ ವಿಷ್ಟಮ್ | ಶ್ರದ್ಧಾನದೀ ವಿಮಲಚಿತ್ತಜಲಾಭಿಷೇಕೈರ್ನಿತ್ಯಂ ಸಮಾಧಿಕುಸುಮೈರಪುನರ್ಭ ವಾಯ || ಅಹಮೇಕೋsವಶಿಷ್ಟೋsಸ್ಮೀತ್ಯೇವಮಾವಾಹಯೇಚ್ಛಿವಂ | . . . ಶ್ರವಣಂ ತಸ್ಯದೇವಸ್ಯಶ್ರೋತವ್ಯಾಭಾವಚಿನ್ತನಮ್ | ಮನನಂತ್ವಾತ್ಮಲಿಂಗಸ್ಯ ಮನ್ತವ್ಯಾಭಾವ ಚಿನ್ತನಮ್ | ಧ್ಯಾತವ್ಯಾಭಾವವಿಜ್ಞಾನಂ ನಿಧಿಧ್ಯಾಸನಮಾತ್ಮನಃ | ಸಮಸ್ತ ಭ್ರಾನ್ತಿವಿಕ್ಷೇಪ ರಾಹಿತ್ಯೇನಾತ್ಮನಿಷ್ಠತಾ | ಸಮಾಧಿರಾತ್ಮನೋನಾಮ ನಾನ್ಯಚ್ಚಿತ್ತಸ್ಯ ವಿಭ್ರಮಃ | ತತ್ರೈವ ಬ್ರಹ್ಮಣಿಸದಾ ಚಿತ್ತವಿಶ್ರಾನ್ತಿರಿಷ್ಯತೇ ||—ಶಂಕರಾಚಾರ್ಯರ ನಿರ್ಗುಣಮಾನಸಪೂಜಾ.

[26] ಋಗ್, VI, ೩೮-೬. ಅಶ್ರೀರಂ ಕೃಣುತ ಸುಪ್ರತೀಕಮ್ ೧; ಇನ್ದ್ರಸ್ತ ಕರ್ತಾ ಸ್ವಪಸ್ತಮೋಭೃತ್—ಋಗ್ IV, ೧೭-೪ , ಸೂರ್ಮ್ಯಂ ಸುಷಿರಮಿವ ಋಗ್ VIII, ೬೯—೧೨ ; ಕಿಂಸ್ವಿದ್ವನಂ ಕಉಸವೃಕ್ಷ ಆಸ ಯತೋದ್ಯಾವಾಪೃಥಿವೀ ನಿಷ್ಟತಕ್ಷುಃ |— ಋಗ್ X, ೮೧-೪.

ಒಂದು ವೈದಿಕ ಸಮಾಧಿಯಲ್ಲಿ ಸ್ತ್ರೀವಿಗ್ರಹವು ಸಿಕ್ಕಿದೆ. ಹರಪ್ಪ ಸಂಸ್ಕೃತಿಯಲ್ಲಿ ಮೂರ್ತಿರಚನೆಯು ಉತ್ತಮಾವಸ್ಥೆಯಲ್ಲಿದ್ದಿತು. ಮಾತೃದೇವತೆ, ಶಿವ-ಪಶುಪತಿ, ನಟರಾಜ, ದೇವದಾಸಿ, ಯೋಗಿ, ವೃಷಭ ಮುಂತಾದ ವಿಗ್ರಹಗಳೂ ಲಿಂಗ, ಯೋನಿ, ಶಾಲಗ್ರಾಮ ಇತ್ಯಾದಿಗಳೂ ತಕ್ಷಣ ಕಲಾಕೌಶಲ್ಯವನ್ನು ತೋರಿಸುವವು. ದೇವತಾಪರವಾದ ಉಪನಿಷತ್ತುಗಳಲ್ಲಿ ಮೂರ್ತ-ಅಮೂರ್ತ ರೂಪಗಳ ಉಲ್ಲೇಖನೆಯಿದೆ. ಧರ್ಮಶಾಸ್ತ್ರಗಳಲ್ಲಿ ಪಂಚಾಯತನ ಪೂಜೆ ದೇವಾಲಯ ನಿರ್ಮಾಣ ಮುಂತಾದ ವಿಷಯಗಳಿವೆ. ಬೌದ್ಧಮತ ಹುಟ್ಟುವದಕ್ಕೆ ಹಿಂದೆಯೇ ಮೂರ್ತ ಅಮೂರ್ತ ಉಪಾಸನೆಗಳೆರಡೂ ಪ್ರಚಾರದಲ್ಲಿದ್ದವು. ಬೌದ್ಧಮತದಲ್ಲಿ ಮೊದಮೊದಲು ವೈದಿಕಮತದ ಅಮೂರ್ತ ಚಿಹ್ನೆಗಳಾದ ಧರ್ಮಚಕ್ರ, ಛತ್ರ, ಸ್ವಸ್ತಿಕ, ತ್ರಿಶೂಲ, ನನ್ದಿಪದ, ಪಾದಚಿಹ್ನೆಗಳೇ ಕಂಡುಬರುವವು. ಮಹಾಯಾನಪಂಥವು ಮಧುರಾ ಪ್ರಾಂತಕ್ಕೆ ಹರಡಿದಾಗ ಮಧುರಾಶಿಲ್ಪರೀತಿಯು ಬುದ್ಧನ ಮನುಷ್ಯಾಕಾರ ವಿಗ್ರಹಗಳಿಗೆ ಕಾರಣವಾಯಿತು. ಮಿಳಿಂದಪನ್ಹದಲ್ಲಿ ಬುದ್ಧವಿಗ್ರಹಗಳನ್ನು ಮಾಡಕೂಡದೆಂದು ಹೇಳಿದೆ. ಆದರೆ ತಾನ್ತ್ರಿಕ ಸಂಪರ್ಕದಿಂದ ಬುದ್ಧಮೂರ್ತಿಗಳು ವಿಶಿಷ್ಟರೂಪವನ್ನು ಪಡೆದವು. ಮಧುರಾರೀತಿಯನ್ನನುಸರಿಸಿ ವಾಯವ್ಯಭಾಗಗಳಲ್ಲಿ ಗಾನ್ಧಾರರೀತಿಯುಂಟಾಯಿತು. ಯವನ ಶಿಲ್ಪಿಗಳು ಗ್ರೀಕ್ ಸಂಪ್ರದಾಯದಂತೆ ಅಂಗಸೌಷ್ಠವ, ವಸ್ತ್ರ, ಆಭರಣಗಳಲ್ಲಿ ಮಾತ್ರ ವೈಶಿಷ್ಟ್ಯವನ್ನು ತೋರಿಸಿರುವರು. ಈ ವಿಜಾತಿಯವಾದ ಗಾನ್ಧಾರರೀತಿಯ ಪ್ರಭಾವವು ಭಾರತೀಯ ಶಿಲ್ಪದಲ್ಲಿ ಹೆಚ್ಚಾಗಿ ಕಂಡುಬರುವದಿಲ್ಲ.

ಮೌರ್ಯರ ಕಾಲದಲ್ಲಿ ಅರ್ಚಾವಿಗ್ರಹಗಳೂ ದೇವಾಲಯಗಳೂ ಇದ್ದವೆಂದು ಮಹಾಭಾಷ್ಯ, ಅರ್ಥಶಾಸ್ತ್ರ ಮತ್ತು ಗ್ರೀಕರ ಗ್ರನ್ಥಗಳಿಂದ ತಿಳಿದುಬರುವದು. ಈ ಕಾಲದ ಯಕ್ಷಯಕ್ಷಿಣಿಯರ ವಿಗ್ರಹಗಳು ಸ್ವದೇಶೀಯ ಶಿಲ್ಪರೀತಿಯನ್ನೂ ಸ್ತೂಪಸ್ತಂಭಗಳ ಮೇಲೆ ಕಂಡುಬರುವ ವಿಗ್ರಹಗಳು ಪರ್ಷಿಯ ಗ್ರೀಕ್ ಪ್ರಭಾವವನ್ನೂ ತೋರಿಸುವವೆಂದು ಕೆಲವರು ಅಭಿಪ್ರಾಯಪಡುವರು. ಕುಷಾಣರು, ಜೈನರು, ಶಾತವಾಹನರೂ ಕ್ರಿ.ಶ. ೧-೨ ನೆಯ ಶತಾಬ್ದಗಳಲ್ಲಿ ವಿಗ್ರಹಗಳನ್ನು ಮಾಡಿಸಿರುವರು. ಕಾರ್ಲಿ, ನಾಸಿಕ್, ಅಮರಾವತಿ ತಕ್ಷಣಗಳಲ್ಲಿ ಬಾರ್ಹುತ್ ಸಾಂಚಿ ಸಂಪ್ರದಾಯಗಳು ಕಂಡುಬರುವವು. ಗುಪ್ತರ ಕಾಲದಲ್ಲಿ ಪೌರಾಣಿಕ, ತಾನ್ತ್ರಿಕ ಭಾವಗಳು ಹೆಚ್ಚಾದವು. ಮೂರ್ತಿಲಕ್ಷಣಗಳು ನಿರ್ಧಾರವಾದವು. ಗುಪ್ತರ ಶಿಲ್ಪದಲ್ಲಿ ಗಾನ್ಧಾರರೀತಿಯ ಪ್ರಭಾವವೂ ಕಂಡುಬರುವದು.

ದಕ್ಷಿಣದಲ್ಲಿ ಬನವಾಸಿ, ತಾಳಗುಂದ, ಗುಡಿಮಲ್ಲಂ, ಮಹಾಬಲಿಪುರಂ ಮುಂತಾದ ಸ್ಥಳಗಳಲ್ಲಿ ಪ್ರಾಚೀನ ಶೈವ ಮತ್ತು ವೈಷ್ಣವ ವಿಗ್ರಹಗಳಿವೆ. ಪಲ್ಲವರೂ ಬಾದಾಮಿ ಚಾಳುಕ್ಯರೂ ಗುಹಾಲಯಗಳನ್ನೂ ಪ್ರತ್ಯೇಕ ದೇವಾಲಯಗಳನ್ನೂ ನಿರ್ಮಿಸಿ ವಿಗ್ರಹಗಳಿಂದ ಅಲಂಕರಿಸಿದರು. ಮೂರ್ತಿಯು ತಾಂತ್ರಿಕ ರೀತಿಯ ಯಂತ್ರವಾಯಿತು. ಚೋಳ, ರಾಷ್ಟ್ರಕೂಟ, ಕಲ್ಯಾಣಿ ಚಾಳುಕ್ಯರ ಕಾಲದಲ್ಲಿ ದೇವಾಲಯಗಳು ವಿಸ್ತಾರವಾಗಿ ಕಲಾಪ್ರದರ್ಶನೆಗೆ ಹೆಚ್ಚು ಅವಕಾಶ ದೊರೆಯಿತು. ಮೂಲವಿಗ್ರಹವೇ ಅಲ್ಲದೆ ತೋರಣ, ಕಂಬ, ಬಲಿಪೀಠ, ಧ್ವಜಸ್ತಮ್ಭ, ಮೇಲ್ಛಾವಣಿ, ಲೋವೆಕಲ್ಲು, ಗೋಡೆಗಳು ಎಲ್ಲವೂ ಕೆತ್ತನೆ ಕೆಲಸದಿಂದ ಅಲಂಕೃತವಾದವು. ಹೊಯ್ಸಳ ಶಿಲ್ಪದಲ್ಲಿ ವೈಶಿಷ್ಟ್ಯವಿದೆ. ದೇವಾಲಯದ ಸುತ್ತಲೂ ಸಾಲುಸಾಲಾಗಿ ಕೆತ್ತಿದ ಆನೆ, ಹಂಸ, ಸಿಂಹ, ಶರಭ, ಮಕರ, ಮಹಾಭಾರತ–ರಾಮಾಯಣ–ಭಾಗವತ ಕಥೆಗಳ ಚಿತ್ರಗಳು ಗೂಡುಗಳಲ್ಲಿರುವ ವಿಗ್ರಹಗಳ ಹಿಂದೆ ತೂಗುಹಾಕಿದೆ ಪರದೆ ಎಂಬ ಭಾವವನ್ನು ಕೊಡುವವು. ಅದುವರೆಗೂ ಶಿಲ್ಪಿಗಳು ತಮ್ಮ ಹೆಸರನ್ನು ಸೂಚಿಸುತ್ತಿರಲಿಲ್ಲ. ಬೇಲೂರು, ಸೋಮನಾಥಪುರ, ಹಳೇಬೀಡು, ದೊಡ್ಡ ಗದ್ದವಳ್ಳಿ ಮುಂತಾದ ಹೊಯ್ಸಳ ರೀತಿಯ ದೇವಾಲಯಗಳಲ್ಲಿ ಮೂರ್ತಿಗಳ ಮತ್ತು ಶಿಲ್ಪಿಗಳ ಹೆಸರುಗಳು ಕಂಡುಬರುವವು. ಜೈನರ ದೇವಾಲಯಗಳು ಚಾಳುಕ್ಯ-ಹೊಯ್ಸಳ ರೀತಿಯಲ್ಲೇ ಇವೆ. ಆದರೆ ಮೂರ್ತಿಗಳ ಭಾವದಲ್ಲಿ ವ್ಯತ್ಯಾಸವಿದೆ. ಶ್ರವಣಬೆಳಗೊಳದ ಗೊಮ್ಮಟೇಶ್ವರ ವಿಗ್ರಹವು ವೈರಾಗ್ಯವನ್ನೂ ಸ್ಥಾಯೀಭಾವವನ್ನೂ ಸೂಚಿಸುವದು. ಇದಕ್ಕೆ ಪ್ರತಿಯಾಗಿ ನಟರಾಜವಿಗ್ರಹವು ಶಿರೋಭಾಗದಲ್ಲಿ ಮಾತ್ರ ಕೂಟಸ್ಥಭಾವವನ್ನೂ ಇತರ ಅಂಗಗಳಲ್ಲಿ ಜಗತ್ಸೃಷ್ಟಿ ಸ್ಥಿತಿ ಸಂಹಾರ ರೂಪವಾದ ಸಂಚಾರಿಭಾವವನ್ನೂ ನಿರ್ದೇಶಿಸುವದು. ವಿಜಯನಗರ ಶಿಲ್ಪದಲ್ಲಿ ಹಂಪಿಯ ಕಡಲೆಕಾಳು ಗಣಪತಿ, ಸಾಸಿವೆಕಾಳು ಗಣಪತಿ, ಲಕ್ಷ್ಮೀನೃಸಿಂಹ, ಕಂಚಿಯ ಪಾಂಡವ ಪೆರುಮಾಳ್ ಮುಂತಾದ ವಿಗ್ರಹಗಳಲ್ಲಿ ಅದ್ಭುತಾಕಾರ (Gigantism) ಕಂಡುಬರುವದು. ಆದರೂ ಹಂಪಿಯ ವಿಠ್ಠಲ ದೇವಾಲಯ ಮುಂತಾದವುಗಳಲ್ಲಿ ತಕ್ಷಣ ಸೂಕ್ಷ್ಮತೆಯೂ ಇದೆ. ಪಾಳೆಯಗಾರರ ಕಾಲದ ವಿಗ್ರಹಗಳಲ್ಲಿ ಕಲಾಕೌಶಲ್ಯವು ಹೆಚ್ಚಾಗಿಲ್ಲ.

ಉತ್ತರದಲ್ಲಿ ಗುಜರಾತ್, ರಾಜಪುಟಾಣ, ಮಧ್ಯದೇಶದ ಚಾಂಡೇಲ-ಹೈಹಯ, ಬಿಹಾರ್ ಬಂಗಾಳದ ಪಾಲ-ಸೇನ, ಒರಿಸ್ಸ-ಕಳಿಂಗ ಪ್ರಾಂತದ ಭುವನೇಶ್ವರ್, ಪುರೀ, ಕೋಣಾರ್ಕ ದೇವಾಲಯಗಳ ತಕ್ಷಣ ರೀತಿಯು ಸಂಪ್ರದಾಯವನ್ನೇ ಮುಖ್ಯವಾಗಿಟ್ಟುಕೊಂಡು, ಔನ್ನತ್ಯ ಅಲಂಕಾರಗಳನ್ನೇ

ಪ್ರಧಾನವೆಂದು ಗಣಿಸಿದೆ. ಮುಸ್ಲಿಮರ ತಕ್ಷಣದಲ್ಲಿ ರೇಖೆಗಳ ನಕಾಶೆಯೇ (Geometrical Patterns) ಮುಖ್ಯ. ಶಿಲ್ಪಿಯ ದೇಹಶ್ರಮೆ ಕಂಡುಬರುವದೇ ಹೊರತು ಕಲಾದೃಷ್ಟಿಯು ಸಂಕುಚಿತವಾಗಿದೆ. ಇದಕ್ಕೆ ಉತ್ತಮ ಶಿಲ್ಪಿಗಳ ಅಭಾವವೇ ಕಾರಣವೆಂದು ಹೇಳಲಾಗದು. ದೇಶದ ಪಾರತಂತ್ರ್ಯವು ಬಡತನವು ಹೆಚ್ಚುತ್ತ ಬಂದಹಾಗೆಲ್ಲ ಕಲೆಯು ಕ್ಷೀಣಿಸಿತು.

**ಪ್ರತಿಮಾಲಕ್ಷಣ :** ಮಾನಸಾರದಲ್ಲಿ ಪ್ರತಿಮೆಗಳನ್ನು ಚಿನ್ನ, ಬೆಳ್ಳಿ, ತಾಮ್ರ, ಕಲ್ಲು, ಮರ, ಗಾರೆ, ಮರಳು, ಗಾಜು, ಮತ್ತು ಮಣ್ಣಿನಿಂದ ಮಾಡಬಹುದೆಂದು ಹೇಳಿದೆ. ಶಾಸ್ತ್ರೋಕ್ತವಾದ ಮಾನಾನುಸಾರ ಮಾಡಿದ ವಿಗ್ರಹಗಳೇ ಪೂಜಾರ್ಹ.[27] ಪ್ರಮಾಣ ನಿರ್ಣಯದಲ್ಲಿ ಮಾನ (ಎತ್ತರ), ಪ್ರಮಾಣ (ಅಗಲ), ಪರಿಮಾಣ (ಸುತ್ತಳತೆ), ಲಮ್ಬಮಾನ (ಸೂತ್ರದ ಅಳತೆ), (ಅಥವಾ ವಿಗ್ರಹದ ಹೊರಭಾಗದ ಉದ್ದ—Surface), ಉನ್ಮಾನ (ಸ್ಥೌಲ್ಯ, ದಪ್ಪ), ಉಪಮಾನ (ಎರಡು ಅಂಗಗಳ ಮಧ್ಯೆ ಇರಬೇಕಾದ ಅಂತರ) ಎಂಬ ಆರು ಮುಖ್ಯ. ವಿಗ್ರಹದ ಆದಿಮಾನ (ಮೊದಲಳತೆ) ವನ್ನು ದೇವಾಲಯದ ವಿಸ್ತಾರ, ಎತ್ತರ, ದ್ವಾರದ ಎತ್ತರ, ಪ್ರತಿಷ್ಠೆಮಾಡಿಸುವವನ ಅಳತೆ, ವಾಹನದ ಅಳತೆ, ಮೂಲವಿಗ್ರಹದ ಪೀಠದ ಎತ್ತರ ಮುಂತಾದುವನ್ನು ಅನುಸರಿಸಿ ನಿರ್ಧರಿಸಬೇಕು.

ಅಳತೆಮಾಡುವದಕ್ಕೆ ಅಂಗುಳ ಮತ್ತು ತಾಳಮಾನಗಳನ್ನು ಪಯೋಗಿಸ ಬೇಕು. ಅಂಗುಳದಲ್ಲಿ ಮಾನಾಂಗುಳ (ಮುಕ್ಕಾಲು ಇಂಚ್), ಬೇರಾಂಗುಳ (ಮೂಲವಿಗ್ರಹದ ನಡುಬೆರಳು ಪರ್ವ), ಮತಿ ಅಂಗುಳ (ಪೂಜೆ ಮಾಡುವವನ ಅಥವಾ ಶಿಲ್ಪಿಯ ನಡುಬೆರಳು ಪರ್ವ), ದೇಹಾಂಗುಳ (ವಿಗ್ರಹದ ತಾಳ ಪ್ರಮಾಣರೀತಿ) ಎಂದು ನಾಲ್ಕು ವಿಧ. ತಾಳಮಾನದಲ್ಲಿ ೧೦, ೧೨ ಭೇದಗಳಿವೆ.

ಏಕತಾಳ—೧೨ ಅಂಗುಳ ; ಕಬನ್ಧ, ಮತ್ಸ್ಯಗಳು.
ದ್ವಿತಾಳ—೨೪ ಅಂಗುಳ ; ಪಕ್ಷಿ, ಕೂಷ್ಮಾಣ್ಡರು.
ತ್ರಿತಾಳ—೩೬ ಅಂಗುಳ ; ಭೂತ, ಕಿನ್ನರರು.
ಚತುಸ್ತಾಳ—೪೮ ಅಂಗುಳ ; ಕುಬ್ಜರು, ಕುಳ್ಳರು.
ಪಂಚತಾಳ—೬೦ ಅಂಗುಳ ; ಗಣಪತಿ, ಗೂನಿನವರು.
ಷಟ್ತಾಳ—೭೨ ಅಂಗುಳ ; ಪ್ರೇತ, ವ್ಯಾಘ್ರಗಳು.
ಸಪ್ತತಾಳ—೮೪ ಅಂಗುಳ ; ವಾಮನಾವತಾರ, ವೇತಾಳ.
ಅಷ್ಟತಾಳ—೯೬ ಅಂಗುಳ ; ಮನುಷ್ಯರು.

---

27 ಮಾನಸಾರ. ಅ. ೫೧-೭೦, ಶಾಸ್ತ್ರಮಾನೇನಯೋ ರಮ್ಯಃ ಸ ರಮ್ಯೋನಾನ್ಯಏವಹಿ ||




ನವತಾಳ—೧೦೮ ಅಂಗುಳ: ಇಂದ್ರ, ಅಸುರ, ರಾಕ್ಷಸರು.
ನವತಾಳ ಸತ್ರ್ಯಂಗುಳ—೧೧೧ ಅಂಗುಳ; ಮಹಾಪುರುಷರು.
ನವತಾಳ ಉತ್ತಮ—೧೧೩ ಅಂಗುಳ; ದೈತ್ಯ ಯಕ್ಷೋರಗಸಿದ್ಧ ಗಾಂಧರ್ವ ಚಾರಣರು.
ನವಾರ್ಧತಾಳ—೧೧೪ ಅಂಗುಳ; ನವಗ್ರಹಗಳು.
ದಶತಾಳ—ಅಧಮ—೧೧೬ ಅಂಗುಳ; ಲೋಕಪಾಲ, ಆದಿತ್ಯ, ರುದ್ರ, ವಸು, ಸಪ್ತರ್ಷಿ, ಗರುಡ, ಶೇಷ, ದುರ್ಗಾ, ಗುಹ, ಅಶ್ವಿನೀದೇವತೆಗಳು, ಭೃಗುಮಾರ್ಕಾಂಡೇಯರು.
ದಶತಾಳ—ಮಧ್ಯಮ—೧೨೦ ಅಂಗುಳ; ಶ್ರೀ, ಭೂ, ಉಮಾ, ಸರಸ್ವತೀ ಮುಂತಾದ ದೇವಿಯರು.
ದಶತಾಳ—ಉತ್ತಮ—೧೨೪ ಅಂಗುಳ; ಬ್ರಹ್ಮ, ವಿಷ್ಣು, ಮಹೇಶ್ವರ.

ದಾನವರಿಗೆ ನವತಾಳ, ಬುದ್ಧರಿಗೆ ದಶತಾಳ, ದೇವತೆಗಳಿಗೆ ಏಕದಶ, ರಾಕ್ಷಸರಿಗೆ ದ್ವಾದಶತಾಲಗಳೆಂದೂ ಹೇಳಿದೆ. ಉತ್ತಮ ದಶತಾಳ ಬೇರದ ವಿಭಾಗ ಪ್ರಮಾಣಗಳನ್ನು ಉದಾಹರಣೆಗಾಗಿ ಕೆಳಗೆ ಸೂಚಿಸುವೆವು.

| | | ಕಾರಣ, ಕಾಮಿಕಾಗಮಗಳು | ವೈಖಾನಸಾಗಮ—ಶಿಲ್ಪರತ್ನ |
|---|---|---|---|
| ಕಿರೀಟ | ಉಷ್ಣೀಷ— | ೧ ಅಂಗುಳ—೦ ಯವ | ೧ ಅಂಗುಳ—೩ ಯವ |
| | ಉಷ್ಣೀಷ—ಕೇಶರೇಖೆ | ೩ ,, —೦ ,, | ೩ ,, —೦ ,, |
| ಮುಖ | ಕೇಶರೇಖೆ—ಅಕ್ಷಿಸೂತ್ರ | ೪ ,, —೪ ,, | ೪ ,, —೩ ,, |
| | ಅಕ್ಷಿಸೂತ್ರ—ನಾಸಿಕಾಂತ | ೪ ,, —೪ ,, | ೪ ,, —೩ ,, |
| | ನಾಸಿಕಾಂತ—ಚಿಬುಕಾಂತ | ೪ ,, —೪ ,, | ೪ ,, —೩ ,, |
| | | ೧೪ ಅಂಗುಳ—೪ ಯವ | ೧೩ ಅಂಗುಳ—೧ ಯವ |
| | ಚಿಬುಕ—ಕಣ್ಠ | ೦ ಅಂಗುಳ—೪ ಯವ | ೦ ಅಂಗುಳ—೪ ಯವ |
| | ಕಣ್ಠ | ೪ ,, —೦ ,, | ೩ ,, —೭ ,, |
| | ಹಿಕ್ಕಾಸೂತ್ರ—ಸ್ತನಾಗ್ರ | ೧೩ ,, —೪ ,, | ೧೩ ,, —೩ ,, |
| | ಸ್ತನ—ನಾಭಿ | ೧೩ ,, —೪ ,, | ೧೩ ,, —೩ ,, |
| | ನಾಭಿ—ಮೇಢ್ರಮೂಲ | ೧೩ ,, —೦ ,, | ೧೩ ,, —೩ ,, |
| | ಮೇಢ್ರ—ಊರು | ೨೭ ,, —೦ ,, | ೨೭ ,, —೦ ,, |
| | | | (೨೬ ೧/೨ ಅಂಗುಳ—ವೈಖಾನಸ) |
| | ಊರು—ಜಾನು | ೪ ,, —೦ ,, | ೪ ,, —೦ ಯವ |
| | | | ೪ ,, —೩ ,, (ವೈ.) |
| | ಜಾನು—ಜಂಘಾ | ೨೭ ,, —೦ ,, | ೨೭ ,, —೦ ,, |
| | | | ೨೬ ,, —೫ ,, (ವೈ.) |
| | ಜಂಘಾ—ಪಾದತಲ | ೪ ,, —೦ ,, | ೪ ,, —೦ ,, |
| | | | ೪ ,, —೩ ,, (ವೈ.) |
| | ಒಟ್ಟು | ೧೨೪ ಅಂಗುಳ | ೧೨೪ ಅಂಗುಳ |

ಇದು ಉತ್ತಮ ದಶತಾಲ. ಹೀಗೆಯೇ ಇತರ ತಾಲಗಳ ಬೇರಗಳಿಗೆ ಅಂಗಪ್ರಮಾಣವನ್ನು ಲೆಕ್ಕಿಸಬೇಕು. ಈ ತಾಲಮಾನಗಳು ಪ್ರಾಚೀನ ಈಜಿಪ್ಷಿಯನ್ ಮತ್ತು ಗ್ರೀಕ್, ಆಧುನಿಕ ಯೂರೋಪಿಯನ್ ಶಿಲ್ಪಿಗಳ ತಾಳಮಾನಕ್ಕಿಂತಲೂ ಸಮರ್ಪಕವಾಗಿಯೂ, ನೈಸರ್ಗಿಕವಾಗಿಯೂ ಕಲಾ ದೃಷ್ಟಿಯಿಂದ ಉತ್ತಮವಾಗಿಯೂ ಇರುವವೆಂದು ಪಾಶ್ಚಾತ್ಯರು ಅಂಗೀಕರಿಸಿರುವರು.[28]

[28] "The Hindu system is more capable of producing works of art in unskilled hands than any other method. The Hindu image maker does not work from life but he has a most elaborate and beautiful system of proportions which he uses constantly, combining with these close observation and study of natural details It is in fact a series of anatomical rules and formulæ, of infinitely more practical use than any European system which I know of, for the Indian one treats of the

ದೇವತಾಮೂರ್ತಿಗಳಲ್ಲಿ ಶೈವ, ವೈಷ್ಣವ, ಶಾಕ್ತ, ಸೌರ, ಗಾಣಪತ್ಯ, ಕೌಮಾರ, ಜೈನ, ಬೌದ್ಧ ಪ್ರಭೇದಗಳನೇಕವಾಗಿವೆ. ಇವುಗಳ ಲಕ್ಷಣಗಳನ್ನೂ ಮುದ್ರೆಗಳನ್ನೂ ಆಭರಣವಾಹನಾದಿಗಳನ್ನೂ ಚರ್ಚಿಸಲು ಇಲ್ಲಿ ಅವಕಾಶವಿಲ್ಲ. ಇತರ ಗ್ರಂಥಗಳಿಂದ ತಿಳಿಯಬಹುದು.[29]

ಪಾಕಶಾಸ್ತ್ರವೂ ಒಂದು ಕಲೆ. ವಿಧವಿಧವಾದ ಶಾಕಾಹಾರ ಮಾಂಸಾಹಾರ ಗಳನ್ನು ಮಾಡುವ ರೀತಿಯು ಅಭಿಲಷಿತಾರ್ಥ ಚಿನ್ತಾಮಣಿ ಮುಂತಾದ ಗ್ರಂಥಗಳಲ್ಲಿ ಕಂಡುಬರುವದು. ನಳ ಭೀಮರಂತಹವರೂ ಪಾಕಶಾಸ್ತ್ರದಲ್ಲಿ ಪರಿಣತರಾಗಿದ್ದರು. ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಪಾನೀಯಗಳು ಮನೋರಂಜಕವಾಗಿಯೂ ವಿಧವಿಧವಾಗಿಯೂ ಇದ್ದರೆ ಬೇಸರಿಕೆ ಹೋಗಿ ಆರೋಗ್ಯವುಂಟಾಗುವುದು. ಭೋಜನಾರಂಭದಲ್ಲಿ ಸಿಹಿ (ಪಾಯಸ)ಯನ್ನೂ ಅಂತ್ಯದಲ್ಲಿ ಹುಳಿ (ಮೊಸರು) ತಿಂದರೆ ಒಳ್ಳೆಯದೆಂದು ವೈದ್ಯಗ್ರಂಥಗಳು ಹೇಳುವವು.[30] ಭೋಜನಪ್ರಿಯರು (Gourmets) ಹೊಸ ತಿಂಡಿಗಳನ್ನು ಕಂಡು ಹಿಡಿಯಲು ಯತ್ನಿಸುತ್ತಿದ್ದರು. ಸಂಸ್ಕೃತ ಮತ್ತು ಕನ್ನಡ ಕಾವ್ಯಗಳಲ್ಲಿ ಭಕ್ಷ್ಯಭೋಜ್ಯಗಳ ವರ್ಣನೆಯು ಕಂಡುಬರುವದು. ದ್ರಾವಿಡರ ಇಡ್ಲಿ, ಕೊಳಂಬು, ಪುಳಿಹೋರೆ, ಕೇರಳರ ಹಪ್ಪಳ, ಶಾಮಿಗೆ, ಮೈಸೂರಿನ ಮಸಾಲೆ ದೋಸೆ, ವಡೆ, ಮೈಸೂರ್‌ಪಾಕ್, ಆಂಧ್ರರ ತೊವ್ವೆ ಮಜ್ಜಿಗೆಹುಳಿ, ಮಹಾ ರಾಷ್ಟ್ರದ ಶಂಖಚೂಡ್, ಲಡ್ಡು, ಬಂಗಾಳದ ರಸಗೊಳ್ಳ, ಪಂಜಾಬಿನ ಬರ್ಫಿ ಜಾಮೂನ್ ಧೂದ್‌ಫೇಡಾ ಮುಂತಾದುವು ಪ್ರಸಿದ್ಧ.

ರಂಗೋಲಿ ಇಡುವದು, ಜಡೆ ಹಾಕುವದು, ವಸ್ತ್ರಧಾರಣೆ ಮುಂತಾದ ಕಲೆಗಳು ಸಾಮಾನ್ಯ ಜೀವನದಲ್ಲಿ ಕಲೆತುಹೋಗಿವೆ. ಮುಖ್ಯವಾಗಿ ಡಾ|| ಆನಂದಕುಮಾರಸ್ವಾಮಿ ಹೇಳಿದಂತೆ ಕಲಾಭಿಜ್ಞನು ವಿಜಾತೀಯನಾದ ಮನುಷ್ಯನಲ್ಲ. ಪ್ರತಿ ಮಾನವನೂ ಒಬ್ಬ ವಿಜಾತೀಯ ಕಲಾರಾಧಕನು.[31]

---

actual proportion and of the surface form, rather than the more 'scientific' attachment of the muscles and the articulation of bones."—Hadaway: *C.Z*, 1914, p. 34.

[29] S. Srikantha Śāstri—*Iconography of Śri Vidyārṇava Tantra.*

[30] ,, —*The Art of Eating, The Hindu.* Ap. 19, 1936.

[31] The artist is not a special kind of man but every man is a special kind of artist.—Anand Coomara Swamy.

# ೨. ವಿಜ್ಞಾನ

**ಗಣಿತ :** ಭೌತವಿದ್ಯೆಗಳಾದ ಗಣಿತ, ಜ್ಯೋತಿಷ, ಆಯುರ್ವೇದ, ರಸಾಯನ ಶಾಸ್ತ್ರ, ಅಶ್ವಶಾಸ್ತ್ರ, ಗಜಶಾಸ್ತ್ರ ಮುಂತಾದವುಗಳಲ್ಲಿ ಭರತಖಂಡವು ಇತರ ಪ್ರಾಚೀನ ಸಂಸ್ಕೃತಿಗಳಿಗಿಂತಲೂ ಮುಂದಾಗಿದ್ದಿತು. ವೇದಯುಗದಲ್ಲಿ ಯಜ್ಞ ಮಾಡಬೇಕಾದ ಕಾಲವನ್ನು ನಿರ್ಧರಿಸಲು ಗಣಿತ ಜ್ಯೋತಿಷ ಶಾಸ್ತ್ರಗಳು ಅವಶ್ಯಕವಾಗಿದ್ದವು. ವೇದವಾಙ್ಮಯದಲ್ಲಿ ಕ್ರಿ.ಪೂ. ೧೦,೦೦೦-೮೦೦೦ ವರ್ಷದ ಗ್ರಹಗತಿಗಳು ಸೂಚಿತವಾಗಿವೆ. ಹರಪ್ಪ ಸಂಸ್ಕೃತಿಯಲ್ಲಿ ಅತ್ಯಂತ ಸೂಕ್ಷ್ಮವಾದ ಅಳತೆ ತೂಕಗಳಿದ್ದುದರಿಂದ ಗಣಿತವೂ ಪರಿಚಿತವಾಗಿದ್ದಿತೆಂದು ಹೇಳಬಹುದು. ಉಪನಿಷತ್ತುಗಳಲ್ಲಿ ಪೂರ್ಣದಲ್ಲಿ ಪೂರ್ಣವನ್ನು ಕಳೆದರೆ ಪೂರ್ಣವೇ ಇರುವದೆಂದೂ, ರಾಶಿವಿದ್ಯೆಯೆಂಬ ಪ್ರತ್ಯೇಕವಿದ್ಯೆಯಿದ್ದಿತೆಂದೂ, ಬ್ರಹ್ಮಾನಂದವು ಶತಶತಾಂಶ ಹೆಚ್ಚುತ್ತ ಹೋಗುವದೆಂದೂ ಹೇಳಿದೆ. ಶುಲ್ಬ ಸೂತ್ರಗಳಲ್ಲಿ ಜ್ಯಾಮಿತಿಯ ಮೂಲತತ್ವಗಳು ಕಂಡುಬರುವವು. ಪೈಥಾಗೊರಾಸಿನಿಂದ ಕಂಡುಹಿಡಿಯಲ್ಪಟ್ಟಿತೆಂದು ಹೇಳುವ "ಥಿಯರಂ" ಬೋಧಾಯನ ಸೂತ್ರಗಳಲ್ಲೇ ಕಂಡುಬರುವದು. ಬಹುಶಃ ಪೈತೃಕೀವೇದಿ ರಚನೆಯಿಂದ ಇದನ್ನು ಕಂಡುಹಿಡಿದಿದ್ದರು. ಶುಲ್ಬಸೂತ್ರಗಳಲ್ಲಿ ಸಂಪೂರ್ಣ "ಕ್ವಾಡ್ರಾಟಿಕ್ ಈಕ್ವೇಷನ್" ($ax^2+bx=c$) ಎಂಬುದಕ್ಕೆ ಉತ್ತರ ಕಂಡುಬರುವದು. ಕಾತ್ಯಾಯನ ಶುಲ್ಬಸೂತ್ರ (VI, ೫) ದಲ್ಲಿ "ಇನ್‌ಡಿಟರ್ಮಿನೇಟ್ ಅನಾಲಿಸಿಸ್" ಉಕ್ತವಾಗಿದೆ. ಶ್ಯೇನಚಿತ್‌ವೇದಿಯನ್ನು ನಿರ್ಮಿಸುವದಕ್ಕಾಗಿ "ಸಮಕಾಲೀನ ಇನ್‌ಡಿಟರ್ಮಿನೇಟ್ ಈಕ್ವೇಷನ್"ಗಳನ್ನು ಉಪಯೋಗಿಸುತ್ತಿದ್ದರು.[32] "ಸರ್ಡ್ಸ"ಗಳಲ್ಲಿ ಮುಖ್ಯವಾದುವನ್ನರಿತಿದ್ದರು.[33]

ಸಂಖ್ಯೆಗಳನ್ನು ಲೆಕ್ಕಿಸುವ ಕ್ರಮವನ್ನು ಹಿಂದುಗಳೇ ಕಂಡುಹಿಡಿದರು. ೧೨೦೦ ವನ್ನು ಮೂರು ಭಾಗಮಾಡುವ ವಿಧಾನವು ಯಜುರ್ವೇದದಲ್ಲಿ ಉಕ್ತವಾಗಿದೆ.[34] ಗ್ರೀಕರಿಗೆ ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದಲ್ಲಿ "ಮಿರಿಯಡ್"

---

[32] ಬೌ. ಶು. ಸೂ. III, ೩೪.

[33] $\sqrt{೨}$, $\sqrt{೩}$, ($\sqrt{೨} = ೧ + \frac{೧}{೩} + \frac{೧}{೩.೪} - \frac{೧}{೩.೪.೩.೪} \ldots = \sqrt{೨} =$ ೧.೪೧೪೨೧೫೬. . . ಈಗ : $\sqrt{೨} =$ ೧.೪೧೪೨೧೩ ; $\sqrt{೩} = ೧ + \frac{೨}{೩} + \frac{೧}{೩.೫} - \frac{೧}{೩.೫.೨}$).

[34] ತೈತ್ತಿರೀಯ ಸಂಹಿತಾ, VI, ೧-೬. ಏಕಾಚಮೇ ತಿಸ್ರಚಮೇ ಪಂಚ ಚಮೇ—ಚಮಕ.

(೧೦೪) ವರೆಗೆ ಮಾತ್ರ, ರೋಮನ್ ಜನರಿಗೆ "ಮಿಲ್ಲೆ" (೧೦೩) ವರೆಗೆ ಮಾತ್ರ ಎಣಿಸುವದಕ್ಕೆ ಬರುತ್ತಿದ್ದಿತು. ಆದರೆ ವೇದಯುಗದಲ್ಲಿಯೇ ಭಾರತೀಯರು ಪರಾರ್ಧ (೧೦^೧೪) ವರೆಗೆ ಎಣಿಸುವದನ್ನು ಕಲಿತಿದ್ದರು. ದಶಮಾನ (Decimal System), ದ್ವಾದಶಮಾನ (Duodecimal System), ಷಷ್ಠಿಮಾನ

**ಪ್ರಾಚೀನ ಅಂಕಗಳು**

| | ನಾನಾಘಾಟ | ಆಂಧ್ರರ ಅಂಕಗಳು | ಕ್ಷತ್ರಪರ ಅಂಕಗಳು | ಗುಪ್ತರ ಅಂಕಗಳು |
|---|---|---|---|---|
| ೧ | — | — | — | ⌒ |
| ೨ | = | = | = | = |
| ೩ | ≡ | ≡ | ≡ | ≡ |
| ೪ | ¥ | ⅃ | ⅄ | ⅄ |
| ೫ | ⊦ | ᒥ | ⊦ | ⨍ |
| ೬ | ᑫ | ɛ | ᑫ | ᑫ |
| ೭ | ʔ | ʔ | ʔ | ᘊ |
| ೮ | | ᒧ | ᔕ | ᘔ |
| ೯ | २ | २ | ३ | ३ |
| ೧೦ | α | α | ∝ | ∝ |
| ೨೦ | o | ⊟ | θ | o |
| ೩೦ | | | ᘐ | Կ |
| ೪೦ | | | ჯ | |
| ೫೦ | | | ⅃ | |
| ೬೦ | ⅎ | | ᒍ | Կ |
| ೭೦ | | | ተ | |
| ೮೦ | Φ | | ꝏ | ꝏ |
| ೯೦ | | | ⊕ | |
| ೧೦೦ | ᓐ | ᘉ | ᘉ | ᘉ |
| ೨೦೦ | | ᘉ- | ᘉ. | |
| ೩೦೦ | | | | |
| ೪೦೦ | ᓐ¥ | | | |

(Sexigesimal System) ಗಳನ್ನು ಹಿಂದುಗಳೇ ಕಂಡುಹಿಡಿದಿದ್ದರು. ಸಂಖ್ಯೆಗಳನ್ನು ಏಕದಿಂದ ನವವರೆಗೂ ಒಂದು ರಾಶಿ, ದಶದಿಂದ ನವತಿವರೆಗೂ ಒಂದು ರಾಶಿ, ಶತ, ಸಹಸ್ರ, ಅಯುತ, ನಿಯುತ, ಪ್ರಯುತ, ಕೋಟಿ, ಅರ್ಬುದ, ನ್ಯರ್ಬುದ, ಸಮುದ್ರ, ಮಧ್ಯ, ಅನ್ತ, ಪರಾರ್ಧ (೧೦^೧೪) ವರೆಗೂ ಮತ್ತೊಂದು ರಾಶಿಯಾಗಿ ವಿಭಜಿಸಿದ್ದರು. ಕಳೆಯುವದನ್ನು ಎಟ್ರಸ್ಕನ್ನಿರಿಗಿಂತ ಎಷ್ಟೋ ಹಿಂದೆಯೇ ಹಿಂದುಗಳರಿತಿದ್ದರು (ಏಕೋನ ವಿಂಶತ್ ಇತ್ಯಾದಿ). ಅಥರ್ವವೇದದಲ್ಲಿ ಕೂಡುವ ಮತ್ತು ಕಳೆಯುವ ಚಿಹ್ನೆಗಳು ಪುರುಷ ಸ್ತ್ರೀ ಸಂಜ್ಞೆಗಳೆಂದು ಹೇಳಿದೆ. ಶೂನ್ಯಕ್ಕೆ ಕ್ಷುದ್ರ ಎಂಬ ಹೆಸರಿದೆ. ವೇದಗಳಲ್ಲಿ

ಋಣಕ್ಕೆ ಅನೃಚ, ಧನಕ್ಕೆ ಋಚ ಎಂದು ಹೆಸರು. ಜ್ಯಾಮಿತಿರಾಶಿ[35], ರಾಶಿ ಪೂರ್ಣಸಂಖ್ಯೆ,[36] ಸಾಮಾನ್ಯ ಅಂಶಭಾಗಗಳು,[37] ಅಂಶಾಂಶಗಳೂ[38] ಪರಿಚಿತವಾಗಿದ್ದವು. ಲಲಿತವಿಸ್ತರದಲ್ಲಿ $೧೦^{೯}$ ಇಂದ ಶತಾಂಶ ಹೆಚ್ಚುತ್ತ $೧೦^{೫೩}$ ವರೆಗೆ ಆಗುವ ಸಂಖ್ಯೆಗಳು ಉಕ್ತವಾಗಿವೆ. ಒಂದು ಯೋಜನದಲ್ಲಿ ಸಾಲು ಸಾಲಾಗಿಡಲು $೪ \times ೧೦೦೦ \times ೪ \times ೨ \times ೧೨ \times ೭^{೧೦}$ ಅಣುಗಳು ಬೇಕಾಗುವದೆಂದು ಹೇಳಿದೆ. ಜೈನರ ಅನುಯೋಗದ್ವಾರ ಸೂತ್ರ (೧೪೨) ದಲ್ಲಿ ಪ್ರಪಂಚದಲ್ಲಿ ೨೯ ಸ್ಥಾನಗಳಲ್ಲಿ ಅಂಕಿಗಳನ್ನಿಟ್ಟರೆ ಆಗುವಷ್ಟು $(೨^{೬೪} + ೨^{೩೨} = ೨^{೯೬})$ ಜನರಿದ್ದಾರೆಂದು ಹೇಳಿದೆ. ಜೈನರ ಜಂಬೂದ್ವೀಪ ಪ್ರಜ್ಞಪ್ತಿ, ಭಗವತೀ ಸೂತ್ರಗಳಲ್ಲಿಯೂ ಗಣಿತ ವಿಚಾರವಿದೆ. ವರಾಹ ಮಿಹಿರನ ಪಂಚಸಿದ್ಧಾಂತಿಕಾ, ಬ್ರಹ್ಮಸಿದ್ಧಾಂತ, ಯೋಗಭಾಷ್ಯ ಮುಂತಾದ ಗ್ರಂಥಗಳಲ್ಲಿ ಶೂನ್ಯಚಿಹ್ನೆಯು ಕಂಡುಬರುವದು. ಒಬ್ಬ ಬ್ರಾಹ್ಮಣ ಪಂಡಿತನು ಹಿಂದೂ ಸಂಖ್ಯೆಗಳನ್ನು ಖಲೀಫ್ ಅಲ್‌ಮನ್ಸೂರ್ ಆಸ್ಥಾನಕ್ಕೆ ಪರಿಚಯ ಮಾಡಿಕೊಟ್ಟನೆಂದು ತಿಳಿದುಬರುವದು. ಅನಂತರ ಇವಕ್ಕೆ ಆರಾಬಿಕ್ ಸಂಖ್ಯೆಗಳೆಂದು ಯೂರೋಪಿನಲ್ಲಿ ಹೆಸರು ಬಂದಿತು. ಕ್ರಿ.ಶ. ೬೬೨ ರಲ್ಲಿ ಸೆವರಸ್ ಸೆಬೋಕ್ತ್ ಎಂಬುವನು ಹಿಂದೂ ಸಂಖ್ಯೆಗಳನ್ನು ಹೇಳಿರುವನು. "ಸಿಂಧ್

---

[35] ಜ್ಯಾಮಿತಿರಾಶಿ : ಪಂಚವಿಂಶ. ೧೮-೩ = ೨೪, ೪೮, ೯೬, ೧೯೨. . . ೪೯೧೫೨ ೯೮೩೦೪, ೧೯೬೬೦೮, ೩೯೩೨೧೬.
ತೈ. ಸಂ. : VII, ೨ ; XII, ೭ ; = ೧೩೫. . . ೧೯೨೯, ೩೯. . . ೯೯ ; ೨೪೬. . . ೨೦, ೪೮-೧೨. . . ೨೦, ೫-೧೦, ೧೫-೧೦೦, ೧೦-೨೦-೩೦. . . ೧೦೦೦.

[36] ರಾಶಿ ಪೂರ್ಣಸಂಖ್ಯೆ : ಶತಪಥ X ೫-೪-೭ = ೩ × (೨೪ + ೨೮ + ೩೨. . . to ೭ terms) = $೩ \times \frac{೭}{೨} \{೨ \times ೨೪ + (೭-೧) \times ೪\}$ = ೭೫೬ ;
ಬೃಹದ್ದೇವತಾ : III, ೧೩ : ೨ + ೩ + ೪ + . . + ೧೦೦೦ = ೫೦೦೪೯೯.
ಬೋಧಾಯನ : $೧ + ೩ + ೫ + \cdots + (೨n + ೧) = (n + ೧)^{೨}$.

[37] ಸಾಮಾನ್ಯ ಅಂಶಭಾಗಗಳು : ಶುಲ್ಬಸೂತ್ರ : $೭\frac{೧}{೨} \div \frac{೧}{೨೫} = ೧೮೭\frac{೧}{೨}$ ;
$(೨\frac{೨}{೭})^{೨} + (\frac{೧}{೨} + \frac{೧}{೨})(೧ - \frac{೧}{೩}) = ೭\frac{೧}{೨}$ ; $\sqrt{೭\frac{೧}{೯}} = ೨\frac{೨}{೩}$.

[38] ಅಂಶಾಂಗಳು : $೭\frac{೧}{೨} \div \frac{೧}{೧೫}$ of $\frac{೧}{೨} = ೨೨೫$. ಇತ್ಯಾದಿ,

ಹಿಂದ್" ಎಂಬ ಗ್ರಂಥವು ಕ್ರಿ.ಶ. ೭೭೩ ರಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಪ್ರಚಾರವಾಗಿದ್ದಿತು. ಪಶ್ಚಿಮ ಅರಬ್ಬೀಯರು ಶೂನ್ಯ ಚಿಹ್ನೆಯಲ್ಲದೆ ಜೊಬಾರ್ (ಧೂಳಿ) ಸಂಖ್ಯೆಗಳನ್ನನುಸರಿಸುತ್ತಿದ್ದರು. ಇದು ಬ್ರಹ್ಮಗುಪ್ತನ ಧೂಳಿಕ್ರಮ.[39] ಕ್ರಿ.ಶ. ೮-೯ ನೆಯ ಶತಾಬ್ದದ "ಬಕ್ಷಾಲಿ" ಹಸ್ತಲೇಖನೆಯಲ್ಲಿ ಸಾಮಾನ್ಯ ಗಣಿತ, "ರೆಗ್ಯುಲಫಾಲ್ಸಿ" (ಭಾಸ್ಕರನ ಚಕ್ರವಾಳಕ್ರಮ) ಮುಂತಾದುವು ಇವೆ. ಆರ್ಯಭಟ, ಬ್ರಹ್ಮಗುಪ್ತ, ಎರಡನೆಯ ಆರ್ಯಭಟರ ಗ್ರಂಥಗಳೂ, ಮಹಾವೀರಾಚಾರ್ಯನ ಗಣಿತ ಸಾರಸಂಗ್ರಹ, ಶ್ರೀಧರನ ಗಣಿತಸಾರ, ಭಾಸ್ಕರಾಚಾರ್ಯನ ಬೀಜಗಣಿತ, ಲೀಲಾವತೀ, ಕನ್ನಡದಲ್ಲಿ ರಾಜಾದಿತ್ಯನ ವ್ಯವಹಾರಗಣಿತ, ಕ್ಷೇತ್ರಗಣಿತ ಮುಂತಾದುವು, ತೆಲುಗಿನಲ್ಲಿ ಪಾವಲೂರಿ ಮಲ್ಲನ್ನನ ಪಾವಲೂರಿಗಣಿತ ಇತ್ಯಾದಿ ಗಣಿತ ಗ್ರಂಥಗಳನೇಕವಾಗಿವೆ.

**ಜ್ಯೋತಿಷ :** ಜ್ಯೋತಿಷವು ಒಂದು ವೇದಾಂಗ. ವೇದಯುಗದಲ್ಲಿ ಅಮಾವಾಸ್ಯಾ, ದರ್ಶ, ಅನುಮತಿ, ರಾಕಾ, ಕುಹೂ, ಸಿನೀವಾಲೀ ಮುಂತಾದ ತಿಥಿಗಳೂ, ಕೃತ್ತಿಕಾದಿ ನಕ್ಷತ್ರಗಳೂ, ತಪ, ತಪಸ್ಯ, ಮಧು, ಮಾಧವ, ಶುಕ್ರ, ಶುಚಿ, ನಭ, ನಭಸ್ಯ ಇಷ, ಊರ್ಜ, ಸಹಸ್, ಸಹಸ್ಯಗಳೆಂಬ ಮಾಸಗಳೂ, ಋತುಗಳೂ, ಸೌರ, ಚಾನ್ದ್ರಸಂವತ್ಸರಗಳಿಗೆ ಗಂಟುಹಾಕಲು ಸಂವತ್ಸರ, ಪರಿವತ್ಸರ, ಇಡಾವತ್ಸರ, ಇದ್ವತ್ಸರ ವತ್ಸರಗಳೆಂಬ ಗವಾಮಯನ ಚಕ್ರವೂ, ಶುನಾಸೀರೀಯ ಚಾತುರ್ಮಾಸ್ಯಯಜ್ಞಗಳನ್ನಾರಂಭಿಸಲು ವಿಷುವತ್ತನ್ನು ನಿರ್ಣಯಿಸುವ ರೀತಿಯೂ ಪರಿಚಿತವಾಗಿದ್ದವು. ತೈತ್ತಿರೀಯದಲ್ಲಿ "ಚಿತ್ರಾವಸೋ ಸ್ವಸ್ತಿ ತೇಪಾರಮಸೀಯ" ಎಂಬುದರಿಂದ ಕ್ರಿ.ಪೂ. ೧೦,೦೦೦ ದ ಕಾಲವು ನಿರ್ದಿಷ್ಟವಾಗಿದೆ. ಹರಪ್ಪ ಸಂಸ್ಕೃತಿಯ ಮುದ್ರೆಗಳ ಮೇಲೆ ರಾಶಿಗಳೂ ಜ್ಯೋತಿಷ ಸಂಬಂಧವಾದ ಕಥೆಗಳೂ ಕಂಡುಬರುವವು. ಬ್ರಾಹ್ಮಣಗಳಲ್ಲಿಯೂ ಆರಣ್ಯಕಗಳಲ್ಲಿಯೂ ಕ್ರಿ.ಪೂ. ೪೦೦೦-೩೧೦೦ ಕಾಲದ ಗ್ರಹಗತಿಗಳು ಸೂಚಿತವಾಗಿವೆ.[40]

ವೇದವಾಙ್ಮಯದಲ್ಲಿ ಭೂಮಿಯು ಗುಂಡಾಗಿರುವದೆಂದೂ,[41] ಅಂತರಿಕ್ಷದಲ್ಲಿ ತನ್ನ ಅಕ್ಷದ ಮೇಲೂ ಸೂರ್ಯನ ಸುತ್ತಲೂ ತಿರುಗುತ್ತಿದೆಯೆಂದೂ,[42]

---

39 ಬ್ರಹ್ಮಸ್ಫುಟಸಿದ್ಧಾನ್ತ : X, ೬೨,೬೬,೬೭.

40 ಕೌಷೀ. ಬ್ರಾ. ೧೯-೩, ತೈ. ಸಂ. VIII, ೪-೮. ಬೌ. ಧ. ಸೂ. ೧೬-೧೩. ಇತ್ಯಾದಿ.

41 ಋಗ್. I, ೩೩-೮.

42 ಋಗ್. IV, ೫-೩, VII. ೫೮-೨, I, ೧೨೫-೫.

ಸೂರ್ಯನ ರಶ್ಮಿಯಲ್ಲಿ ಏಳು ಬಣ್ಣಗಳಿವೆಯೆಂದೂ,[43] ವರುಣನು ಸೂರ್ಯನಿಗಾಗಿ ಮಾರ್ಗ (ದ್ವಾದಶರಾಶಿಗಳು) ವನ್ನೇರ್ಪಡಿಸಿದನೆಂದೂ ಹೇಳಿದೆ.[44] ಸೂರ್ಯನಿಗೆ ನಿಜವಾಗಿ ಉದಯವೂ ಇಲ್ಲ ಅಸ್ತವೂ ಇಲ್ಲ.[45] ಚಂದ್ರನು ಸೂರ್ಯನ ಬೆಳಕಿನಿಂದ ಪ್ರಕಾಶಿಸುವನು.[46] ಅಶ್ವದ ೩೪ ಎಲುಬುಗಳು ಸೂರ್ಯ, ಚನ್ದ್ರ, ಐದುಗ್ರಹ, ೨೭ ನಕ್ಷತ್ರಗಳು.[47] ಸ್ವರ್ಭಾನುವಿನಿಂದ ಗ್ರಹಣಗಳಾಗುವವು. ಅತ್ರಿಋಷಿಯು ತುರೀಯವೆಂಬ ದೂರದರ್ಶಕ ಯನ್ತ್ರದಿಂದ ಗ್ರಹನಿರೀಕ್ಷಣೆ ಮಾಡುತ್ತಿದ್ದನು. ಭೂಮಿಯು ಅಕ್ಷಚಲನೆಯಿಂದ ಧ್ರುವವು ಕಾಲಾನುಸಾರ ಹಿಂದಕ್ಕೆ ಸರಿಯುತ್ತದೆ.[48] (Precession of the Equinoxes).

ವೇದಾಂಗ ಜ್ಯೋತಿಷವು ಕ್ರಿ.ಪೂ. ೧೪೦೦ ರಲ್ಲಿ ರಚಿತವಾಯಿತು. ಇದರ ಪ್ರಕಾರ ಗವಾಮಯನದ ಐದು ವರ್ಷಗಳಲ್ಲಿ ೧೮೩೦ ಸಾಮಾನ್ಯ ದಿನ, ೧೮೩೫ ನಕ್ಷತ್ರದಿನ, ೧೮೦೦ ಸೌರದಿನ, ೬೨ ತಿಂಗಳು, ೫ ಸೂರ್ಯನ ವೃತ್ತಗಳೂ, ೬೭ ಚನ್ದ್ರನ ವೃತ್ತಗಳೂ ಇವೆಯೆಂದೂ; ಒಂದು ವರ್ಷದಲ್ಲಿ ೩೬೬ ದಿನ, ಒಂದು ತಿಂಗಳಲ್ಲಿ ೨೯ ೧೬/೩೧ ದಿನಗಳು ಇವೆಯೆಂದೂ ಹೇಳಿದೆ. ಮಾಸಗಳು ಅಮಾಂತವಾಗಿದ್ದವು. ಋಗ್ವೇದಕಾಲದಲ್ಲಿ ತಪ ಎಂಬ ಮಾಸವು ಫಾಲ್ಗುಣವಾಗಿದ್ದಿತು. ಕೌಟಿಲ್ಯನ ಅರ್ಥಶಾಸ್ತ್ರ ಮತ್ತು ಜೈನರ ಸೂರ್ಯ ಪ್ರಜ್ಞಪ್ತಿಗಳಲ್ಲಿ ವೇದಾಂಗ ಜ್ಯೋತಿಷದ ರೀತಿಯೇ ಕಂಡುಬರುವದು. ಆದರೆ ಜೈನರು ಭೂಮಿಯು ಚಪ್ಪಟೆಯಾಗಿದೆಯೆಂದೂ, ಎರಡು ಸೂರ್ಯ, ಎರಡು ಚನ್ದ್ರ, ಇಪ್ಪತ್ತೇಳು ನಕ್ಷತ್ರಗಳ ಗುಂಪುಗಳೆರಡೂ ಭೂಮಿಯ ಸುತ್ತಲೂ ತಿರುಗುವವೆಂದೂ, ಭೂಮಿಗೂ ಸೂರ್ಯನಿಗೂ ಇರುವ ಅಂತರಕ್ಕೆರಡರಷ್ಟು ದೂರದಲ್ಲಿ ಚನ್ದ್ರನಿರುವನೆಂದೂ ನಂಬುವರು.

ವರಾಹ ಮಿಹಿರನಿಗೆ ಬಹುಳ ಹಿಂದೆ ವಸಿಷ್ಠ, ಪೈತಾಮಹ, ಸೂರ್ಯ, ಪೌಲಿಶ ಮತ್ತು ರೋಮಕಗಳೆಂಬ ಸಿದ್ಧಾನ್ತಗಳಿದ್ದವು. ವರಾಹ ಮಿಹಿರನು ವಾಸಿಷ್ಠ, ಪೈತಾಮಹ ಸಂಹಿತೆಗಳು ಅತ್ಯಂತ ಸತ್ಯದೂರವೆಂದೂ, ಪ್ರಾಚೀನ ಸೂರ್ಯ

43 ಋಗ್. I, ೧೦೫-೯.

44 ಋಗ್. I, ೨೮-೮

45 ಐ. ಬ್ರಾ. II, ೭

46 ಋಗ್. IX, ೭೧-೯, ೭೬-೪ etc.

47 ಋಗ್. I, ೧೬೨-೧೬.

48 ಋಗ್. V, ೪೦-೫, ೯ ; ತೈ. ಸಂ. VI, ೧-೫-೧ ; ಐ. ಬ್ರಾ. I, ೭.

ಸಿದ್ಧಾನ್ತವು ಬಹಳ ಮಟ್ಟಿಗೆ ಸರಿಯೆಂದೂ, ರೋಮಕ ಪೌಲಿಶ ಸಿದ್ಧಾನ್ತಗಳು ಸಮರ್ಪಕವಾಗಿವೆಯೆಂದೂ ಹೇಳುವನು. ಈ ಪೌಲಿಶ ಸಿದ್ಧಾನ್ತಕ್ಕೂ ಅಲೆಕ್ಸಾಂಡ್ರಿಯದ ಪಾಲಸ್ ಎಂಬುವನ ಜಾತಕ (Astrological) ಗ್ರಂಥಕ್ಕೂ ಯಾವ ಸಂಬಂಧವೂ ಇಲ್ಲ. ರೋಮಕ ಸಿದ್ಧಾನ್ತವು ಪ್ರಾಯಃ ಹಿಪ್ಪಾರ್ಕಸ್, ಟಾಲಮಿಗಳ ಪದ್ಧತಿ. ಇದರಲ್ಲಿ ಅಕ್ಷಾಂಶಗಳನ್ನು ಯವನಪುರದಿಂದ ಲೆಕ್ಕಿಸಿದೆ.

ಪ್ರಾಚೀನ ಸೂರ್ಯ ಸಿದ್ಧಾನ್ತವನ್ನು ಕ್ರಿ.ಶ. ೪೯೯ ರಲ್ಲಿ ಆರ್ಯಭಟನೂ, ಅನಂತರ ಬ್ರಹ್ಮಗುಪ್ತ, ಭಾಸ್ಕರ ಮುಂತಾದವರೂ ಸಂಸ್ಕರಿಸಿದರು. ಈ ಆರ್ಯಭಟನು ಔದಯಿಕ ಮತ್ತು ಅರ್ಧರಾತ್ರಿಕ ಎಂಬ ಎರಡು ಗಣನೆಗಳಿಗೂ ಮೂಲ. ಈತನು ಗುಪ್ತರ ಕಾಲದಲ್ಲಿ ಕುಸುಮಪುರ (ಪಾಟಲಿಪುತ್ರ) ನಿವಾಸಿಯಾಗಿದ್ದನು. ಇವನ ಶಿಷ್ಯಪರಂಪರೆಯಲ್ಲಿ ಪಾಣ್ಡುರಂಗಸ್ವಾಮಿ, ಲಾಟದೇವ, ನಿಶ್ಶಂಕ, ಲಘುಭಾಸ್ಕರೀಯ, ಮಹಾಭಾಸ್ಕರೀಯ, ಆರ್ಯಭಟೀಯ, ವ್ಯಾಖ್ಯೆಗಳನ್ನು ಬರೆದ ಭಾಸ್ಕರ, ಪೃಥೂದಕಸ್ವಾಮಿ, ಲಲ್ಲ ಎಂಬುವರು ಮುಖ್ಯರು.

ವರಾಹ ಮಿಹಿರನ ತಂದೆಯಾದ ಆದಿತ್ಯದಾಸನು ಮೊದಲು ಪಾಟಲಿಪುತ್ರದಲ್ಲಿದ್ದು ಅನಂತರ ಅವನ್ತಿ (ಉಜ್ಜಯಿನಿ) ಯಲ್ಲಿ ನೆಲಸಿದ್ದನು. ವರಾಹ ಮಿಹಿರನು ಕಾಪಿತ್ಥಕ (ಕಾಪಿಶ-ಉತ್ತರ ಕಾಶ್ಮೀರ) ದಲ್ಲಿ ತಪಸ್ಸುಮಾಡಿ ಸೂರ್ಯನ ಪ್ರಸಾದದಿಂದ ಬೃಹಜ್ಜಾತಕ, ಲಘುಜಾತಕ, ಪಂಚಸಿದ್ಧಾನ್ತಿಕ, ಬೃಹತ್ಸಂಹಿತಾ ಮುಂತಾದ ಗ್ರಂಥಗಳನ್ನು ಬರೆದನೆಂದೂ ಹೇಳಿಕೊಂಡಿರುವನು. ಕಾಲಿದಾಸನ ಜ್ಯೋತಿರ್ವಿದಾಭರಣದಲ್ಲಿ ಕ್ರಿ.ಪೂ. ೩೪ ರಲ್ಲಿ ವಿಕ್ರಮಾದಿತ್ಯನ ಆಸ್ಥಾನದಲ್ಲಿ ವರಾಹ ಮಿಹಿರ, ಬಾದರಾಯಣ ಮುಂತಾದ ಜ್ಯೋತಿಷ್ಕರಿದ್ದರೆಂದು ಹೇಳಿದೆ.[49] ಆದರೆ ವರಾಹ ಮಿಹಿರನ ಗ್ರಂಥಗಳಿಂದಲೇ

---

[49] ಧನ್ವಂತರಿ ಕ್ಷಪಣಕಾಮರಸಿಂಹ ಶಂಕು ವೇತಾಲಭಟ್ಟ ಘಟಕರ್ಪರ ಕಾಲಿದಾಸಾಃ |
ಖ್ಯಾತೋವರಾಹ ಮಿಹಿರೋನೃಪತೇ ಸ್ಸಭಾಯಾಂ ರತ್ನಾನಿ ವೈವರರುಚಿರ್ನವ ವಿಕ್ರಮಸ್ಯ ||
ಸತ್ಯೋವರಾಹಮಿಹಿರೋ ಶೃತಸೇನನಾಮಾ ಶ್ರೀ ಬಾದರಾಯಣ ಮಣಿತ್ಥಕುಮಾರಸಿಂಹಃ |
ಶ್ರೀವಿಕ್ರಮಾರ್ಕನೃಪಸಂಸದಿ ಸನ್ತಿ ಚೈತೇ ಶ್ರೀಕಾಲತನ್ತ್ರಕವಯಸ್ತ್ವಪರೇ ಮದಾದ್ಯಾಃ ||
ಅಷ್ಟಾಯಸ್ಯ ಶತಾನಿ ಮಣ್ಡಲಧರಾಧೀಶಾಸ್ಸಭಾಯಾಂ ಸದಾ | ಸ್ಸ್ಯ : ಸಂಪತ್ತ್ಯಬಲೋಗ್ರಕೋಟಿ ಸುಭಟಾಃ ಸತ್ಪಣ್ಡಿತಾಷೋಡಶಾ | ದೈವಜ್ಞಾದಶ ಷಣ್ಮಿತಾಶ್ಚ ಭಿಷಜೋ ಭಟ್ಟಾಸ್ತಥಾ ಡಾಧಿನೋಃ ವೇದಜ್ಞಾಃ ರಸಚನ್ದ್ರಮಾವಿಜಯತೇ ಶ್ರೀ ವಿಕ್ರಮಸ್ಸೋऽಧಿ ಭೂಃ ||
ಜ್ಯೋತಿರ್ವಿದಾಭರಣ. ಈ ವಿಕ್ರಮನು ರೋಮಕ ಚಕ್ರವರ್ತಿಯನ್ನು ಗೆದ್ದು ಉಜ್ಜಯಿನಿಯಲ್ಲಿ ಬಂಧಿಸಿದನು. . ಈಚೆಗೆ ಸಿಕ್ಕಿರುವ ಶಾಕುನ್ತಲಾ ನಾಟಕ ಪ್ರತಿಯೊಂದರಲ್ಲಿ ಕಾಲಿದಾಸನು ಮಾಳವ ಗಣಪತಿಯಾದ ವಿಕ್ರಮನ ಕಾಲದಲ್ಲಿದ್ದನೆಂದು ಹೇಳಿದೆ. (*I.H.Q.*, ೧೯೪೨).

ಕ್ರಿ.ಶ. ೬ನೆಯ ಶತಾಬ್ದವು ಸೂಚಿತವಾಗುವದು. ವರಾಹ ಮಿಹಿರನು ಪ್ರತ್ಯಕ್ಷ ಪರೀಕ್ಷಣೆಯಿಂದ ಅನೇಕ ಮಾರ್ಪಾಟು ಮಾಡಿರುವನು. ಪ್ರಾಚೀನ ಜ್ಯೋತಿಷ್ಕರಾದ ಲಾಟಾಚಾರ್ಯ, ಸಿಂಹಾಚಾರ್ಯ, ಸತ್ಯಾಚಾರ್ಯ, ಆರ್ಯಭಟ, ಪ್ರದ್ಯುಮ್ನ, ವಿಜಯನನ್ದಿ, ವಿಷ್ಣುಗುಪ್ತ, ಶ್ರೀಷೇಣ ಮುಂತಾದವರ ಗ್ರಂಥಗಳನ್ನೂ ಯುವನರ ಪಾರಿಭಾಷಿಕ ಪದಗಳನ್ನೂ (ಕೇನ್ದ್ರ, ಸುನಫಾ, ಅನಫಾ, ಧುರಧುರ, ಲೇಯ, ಪಾಥೋನ ಇತ್ಯಾದಿ) ಉಪಯೋಗಿಸಿಕೊಂಡಿರುವನು.

ಬ್ರಹ್ಮಗುಪ್ತನು[50] ಕ್ರಿ.ಶ. ೬೯೮ರಲ್ಲಿ ಜನಿಸಿ, ಭಿಲ್ಲಮಾಲದ ಚಾಪವಂಶ ರಾಜನಾದ ವ್ಯಾಘ್ರಮುಖನ ಆಸ್ಥಾನದಲ್ಲಿ ಬ್ರಹ್ಮಸ್ಫುಟ ಸಿದ್ಧಾನ್ತ (ಕ್ರಿ.ಶ. ೬೨೮), ಖಣ್ಡಖಾದ್ಯಕ (ಕ್ರಿ.ಶ. ೬೬೫) ಎಂಬ ಗ್ರಂಥಗಳನ್ನು ರಚಿಸಿ ಆರ್ಯಭಟನ ಕೆಲವು ತಪ್ಪುಗಳನ್ನು ತಿದ್ದಿ, ಗ್ರಹಗಳ ಮಂದ-ಶೀಘ್ರಗತಿಗಳಲ್ಲಿ ದೈನಂದಿನ ವ್ಯತ್ಯಾಸಗಳನ್ನೂ, ಸರಿಯಾದ ಅಕ್ಷಾಂಶ ರೇಖಾಂಶಗಳನ್ನೂ, ದೃಕ್ಕರ್ಮ, ವಲನ ಇತ್ಯಾದಿಗಳಲ್ಲಿ ಅನೇಕ ನೂತನಾಂಶಗಳನ್ನೂ ಕಂಡು ಹಿಡಿದನು.

ಕರ್ನಾಟಕದಲ್ಲಿ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಕಾಲದಲ್ಲಿ ಮುಂಜಳಾಚಾರ್ಯನು ಲಘುಮಾನಸ ಮುಂತಾದ ಗ್ರಂಥಗಳನ್ನು ರಚಿಸಿದನು. ದೇವಗಿರಿ ಭಿಲ್ಲಮನ ಕಾಲದಲ್ಲಿ ಬಿಜ್ಜಳಬೀಡು ನಿವಾಸಿಯಾದ ಭಾಸ್ಕರಾಚಾರ್ಯನು ಸಿದ್ಧಾನ್ತ ಶಿರೋಮಣಿಯನ್ನು ರಚಿಸಿದನು. ಇವನ ವಂಶದಲ್ಲಿ ಮೊದಲು ತ್ರಿವಿಕ್ರಮ ಕವಿಯು ರಾಷ್ಟ್ರಕೂಟ ಇನ್ದ್ರನ ಆಶ್ರಯದಲ್ಲಿ ನಳಚಮ್ಪೂ ಬರೆದನು. ಅವನ ಮಗ ಭಾಸ್ಕರನು ಭೋಜರಾಜನಿಗೆ ಜ್ಯೋತಿಷ್ಕನಾಗಿದ್ದನು, ಅನಂತರ ಗೋವಿನ್ದ ಸರ್ವಜ್ಞ, ಪ್ರಭಾಕರ, ಮನೋರಥ, ಕವಿ ಮಹೇಶ್ವರಾಚಾರ್ಯರೆಂಬುವರೂ ಜ್ಯೋತಿಷ್ಕರಾಗಿದ್ದರು. ಮಹೇಶ್ವರನ ಮಗನೇ ಭಾಸ್ಕರಾಚಾರ್ಯನು. ಈತನ ಮಗನಾದ ಲಕ್ಷ್ಮೀಧರನನ್ನು ಜೈತುಗಿಯು ಜ್ಯೋತಿಷಾಲಯಕ್ಕೆ ಅಧ್ಯಕ್ಷನನ್ನಾಗಿ ನೇಮಿಸಿ, ಸಿದ್ಧಾನ್ತ ಶಿರೋಮಣಿಯನ್ನು ಬೋಧಿಸಲು ಶಾಲೆಯನ್ನೂ ನಿರೀಕ್ಷಣಾಲಯವನ್ನೂ ಸ್ಥಾಪಿಸಿದನು. ಲಕ್ಷ್ಮೀಧರನ ಮಗ ಚಾಂಗದೇವ, ಭಾಸ್ಕರಾಚಾರ್ಯನ ತಮ್ಮನ ಮಕ್ಕಳು ಅನಂತದೇವ ಮಹೇಶ್ವರರೆಂಬುವರೂ ಯಾದವಸಿಂಹಣನ ಆಸ್ಥಾನದಲ್ಲಿ

---

[50] ಶ್ರೀ ಚಾಪವಂಶತಿಲಕೇ ಶ್ರೀ ವ್ಯಾಘ್ರಮುಖೇನೃಪೇ ಶಕನೃಪಾಣಾಂ| ಪಂಚಾಶತ್ಸಂಯುಕ್ತೈಃ ವರ್ಷಶತೈಃ ಪಂಚಭಿರತೀತೈಃ || ಬ್ರಾಹ್ಮಸ್ಫುಟಸಿದ್ಧಾನ್ತಃ ಸಜ್ಜನ ಗಣಿತ ಗೋಳವಿತ್ಪ್ರೀತ್ಯೈ | ತ್ರಿಂಶದ್ವರ್ಷೇಣಃ ಕೃತೋ ಜಿಷ್ಣುಸುತ ಬ್ರಹ್ಮಗುಪ್ತೇನ

ಜ್ಯೋತಿಷ್ಕರಾದರು. ವಿಜಯನಗರ ಸಾಮ್ರಾಜ್ಯದಲ್ಲಿ ವಿದ್ಯಾರಣ್ಯ, ದೇವಣ್ಣ ಭಟ್ಟ, ಮಾಧವ, ಸರ್ವಜ್ಞವಿಷ್ಣು, ಎಲ್ಲಯ್ಯ ಮುಂತಾದವರು ಜ್ಯೋತಿಷ ಗ್ರಂಥಗಳನ್ನು ರಚಿಸಿರುವರು. ಈಚೆಗೆ ದೃಗ್ಗಣಿತ ರೀತಿಯು ಪ್ರಚಾರಕ್ಕೆ ಬಂದಿತು.

ವೈದ್ಯ: ವೇದಗಳಲ್ಲಿ ಅಶ್ವಿನೀದೇವತೆಗಳೂ ರುದ್ರನೂ ವೈದ್ಯಾಭಿಮಾನಿ ಗಳಾದ ದೇವತೆಗಳು[51]. ವಾಜೀಕರಣ, ಕೃತ್ರಿಮಾಂಗಯೋಜನೆ, ದನ್ತಚಿಕಿತ್ಸೆ, ಕಿಲಾಸ, ಪಾಣ್ಡು, ರಾಜ ಯಕ್ಷ್ಮ ಮುಂತಾದ ರೋಗಗಳ ಚಿಕಿತ್ಸೆ, ನೇತ್ರ ವೈದ್ಯ, ಅನುಪಾನವಿಧಿ ಮುಂತಾದವು ವೇದಯುಗದಲ್ಲಿ ಪರಿಚಿತವಾಗಿದ್ದವು. ಆಯುರ್ವೇದವು ಅಥರ್ವವೇದದ ಉಪಾಂಗ. ಮಾನಸಿಕ ಮತ್ತು ದೈಹಿಕ ರೋಗಗಳನ್ನೆಲ್ಲ ನಿವಾರಣೆ ಮಾಡಲು ಮನ್ತ್ರಯನ್ತ್ರಗಳೂ ಓಷಧಿಗಳೂ ಉಪಯುಕ್ತವಾಗಿದ್ದವು. ಶತಪಥಬ್ರಾಹ್ಮಣ ಅಥರ್ವವೇದ[52]ಗಳಲ್ಲಿ ದೇಹ ದಲ್ಲಿರುವ ಎಲುಬುಗಳ ಮತ್ತು ನಾಳಗಳ ಸಂಖ್ಯೆಯು ಉಕ್ತವಾಗಿದೆ. ನರಮೇಧ, ಪಿತೃಮೇಧ (ಅಂತ್ಯೇಷ್ಟಿ), ಅಶ್ವ, ಅಜ ಮುಂತಾದ ಪಶುಮೇಧ ಗಳಿಂದ ಶರೀರ ರಚನೆಯು ಪರಿಚಿತವಾಗಿದ್ದಿತು. ಬೌದ್ಧಗ್ರಂಥಗಳಲ್ಲಿ ಜೀವಕ ನೆಂಬ ಪ್ರಸಿದ್ಧ ವೈದ್ಯನು ಕಣ್ಣಿಗೆ ಹೊಸ ಗುಡ್ಡೆಯನ್ನು ಸಹ ಸೇರಿಸುತ್ತಿದ್ದ ನೆಂದು ಹೇಳಿದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ವಿಷವೈದ್ಯ, ದಾದಿಗಳ ಕರ್ತವ್ಯ, ಶಸ್ತ್ರಚಿಕಿತ್ಸೆ ನಡಿಸುವ ವೈದ್ಯರ ನಿಯಮಗಳು, ಲೇಪನ, ಅಂಜನ, ತೈಲ, ಪಟಬಂಧನ, ಶಸ್ತ್ರಗಳೇ ಮುಂತಾದ ಅನೇಕ ವಿಷಯಗಳಿವೆ. ಮೆಗಾಸ್ತನೀಸ್, ಸ್ಟ್ರಾಬೋ, ಪೆಟ್ರೋಕ್ಲಸ್ ಮುಂತಾದವರ ಗ್ರಂಥಗಳಿಂದ ಭಾರತೀಯರು ಆಹಾರ, ಆಚಾರ, ವಾಯುಶುದ್ಧತೆಯಿಂದ ದೀರ್ಘಾಯಸ್ಸನ್ನು ಪಡೆದಿದ್ದ ರೆಂದೂ, ವೈದ್ಯರು ಶಸ್ತ್ರಪ್ರಯೋಗದಲ್ಲಿ ಗ್ರೀಕರಿಗಿಂತಲೂ ಕುಶಲರಾಗಿದ್ದರೂ ಆದಮಟ್ಟಿಗೂ ಮೂಲಿಕೆಗಳಿಂದಲೇ ಚಿಕಿತ್ಸೆಮಾಡುತ್ತಿದ್ದರೆಂದೂ, ಅಲೆ ಕ್ಸಾಂಡರನು ತನ್ನ ಸೈನಿಕರ ಚಿಕಿತ್ಸೆಗಾಗಿ ಭಾರತೀಯ ವೈದ್ಯರನ್ನೇ ನೇಮಿಸಿ ಕೊಂಡಿದ್ದನೆಂದೂ ತಿಳಿದುಬರುವದು. ಅಶೋಕನು ಮನುಷ್ಯರಿಗೂ ಪ್ರಾಣಿ ಗಳಿಗೂ ಚಿಕಿತ್ಸಾಲಯಗಳನ್ನು ಸ್ಥಾಪಿಸಿ ದೇಶಾಂತರಗಳಿಂದ ಅವಶ್ಯಕವಾದ ಮೂಲಿಕೆಗಳನ್ನು ತರಿಸಿ ಸಹಾಯಮಾಡುತ್ತಿದ್ದನು. ಆತ್ರೇಯನ ಶಿಷ್ಯನಾದ ಅಗ್ನಿವೇಶನು ಒಂದು ವೈದ್ಯಗ್ರಂಥವನ್ನು ಬರೆದನೆಂದೂ ಅದನ್ನು ಚರಕನು

---

[51] ರುದ್ರನು "ಪ್ರಥಮೋದೈವ್ಯೋ ಭಿಷಕ್"; "ಜಲಾಷಭೇಷಜ."

[52] ಶತ. VIII, ೬-೨-೭, ೧೦; X, ೫-೪-೧೨; XII, ೨-೪-೯, ೧೪; XII ೩-೨-೩, ೪; ಅಥರ್ವ. X, ೨.

ಪರಿಷ್ಕರಿಸಿದನೆಂದೂ ತಿಳಿದುಬರುವದು. ಚರಕ ಎಂಬುದು ದೇಶದೇಶಗಳಲ್ಲಿ ಸಂಚರಿಸುತ್ತಿದ್ದ ಪಂಡಿತರ ಹೆಸರು. ಚೀಣ ತ್ರಿಪಿಟಕದಲ್ಲಿ ಚರಕನೆಂಬ ಒಬ್ಬ ವೈದ್ಯನು ಕನಿಷ್ಕನ ಆಸ್ಥಾನದಲ್ಲಿದ್ದನೆಂದು ಹೇಳಿರುವದರಿಂದ ಚರಕಸಂಹಿತೆಯು ಕ್ರಿ.ಶ. ೨ ನೆಯ ಶತಾಬ್ದದಲ್ಲಿ ರಚಿತವಾಯಿತು. ಕ್ರಿ.ಪೂ. ೧ ನೆಯ ಶತಾಬ್ದದಲ್ಲಿ ವಿಕ್ರಮನ ಕಾಲದಲ್ಲಿ ಧನ್ವಂತರಿಯು ಇದ್ದನು. ಚರಕಸಂಹಿತೆಯನಂತರ ಶುಶ್ರುತ ಸಂಹಿತೆಯು ಹುಟ್ಟಿತು. ಚರಕನ ಗ್ರಂಥವು ವೈದ್ಯಸಂಬಂಧವಾದುದು. ಶುಶ್ರುತಸಂಹಿತೆಯು ಶಸ್ತ್ರಚಿಕಿತ್ಸಾಪರವಾದುದು. ಶುಶ್ರುತನು ಕಾಶೀನಿವಾಸಿಯೆಂದೂ, ಸ್ವತಃ ಶವಚ್ಛೇದಮಾಡಿ ಗ್ರಂಥವನ್ನು ಬರೆದನೆಂದೂ ಹೇಳಲಾಗಿದೆ. ಶುಶ್ರುತಸಂಹಿತೆಯಲ್ಲಿ ೧೨೦ ಶಸ್ತ್ರಗಳನ್ನೂ ಅನೇಕ ಶಸ್ತ್ರ ಪ್ರಯೋಗರೀತಿಗಳನ್ನೂ ವರ್ಣಿಸಿದೆ. ಕ್ರಿ.ಶ. ೪ ನೆಯ ಶತಾಬ್ದದ "ಬೌವರ್" ಹಸ್ತಲೇಖನದಲ್ಲಿ ಚರಕಶುಶ್ರುತರ ಗ್ರಂಥಗಳಲ್ಲಿರುವ ಅನೇಕ ಅನುಪಾನಗಳು ಕಂಡುಬರುವವು. ಕ್ರಿ.ಶ. ೮೦೦ ರಕ್ಕೆ ಹಿಂದೆ ಈ ವೈದ್ಯಗ್ರಂಥಗಳನ್ನು ಅರಾಬಿಕ್ ಭಾಷೆಗೆ ಪರಿವರ್ತಿಸಿದರೆಂದು "ಫಿಹ್ರಿಸ್ತ್" ಎಂಬ ಗ್ರಂಥದಿಂದ ತಿಳಿದುಬರುವದು. ರ್‍ಹಾಸಿಸ್, ಅವಿಸೆನ್ನ (ಇಬಿನ್‌ಸಿನ) ಮುಂತಾದ ಅರಬಿಕ್ ವೈದ್ಯರು ಈ ಹಿಂದೂ ವೈದ್ಯರೀತಿಯನ್ನೇ ಹೆಚ್ಚಾಗಿ ಯೂರೋಪ್ ಖಂಡದಲ್ಲಿ ಪ್ರಚಾರಮಾಡಿದರು. ಅವಿಸೆನ್ನನ ಗ್ರಂಥವೇ ಹತ್ತೊಂಬತ್ತನೆಯ ಶತಾಬ್ದದ ವರೆಗೂ ಯೂರೋಪಿನ ವೈದ್ಯರಿಗೆ ಆಧಾರವಾಗಿದ್ದಿತು.

ಜೈನರಲ್ಲಿ ಪೂಜ್ಯಪಾದ, ಉಗ್ರಾದಿತ್ಯ ಮುಂತಾದವರ ಪ್ರಾಚೀನ ವೈದ್ಯ ಗ್ರಂಥಗಳಲ್ಲಿ ಮಧು, ಮದ್ಯ, ಮಾಂಸವರ್ಜಿತ ಅನುಪಾನಗಳು ಉಕ್ತವಾಗಿವೆ. ಚರಕಸಂಹಿತೆಯನ್ನು ದೃಢಬಲನು ಪರಿಷ್ಕರಿಸಿದನು. ಹನ್ನೊಂದನೆಯ ಶತಾಬ್ದದಲ್ಲಿ ಚಕ್ರಪಾಣಿದತ್ತನು ವ್ಯಾಖ್ಯಾನವನ್ನು ಬರೆದನು. ವಾಗ್ಭಟನ ಅಷ್ಟಾಂಗ ಹೃದಯ, ಮಾಧವನಿದಾನ ಮುಂತಾದ ಸಂಸ್ಕೃತ ಗ್ರಂಥಗಳೂ, ಕಳಲೆ ವೀರರಾಜನ ಸಕಲ ವೈದ್ಯಸಂಹಿತಾಸಾರಾರ್ಣವ, ಮಂಗರಾಜನ ವೈದ್ಯ ನಿಘಂಟು, ಕಲ್ಯಾಣಕಾರಕ ಮುಂತಾದ ಭಾಷಾಗ್ರಂಥಗಳು ಅನೇಕವಾಗಿವೆ. ಪಶು, ವೃಕ್ಷಚಿಕಿತ್ಸೆಗಾಗಿ ಪ್ರತ್ಯೇಕ ಶಾಸ್ತ್ರಗಳಿದ್ದವು. ಪಾಲಿಕಾಪ್ಯ ಹಸ್ತ್ಯಾಯುರ್ವೇದ ಮುಂತಾದ ಗ್ರಂಥಗಳಿವೆ.

**ಭೌತ ಮತ್ತು ರಸಾಯನ ಶಾಸ್ತ್ರಗಳು:** ಅಥರ್ವವೇದ ಮತ್ತು ತಾನ್ತ್ರಿಕ ಗ್ರಂಥಗಳಲ್ಲಿ "ರಸಸಿದ್ಧಿ" ಉಕ್ತವಾಗಿದೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ "ರಸವಿದ್ಧಂ" ವರ್ಣಿಸಿದೆ. ವೈದ್ಯಗ್ರಂಥಗಳಲ್ಲಿ ಲೋಹಭಸ್ಮಮಾಡುವ ವಿಧಾನಗಳೂ, ಗುಣಗಳೂ ಕಂಡುಬರುವವು. ಹೀನ ಲೋಹಗಳನ್ನು ಚಿನ್ನ

ಮಾಡಲು ಪ್ರಯತ್ನಗಳು ಪಾಶ್ಚಾತ್ಯದೇಶಗಳಲ್ಲಿದ್ದಂತೆ ಇಲ್ಲಿಯೂ ನಡೆಯುತ್ತಿದ್ದವು. ವರಾಹ ಮಿಹಿರನ ಬೃಹತ್ಸಂಹಿತೆಯಲ್ಲಿ ಪಾದರಸ, ಉಕ್ಕು ಮುಂತಾದವುಗಳ ಭಸ್ಮಮಾಡುವ ರೀತಿಯು ಕಂಡುಬರುವದು. ಭಾರತೀಯರ ಲೋಹಕೌಶಲ್ಯವು (Metallurgy) ಡಿಲ್ಲಿಯಲ್ಲಿರುವ ಉಕ್ಕಿನ ಸ್ತಂಭ, ಸುಲ್ತಾನ್ ಗಂಜ್ ತಾಮ್ರಬುದ್ಧ ವಿಗ್ರಹ ಮುಂತಾದವುಗಳಿಂದ ವಿದಿತವಾಗುವದು. ಡಿಲ್ಲಿಯ ಸ್ತಂಭ ಅತ್ಯಂತ ಶುದ್ಧವಾದ ಉಕ್ಕಿನಿಂದ ಮಾಡಿದೆ. ಇದರ ಎತ್ತರ ೨೩ ಅಡಿ, ೮ ಅಂಗುಲ. ಬುಡದಲ್ಲಿ ೧೬.೪ ಅಂಗುಲ, ಕೊನೆಯಲ್ಲಿ ೧೨.೦೫ ಅಂಗುಲ ವ್ಯಾಸಹೊಂದಿದೆ. ಇದರ ತೂಕ ೬ ಟನ್.[58] ಸುಲ್ತಾನ್‌ಗಂಜ್ ಬುದ್ಧ ವಿಗ್ರಹವು ೭½ ಅಡಿ ಎತ್ತರ, ೧ ಟನ್ ತೂಕವಿದೆ. ವಿಗ್ರಹವನ್ನೆಲ್ಲ ಅತ್ಯಂತ ಶುದ್ಧವಾದ ತಾಮ್ರವನ್ನು ಎರಕ ಹೊಯ್ದು ಮಾಡಿರುವರು. ನೈಯಾಯಿಕ ವೈಶೇಷಿಕರು ಪಂಚಭೂತಗಳ ಗುಣಗಳನ್ನೂ ಅಣು (Atomism) ಪರಿಮಾಣಗಳನ್ನೂ ವಿಶೇಷವಾಗಿ ಚರ್ಚಿಸಿರುವರು.

ಭೂವಿಜ್ಞಾನದಲ್ಲಿ ವೈದ್ಯರೂ ಶಿಲ್ಪಿಗಳೂ ಕುಶಲರಾಗಿದ್ದರು. ವಜ್ರ, ಕೆಂಪು, ಮುತ್ತು, ಅಮೃತಶಿಲೆ, ಕಣಶಿಲೆ, ಶಿಲಾಜಿತ್, ಬಳಪದಕಲ್ಲು, ತಾಮ್ರ, ಚಿನ್ನ, ಸೀಸ, ತವರ, ಬೆಳ್ಳಿ ಮುಂತಾದ ಗಣಿಗಳನ್ನು ಕಂಡುಹಿಡಿಯುವ ರೀತಿಯೂ, ಕೆಲಸಮಾಡುವ ವಿಧಾನಗಳೂ ಮೆಗಾಸ್ತನೀಸನಿಗೆ ಮುಂಚೆಯೇ ಭಾರತೀಯರಿಗೆ ತಿಳಿದಿದ್ದಿತು. ಕೌಟಿಲ್ಯನೂ ಗಣಿಗಳ ವಿಷಯವನ್ನು ವಿಸ್ತಾರವಾಗಿ ಹೇಳಿರುವನು. ವರಾಹ ಮಿಹಿರನು ಬೃಹತ್ಸಂಹಿತೆಯಲ್ಲಿ ಭೂಕಂಪ ಪ್ರಭೇದಗಳನ್ನೂ ಅವುಗಳಿಗೆ ಕಾರಣಗಳನ್ನೂ ಹೇಳಿರುವನು.

ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರ, ಕೀಟಶಾಸ್ತ್ರ ಮುಂತಾದವುಗಳನ್ನೂ ಭಾರತೀಯರು ಅಭ್ಯಾಸಮಾಡುತ್ತಿದ್ದರೆಂಬುದಕ್ಕೆ ಅನೇಕ ನಿದರ್ಶನಗಳಿವೆ. ಕಾಮವು ಚತುರ್ವಿಧ ಪುರುಷಾರ್ಥಗಳಲ್ಲಿ ಒಂದು. ದತ್ತಕ, ದೀರ್ಘಚಾರಾಯಣ, ಘೋಟಮುಖ, ವಾತ್ಸ್ಯಾಯನ, ಕೊಕ್ಕೋಕಪಂಡಿತ ಮುಂತಾದವರನೇಕರು ದೇಹಾರೋಗ್ಯ, ಮನಶ್ಶಾಂತಿ, ಆತ್ಮಸಾಕ್ಷಾತ್ಕಾರಗಳನ್ನು ಧರ್ಮಕ್ಕೆ ವಿರುದ್ಧವಲ್ಲದ ಕಾಮದಿಂದ ಪಡೆಯಬಹುದೆಂದು ಕಾಮಶಾಸ್ತ್ರವನ್ನು ಪ್ರಚಾರಮಾಡಿರುವರು. ಈ ಗ್ರಂಥಗಳು ಅರಾಬಿಕ್ ಪರ್ಷಿಯನ್ ಮುಂತಾದ ಭಾಷೆಗಳ ಮೂಲಕ ಯೂರೋಪ್‌ಖಂಡವನ್ನು ತಲಪಿದವು. ಆಧುನಿಕ

---

[58] It is not many years since the production of such a pillar would have been an impossibility in the largest foundries of the world, and even now there are comparatively few where a similar mass of metal could be turned out—Bull. *Economic Geology of India*, p. 338. I st ed.

ಮನಶ್ಶಾಸ್ತ್ರಜ್ಞರಾದ ಫ್ರಾಯ್ಡ್, ಆಡ್ಲರ್, ಯೂಂಗ್, ಹಾವ್ಲಾಕ್ ಎಲ್ಲಿಸ್, ಮೇರಿಸ್ಟೋಪ್ಸ್ ಮುಂತಾದವರ ವಿಪ್ರತಿಪತ್ತಿಗಳಿಗೆ ಸಮರ್ಪಕವಾದ ಉತ್ತರವು ಭಾರತೀಯರ ಕಾಮಶಾಸ್ತ್ರ ಗ್ರಂಥಗಳಲ್ಲಿ ಕಂಡುಬರುವದು.

ಹೀಗೆ ಭಾರತೀಯ ಸಂಸ್ಕೃತಿಯಲ್ಲಿ ವಿಜ್ಞಾನವೂ ಕಲೆಯೂ ಧರ್ಮಕ್ಕೆ ಅಧೀನವಾಗಿವೆಯೇ ಹೊರತು ಪಾಶ್ಚಾತ್ಯರ ವಿಜ್ಞಾನ ಕಲೆಗಳಂತೆ ಪ್ರಪಂಚ ನಾಶಕ್ಕೆ ಕಾರಣವಾಗಲಿಲ್ಲ. ಈ ರಹಸ್ಯವು ಪಾಶ್ಚಾತ್ಯರಿಗೂ ಈಗ ಸ್ವಲ್ಪ ವಿದಿತವಾಗುತ್ತ ಬರುತ್ತಿದೆ.

# ೧೧. ಬೃಹದ್ಭಾರತ

ಮನ್ತ್ರಮಾತೃಕೋಽಕ್ಷಮಾಲೇ ! ನದ್ಯನ್ತರಂಯಾಸಿ, ದೇಶಾನ್ತರಂಯಾಸಿ, ದ್ವೀಪಾನ್ತರಂಯಾಸಿ, ಲೋಕಾನ್ತರಂಯಾಸಿ, ಸರ್ವದಾಸ್ಫುರಸಿಸರ್ವಹೃದಿವಾಸಯಸಿ, ನಮಸ್ತೇ ||

—ಮನ್ತ್ರಮಾತೃಕಾಉಪನಿಷದ್

ಭಾರತೀಯ ಸಂಸ್ಕೃತಿಯು ಅನಾದಿಯಾಗಿ ಭೌತಿಕ ಸರಹದ್ದುಗಳಿಗೆ ಕಟ್ಟುಬೀಳದೆ ಖಣ್ಡಾಂತರಗಳಲ್ಲಿ ಶಾಂತರೀತಿಯಿಂದ ವ್ಯಾಪಿಸಿದ್ದಿತು. ಭಾರತೀಯರು ಒಂದು ಕೈಯಲ್ಲಿ ಮತಗ್ರಂಥವನ್ನೂ ಮತ್ತೊಂದು ಕೈಯಲ್ಲಿ ಕತ್ತಿಯನ್ನು ಹಿಡಿದಾಗಲೀ, ಉತ್ತಮ ಜಾತಿಯೆಂಬ ದುರಭಿಮಾನದಿಂದಾಗಲೀ, ಅನಾಗರಿಕರಿಗೆ ಏಕದೇಶೀಯವಾದ ಸಂಸ್ಕೃತಿಯನ್ನು ಬಲಾತ್ಕಾರವಾಗಿ ನುಂಗಿಸಿ ಉದ್ಧಾರಮಾಡುತ್ತೇವೆಂಬ ಸೋಗಿನಿಂದಾಗಲೀ, ವ್ಯಾಪಾರದ ಮೂಲಕ ವಿದೇಶೀಯರ ಐಶ್ವರ್ಯವನ್ನು ಸೂರೆಗೊಳ್ಳುವದಕ್ಕಾಗಲೀ, ವಿಶಾಲವಾದ ಸಾಮ್ರಾಜ್ಯವನ್ನು ಸ್ಥಾಪಿಸುವದಕ್ಕಾಗಲೀ ತಮ್ಮ ಸಂಸ್ಕೃತಿಯನ್ನು ವಿಸ್ತರಿಸಲಿಲ್ಲ. ಭರತಖಣ್ಡವು ಸಂಸ್ಕೃತಿಯಲ್ಲಿಯೂ ಆರ್ಥಿಕಸ್ಥಿತಿಯಲ್ಲಿಯೂ ಉತ್ತಮರ್ಣಾಯತವಾಗಿಯೇ ಇದ್ದಿತು. ಶಕ, ಯವನ, ಚೀಣ, ಹೂಣ, ತುರುಷ್ಕ, ಮ್ಲೇಚ್ಛರು ಭಾರತೀಯರ ಸಂಪರ್ಕದಿಂದ ನಾಗರೀಕತೆಯಲ್ಲಿ ಮುಂದಾದರು. ಈ ತತ್ವವನ್ನು ಚಾರಿತ್ರಕಾಧಾರಗಳಿಂದ ಸಮರ್ಥಿಸುವದಕ್ಕಾಗಿ ಭರತಭೂಮಿಯ ಪ್ರದಕ್ಷಿಣೆ ಕ್ರಮದಿಂದ ದ್ವೀಪಾಂತರ ದೇಶಗಳ ಚರಿತ್ರೆಯನ್ನು ವಿಮರ್ಶಿಸುವೆವು.

**ಪೂರ್ವ:** ಬ್ರಹ್ಮ (ಬರ್ಮ) ದೇಶಕ್ಕೆ ಅಶೋಕನ ಕಾಲದಲ್ಲಿ ಬೌದ್ಧಮತವು ವ್ಯಾಪಿಸಿತೆಂದು ಐತಿಹ್ಯವಿದೆ. ಅರಕಾನ್ ಪ್ರಾಂತಕ್ಕೆ ಮೊದಲನೆಯ ಹಿಂದುರಾಜನು ಕ್ರಿ.ಶ. ೧೬೨ರಲ್ಲಿದ್ದನು. ಶ್ಯಾಮ (ಸೈಯಾಂ) ಮತ್ತು ತೆನ್ನಾಸಿರಂಭಾಗಗಳು ಫೂನಾನ್ (ಕ್ಯಾಂಬೋಡಿಯ) ಸಾಮ್ರಾಜ್ಯಕ್ಕೆ ಅಧೀನವಾಗಿದ್ದವು. ಕ್ರಿ.ಶ. ೪೦೨ರಲ್ಲಿ ಬುದ್ಧಘೋಷನು ಸಿಂಹಳದಿಂದ ಬೌದ್ಧಮತವನ್ನು ತಂದನು. ಪಾಗನ್ ರಾಜನಾದ ತಿಂಗ ಎಂಬುವನು ಕ್ರಿ.ಶ. ೬೩೯ರಲ್ಲಿ ಹೊಸ ಶಕೆಯನ್ನಾರಂಭಿಸಿದನು. ಹಂಸಾವತಿ (ಪೆಗು) ಪ್ರಾಂತದಲ್ಲಿ ಕ್ರಿ.ಶ. ೮ನೆಯ ಶತಾಬ್ದದಿಂದ ವಿಕ್ರಮರಾಜ(ವಂಶವು) ಆಳಲಾರಂಭಿಸಿತು. ಉತ್ತರ ಶ್ಯಾಮದೇಶದಲ್ಲಿ ಕ್ರಿ.ಶ. ೯ನೆಯ ಶತಾಬ್ದದಲ್ಲಿ ಸುಖೋದಯವೆಂಬ ರಾಜ್ಯವು ಸ್ಥಾಪಿತವಾಯಿತು. ತಾನ್ತ್ರಿಕ ಬೌದ್ಧಮತವು ವಿಶೇಷವಾಗಿ ಪ್ರಚಾರ

ದಲ್ಲಿದ್ದಿತು. ಬೌದ್ಧ ಭಿಕ್ಷುಗಳು ಪ್ರತಿಯೊಬ್ಬ ಬಾಲಕನಿಗೂ ವಿದ್ಯೆಯನ್ನು ಕಲಿಸಿ ನಿರಕ್ಷರತೆಯನ್ನು ನಿರ್ಮೂಲಮಾಡಿರುವರು. ಶ್ವೇತಧಾತುಗರ್ಭ (Shwe Dagon) ದಂತಹ ದೇವಾಲಯಗಳ ನಿರ್ಮಾಣವಾಯಿತು. ಕ್ರಿ.ಶ. ೧೦೧೦ ರಲ್ಲಿ ಅರಿಮರ್ದನಪುರದ ರಾಜನಾದ ಅನುರುದ್ಧನು ಥಾಟೋನ್ (ಸುಧರ್ಮ ನಗರ)



ಬೃಹದ್ಭಾರತ.

ರಾಜನನ್ನು ಗೆದ್ದು, "ತೆಲುಂಗ್" ವಂಶವನ್ನು ನಾಶಮಾಡಿದನು. ಕ್ರಿ.ಶ. ೧೦೯೦ ರಲ್ಲಿ ಆನಂದ ದೇವಾಲಯವು ಸ್ಥಾಪಿತವಾಯಿತು. ಹನ್ನೆರಡನೆಯ ಶತಾಬ್ದದ ಪಾಗನ್ ಶಾಸನದಲ್ಲಿ "ನಾಸ್ಥಾಧರ್ಮೇ ನವಸುನಿಚಯೇ" ಎಂಬ ಮುಕುನ್ದಮಾಲಾ ಸ್ತೋತ್ರದ ಶ್ಲೋಕವು ಕಂಡುಬರುವದು. ಬರ್ಮ ದಕ್ಷಿಣಭಾಗದಲ್ಲಿ ಐರಾವತೀ ನದಿಯ ಬಳಿಯಲ್ಲಿ ತೆಲುಗು ಕಳಿಂಗದೇಶಗಳಿಂದ ಬಂದಿದ್ದ "ತೆಲುಂಗ್", "ಕ್ಲಿಂಗ್" ಎಂಬವರು ಸಣ್ಣ ಸಣ್ಣ ರಾಜ್ಯಗಳನ್ನು ಸ್ಥಾಪಿಸಿದ್ದರು.

ಕಂಬುಜ (Cambodia, Funan) ರಾಜ್ಯಕ್ಕೆ ಅಶ್ವತ್ಥಾಮನ ಶಿಷ್ಯನಾದ ಕೌಣ್ಡಿನ್ಯನೆಂಬ ಬ್ರಾಹ್ಮಣನು ಮೂಲಪುರುಷನೆಂದು ಕೆಲವು ಶಾಸನಗಳು

ಹೇಳುವವು. ಈತನು ಸೋಮ ಎಂಬ ನಾಗಕನ್ನಿಕೆಯನ್ನು ಮದುವೆಯಾಗಿ ಭವಪುರವೆಂಬ ರಾಜಧಾನಿಯನ್ನು ಸ್ಥಾಪಿಸಿ ಸೋಮ (ಚಂದ್ರ) ವಂಶವನ್ನಾರಂಭಿಸಿದನು. ಇತರ ಶಾಸನಗಳಲ್ಲಿ ಮಹರ್ಷಿ ಕಂಬು ಅಪ್ಸರಾ ಮೇರಾ ಎಂಬವರ ಸಂತತಿಯು ಸೂರ್ಯವಂಶವಾಯಿತೆಂದು ಹೇಳಿದೆ. ಇತರ ಪೂರ್ವದೇಶಗಳಲ್ಲಿಯೂ ರಾಜ್ಯಸ್ಥಾಪನೆಗೆ ಬ್ರಾಹ್ಮಣರು ಋಷಿಗಳೇ ಕಾರಣರು. ಅಗಸ್ತ್ಯರು ದಕ್ಷಿಣ ಹಿಂದೂದೇಶದಿಂದ ಸಮುದ್ರವನ್ನು ದಾಟಿಬಂದು ಸಂಸ್ಕೃತಿಯನ್ನು ಹರಡಿ ಈಗಲೂ ಗುರುಗಳೆಂದು ಆರಾಧಿಸಲ್ಪಡುತ್ತಿರುವರು. ಶ್ಯಾಮದೇಶಕ್ಕೆ ಇಬ್ಬರು ಬ್ರಾಹ್ಮಣರು, ಸುಧರ್ಮ ನಗರಕ್ಕೆ (ಥಾಟೊನ್) ಇಬ್ಬರು ಋಷಿಗಳು, ಪೆಗುರಾಜ್ಯಕ್ಕೆ ಒಬ್ಬ ಋಷಿಯು ಪೋಷಿಸಿದ ಕ್ಷತ್ರಿಯನೂ, ಚಂಪದೇಶಕ್ಕೆ ಭೃಗು ಮತ್ತು ಉರೋಜ ಎಂಬ ಋಷಿಗಳೂ, ಜಾವರಾಜ್ಯಕ್ಕೆ ವಾರಾಣಸಿಯ ಬ್ರಾಹ್ಮಣರೂ, ಬಲಿದ್ವೀಪದ ರಾಜವಂಶಕ್ಕೆ ಕೌಣ್ಡಿನ್ಯನು ಮೂಲಪುರುಷರು.

ಟಾಲಮಿಯ ಭೂಗೋಳಶಾಸ್ತ್ರ ಚೀಣದ ಚರಿತ್ರೆಗಳಿಂದ ಕಂಬುಜ ದೇಶದಲ್ಲಿ ಮುರುಂಡ, ಕಪಿಲವಾಸ್ತು, ಶ್ರಾವಸ್ತಿ, ಪಾಟಲಿಪುತ್ರ ಮುಂತಾದ ನಗರಗಳಿದ್ದವೆಂದು ತಿಳಿದುಬರುವದು. ಈ ದೇಶದ ರಾಜರು ಕ್ರಿ.ಶ. ೨೨೫, ೨೪೨, ೨೫೧ ರಲ್ಲಿ ಚೀಣದೇಶಕ್ಕೆ ರಾಯಭಾರಿಗಳನ್ನು ಕಳುಹಿಸಿದ್ದರು. ಕ್ರಿ.ಶ. ೬ ನೆಯ ಶತಾಬ್ದದಲ್ಲಿ ರುದ್ರವರ್ಮ, ಭವವರ್ಮ, ಮಹೇನ್ದ್ರ, ಈಶಾನ, ಮತ್ತು ಜಯವರ್ಮರೆಂಬ ರಾಜರು ಆಳಿದರು. ಭವವರ್ಮನು ದುರ್ಗಾ, ಶಮ್ಭು, ತ್ರ್ಯಮ್ಬಕ, ತ್ರೈಲೋಕ್ಯಸಾರ ವಿಷ್ಣು, ಭದ್ರೇಶ್ವರ, ತ್ರಿಭುವನೇಶ್ವರ ದೇವಾಲಯಗಳನ್ನು ನಿರ್ಮಿಸಿದನು. ಇವುಗಳಲ್ಲಿ ರಾಮಾಯಣಪುರಾಣ, ಸಂಪೂರ್ಣ ಮಹಾಭಾರತ ಪಠನೆಗಾಗಿ ದಾನಮಾಡಿರುವನು. ಇವನ ಹಾನ್‌ಚ್ಯೈ ಶಾಸನವು ಕಾಲಿದಾಸನ ರಘುವಂಶದ ಚತುರ್ಥ ಸರ್ಗದ ಅನುಕರಣೆಯಾಗಿದೆ. ಯಶೋವರ್ಮನ ಕಾಲವು (ಕ್ರಿ.ಶ. ೮೮೯-೯೧೦) ಬಹು ಮುಖ್ಯವಾದುದು. ಯಶೋವರ್ಮನು ಚಂಪದೇಶವನ್ನು ಗೆದ್ದು ರಾಜ್ಯವನ್ನು ವಿಸ್ತರಿಸಿದನು. ಇವನ ಶಾಸನಗಳು ಪಲ್ಲವ-ಗ್ರಂಥಲಿಪಿಯಲ್ಲಿವೆ. ಶ್ಲೋಕಗಳು ಅತ್ಯುತ್ತಮ ಕಾವ್ಯಶೈಲಿಯಲ್ಲಿವೆ. ಕ್ರಿ.ಶ. ೮೯೫ ನೆಯ ಫ್ನೋಮ್ ಸಂದಕ್ ಶಾಸನವು ತ್ರಿಮೂರ್ತಿ, ಗೌರೀ, ಸರಸ್ವತೀ, ಶಿವ, ರುದ್ರ, ಧೂರ್ಜಟಿ, ವರಾಹ, ವಿಷ್ಣು, ಬ್ರಹ್ಮ ದೇವತೆಗಳ ಸ್ತೋತ್ರದಿಂದ ಆರಂಭವಾಗುವದು. ಈ ಶಾಸನದ ಹದಿನೆಂಟನೆಯ ಶ್ಲೋಕದಲ್ಲಿ " ಶ್ರೀ ಶಂಕರ ಭಗವತ್ಪಾದ ಮುಖಾಂಬುಜಾದಧಿಗತ ಸರ್ವಶಾಸ್ತ್ರ ಮಹೋದಧಿ "ಯೂ, ಮುನಿವರ್ಯನೂ ಆದ ಸೋಮಶಿವನ (ಶಿವಸೋಮ)

ಶಿಷ್ಯನಾದ ವಾಮಶಿವಾಚಾರ್ಯನು ಯಶೋವರ್ಮನಿಗೆ ಗುರುವಾಗಿದ್ದು, ಶಿವಸೋಮನು ಸ್ಥಾಪಿಸಿದ್ದ ಶ್ರೀಂದ್ರವರ್ಮೇಶ್ವರ ದೇವಾಲಯಕ್ಕೆ ಅಧ್ಯಕ್ಷನಾಗಿ, ಶಾಲಿವಾಹನಶಕ ೮೧೭ ರಲ್ಲಿ ಶ್ರೀ ಭದ್ರೇಶ್ವರಲಿಂಗ ಪ್ರತಿಷ್ಠೆಯನ್ನು ಮಾಡಿದನೆಂದು ಹೇಳಿದೆ. ವಾಮಶಿವಾಚಾರ್ಯನ ಮನ್ದರಪರ್ವತದಂತಹ ಮನಸ್ಸಿನಿಂದ ಸಮಸ್ತ ಶಿವಶಾಸ್ತ್ರ ಕ್ಷೀರಸಮುದ್ರವು ಮಥಿತವಾಗಿದ್ದಿತು. ಈ ಶಾಸನದಲ್ಲಿ ಉಕ್ತರಾದ ಶಂಕರ ಭಗವತ್ಪಾದರು ಆದಿಶಂಕರರಾಗಿರಲಾರರು. ಆದರೂ ಶಂಕರಾಚಾರ್ಯರ ಪ್ರಭಾವವು ದ್ವೀಪಾಂತರಗಳಲ್ಲಿಯೂ ವ್ಯಾಪಿಸಿದ್ದಿತೆಂದು ತಿಳಿದುಬರುವದು. ಯಶೋವರ್ಮನ ಶಾಸನಗಳಲ್ಲಿ ಕಾಲಿದಾಸ-ಪ್ರವರಸೇನರ ಸೇತುಬಂಧಕಾವ್ಯ, ಗುಣಾಢ್ಯನ ಬೃಹತ್ಕಥಾ, ಕಲ್ಯಾಣಕಾರಕ, ವಿಶಾಲಾಕ್ಷ, ಆರ್ಯಶೂರ, ಭೀಮಕ(ಟ), ಮಯೂರ, ವಾತ್ಸ್ಯಾಯನ, ಪತಂಜಲಿಯ ಮಹಾಭಾಷ್ಯ, ಮಹಾಭಾರತ, ಹರಿವಂಶ ಇತ್ಯಾದಿಗಳ ಉಲ್ಲೇಖನೆಯಿದೆ. ಶಿವಸೋಮನೇ ಆರಂಭಿಸಿದ ಅಂಗ್‌ಕೊರ್‌ಥಾಮ್ (ನಗರಧಾಮ, ಯಶೋಧರಪುರ) ಎಂಬ ಮಹಾ ದೇವಾಲಯವೂ ನಗರವೂ ಯಶೋವರ್ಮನಿಂದ ಸಂಪೂರ್ಣವಾಯಿತು. ಇದರ ವಾಸ್ತುಶಿಲ್ಪವು ಅತ್ಯದ್ಭುತವಾಗಿದೆ. ಇದೇ ಕಾಲದ ಬಾಯೊನ್ ಶಿವಾಲಯದ ಕಲಾಕೌಶಲ್ಯವೂ ಶ್ಲಾಘ್ಯವಾಗಿದೆ.

ಕಂಬುಜ ದೇಶದಲ್ಲಿ ಹದಿನೈದನೆಯ ಶತಾಬ್ದದ ವರೆಗೂ ಹಿಂದೂ ರಾಜರು ಆಳಿದರು. ಇವರೆಲ್ಲರೂ ಸಿದ್ಧಾನ್ತ, ಪಾಣಿನಿ, ಪತಂಜಲಿ, ಧರ್ಮಶಾಸ್ತ್ರ, ದರ್ಶನಗಳಲ್ಲಿ ಪ್ರವೀಣರಾಗಿದ್ದರು. ಶೈವಮತವೇ ವಿಶೇಷವಾಗಿದ್ದಿತು. ಕ್ರಿ.ಶ. ೯ ನೆಯ ಶತಾಬ್ದದಲ್ಲಿ ಪ್ರವೇಶಿಸಿದ ಮಹಾಯಾನ ಬೌದ್ಧಮತವು ಶೈವಮತದೊಡನೆ ಮಿಳಿತವಾಯಿತು. ಹರಿಹರಾಲಯ, ಅಮರೇಂದ್ರಪುರಿ, ಮಹೇಂದ್ರಪರ್ವತ ಮುಂತಾದ ರಾಜಧಾನಿಗಳಲ್ಲಿ ಮೊದಲು ಚಾಳುಕ್ಯ—ಪಲ್ಲವಶಿಲ್ಪವೂ ಅನಂತರ ಮಗಧರೀತಿಯೂ ಕಂಡುಬರುವವು. ಖ್ಮೇರ್ ಎಂಬ ಆಸ್ಟ್ರೋ ಏಷ್ಯಾಟಿಕ್ ಭಾಷೆಯ ಪದಗಳು ಸಂಸ್ಕೃತದೊಡನೆ ಸೇರಿದವು. ವಿಷ್ಣುಕ್ರಾನ್ತ, ಅಶ್ವಕ್ರಾನ್ತಗಳಿಗೆ ಸೇರಿದ ಜಯದ್ರಥಯಾಮಲ (ಶಿರಚ್ಛೇದ) ನಯೋತ್ತರ, ಸಮ್ಮೋಹ, ನಿಶ್ವಾಸ ಸಂಹಿತಾ ಮುಂತಾದ ತನ್ತ್ರಗಳು ಪ್ರಚಾರದಲ್ಲಿದ್ದವು.

**ಚಂಪ (ದಕ್ಷಿಣ ಅನ್ನಾಮ್):** ಇಲ್ಲಿ ಕ್ರಿ.ಶ. ೧೯೨ ರಲ್ಲಿ ಶ್ರೀ ಮಾರನೆಂಬುವನು ರಾಜ್ಯವನ್ನು ಸ್ಥಾಪಿಸಿದನು. ಕ್ರಿ.ಶ. ४೧೩ ರಲ್ಲಿ ರಾಜನಾಗಿದ್ದ ಗಂಗರಾಜನು ತನ್ನ ರಾಜ್ಯವನ್ನು ಭದ್ರವರ್ಮನಿಗೆ ಒಪ್ಪಿಸಿ ತಾನು ಗಂಗಾತೀರಕ್ಕೆ ತಪಸ್ಸುಮಾಡಲು ಹೊರಟುಹೋದನು. ಭದ್ರವರ್ಮ, ರುದ್ರವರ್ಮ,

ಸಿಂಹದೇವ, ಶಮ್ಭುವರ್ಮ, ಪ್ರಕಾಶಧರ್ಮರೆಂಬುವರು ೮ನೆಯ ಶತಾಬ್ದದ ವರೆಗೂ ಆಳಿದರು. ಚೀಣ ಮತ್ತು ಕಂಬುಜದೇಶಗಳೊಡನೆ ಯುದ್ಧ ನಡಿಸುತ್ತಿದ್ದರು. ಭದ್ರೇಶ್ವರ, ಭಗವತೀ, ಮುಖಲಿಂಗ ಮಧುಕೇಶ್ವರ, ಜಿನಶಂಕರ, ಲಕ್ಷ್ಮೀನ್ದ್ರಲೋಕೇಶ್ವರ, ಲಿಂಗಭದ್ರೇಶ್ವರ ಮುಂತಾದ ದೇವಾಲಯಗಳನ್ನು ಸ್ಥಾಪಿಸಿರುವರು. ಕ್ರಿ.ಶ. ೯೦೨ರಲ್ಲಿ ಸ್ಥವಿರ ನಾಗಪುಷ್ಪನು ಮಹಾಯಾನ ಬೌದ್ಧಮತವನ್ನು ತಂದನು. ಚಂಪರಾಜ್ಯವು ಕ್ರಿ.ಶ. ೧೪೭೧ ವರೆಗೂ ಇದ್ದಿತು. ಅನಂತರ ಮಜಾಪಹಿತ್ ರಾಜರ ವಶವಾಯಿತು.

**ಫಿಲಿಪೈನ್ಸ್:** ಇಲ್ಲಿರುವ "ಮೋರೋಸ್" ಎಂಬ ಜನರು ಹಿಂದುಗಳಾಗಿದ್ದರು. ಈಗಲೂ ಶೈವವಿಗ್ರಹಗಳು, ಹೆಂಗಸರ ಮಲೆಯಾಳರೀತಿ ಕೇಶಬಂಧನ, ಆಭರಣಗಳು, ತಲಗ ಅಥವಾ ತಗ್‌ಲಂಗ್ (ತೆಲುಗು) ಭಾಷೆಯು ಭಾರತೀಯ ಸಂಸ್ಕೃತಿಯನ್ನು ಸೂಚಿಸುತ್ತವೆ. ತಲಗಭಾಷೆಯಲ್ಲಿ ಅನೇಕ ಸಂಸ್ಕೃತಶಬ್ದಗಳು ಕಂಡುಬರುವವು (ಸಂದಿಗ್-ಸಂಧಿ, ಮಾಸ-ಮಾಸ-ತಿಂಗಳು, ಸಂದನ್-ಚಂದನ, ಕಸ್ತೋಲಿ-ಕಸ್ತೂರಿ, ಸುತ್ಲ-ಸೂತ್ರ, ಇತ್ಯಾದಿ).

ಫಾರ್ಮೋಸಾದ್ವೀಪದ ಬಿಸ್ಗಯ (ವಿಜಯ) ಜನರು ಶ್ರೀ ವಿಜಯರಾಜ್ಯದಿಂದ ಬಂದು ನೆಲಸಿದವರು. ಬಿಸ್ಗಯ, ತಗ್‌ಲೊಗರ ಬಳಿ ಈಗಲೂ ಇರುವ ತಾಳಪತ್ರಗ್ರಂಥಗಳು ದೇವನಾಗರಿಲಿಪಿಯಲ್ಲಿವೆ. ಇಲ್ಲಿನ ಮುಸ್ಲಿಮ್ ಮುನ್ಷಿಗಳನ್ನು ಪಂಡಿತರೆಂದು ಕರೆಯುವರು. ಗ್ವಾಮ್, ಮೇರಿ ಆನ್, ಈಸ್ಟರ್ ಐಲೆಂಡ್ಸ್ ಮುಂತಾದ ಸಣ್ಣ ಸಣ್ಣ ದ್ವೀಪಗಳಲ್ಲಿಯೂ ಹಿಂದೂ ಸಂಸ್ಕೃತಿಯ ಚಿಹ್ನೆಗಳು ವಿಶೇಷವಾಗಿವೆ. ಅಮೆರಿಕ ಖಂಡದ ಮಧ್ಯಭಾಗದಲ್ಲಿದ್ದ ಟಾಲ್ಟೆಕ್, ಆಸ್ಟೆಕ್, ಮಾಯಾ ಸಂಸ್ಕೃತಿಗಳು ಭಾರತೀಯ ಸಂಸ್ಕೃತಿಯಿಂದ ಹುಟ್ಟಿದವು. ಮಾಯಾ ಸಂಸ್ಕೃತಿಯ ದೇವಾಲಯಗಳು, ರಾಜ್ಯಭಾರಪದ್ಧತಿ, ಜ್ಯೋತಿಷ, ಗಣಪತಿ ಮುಂತಾದ ದೇವತೆಗಳು ಭರತಖಂಡದ ಸಂಬಂಧವನ್ನು ತೋರಿಸುವವು.

**ಆಗ್ನೇಯ:** ಜಾವ, ಬಲಿ, ಸುಮಾತ್ರ, ಮಲಯ ಬೋರ್ನಿಯೋ ಮುಂತಾದ ದ್ವೀಪಗಳಲ್ಲಿ ಕ್ರಿ.ಶ. ೧ನೆಯ ಶತಾಬ್ದದಿಂದ ಭಾರತೀಯ ಸಂಸ್ಕೃತಿಯು ಕಂಡುಬರುವದು. ಈ ದೇಶಗಳ ಚರಿತ್ರೆಗೂ ದಕ್ಷಿಣಾಪಥದ ಚರಿತ್ರೆಗೂ ನಿಕಟ ಸಂಬಂಧವಿದೆ. ಶ್ರೀಶೈಲ (ನಾಗಾರ್ಜುನಿಕೊಂಡ)ದ ಇಕ್ಷ್ವಾಕು ವಂಶವನ್ನು ಪಲ್ಲವರು ಗೆದ್ದುದರ ಫಲವಾಗಿ ಬುಲವರ್ಮನು ಕ್ರಿ.ಶ. ೩೦೦ ರಲ್ಲಿ ಕುಟೈ ರಾಜ್ಯವನ್ನು ಸ್ಥಾಪಿಸಿದನು. ಸಮುದ್ರಗುಪ್ತನು ಶಾಲಂಕಾಯನರನ್ನು ಸೋಲಿಸಿ (ಕ್ರಿ.ಶ. ೩೭೫)ದುದರಿಂದ ಪೂರ್ಣವರ್ಮನ ತಾರೂಮವಂಶವು ಪಶ್ಚಿಮ ಜಾವದಲ್ಲಿ ನೆಲಸಿತು. ವಿಷ್ಣುಕುಣ್ಡಿರಾಜರು

ಪಿತೃಭಕ್ತಕಂಧರಿ ರಾಜರನ್ನು ಗೆದುದ್ದರಿಂದ ಪಲೆಂಬಾಂಗಿನಲ್ಲಿ (ಕ್ರಿ.ಶ. ೫೧೮) ಕಾಣ್ಡಿನ್ಯರಾಜ್ಯ ಸ್ಥಾಪನೆಯಾಯಿತು. ಇಮ್ಮಡಿ ಪುಲಕೇಶಿಯು ಕಳಿಂಗ ಮತ್ತು ಶೈಲೋದ್ಭವ ರಾಜರನ್ನು ಗೆದ್ದುದರ ಫಲವಾಗಿ ಗುರ್ಜವನು ಪೊ-ಲಿ ಅಥವಾ ಪತಿರಾಜ್ಯ ಸ್ಥಾಪಿಸಿದನು.

ಯವದ್ವಿಪ ಎಂಬ ಹೆಸರು ರಾಮಾಯಣ, ಟಾಲಮಿಯ ಭೂಗೋಳ ಶಾಸ್ತ್ರಗಳ ಪ್ರಕಾರ ಮೊದಲು ಮಲಕ್ಕ ಪರ್ಯಾಯ ದ್ವೀಪಕ್ಕೆ ಅನ್ವಯಿಸು ತ್ತಿದ್ದಿತು. ಕ್ರಮೇಣ ಈ ಹೆಸರು ಯಾವ (ಚೊ-ಪೊ=ಉತ್ತರ ಮಲಕ್ಕ, ಫೂನಾನ್), ಕೆಡಾ, ಬೊರ್ನಿಯೋ ಪಶ್ಚಿಮ ತೀರಗಳನ್ನು ನಿರ್ದೇಶಿಸುತ್ತಿದ್ದಿತು. ಕ್ರಿ.ಶ. ೧೦ ನೆಯ ಶತಾಬ್ದದಲ್ಲಿ ಈಗ ಜಾವ ಎಂಬ ದ್ವೀಪಕ್ಕೆ ಹೆಸರಾಯಿತು. ರಾಮಾಯಣದ ಲಂಕಾಪಟ್ಟಣವು ಮಧ್ಯ ಇಂಡಿಯಾದಲ್ಲೂ, ಸಿಂಹಳದ್ವೀಪ ದಲ್ಲೂ ಇರಲಿಲ್ಲ. ಲಂಕಾಶುಕಂ (Port Ligor) ಆಗಿದ್ದಿತೆಂದು ಕೆಲವರು ಹೇಳುವರು. ತಕ್ಕೋಲವು ಕ್ರಾಭೂಕಣ್ಠ. ಯಾವ ಕೋಟಿಯು ಯಮ ಕೋಟಿ (Jamkut) ನವಧರ್ಮರಾಜನಗರ ಅಥವಾ ಯಮನಗರವಾಯಿತು. ಮಲಕ್ಕ ಪ್ರಾಂತಕ್ಕೆ "ಹೋಲಿಂಗ್" (ಕಳಿಂಗ) ಎಂಬ ಹೆಸರಿದ್ದಿತು. ಇದರ ರಾಜಧಾನಿಯಾದ ಕೆಡ (ಕಟಾಹ) ಮಣಿಮೇಖಲೈ, ಕೌಮುದೀ ಮಹೋತ್ಸವ, ಕಥಾಸರಿತ್ಸಾಗರ ಮುಂತಾದ ಗ್ರಂಥಗಳಲ್ಲಿ ಉಕ್ತವಾಗಿದೆ. ಕ್ರಿ.ಶ. ೬೬೬ ರಲ್ಲಿ ಶ್ರೀ ವಿಜಯರಾಜ್ಯವು ಮಲಕ್ಕದ ಪೂರ್ವತೀರದಲ್ಲಿರುವ ಕೆಲನ್ತಾನ್ ಬಳಿಯಲ್ಲಿ ಸ್ಥಾಪಿತವಾಯಿತು. ರಾಜಧಾನಿಗೆ ಜಯನಗರವೆಂದು ಹೆಸರಿದ್ದಿತು. ಕ್ರಿ.ಶ. ೬೮೬ ರಲ್ಲಿ ಶ್ರೀ ವಿಜಯರಾಜರು ಪಲೆಂಬಾಂಗನ್ನು ಗೆದ್ದು ರಾಜಧಾನಿಯನ್ನು ಬದುಲಾಯಿಸಿದರು. ಪಲೆಂಬಾಂಗಿನ ರಾಜರು ಮಧ್ಯಜಾವಕ್ಕೆ ಹೋಗಿ ಅಲ್ಲಿ ಶ್ರೀಶೈಲದಂತೆ ಬರೋಬುದೂರ್ ದೇವಾಲಯವನ್ನು (ಡಾ|| ಕ್ರೋಮ್ ಅಭಿ ಪ್ರಾಯದಂತೆ ಕ್ರಿ.ಶ. ೭೫೦ ಕ್ಕೆ ಹಿಂದೆ ಅಥವಾ ಡಾ|| ಬೋಷ್ ಹೇಳುವಂತೆ ಕ್ರಿ.ಶ. ೭೬೦-೮೪೭ ರಲ್ಲಿ), ನಿರ್ಮಿಸಿ ಶೈಲೇನ್ದ್ರರೆಂದು ಪ್ರಸಿದ್ಧರಾದರು. ಶ್ರೀ ವಿಜಯರಾಜರು ಕ್ರಿ.ಶ. ೬೮೬ ರಲ್ಲಿ "ಕೆಡ"ವನ್ನು ಗೆದ್ದರು. ಕ್ರಿ.ಶ. ೮೫೨ ರಲ್ಲಿ ಶೈಲೇಂದ್ರರು ಪುನಃ ತಮ್ಮ ರಾಜಧಾನಿಯನ್ನು "ಕೆಡು"ವಿನಿಂದ ದಕ್ಷಿಣ ಮಲಕ್ಕದಲ್ಲಿರುವ ಜೋಹೋರ್-ಸಿಂಹಪುರ (Singapur) ಕ್ಕೆ ಬದು ಲಾಯಿಸಿದರು. ಕಟಾಹ, ಕೆಡು, ಸುವರ್ಣದ್ವೀಪ, ಜಬಗ್ ಎಂಬ ಹೆಸರುಗಳು ಶೈಲೇಂದ್ರರ ಚಕ್ರಾಧಿಪತ್ಯಕ್ಕೆ ಅನ್ವಯಿಸುವವು. ಕ್ರಿ.ಶ. ೮೭೧-೯೦ ರಲ್ಲಿ ಶೈಲೇಂದ್ರರು ಮಲಕ್ಕದ ಶ್ರೀ ವಿಜಯರಾಜರೊಡನೆ ಯುದ್ಧಮಾಡಿದರು. ಆಗ ಜಾವ ರಾಜ್ಯಕ್ಕೆ ಮಟರಂ (ಮೆಡಂಗ್) ಎಂಬ ಹೆಸರಾಯಿತು. ಹನ್ನೊಂದನೆಯ

ಶತಾಬ್ದದಲ್ಲಿ ರಾಜರಾಜ, ರಾಜೇಂದ್ರಚೋಳರು (ಕ್ರಿ.ಶ. ೧೦೧೭) ಪನ್ನೈ, ಮಲೆಯೂರ್, ಮಾಯಿರುಡಿಂಗಂ, ಲಂಕಾಶೋಕಂ, ಮಾಪ್ಪಪಾಳಂ, ಮೇವಿಲಿಂಬಂಗಂ, ವಿಲೈಪ್ಪಂದೂರು, ತಕ್ಕೋಲಂ, ಮಾಡಮಾಲಿಂಗಂ, ಇಳಾಮುರಿದೇಶಂ, ಮಾನಕ್ಕವರಂ, ಕಡಾರಂ ಮುಂತಾದ ಭಾಗಗಳನ್ನು ಗೆದ್ದರೆಂದು ತಮಿಳುಶಾಸನಗಳು ಹೇಳುವವು. ಶೈಲೇಂದ್ರ ಚೂಡಾಮಣಿವರ್ಮನು ನಾಗಪಟ್ಟಣದಲ್ಲಿ ಚೂಡಾಮಣಿ ವಿಹಾರವನ್ನು ಕಟ್ಟಿಸಿದನು. ಅವನ ಮಗ ಶ್ರೀ ಮಾರವಿಜಯೋತ್ತುಂಗವರ್ಮನು ಕ್ರಿ.ಶ. ೧೦೦೫ರಲ್ಲಿ ಚೋಳರಾಜನ ಅನುಮತಿಯಿಂದ ವಿಹಾರಕ್ಕೆ ಒಂದು ಗ್ರಾಮವನ್ನು ದಾನಮಾಡಿದನು. ಕ್ರಿ.ಶ. ೧೦೮೯ ರಲ್ಲಿ ಒಂದನೆಯ ಕುಲೋತ್ತುಂಗಚೋಳನು ಕಡಾರದ ರಾಜ ವಿದ್ಯಾಧರಸಾಮಂತ, ಅಭಿಮಾನೋತ್ತುಂಗಸಾಮಂತರೆಂಬ ರಾಯಭಾರಿಗಳ ಪ್ರಾರ್ಥನೆಯಂತೆ ಆ ಗ್ರಾಮದ ಕಂದಾಯವನ್ನು ಪುನಃ ವಿಹಾರಕ್ಕೆ ದಾನ ಮಾಡಿದನು. ಅನೇಕ ವರ್ತಕರ ಮಣಿಮಂಗಲ (ಸಂಘ)ಗಳು ಈ ದ್ವೀಪಾಂತರಗಳೊಡನೆ ವ್ಯಾಪಾರ ನಡಿಸುತ್ತಿದ್ದವು. ಅಣ್ಡಮಾನ, ನಿಕೋಬಾರ ದ್ವೀಪಗಳಲ್ಲಿ ಚೋಳರ ನೌಕಾಬಲವಿದ್ದಿತು. ಹೀಗೆ ಚೋಳಸಾಮ್ರಾಜ್ಯಕ್ಕೂ ಶೈಲೇಂದ್ರ ಸಾಮ್ರಾಜ್ಯಕ್ಕೂ ಸಂಬಂಧವಿದ್ದಿತು. ಕ್ರಿ.ಶ. ೧೩೭೦ ರಲ್ಲಿ ಶೈಲೇಂದ್ರ ಸಾಮ್ರಾಜ್ಯವು ಪೂರ್ವ ಜಾವದ ಮಜಾಪಹಿತ್ ರಾಜರ ವಶವಾಯಿತು.

ಜಾವದ್ವೀಪಕ್ಕೆ ಕ್ರಿ.ಶ. ೧ ನೆಯ ಶತಾಬ್ದದಲ್ಲಿ ಕಳಿಂಗ ಪ್ರಾಂತದಿಂದ ೨೦೦೦೦ ಜನ ಬಂದು ನೆಲಸಿದರೆಂದು ಅಜಿಶಕ ಎಂಬ ಗ್ರಂಥದಲ್ಲಿ ಹೇಳಿದೆ. ಕ್ರಿ.ಶ. ೨೮೯ ರಲ್ಲಿ ವಿರಾಟರಾಜ್ಯವು ಸ್ಥಾಪಿತವಾಯಿತು. ಕ್ರಿ.ಶ. ೬ ನೆಯ ಶತಮಾನದಲ್ಲಿ ಅಸ್ತಿನ (ಹಸ್ತಿನ) ವಂಶದವರು ರಾಜರಾಗಿದ್ದರು. ಇವರಲ್ಲಿ ಜಯಬಯ ಎಂಬುವನು ರಾಜಧಾನಿಯನ್ನು ಅಸ್ತಿನದಿಂದ ಕೆಡರಿಗೆ ಬದಲಾಯಿಸಿದನು. ಜಾವದಲ್ಲಿ ಶಾಲಿವಾಹನಶಕೆ ಮತ್ತು ಸಂಜಯಶಕೆಗಳು ಪ್ರಚಾರದಲ್ಲಿದ್ದವು. ಇಲ್ಲಿ ದೊರೆತಿರುವ ಶಾಸನಗಳಲ್ಲಿ ಪ್ರಾಚೀನವಾದ ಪೂರ್ಣವರ್ಮನ ತಾರೂಮಶಾಸನವು (ಕ್ರಿ.ಶ. ೪೦೦) ಸಂಸ್ಕೃತದಲ್ಲಿ ರಚಿತವಾಗಿದೆ.

ವಿಕ್ರಾನ್ತಸ್ಯಾವನಿಪತೇಃ ಶ್ರೀಮತಃ ಪೂರ್ಣವರ್ಮಣಃ |
ತಾರೂಮನಗರೇನ್ದ್ರಸ್ಯ ವಿಷ್ಣೋರಿವಪದದ್ವಯಮ್ ||

ಶಾಲಿವಾಹನಶಕ ೬೫೪ ನೆಯ ಸಂಜಯನಶಾಸನವು ಮಧ್ಯ ಜಾವದಲ್ಲಿ ಸಿಕ್ಕಿದೆ. ಇದರಲ್ಲಿ ಈ ರಾಜನ ಮೂಲಪುರುಷರು ಕುಂಜರಕುಂಜ (ಹಸ್ತಿನಾವತಿ, ಆನೆಗೊಂದಿ ?) ದಿಂದ ಬಂದರೆಂದು ಹೇಳಿದೆ (ಶ್ರೀಮತ್ಕುಂಜರಕುಂಜ ದೇಶ

ನಿಹಿತೋಽವಂಶಾದಿತಿಽವಾಧೃತಮ್). ಮಹಾಯಾನ ಬೌದ್ಧಮತವು ಕ್ರಿ.ಶ. ೭೭೮ರಲ್ಲಿ ಪ್ರವೇಶಿಸಿತು. ಅದೇ ಶತಾಬ್ದದಲ್ಲಿ ಶಂಕರಾಚಾರ್ಯರ ಶಿಷ್ಯರು ಶೈವ ಮತ್ತು ವೇದಾನ್ತಮತಗಳನ್ನೂ ಪ್ರಚಾರಮಾಡಿದರು. ಜಾವ ಬಲಿ ದ್ವೀಪಗಳಲ್ಲಿ ವೇದಗಳು ಕಂಡುಬರುವದಿಲ್ಲ, ಆದರೆ ಈತರ ಸಂಸ್ಕೃತ ಗ್ರಂಥಗಳೆಲ್ಲ ಕವಿ ಲಿಪಿಯಲ್ಲಿವೆ. ಮುಖ್ಯವಾದುದನ್ನು ಕೆಳಗೆ ಸೂಚಿಸುವೆವು.—

ಪುರಾಣಗಳು—ಬ್ರಹ್ಮಾಣ್ಡ, ವಿಷ್ಣು, ಭುವನಕೋಶ, ಭುವನ ಸಂಕ್ಷೇಪ, ಬೃಹಸ್ಪತಿ ತತ್ವ, ಸಂಗ್ ಹ್ಯಂಗ್‌ಕ ಮಹಾಯಾನ ತತ್ವ;

ಮನ್ತ್ರಶಾಸ್ತ್ರ—ಸೂರ್ಯಸೇವನ (ಶಿವಾದಿತ್ಯಪೂಜೆ), ತಲಭೇದನ, ಕರಶುದ್ಧಿ, ಪ್ರಾಣಾಯಾಮ, ಕವಚ, ಆಚಮನ, ಸಪ್ತತೀರ್ಥಮನ್ತ್ರ (ಗಂಗೇಚಯಮುನೇಚೈವ ಗೋದಾವರಿಸರಸ್ವತೀ | ನರ್ಮದಾ ಸಿನ್ಧುಕಾವೇರಿ ಜಲೇಽಸ್ಮಿನ್ ಸನ್ನಿಧಿಂಕುರು ||); ಘಂಟಾಮಂತ್ರ (ಆಗಮಾರ್ಥಂತು ಇತ್ಯಾದಿ). "ಪಾಪೋಽಹಂ" "ಮನ್ತ್ರಹೀನಂ ಕ್ರಿಯಾಹೀನಂ" ಇತ್ಯಾದಿ ಶ್ಲೋಕಗಳು ಮೃತ್ಯುಂಜಯ ಮಂತ್ರ (ತ್ರ್ಯಂಬಕಂಯಜಾಮಹೇ); ಭಸ್ಮಧಾರಣ ಮಂತ್ರ (ಅಗ್ನಿರಿತಿ ಭಸ್ಮ), "ಭರ್ಗೋದೇವಸ್ಯ ಧೀಮಹಿ" ಎಂಬಷ್ಟು ಮಾತ್ರ ಗಾಯತ್ರೀ, ಗಾರುಡ ಮಂತ್ರ, ನೃಸಿಂಹಮನ್ತ್ರ, ವಿಷ್ಣುಸ್ತವ, ಪಂಚಕನ್ಯಾಸ್ಮರಣ (ಅಹಲ್ಯಾದ್ರೌಪದೀತಾರಾ), ಸ್ವಸ್ತಿವಾಚನ, ಆವಾಹನಾದಿ ಮುದ್ರೆಗಳು—ಆಸನಗಳು, ಇತ್ಯಾದಿ.

ನೀತಿ—"ವ್ಯಾಸ"ನ ಅಷ್ಟಾದಶಪರ್ವ, ವರರುಚಿಯ ಸಾರಸಮುಚ್ಚಯ, ನವರುಚಿ, ಆದಿಪುರಾಣ, ಕಾಮನ್ದಕನೀತಿ, ನೀತಿಶಾಸ್ತ್ರಕವಿ ಇತ್ಯಾದಿ.

ಧರ್ಮಶಾಸ್ತ್ರ—ಶಿವಶಾಸನ, ಕುಟಾರ ಮಾನವಾಗಮ, ದೇವಾಗಮ, ಸ್ವರಜಂಬು, ದೇವದಂಡ.

ವ್ಯಾಕರಣ—ಆದಿಸ್ವರ, ಅಮರಮಾಲಾ, ವೃತ್ತಸಂಚಯ, ಏಕಲವ್ಯ—ಇತ್ಯಾದಿ.

ಉಸವ-ವಾರಿಗ (ಔಷಧ-ಜ್ಯೋತಿಷ)—ಬೃಗುಗರ್ಗ, ಅಜೆಶಕ ಮುಂತಾದುವು.

ಕಥೆಗಳು—ತಂತುಪಂಗೆರೆನ್, ಮನಿಕ್‌ಮಾಯಾ, ರಾಮಾಯಣ, ಮಹಾಭಾರತ, ಹರಿವಂಶ.

ಕಾವ್ಯಗಳು—ಹರಿವಿಜಯ, ರತ್ನವಿಜಯ, ಘಟೋತ್ಕಚಾಶ್ರಯ, ಪಾರ್ಥಯಜ್ಞ, ಕುನ್ತೀಯಜ್ಞ, ಅರ್ಜುನವಿವಾಹ, ಸ್ಮರದಹನ, ಕೃಷ್ಣಾಯಣ, ಸಂಗ್‌ಸತ್ಯವಾನ್, ಪಂಚತಂತ್ರ ಮುಂತಾದುವು.

ಚರಿತ್ರೆಗಳು—ನಾಗರ ಕೃತಾಗಮ ಮುಂತಾದುವು ಹೇರಳವಾಗಿವೆ.

ಬಲಿ ದ್ವೀಪದವರೆಲ್ಲ ಹಿಂದುಗಳು. ಇವರಲ್ಲಿ ಸನ್ಧ್ಯೋಪಾಸನೆ, ಯಜ್ಞೋಪವೀತಧಾರಣೆ ಉಪನಯನಗಳಿವೆ, ವರ್ಣಾಶ್ರಮ ನಿಯಮಗಳಿವೆ. ಸಹಗಮನ ಪದ್ಧತಿಯೂ ಇದ್ದಿತು. ವಾಸ್ತುಶಿಲ್ಪದಲ್ಲಿ ಜಾವದಲ್ಲಿ ಬೃಹದ್ಬುದ್ಧ (ಬೊರೊಬುದೂರ್) ದೇವಾಲಯವು ಅತ್ಯದ್ಭುತವಾಗಿದೆ. ಅಂಗ್ಕೋರ್‌ವಾಟ್ (ನಗರವಾಟ), ಅಂಗ್ಕೋರ್ ಥಾಮ್ (ನಗರಧಾಮ), ಪ್ರಾಂಬನಂ, ಅಂಗ್ಕೋರ್ ಥಾಟ್ ದೇವಾಲಯಗಳು ಆಶ್ಚರ್ಯಕರವಾದ ಕಲಾಕೌಶಲ್ಯವನ್ನು ತೋರಿಸುವವು. ಛಾಯಾನಾಟಕ (Shadow Play) ಗೊಂಬೆಯಾಟ (Puppet Play) ಭರತನಾಟ್ಯಗಳು ಈಗಲೂ ಇವೆ. ಜಾವಾ ದ್ವೀಪದ ವ್ಯಾಂಗ್‌ವೊಂಗ್ ನಾಟಕದಲ್ಲಿ "ಗಮೇಲನ್" ಎಂಬ ವಾದ್ಯಗಾರರು ಮೊದಲು ಪುಷ್ಪವರ್ಣೆ (ಪುಷ್ಪಾಂಜಲಿ) ಎಂಬ ಗೆಂಡಿಂಗ್ (ರಾಗ)ವನ್ನು ಹಾಡುವರು. ಅನಂತರ ದಲಂಗನು (ಸೂತ್ರಧಾರನು) ಕಥೆಯನ್ನಾರಂಭಿಸುವನು. ನಾಟ್ಯದಲ್ಲಿ ಅಲುಸ್ (ಲಾಸ್ಯ), ಗಗಾ (ತಾಣ್ಡವ) ಎಂದೆರಡು ವಿಧ. ಅರ್ಜುನ-ನಿನ್‌ವತ ಕವಚಯುದ್ಧ (ನಿವಾತ ಕವಚಯುದ್ಧ), ಇಂದ್ರನ ಸಭೆಯಲ್ಲಿ ಸುಪ್ರಭೆಯ ನಾಟ್ಯ, ದೇವದಾನವಯುದ್ಧ (ವೀರೆಂಗ್) ಮುಂತಾದುವಗಳಲ್ಲಿ ಜನರಿಗೆ ಪ್ರೀತಿ. ಬೋರ್ನಿಯೋ ದ್ವೀಪದಲ್ಲಿ ಕ್ರಿ.ಶ. ४೮೦ ಕಾಲದ ಮೂಲವರ್ಮನ ಯೂಪಸ್ತಮ್ಭ ಶಾಸನವು ಅತ್ಯಂತ ಪ್ರಾಚೀನ.

ಶ್ರೀಮತಃ ಶ್ರೀನರೇಂದ್ರಸ್ಯ ಕುಂಡುಂಗಸ್ಯ ಮಹಾತ್ಮನಃ |
ಪುತ್ರೋಽಶ್ವವರ್ಮಾವಿಖ್ಯಾತೋ ವಂಶಕರ್ತಾಯಥಾಂಶುಮಾನ್ |
ತಸ್ಯಪುತ್ರಾಮಹಾತ್ಮಾನಸ್ತ್ರಯ ಸ್ತ್ರಯಇವಾಗ್ನಯಃ |
ತೇಷಾಂತ್ರಯಾಣಾಂಪ್ರವರಃ ತಪೋಬಲದಮಾನ್ವಿತಃ |
ಶ್ರೀಮೂಲವರ್ಮಾರಾಜೇನ್ದ್ರೋ ಯಷ್ಟ್ವಾಬಹುಸುವರ್ಣಕಮ್ |
ತಸ್ಯಯಜ್ಞಸ್ಯಯೂಪೋಽಯಂ ದ್ವಿಜೇನ್ದ್ರೈಸ್ಸಂಪ್ರಕಲ್ಪಿತಃ ||

**ದಕ್ಷಿಣ:** ಗೌತಮ ಬುದ್ಧನೇ ಆಕಾಶ ಮಾರ್ಗದಲ್ಲಿ ಸಿಂಹಳ ದ್ವೀಪಕ್ಕೆ ಬಂದಿದ್ದು ಮತಪ್ರಚಾರಮಾಡಿದನೆಂದು ಸಿಂಹಳ ಗ್ರಂಥಗಳು ಹೇಳುವವು. ಅನಂತರ ಅಶೋಕ, ದೇವಾನಾಂಪ್ರಿಯತಿಷ್ಯರ ಕಾಲದಲ್ಲಿ ಮಹೇನ್ದ್ರ, ಸಂಘಮಿತ್ರಾ ಮುಂತಾದವರು ಪುನಃ ಬೌದ್ಧಮತವನ್ನು ಬೋಧಿಸಿ ಬೋಧಿ

ವೃಕ್ಷವನ್ನು ನಟ್ಟರು. ಕಳಿಂಗ ಅಥವಾ ಲಾಳದೇಶದ ವಿಜಯಸಿಂಹನೆಂಬ ರಾಜಕುಮಾರನು ಈ ದ್ವೀಪದಲ್ಲಿ ನೆಲಸಿದುದರಿಂದ ಸಿಂಹಳವೆಂಬ ಹೆಸರಾಯಿತು. ದುಟ್ಠಗಾಮಣಿಯು ಕ್ರಿ.ಪೂ. ೨ ನೆಯ ಶತಾಬ್ದದಲ್ಲಿ ವಿಹಾರಗಳನ್ನು ಸ್ಥಾಪಿಸಿದನು. ಕ್ರಿ.ಪೂ. ೧ ನೆಯ ಶತಾಬ್ದದಲ್ಲಿ ವಟ್ಟಗಾಮಣಿಯು ಅನುರಾಧಪುರದ ಮಹಾವಿಹಾರದಲ್ಲಿ ಬೌದ್ಧಸಂಘವನ್ನು ಸೇರಿಸಿ ತ್ರಿಪಿಟಕಗಳನ್ನು ಗ್ರಂಥಸ್ಥ ಮಾಡಿದನು. ಕ್ರಿ.ಶ. ೧ ನೆಯ ಶತಾಬ್ದದಲ್ಲಿ ಅಭಯಗಿರಿ ವಿಹಾರ ಮತ್ತು ಅನುರಾಧಪುರ ವಿಹಾರಗಳ ಭಿಕ್ಷುಗಳು ಬೇರೆಬೇರೆಯಾದರು. ಎರಡನೆಯ ಶತಾಬ್ದದಲ್ಲಿ ಗಜಬಾಹುವೆಂಬ ರಾಜನು ಕನ್ನಗಿ ದೇವಿಯ ಪೂಜೆಯನ್ನು ಸಿಂಹಳದಲ್ಲಿ ಆರಂಭಿಸಿದನು. ಪಾಂಡ್ಯ ಸಿಂಹಳರಾಜರು ಒಂದಾಗಿ ಚೋಳರೊಡನೆ ಹೋರಾಡುತ್ತಿದ್ದರು. ತಮಿಳುಭಾಷೆಯೂ ಶೈವಮತವೂ ಸಿಂಹಳದಲ್ಲಿ ಪ್ರಚಾರಕ್ಕೆ ಬರಲು ಚೋಳರ ಆಕ್ರಮಣವೇ ಕಾರಣ.

**ನೈರುತ್ಯ :** ಲಕ್ಷದ್ವೀಪ, ಮಾಲಾದ್ವೀಪಗಳ ಮಾರ್ಗವಾಗಿ ಭಾರತೀಯರು ಹೊರಟು ಮಾರಿಷಸ್, ದಕ್ಷಿಣ ಆಫ್ರಿಕಾ ಪ್ರಾಂತಗಳನ್ನು ನವಶಿಲಾಯುಗದಲ್ಲಿಯೇ ಆಕ್ರಮಿಸಿದ್ದರೆಂಬುದಕ್ಕೆ ನಿದರ್ಶನಗಳು ಸಿಕ್ಕಿವೆ. ದಕ್ಷಿಣ ಆಫ್ರಿಕದ "ಸ್ಲಿಂಬಬ್ವೆ" ಸಂಸ್ಕೃತಿಯು ಭಾರತೀಯ ಸಂಪರ್ಕದಿಂದ ಹುಟ್ಟಿತೆಂದು ಕೆಲವರು ಊಹಿಸುವರು.

**ಪಶ್ಚಿಮ :** ಕ್ರಿಸ್ತಪೂರ್ವ ೩೦೦೦ ದಲ್ಲಿ ಹರಪ್ಪ ಸಂಸ್ಕೃತಿಯು ಈಜಿಪ್ಟ್, ಮೆಸೊಪೊಟೇಮಿಯ, ಸಿರಿಯ, ಅನಟೋಲಿಯ ವರೆಗೆ ವ್ಯಾಪಿಸಿದ್ದಿತು. ಕ್ರಿ.ಪೂ. ೨೦೦೦ ದಲ್ಲಿ ಝುಕಾರ್ ಝೂಂಗಾರ್ ಸಂಸ್ಕೃತಿಗಳು ಇಟಲಿಯ ಎಟ್ರಿಸ್ಕನ್ ಪ್ರಾಂತದ ವರೆಗೂ ಹರಡಿದ್ದವು. ಗ್ರೀಕರ "ಹೋಮರಿಕ್" ಸಂಸ್ಕೃತಿಯು ಕ್ರೀಟನ್ ಮತ್ತು ಆರ್ಯರ ಸಂಸ್ಕೃತಿಗಳ ಮೇಳನೆಯಿಂದ ಉಂಟಾದುದು. ಕ್ರಿ.ಪೂ. ೬ ನೆಯ ಶತಾಬ್ದದಲ್ಲಿ ಎಲಿಯಾಟಿಕ್ ಪಂಥದ ಸ್ಸೆನೋಫೇನಿಸ್, ಪಾರ್ಮಿನೈಡಿಸ್, ಸ್ಲೀನೊ ಎಂಬವರು ಉಪನಿಷತ್ ತತ್ವಗಳನ್ನರಿತ್ತಿದ್ದರು. ಆರ್ಫಿಕ್ ಮತವು ನಿರ್ಗುಣ ಬ್ರಹ್ಮವಾದವನ್ನೂ, ತಪಸ್ಸು, ಭಕ್ತಿ, ಚಿತ್ತಶುದ್ಧಿ ಮುಂತಾದ ತತ್ವಗಳನ್ನು ಅಂಗೀಕರಿಸಿತು. ಅನಾಕ್ಸಗೊರಾಸ್, ಎಂಪಿಡೋಕ್ಲೀಸ್, ಯೂಸಿಬೀಯಸ್, ಕ್ರೈಸಿಪ್ಪಸ್ ಮುಂತಾದವರು ಪುನರ್ಜನ್ಮ, ಕರ್ಮ ಮುಂತಾದ ಭಾರತೀಯ ತತ್ವಗಳನ್ನೂ ಪ್ರತಿಪಾದಿಸಿರುವರು. ಎಲ್ಯೂಸಿಯನ್ ಪಂಥದವರು ಉಪನಯನ, ಉಪವಾಸ, ಕರ್ಮ, ಪುನರ್ಜನ್ಮ, ಆತ್ಮೈಕತ್ವ ಮುಂತಾದವುಗಳನ್ನು ನಂಬುತ್ತಿದ್ದರು. ಪೃಥಗುರು (Pythagoras) ಬ್ರಾಹ್ಮಣರಿಂದ ಅಧ್ಯಾತ್ಮ ವಿದ್ಯೆಯನ್ನು ಕಲಿತನೆಂದು ಇಯಾಂಬ್ಲಿಕಸ್ ಹೇಳಿರುವನು.

ಸಾಕ್ರೆಟೀಸನು ಈ ತತ್ವಗಳನ್ನಂಗೀಕರಿಸಿದ್ದನು. ಸಾಕ್ರೆಟೀಸನ ಕಾಲದಲ್ಲಿ ಅಥೆನ್ಸ್ ನಗರದಲ್ಲಿ ಬ್ರಾಹ್ಮಣರಿದ್ದರೆಂದೂ, ಒಂದು ದಿನ ತನ್ನ ಪದ್ಧತಿಯಂತೆ ಸಾಕ್ರೆಟೀಸನು ಮಾರ್ಕಟ್ಟೆಯ ಬಳಿಯಲ್ಲಿ ಯುವಕರೊಡನೆ ವಾದಮಾಡುತ್ತಿದ್ದಾಗ ಒಬ್ಬ ಭಾರತೀಯ ಪಂಡಿತನು ಅವನನ್ನು ನೀನು ಬೋಧಿಸುವ ತತ್ವವೇನೆಂದು ಕೇಳಿದನೆಂದೂ, ಸಾಕ್ರೆಟೀಸನು ಮಾನವಜಾತಿಗೆ ಸಂಬಂಧಪಟ್ಟ ವಿಷಯಗಳನ್ನೆಲ್ಲ ವಿಮರ್ಶೆಮಾಡುವದೇ ತನ್ನ ಕೆಲಸವೆಂದು ಹೇಳಿದನೆಂದೂ, ಅದನ್ನು ಕೇಳಿ ಆ ಪಂಡಿತನು ನಕ್ಕು ಆಧ್ಯಾತ್ಮಿಕ ಆಧಿದೈವಿಕ ವಿವೇಚನೆಯನ್ನು ಮೊದಲು ಮಾಡದೆ ಕೇವಲ ನೀತಿವಿಮರ್ಶೆಯಿಂದ ಏನು ಪ್ರಯೋಜನ ಎಂದು ಹಾಸ್ಯಮಾಡಿದನೆಂದು ತಿಳಿದುಬರುವದು.[1] ಪ್ಲೇಟೋ ಕರ್ಮ, ವರ್ಣಾಶ್ರಮ, ಪ್ರಪಂಚ ಮಿಥ್ಯಾತ್ವ ಮುಂತಾದ ಅಂಶಗಳನ್ನು ಉಪನಿಷತ್ತುಗಳಿಂದ ಗ್ರಹಿಸಿದನೆಂದು ಅಂಗೀಕರಿಸಿರುವರು. ಅರಿಸ್ಟೋಟಲನು ತನ್ನ ತರ್ಕ ಭೌತಶಾಸ್ತ್ರ ಮುಂತಾದುವಲ್ಲಿ ಭಾರತೀಯ ಸಂಪರ್ಕವನ್ನು ತೋರಿಸಿರುವನು. ಇವನ ಶಿಷ್ಯನಾದ ಅಲೆಕ್ಸಾಂಡರನು ಭರತಖಂಡಕ್ಕೆ ಬಂದು ಹಿಂತಿರುಗುವಾಗ ತಕ್ಷಶಿಲೆಯ 'ಕಲಾನೊಸ್' (ಕಲ್ಯಾಣ) ಎಂಬ ಪಂಡಿತನನ್ನು ಕರೆದುಕೊಂಡು ಹೋದನು. ನಗ್ನರಾದ ಶ್ರಮಣರು ಅಲೆಕ್ಸಾಂಡರನನ್ನು ಅಪಹಾಸ್ಯ ಮಾಡಿದರೆಂದು ಗ್ರೀಕ್ ಗ್ರಂಥಗಳು ಹೇಳುವವು. ಮೆಗಾಸ್ತನೀಸ್, ಡೈಮಾಕಸ್, ಡಿಯೋನಿಸಿಸನ್ ಎಂಬ ಯವನ ರಾಯಭಾರಿಗಳು ಮೌರ್ಯ ಸಾಮ್ರಾಜ್ಯದ ಸ್ಥಿತಿಯನ್ನು ವರ್ಣಿಸಿ ಗ್ರೀಕ್ ಮತ್ತು ಭಾರತೀಯ ಸಂಸ್ಕೃತಿಗಳಿಗಿರುವ ಸಾಮ್ಯವನ್ನು ಉಲ್ಲೇಖಿಸಿರುವರು. ಕ್ರಿ.ಪೂ. ೩ ನೆಯ ಶತಾಬ್ದದಲ್ಲಿ ಅಶೋಕನು ಬೌದ್ಧಭಿಕ್ಷುಗಳನ್ನು ಅಲೆಕ್ಸಾಂಡ್ರಿಯ, ಕೈರಿನೆ (ಆಫ್ರಿಕ ಖಂಡ), ಕಾರಿಂತ್, ಎಪಿರಸ್ (ಗ್ರೀಸ್), ಸಿರಿಯ ಮುಂತಾದ ದೇಶಗಳಿಗೆ ಕಳುಹಿಸಿದ್ದನು. ಕ್ರಿ.ಪೂ. ೨ ನೆಯ ಶತಾಬ್ದದಲ್ಲಿ ಮೆನಾಂದರನು ನಾಗಸೇನನೆಂಬ ಬೌದ್ಧಭಿಕ್ಷುವಿನಿಂದ ಬೌದ್ಧಮತವನ್ನು ಸ್ವೀಕರಿಸಿದನೆಂದು ಮಿಳಿಂದಪನ್ಹ ಎಂಬ ಗ್ರಂಥದಿಂದ ತಿಳಿದುಬರುವದು. ಕ್ರಿ.ಪೂ. ೧೪೦ ರಲ್ಲಿ ಹೆಲಿಯೋಡೊರಸ್ ಎಂಬ ಯವನ ರಾಯಭಾರಿಯು ಭಾಗವತ ಮತವನ್ನು ಸ್ವೀಕರಿಸಿದ್ದನು. ಕ್ರಿ.ಪೂ. ೧೫೭ ರಲ್ಲಿ ಸಿಂಹಳದ ದುಟ್ಠಗಾಮಣಿಯು ಅಲಸದ್ದ (Alexandria) ಬೌದ್ಧಸಂಘದ ಆಚಾರ್ಯನನ್ನೂ, ೩೦,೦೦೦ ಭಿಕ್ಷುಗಳನ್ನೂ ಆಹ್ವಾನಿಸಿದ್ದನು. ಪ್ಲೂಟಾರ್ಕನು ಅಥೆನ್ಸ್ ನಗರದಲ್ಲಿ ಅನೇಕ ಭಾರತೀಯರಿದ್ದರೆಂದು ಹೇಳಿರುವನು. ಏಷ್ಯಾಮೈನರಿನ ಅಲೆಕ್ಸಾಂಡರ್ ಪಾಲಿಹಿಸ್ಟೋರ್

[1] Eusebius: *Preparatio Evangelica. XI, 3.*

ಎಂಬುವನು ಬ್ರಾಹ್ಮಣ ಬೌದ್ಧ ಮತಗಳ ಉಲ್ಲೇಖನೆ ಮಾಡಿರುವನು. ಗಾಂಧಾರ ಶಿಲ್ಪ ಮತ್ತು ಜ್ಯೋತಿಷದ ಕೆಲವು ಶಬ್ದಗಳನ್ನು ಬಿಟ್ಟರೆ ಯವನರ ಸಂಪರ್ಕದಿಂದ ಭಾರತೀಯರಿಗೆ ಯಾವ ಉಪಕಾರವೂ ಆಗಿಲ್ಲ. ಯವನರೇ ಭಾರತೀಯರಿಗೆ ಋಣಿಯಾಗಿರುವರು.[2]

**ಅರೇಬಿಯ ಪಾಲಸ್ತೈನ-ಸಿರಿಯ:** ಈ ಪ್ರಾಂತದಲ್ಲಿ ಬೌದ್ಧಮತ ಸಂಪರ್ಕದಿಂದ ಯಹೂದ್ಯರ ಮತದಲ್ಲಿ ಎಸ್ಸೀನ್, ಮಾನ್ಡಿಯನ್, ನಾಸ್ಟರೀನ್ ಮುಂತಾದ ಪಂಥಗಳುಂಟಾದವು. ಎಸ್ಸೀನರು ಯಹೂದ್ಯರಾದರೂ ನೈಷ್ಠಿಕ ಬ್ರಹ್ಮಚರ್ಯ, ಶಾಕಾಹಾರ, ಮೂರ್ತಿಪೂಜೆ, ಸೂರ್ಯೋಪಾಸನೆ, ಉಪನಯನ, ಪುನರ್ಜನ್ಮಗಳಲ್ಲಿ ನಂಬಿಕೆ ಹೊಂದಿದ್ದರು. ಏಸು ಕ್ರಿಸ್ತನಿಗೆ ಜ್ಞಾನಸ್ನಾನ ಮಾಡಿದ ಯೋಹಾನನು ಎಸ್ಸೀನ್ ಪಂಥದವನು. ಬೈಬಲಿನ ಇನೋಕ್ ಪುಸ್ತಕವು (ಕ್ರಿ.ಪೂ. ೮೦) ಕೌಷೀತಕೀ ಉಪನಿಷತ್ತಿನ ಅನುಕರಣೆಯಾಗಿದೆ ಯೆಂದು ಡಾ. ಆಟೋ ಹೇಳುವನು,

ಕ್ರೈಸ್ತಮತದಲ್ಲಿ ಬೌದ್ಧಮತದ ಪ್ರಭಾವವು ಕಂಡುಬರುವದು. ಏಸು ಕ್ರಿಸ್ತನು ಮೊದಮೊದಲು ಯಹೂದ್ಯರ ಪ್ರಾಚೀನ ನಂಬಿಕೆಗಳನ್ನೇ ಅಂಗೀಕರಿಸಿ ತನ್ನ ಚಲುವಳಿಯು ಯಹೂದ್ಯರನ್ನು ಮಾತ್ರ ಉದ್ಧರಿಸುವದಕ್ಕಾಗಿ ಎಂದು ಗಣಿಸಿದ್ದನು. ಕಾಲಕ್ರಮೇಣ ಜ್ಞಾನೋದಯವಾದಂತೆ (Luke II, ೩೨) ಈ ಸಂಕುಚಿತಭಾವವು ಹೋಯಿತು. ಕ್ರಿಸ್ತನ ಅಭಿಪ್ರಾಯಗಳು ಪ್ರಾಚೀನ ಆರ್ಯರ ಮತ್ತು ಇರಾನ್ ದೇಶದವರ ಮತಪ್ರಭಾವವನ್ನೇ ತೋರಿಸುವವೆಂದು ಸೆಮಿಟಿಕ್ ನಂಬಿಕೆಗಳಲ್ಲವೆಂದೂ ಡಾ. ಆಟೊ ಹೇಳುವನು. ಸೈಡೆಲ್ ಕ್ರೈಸ್ತರ ಗ್ರಂಥಗಳಿಗೂ ಬೌದ್ಧರ ಜಾತಕ ಕಥೆಗಳಿಗೂ ಇರುವ ೫೧ ಸಾಮ್ಯಗಳನ್ನು ತೋರಿಸಿರುವನು. ಲ್ಯೂಕನಿಗೆ ಬುದ್ಧನ ಚರಿತ್ರೆಯು ತಿಳಿದಿದ್ದಿತೆಂದು ಡಾ. ಎಡ್ಮಂಡ್ಸ್ ಹೇಳುವನು.[3] ಏಸುವಿನ ಸತ್ವಪರೀಕ್ಷೆ, ಸಿಮಿಯೊನಿನ ಕಥೆ, ಪೀಟರನುಸೀರಿನ ಮೇಲೆ ನಡೆದ ಕಥೆ, ವಿಧವೆಯ ದಾನದ ಕಥೆ, ಕನ್ಯಾಪುತ್ರತ್ವ, ಮಾತೃ ದೇವತಾ ಪ್ರಾಶಸ್ತ್ಯ[4] ಏಸು-ಸಮಾರಿಯ ಸ್ತ್ರೀ ಕಥೆ, ದುಂದುಗಾರ

---

[2] In matters of the spirit Asia was quite confident that she could outstay the Greek spirit and she did. Except for the Buddha statue, the history of India would in all essentials have been precisely what it has been, had the Greeks never existed.—Tarn : *The Greeks in Bactria and India.*

[3] *The Monist :* Jan., 1912.

[4] Luke : XI.

ನಾದ ಮಗನ ಕಥೆ, ಏಸು ಬಾಲ್ಯದ ಕಥೆಗಳು,[5] ಬಾರ್ಲಾವ್ ಮತ್ತು ಜೋಸಫತ್ ಕಥೆ ಮುಂತಾದುವನ್ನು ಹರಿವಂಶ, ವಿಷ್ಣುಪುರಾಣ, ಲಲಿತ ವಿಸ್ತರ, ನಿದಾನ ಕಥಾ, ಸದ್ಧರ್ಮ ಪುಂಡರೀಕ ಮುಂತಾದ ಭಾರತೀಯ ಗ್ರಂಥಗಳಿಂದ ಕ್ರೈಸ್ತರು ಸ್ವೀಕರಿಸಿದರು.[6]

ಅರೇಬಿಯ ದೇಶದಲ್ಲಿ ಮುಹಮದ್ ಪೈಗಂಬರರ ಮತಪ್ರಚಾರಕ್ಕೆ ಹಿಂದೆ ಲಿಂಗಪೂಜೆ, ಮೂರ್ತಿಪೂಜೆಗಳಿದ್ದವೆಂದು, "ಕಾಬ" ಸುತ್ತಲೂ ಇದ್ದ ವಿಗ್ರಹಗಳಿಗೆ "ಕನ್ಯೆ"ಯರೇ ಪೂಜಕರಾಗಿದ್ದರೆಂದೂ, ಮಕ್ಕಾದೇವಾಲಯ ವನ್ನು ಸಮೀಪಿಸುವಾಗ ಹಾಜ್ ಯಾತ್ರಿಕನು ಪಂಚೆ ಉತ್ತರೀಯಗಳನ್ನು ಧರಿಸಬೇಕಾಗಿದ್ದಿತ್ತೆಂದು ತಿಳಿದುಬರುವದು.[7] ಅರೇಬಿಯನರು ಭರತಖಂಡದ ಪಂಚತಂತ್ರ ಕಥೆಗಳು, ಗಣಿತ, ಜ್ಯೋತಿಷ, ವೈದ್ಯ, ಕಾಮಶಾಸ್ತ್ರ ಮುಂತಾದ ಗ್ರಂಥಗಳನ್ನು ಯೂರೋಪ್ ಖಂಡದಲ್ಲಿ ಪ್ರಚಾರ ಮಾಡಿದರು.

ರೋಮ್ ಸಾಮ್ರಾಜ್ಯಕ್ಕೂ ಭರತಖಂಡಕ್ಕೂ ಇದ್ದ ವಾಣಿಜ್ಯ ಸಂಬಂಧ ವನ್ನು ಹಿಂದೆ ಸೂಚಿಸಿದೆ. ಹೊರೇಸ್, ವಿರ್ಜಿಲ್ ಕವಿಗಳು ರೋಮ್ ನಗರದಲ್ಲಿ ಹಿಂದುಗಳಿದ್ದರೆಂದು ಹೇಳುವರು. ಭಾರತೀಯ ಶಕುನಶಾಸ್ತ್ರ ಜ್ಯೋತಿಷಗಳಲ್ಲಿ ರೋಮನ್ನರಿಗೆ ಬಹುಳ ನಂಬಿಕೆಯಿದ್ದಿತು. ಅಗಸ್ಟಸ್, ಟ್ರಾಜಾನ್, ಕ್ಲಾಡಿಯಸ್, ಕಾನ್ಸ್ಟಂಟೈನ್, ಜಸ್ಟಿನ್, ಜಸ್ಟಿನಿಯನ್ ಚಕ್ರವರ್ತಿಗಳ ಕಾಲ ದಲ್ಲಿ ಭರತಖಂಡದಿಂದ ಅನೇಕ ರಾಯಭಾರಿಗಳು ಹೋಗಿದ್ದರು. ಡಿಯೋನ್ ಕ್ರಿಸೋಸ್ಟೋಮ್ (ಕ್ರಿ.ಶ. ೧೧೭) ಅಲೆಕ್ಸಾಂಡ್ರಿಯ ನಗರದ ಒಂದು ಭಾಗವು ಹಿಂದೂಗಳಿಗೆ ಮೀಸಲಾಗಿದ್ದಿತೆಂದೂ, ಇಲ್ಲಿ ತಮ್ಮ ಭಾಷೆಯಲ್ಲಿಯೇ ದೇವಾಲಯಗಳಲ್ಲಿ "ಹೆಕ್ಟರ್", "ಪ್ರಿಯಾಮ್", "ಅಕಿಲಿಸ್" ಮುಂತಾ ದವರ ಸ್ತೋತ್ರ ಮಾಡುತ್ತಿದ್ದರೆಂದೂ ಹೇಳುವನು. ಡಿಮೆಟ್ರಿಯಸ್, ಟಿಯಾನದ ಅಪೊಲೋನಿಯಸ್, ಮೆಟ್ರೊಡೋರಸ್, ಟೈರ್ ಪಟ್ಟಣದ ಮೆರೋಪಿಯಸ್, ಫ್ರುಮೆಂಟಿಯಸ್, ಎಯ್ಡೆಸಿಯಸ್ ಮುಂತಾದವರು ಭರತಖಂಡದಲ್ಲಿ ಪ್ರವಾಸಮಾಡಿದರು. ಅಲೆಕ್ಸಾಂಡ್ರಿಯದ ಕ್ಲೆಮೆಂಟನು (ಕ್ರಿ.ಶ. ೨೦೦) ಬ್ರಾಹ್ಮಣ-ಬೌದ್ಧ ಮತವನ್ನು ಚೆನ್ನಾಗಿ ಅರಿತಿದ್ದನು.

---

[5] *Pseudo Matthew*: *XIII*; *Proto James*: *VI*; *St. Thomas*: *VI-VIII*; *XIX*.

[6] An influence on the part of the Indian and presumably also Buddhist traditions on the apocryphal writings is an historical fact.— —*Götz*: *Der Kathalik*, 1912 p. 271. Garbe: *Indien und das Christentum*. 1914; *Contributions of Buddhism to Christianity*, 1911, Chicago.

[7] Shustery: *Outlines of Islamic Culture*. Westermark: *Pagan Survivals in Mohammedanism*.

ಸ್ಯೆಂಟ್ ಜಿರೋಮನು (ಕ್ರಿ.ಶ. ೩೪೦) ಬುದ್ಧ-ಕ್ರಿಸ್ತರ ಕನ್ಯಾಪುತ್ರತ್ವ ಸಾಮ್ಯವನ್ನು ಹೇಳುವನು. ಮಾನಿಕಿ ಮತವು (ಕ್ರಿ.ಪೂ. ೭೧೫) ಈಜಿಪ್ಷಿಯನ್ ಮತ್ತು ಭಾರತೀಯ ಮತಗಳ ಮೇಳನೆಯ ಫಲ. ಆಕ್ಸಿರ್ಹಿಂಕಸ್ ಪ್ಯಾಪಿರೈ ಎಂಬ ಹಸ್ತಲೇಖನಗಳಲ್ಲಿ ಯಾವುದೋ ದ್ರಾವಿಡಭಾಷೆಯನ್ನು ಹೋಲುವ ಪದಗಳೂ, ಐಸಿಸ್ ದೇವತೆಯು ಗಂಗಾನದೀ ದೇವತೆಯಾದ ಮ ಇ ಅ (ಮಾಯಾ) ಎಂಬ ನಂಬಿಕೆಯೂ ಕಂಡುಬರುವವು.

ಕ್ರೈಸ್ತಮತ ಪ್ರಭೇದಗಳಾದ ಗ್ನಾಸ್ಟಿಸಿಸಂ, ನವಪ್ಲೇಟೋನಿಸ್ಲಮ್, ಪಾಲೈನ್ ಕ್ರೈಸ್ತಮತ, ಅಲೆಕ್ಸಾಂಡ್ರಿಯದ ಕ್ರೈಸ್ತಮತ ಮುಂತಾದವುಗಳೆಲ್ಲವೂ ಭಾರತೀಯ ತತ್ವಶಾಸ್ತ್ರ ಪ್ರಭಾವದಿಂದ ಹುಟ್ಟಿದವು. ಹಿಪೋಲಿಟಸ್, ಪ್ಲುಟಾರ್ಕ್, ಅಪೊಲೋನಿಯಸ್, ಬ್ಯಾಸಿಲೈಡೀಸ್, ವ್ಯಾಲೆಂಟಿನಸ್, ಥಿಯೋಡೋಟಸ್, ಬರ್ಡಸೇನಸ್, ಪೋಸಿಡೋನಿಯಸ್, ಹೈರೋಥಿಯಸ್, ದಿಯೋನಿಸಸ್ ಏರಿಯೋಪೇಜೈಟ್, ನ್ಯುಮಿನಿಯಸ್, ಪ್ಲಾಟಿನಸ್, ಪಾರ್ಫೈರಿ, ಇಯಾಂಬ್ಲಿಕಸ್, ಪ್ರೋಕ್ಲುಸ್, ಕ್ಲಮೆಂಟ್, ಆರಿಜೆನ್, ಗ್ರಿಗೊರಿ, ಆಗಸ್ಟೈನ್, ಬೈಥಿಯಸ್ ಮುಂತಾದ ಕ್ರೈಸ್ತಮತ ಪ್ರಚಾರಕರ ಅಭಿಪ್ರಾಯಗಳೆಲ್ಲವೂ ಬ್ರಾಹ್ಮಣರಿಂದ ಬಂದುವೇ ಆಗಿವೆ.[8]

ಯೂರೋಪಿನ ಮಧ್ಯಯುಗದಲ್ಲಿ ಕೂಡ ಥಾಮಸ್ ಆಕ್ವಿನಾಸ್, ಡನ್ಸ್ ಸ್ಕಾಟಸ್, ಹ್ಯೂಗೊ, ವಿಕ್ಟರ್, ರಿಚರ್ಡ್, ಬೋನವೆಂಚುರ, ಆಲ್ಬರ್ಟಸ್ ಮಾಗ್ನಸ್, ರೆಜಿನಾಲ್ಡ್, ಎಕ್ಹಾರ್ಟ್, ಟಾಲೆರ್, ಸ್ಯೆಂಟ್ ಥೆರೀಸ, ಸ್ಯೆಂಟ್ ಫ್ರಾನ್ಸಿಸ್ ಮುಂತಾದವರ ಭಕ್ತಿಮಾರ್ಗಕ್ಕೆ ಭಾರತೀಯ ಭಾವನೆಗಳೇ ಕಾರಣ. ಹದಿನಾರನೆಯ ಶತಾಬ್ದದಿಂದ ಯೂರೋಪಿನ ಜನರು ಭರತಖಂಡಕ್ಕೆ ಬಂದು ಸಂಸ್ಕೃತದ ಮಹತ್ವವನ್ನು ಕಂಡುಹಿಡಿದಮೇಲೆ ಭಾರತೀಯ ವಾಙ್ಮಯದ ಪ್ರಭಾವವು ಯೂರೋಪ್ ಸಂಸ್ಕೃತಿಯಲ್ಲಿ ಪ್ರಬಲವಾಯಿತು. ಷೋಪೆನ್‌ಹೋರ್, ಹಾರ್ಟ್‌ಮನ್, ನೀಟ್ಸ್ಚ, ಗೈಟೆ, ವಾಗ್ನರ್, ಮಿಚೆಲೆ, ಲಫಾಂತೇನ್, ಸ್ವಿಡೆನ್‌ಬರ್ಗ್, ಎಡ್ವಿನ್ ಆರ್ನಾಲ್ಡ್, ಎಮರ್ಸನ್, ವ್ಹಿಟ್ಮನ್, ಮೆಟರ್ಲಿಂಕ್, ಕೈಸರ್ಲಿಂಗ್, ರೋಮ್ಯೆನ್‌ರೋಲಾ, ಈಟ್ಸ್, ರಸ್ಸೆಲ್, ಅಲ್ಡುಸ್ ಹಕ್ಸ್ಲೀ, ಇಷರ್‌ವುಡ್, ಲಾರೆನ್ಸ್ ಬಿನಯನ್ ಮುಂತಾದವರ ಗ್ರಂಥಗಳಲ್ಲಿ ಭಾರತೀಯ ಭಾವನೆಗಳು ಕಂಡುಬರುವವು. ಇಪ್ಪತ್ತನೆಯ ಶತಾಬ್ದದ ಯೂರೋಪಿಯನ್ ಜನರಿಗೆ ಸಾಂಪ್ರದಾಯಕ ಕ್ರೈಸ್ತಮತದಲ್ಲಿ ನಂಬಿಕೆ

[8] It is the ancient religion of the Brahmins masquerading in the clothes borrowed from the Jewish, Gnostic, Manichaean and Neo-platonic allegories.—DEAM INGE.

ಅದೃಶ್ಯವಾಗಿ ವಿವೇಚನಾಶಕ್ತಿಯುಳ್ಳವರೆಲ್ಲರೂ ಅದ್ವೈತ ಮತ್ತು ಬೌದ್ಧ ಮತಗಳಲ್ಲಿ ಆಸಕ್ತರಾಗುತ್ತಿರುವರು.

**ವಾಯುವ್ಯ**: ಶಂಕರಾಚಾರ್ಯ ಪರ್ವತ (Takht-i-Suleiman) ಪಾಮಿರ್ ಪರ್ವತಶ್ರೇಣಿವರೆಗೂ ವೇದಯುಗದಲ್ಲಿ ಭಾರತೀಯ ಸಂಸ್ಕೃತಿಯು ಹರಡಿದ್ದಿತೆಂದು ಹಿಂದೆ ಸೂಚಿಸಿದೆ. ಹರಪ್ಪ ಸಂಸ್ಕೃತಿಯು ಸೂಸ, ನಿನೆವೆ, ಅಸುರ (Assur), ಬವೇರು (Babylon), ಏಕವರ್ತನ (Ecbatana) ಮುಂತಾದ ಪಟ್ಟಣಗಳಲ್ಲಿ ಪ್ರಚಲವಾಗಿದ್ದಿತು. ಬೌದ್ಧಮತವು ಮಧ್ಯದೇಶ (Media), ಶಕಸ್ಥಾನ (Seistan), ಬ್ರಾಹ್ಮಸ್ಥಾನ (Bamiyan) ಪ್ರಾಂತಗಳಲ್ಲಿ ವಿಶೇಷವಾಗಿದ್ದಿತೆಂಬುದಕ್ಕೆ ಈಗಲೂ ಕಂಡುಬರುವ ಉನ್ನತ ಬುದ್ಧ ವಿಗ್ರಹಗಳೂ, ವಿಹಾರಗಳೂ, ಗುಹಾಲಯಗಳೂ ನಿದರ್ಶನಗಳಾಗಿವೆ. ಮಹಾವಂಶದಲ್ಲಿ (ಅ. ೨೯) ಪಹ್ಲವ ಭೊಗ್ಗ (ಪಾರ್ಥಿವ—ಪಲ್ಲವಭೋಗ, Parthia) ದಿಂದ ಥೇರಮಹಾದೇವನು ೪೬೦,೦೦೦ ಭಿಕ್ಷುಗಳೊಂದಿಗೆ ಸಿಂಹಳಕ್ಕೆ ಮಹಾಥೂಪ ಸಂಸ್ಕಾರ ಸಮಯದಲ್ಲಿ ಬಂದಿದ್ದನೆಂದು ಹೇಳಿದೆ. ಅಶೋಕನು ಹಿಮಾಲಯ ಪ್ರಾಂತಕ್ಕೆ ಇಬ್ಬರು ಬೌದ್ಧಾಚಾರ್ಯರನ್ನು ಕಳುಹಿಸಿದ್ದನೆಂದು ಮಹಾ ವಂಶದಿಂದಲೂ ಸಾಂಚಿಶಾಸನಗಳಿಂದಲೂ ತಿಳಿದುಬರುವದು. ಪರ್ಷಿಯದೇಶದಲ್ಲಿ ಹೀನಯಾನಮತವಿದ್ದಿತೆಂದು, ಪರ್ಷಿಯ ರಾಜನ ಭಂಡಾರದಲ್ಲಿ ಬುದ್ಧನ ಭಿಕ್ಷಾಪಾತ್ರೆ ಇದ್ದಿತೆಂದು ಯುವಾನ್‌ಚ್ವಾಂಗನು ಹೇಳಿರುವನು. ಕ್ರಿ.ಶ. ೭ನೆಯ ಶತಾಬ್ದದಲ್ಲಿ ಇಮ್ಮಡಿ ಪುಲಕೇಶಿಯು ಪರ್ಷಿಯ ರಾಜನಾದ ಖುಸ್ರುವಿನ ಆಸ್ಥಾನಕ್ಕೆ ರಾಯಭಾರಿಗಳನ್ನೂ ನಿಯೋಗಿಗಳನ್ನೂ ಕಳುಹಿಸುತ್ತಿದ್ದನೆಂದೂ ಪರ್ಷಿಯ ರಾಯಭಾರಿಗಳೂ ಬರುತ್ತಿದ್ದರೆಂದೂ ಟಬಾರಿಯ ಪರ್ಷಿಯ ದೇಶದ ಚರಿತ್ರೆಯಿಂದಲೂ ಅಜಂತ ಚಿತ್ರಗಳಿಂದಲೂ ತಿಳಿದುಬರುವದು. ಪಾರ್ಥಿಯ ದೇಶದ ಸುವರ್ಣ ನಾಣ್ಯಗಳ ಮೇಲೆ ಬುದ್ಧವಿಗ್ರಹವಿದೆ. ಆಲ್‌ಬೆರೂನಿಯು ಖುರಾಸಾನ್, ಪರ್ಷಿಯ, ಇರಾಕ್, ಮೊಸುಲ್, ಸಿರಿಯ ಪ್ರಾಂತಗಳಲ್ಲಿ ಬೌದ್ಧರಿದ್ದರೆಂದು ಹೇಳಿರುವನು. ಚೀಣಚರಿತ್ರೆಗಳಲ್ಲಿ ಪಾರ್ಥಿಯ ರಾಜಕುಮಾರನ್ನಾದ ಅನ್ಷಿ-ಕೊ ಎಂಬುವನು ಅನೇಕ ಪಾಲಿಸೂತ್ರಗಳನ್ನು ಭಾಷಾಂತರಮಾಡಿದನೆಂದು ಹೇಳಿದೆ. ಬಾಮಿಯಾನ್, ಸ್ವಾತಿಕಣಿವೆಗಳಲ್ಲಿ ಬೃಹದಾಕಾರದ ಬುದ್ಧ ವಿಗ್ರಹಗಳೂ ಅಜಂತಾರೀತಿಯ ಚಿತ್ರಗಳೂ ಹೇರಳವಾಗಿವೆ.

**ಉತ್ತರ**: ತ್ರಿವಿಷ್ಟಪ (ತಿಬೆಟ್) ದೇಶಕ್ಕೆ ಬೌದ್ಧಮತವು ಸ್ರಾಂಗ್ ತ್ಸಾನ್‌ಗಾಂಪೊ ಎಂಬ ರಾಜನ ಕಾಲದಲ್ಲಿ ಪ್ರವೇಶಿಸಿತು. ಈ ರಾಜನು ಒಬ್ಬ

ಚೀಣ ರಾಜಕುಮಾರಿಯನ್ನು ನೇಪಾಳದ ರಾಜಕುಮಾರಿಯನ್ನು ಮದುವೆಯಾಗಿ ಅವರ ಪ್ರೇರಣೆಯಿಂದ ಶಾನ್ತದೇವ, ಶಾನ್ತರಕ್ಷಿತ, ಪದ್ಮಸಂಭವ, ಕಮಲಶೀಲ, ಮುಂತಾದವರನ್ನು ಆಹ್ವಾನಿಸಿ ಲಾಮಾಚಾರವನ್ನು ಸ್ಥಾಪಿಸಿದನು. ಇವನ ರಾಣಿಯರು ಚೀನತಾರಾ ಅಥವಾ ನೀಲತಾರಾ ಮತ್ತು ಶ್ವೇತತಾರಾದೇವಿಯ ರೆಂದು ಪ್ರಸಿದ್ಧರಾದರು. ತಾನ್ತ್ರಿಕಬೌದ್ಧಮತವೇ ಪ್ರಧಾನವಾಗಿದ್ದಿತು. ಈಗ ಅದೃಶ್ಯವಾಗಿರುವ ಅನೇಕ ಸಂಸ್ಕೃತ ಗ್ರಂಥಗಳು ತಿಬೆಟನ್ ಭಾಷೆಗೆ ಪರಿವರ್ತಿತವಾದವು. ತಿಬೆಟನ್ ಲಿಪಿಯು ಗುಪ್ತಲಿಪಿಯ ಪ್ರಭೇದವಾಗಿದೆ. ಅಕ್ಷರಗಳಿಗೆ ಮರದ ಅಚ್ಚುಗಳನ್ನು ಮಾಡಿ ಗ್ರಂಥಗಳನ್ನು ಮುದ್ರಿಸಿರುವರು. ಟ್ಸಾಂಗ್‌ಯೂರ್ ಎಂಬ ಗ್ರಂಥ ಭಂಡಾರಗಳಲ್ಲಿ ಅನೇಕ ಅಪೂರ್ವಗ್ರಂಥಗಳು ಸಿಕ್ಕುವವು. ತಿಬೆಟ್ಟಿನಲ್ಲಿ ದಲಾಯ್‌ಲಾಮಾ ಎಂಬ ಮುಖ್ಯಗುರುವೇ ಸರ್ವಾಧಿಕಾರಿಯಾಗಿರುವನು. ತಿಬೆಟ್ಟಿನ ಕಲಾರೀತಿಯು ಕೂಡ ಭಾರತೀಯವಾಗಿದೆ. ಕಂಚು, ತಾಮ್ರ ಮುಂತಾದ ಲೋಹಗಳಿಂದ ಮಾಡಿದ ಬೌದ್ಧ, ಶಾಕ್ತ, ಶೈವ, ವೈಷ್ಣವ ವಿಗ್ರಹಗಳು ನಾಲಂದಾ ಕಂಚು ಕೆಲಸವನ್ನು ಹೋಲುತ್ತವೆ. ರೇಷ್ಮೆವಸ್ತ್ರಗಳ ಮೇಲೆ ಬರೆದಿರುವ ಚಿತ್ರಗಳೂ ಕುಡ್ಯ ಚಿತ್ರಗಳೂ ಅಜಂತಾ ರೀತಿಯಲ್ಲಿವೆ. ಚರಿತ್ರೆಗಳಲ್ಲಿ ತಾರಾನಾಥನ ಬೌದ್ಧಮತದ ಚರಿತ್ರೆಯು ಉಪಯುಕ್ತವಾಗಿದೆ.

ಚೀಣ ತುರ್ಕಿಸ್ತಾನ, ಗೋಬಿಮರುಭೂಮಿ, ಸಿಂಕ್ಯಾಂಗ್ ಪ್ರಾಂತ್ಯಗಳಲ್ಲಿ ಜರ್ಮನ್, ಫ್ರೆಂಚ್, ರಷ್ಯನ್, ಸ್ವೀಡಿಷ್, ಜಪಾನೀಸ್ ವಿದ್ವಾಂಸರು (ಗ್ರುನ್‌ವೆಡೆಲ್, ಹೂಯ್ತ್, ಲಿಕಾಕ್, ರಿಗೆಲ್, ಸ್ವೆನ್‌ಹೆಡಿನ್, ಬೆರಿಸ್ಲೋವ್‌ಸ್ಕಿ, ಕ್ಲೆಮೆಂಟ್ಸ್, ಆರೆಲ್‌ಸ್ಟೀನ್, ಓಲ್ಡೆನ್‌ಬರ್ಗ್, ಗ್ರೂಯ್ಮ್, ಪೆಲ್ಲಿಯೋ, ಒಟಾನಿ, ಟಿಚಿಬನ, ಯೊಷಿಕವ) ೧೭ ಪ್ರತ್ಯೇಕ ಭಾಷೆಗಳನ್ನೂ ೨೪ ಲಿಪಿಗಳನ್ನೂ ಕಂಡುಹಿಡಿದಿರುವರು. ಗ್ರುನ್ ವೆಡೆಲನು ಇಲ್ಲಿನ ಚಿತ್ರಲೇಖನ ರೀತಿಯಲ್ಲಿ ಗಾನ್ಧಾರ, ಇಂಡೋ—ಸಿಥಿಯನ್, ಪ್ರಾಚೀನತುಖಾರ, ಉಯ್ಘೂರ್, ಮತ್ತುಲಾಮ ಎಂಬ ಐದು ಪ್ರಭೇದಗಳಿವೆಯೆಂದು ಹೇಳುವನು. ಕ್ರಿ. ಶ. ೮ ನೆಯ ಶತಾಬ್ದದವರೆಗೂ ಇಲ್ಲಿ ಮುಸ್ಲಿಮರಿಗೆ ಪ್ರವೇಶವಿರಲಿಲ್ಲ. ತೊಖಾರಿಭಾಷೆಯ ಆರ್ಯರೇ ಆಳುತ್ತಿದ್ದರು. ತೂರ್ಫಾನ್ ಪ್ರಾಂತದ ಕಾರಾ ಖೋಜ ಎಂಬ ಸ್ಥಳದಲ್ಲಿ ಸೋಗ್ಡಿಯನ್, ಸಿರಿಯನ್, ತುರ್ಕಿ ಲಿಪಿಗಳ ಸಾವಿರಾರು ಹಸ್ತ ಲೇಖನಗಳೂ, ಚೈತ್ಯಗಳೂ, ಗಾನ್ಧಾರ ರೀತಿಯ ಬುದ್ಧ ವಿಗ್ರಹಗಳೂ, ಅಜಂತ ರೀತಿಯ ಚಿತ್ರಗಳೂ ಸಿಕ್ಕಿವೆ. ಸಂಗಿಂ ಆಘಿಸ್, ಮುರ್ತುಕ್, ಬಾಜಾಕ್ಲಿಕ್, ಚಿಕ್ಕನ್‌ಕೋಲ್, ಟುಯೋಕ್, ಷಿಪಂಗ್,

ಕೊಮುಲ್, ತುಂಗ್‌ಹ್ವಾಂಗ್, ತುಂಷುಕ್, ತೋಕ್ಸು, ಅಚಿಗ್ ಇಲಕ್ ಮುಂತಾದ ಸ್ಥಳಗಳಲ್ಲಿ ವಿಹಾರಗಳೂ ಗ್ರಂಥಭಂಡಾರಗಳೂ ಇದ್ದವು. ಪರ್ವತವನ್ನು ೬೦ ಅಡಿ ಕೊರೆದು ಕೈಸಿಲ್ ಗುಹೆಗಳನ್ನು ಮಾಡಿರುವರು. ಇವುಗಳಲ್ಲಿ ಶುದ್ಧ ಅಜಂತರೀತಿಯಲ್ಲಿ ಬೌದ್ಧಕಥೆಗಳನ್ನು ಚಿತ್ರಿಸಿರುವರು. ತಾಳಪತ್ರ, ಭೂರ್ಜಪತ್ರ ಮತ್ತು ಹಲಗೆಗಳ ಮೇಲೆ ಬ್ರಾಹ್ಮೀಲಿಪಿಯಲ್ಲಿ ಬರೆದ ಸಂಸ್ಕೃತ ಮತ್ತು ತೊಖಾರಿ ಭಾಷೆಯ ಗ್ರಂಥಗಳ ೬೧ ಕಟ್ಟುಗಳು ಸಿಕ್ಕಿವೆ. ಕ್ರಿ.ಶ. ೮ ನೆಯ ಶತಾಬ್ದದಿಂದ ಸಸೇನಿಯನ್ ರೀತಿಯೂ ಕಂಡುಬರುವದು.

ತುರ್ಕಿಸ್ತಾನದಲ್ಲಿ ಧರ್ಮರಕ್ಷ, ಕುಮಾರಜೀವ, ವೈಭಾಷಿಕ ಆರ್ಯಚನ್ದ್ರ ಪ್ರಜ್ಞಾರಕ್ಷಿತರ ಗ್ರಂಥಗಳೂ ತೂರ್ಫಾನಿನಲ್ಲಿ ಸಂಯುಕ್ತಾಗಮ, ಅಂಗುತ್ತರ ನಿಕಾಯ. ಧರ್ಮಶರೀರಸೂತ್ರ, ಸುವರ್ಣ ಪ್ರಭಾಸೋತ್ತಮ ಸೂತ್ರ, ಧರ್ಮಪದ, ಉದಾನ, ನಿದಾನ, ಮಹಾಮಾಯೂರೀವಿದ್ಯಾರಾಜ್ಞೀ, ಅಶ್ವಘೋಷನ ಶತಪಂಚಶತಕಸ್ತೋತ್ರ, ಐನ್ದ್ರವ್ಯಾಕರಣ, ಮಾಗಧೀ, ಅರ್ಧಮಾಗಧೀ, ಶೌರಸೇನಿ, ಪ್ರಾಕೃತ ಗ್ರಂಥಗಳಿಗಿಂತ ಪ್ರಾಚೀನವಾದ ಮೂರು ಪ್ರಾಕೃತ ಭಾಷೆಗಳ ನಾಟಕಗಳು, ಸಂಸ್ಕೃತತಾನ್ತ್ರಿಕ ಗ್ರಂಥಗಳು,[9] ಪ್ರಾಂತ್ಯದ ಅಧಿಕಾರಿಗಳು ಸರ್ಕಾರಕ್ಕೆ ಮಾಡಿದ ವರದಿಗಳೂ ಸಿಕ್ಕಿವೆ. ತುಖಾರ "ಎ" ಭಾಷೆಯಲ್ಲಿ ೨೭ ಅಂಕ ೧ ಪ್ರವೇಶಕವಿರುವ ಮೈತ್ರೇಯಸಮಿತಿ ನಾಟಕ, ನನ್ದ—ಸುನ್ದರೀ ಕಥೆ, ಜಾತಕಕಥೆಗಳೂ; ತುಖಾರ "ಬಿ" ಭಾಷೆಯಲ್ಲಿ ನನ್ದ—ನನ್ದಬಲಾ ಕಥೆ ಧರ್ಮಪದದ ನಾಟಕ ರೂಪ, ಚಕ್ರವರ್ತಿ ಸುಪ್ರಿಯ ನಾಟಕಗಳೂ; ಉಯ್ಘೂರ್ ಭಾಷೆಯಲ್ಲಿ ಷಟ್ತ್ರಿಂಶದ್ಭಾಷಾ ಪ್ರವೀಣನಾದ ಧರ್ಮರಕ್ಷನ ಮೈತ್ರೇಯಸಮಿತಿ ನಾಟಕ, ದಶಕರ್ಮ ಬುದ್ಧಾವದಾನಮಾಲಾ, ಸುವರ್ಣಪ್ರಭಾಸ ಎಂಬ ಗ್ರಂಥಗಳೂ: ಉತ್ತರಾರ್ಯ ಭಾಷೆಯಲ್ಲಿ ಮಹಾಯಾನ, ಹೀನಯಾನ ಗ್ರಂಥಗಳೂ ಮೈತ್ರೇಯಸಮಿತಿ ನಾಟಕವೂ; ಸೊಗ್ಡಿಕ್ ಭಾಷೆಯಲ್ಲಿ ಪದ್ಮಚಿನ್ತಾಮಣೀಧಾರಿಣೀ ಸೂತ್ರ, ವಜ್ರಚ್ಛೇದಿಕಾ ಇತ್ಯಾದಿ ಬೌದ್ಧಗ್ರಂಥಗಳೂ, ನೆಸ್ಟೋರಿಯನ್ ಕ್ರೈಸ್ತಮತ ಗ್ರಂಥಗಳೂ, ಮಾನಿಕೆಯನ್ ಗ್ರಂಥಗಳೂ ವಿಶೇಷವಾಗಿ ಸಿಕ್ಕಿವೆ.

**ಈಶಾನ್ಯ:** ಚೀನ ಎಂಬ ಹೆಸರು ತ್ಸಿನ್‌ವಂಶ (ಕ್ರಿ.ಪೂ. ೨೪೯-೨೨೦) ದಿಂದ ಬಂದಿತೆಂದು ಕೆಲವರೂ, ಷಿನ ಎಂಬ ಭಾಷೆಯಿಂದ ಬಂದಿತೆಂದು

---

[9] ಮನ್ತ್ರ:—ತಥಾಬ್ರಹ್ಮಶಕ್ರಾದೀನಾಂ ಚತುರ್ಣಾಂಚ ಲೋಕಾಧಿಪತೀನಾಂ ಅಷ್ಟಾವಿಂಶತಿಶ್ಚ ಗನ್ಧರ್ವ ಕುಮ್ಭಾಣ್ಡ ನಾಗ ಯಕ್ಷ ಸೇನಾಧಿಪತಿನಾಂ ಪ್ರಭಾವಾಭಿವೃದ್ಧಯೇ—ಅಸ್ತು.

ಕೆಲವರೂ, ಮಲಯಭಾಷೆಯಿಂದ ಬಂದಿತೆಂದು ಇತರರೂ ಹೇಳುವರು. ಚೀಣ ಗ್ರಂಥಗಳಲ್ಲಿ ಭರತಖಂಡವನ್ನು ಷೆನ್ತು, ಹ್ಸೀನ್-ತು, ಇನ್‌ತು (ಸಿಂಧು) ಎಂದು ನಿರ್ದೇಶಿಸಿದೆ. ಕೌಟಿಲ್ಯನ ಅರ್ಥಶಾಸ್ತ್ರ ಮಹಾಭಾರತಗಳಲ್ಲಿ ಚೀಣದ ಉಲ್ಲೇಖನವಿದೆ. ಕ್ರಿ.ಪೂ. ೧೨೧ ರಲ್ಲಿ ಹಾನ್‌ವಂಶಕಾಲದಲ್ಲಿ ಭಾರತೀಯ ಬುದ್ಧವಿಗ್ರಹಗಳು ಚೀಣದೇಶವನ್ನು ಪ್ರವೇಶಿಸಿದವು. ಹಾನ್‌ನಾಣ್ಯವೊಂದು ಚನ್ದ್ರವಳ್ಳಿಯಲ್ಲಿ ಕಂಡುಬಂದಿತು. ಲಿ-ಯಾಂಗ್‌ವಂಶದ ಚರಿತ್ರೆಗಳಲ್ಲಿ ಕ್ರಿ.ಶ. ೮೫, ೧೦೫, ೧೪೭, ೧೬೭ ರಲ್ಲಿ ಭರತಖಂಡದಿಂದ ರಾಯಭಾರಿಗಳು ಬಂದದ್ದರೆಂದು ಹೇಳಿದೆ. ಯೂಚಿ, ಹೂಣ, ಶಕ, ಕುಷಾಣ ರಾಜರ ಪ್ರೋತ್ಸಾಹದಿಂದ ಬೌದ್ಧಮತವು ಚೀಣವನ್ನು ಪ್ರವೇಶಿಸಿತು. ಬೌದ್ಧಭಿಕ್ಷುಗಳು ವಾಯವ್ಯ ಮತ್ತು ಈಶಾನ್ಯಮಾರ್ಗಗಳನ್ನನುಸರಿಸಿ ಕ್ರಿ.ಶ. ೬೪ ರಿಂದ ನಿರಂತರವಾಗಿ ಚೀಣದೇಶಕ್ಕೆ ಹೋಗುತ್ತಿದ್ದರು. ತಾಮ್ರಲಿಪ್ತಿಯಿಂದ ಹೊರಟು ಜಲಮಾರ್ಗದಿಂದಲೂ ಸುಮಾತ್ರ, ಮಲಯಪರ್ಯಾಯದ್ವೀಪಗಳನ್ನು ಬಳಸಿಕೊಂಡು ಹೋಗುತ್ತಿದ್ದರು. ಕಾಶ್ಯಪಮಾತಂಗ, ಧರ್ಮರತ್ನ, ಮಹಾಬಲ, ಧರ್ಮಫಲ ಮುಂತಾದ ಭಿಕ್ಷುಗಳು ಚೀಣ ಚಕ್ರಾಧಿಪತ್ಯದ ಲೊ-ಯಾಂಗ್ ಪ್ರಾಂತದಲ್ಲಿ ನೆಲಸಿ ೪೩೪ ಬೌದ್ಧಗ್ರಂಥಗಳನ್ನು ಚೀಣಭಾಷೆಗೆ ತರ್ಜುಮೆ ಮಾಡಿದರು. ಸಾನ್‌ಕ್ವೊ (ಕ್ರಿ.ಶ. ೨೨೧-೨೬೫) ಕಾಲದಲ್ಲಿ ಧರ್ಮಕಾಲ, ಸಂಘವರ್ಮ, ಧರ್ಮಭದ್ರ ಮುಂತಾದವರು ಉತ್ತರ ಚೀಣದಲ್ಲಿಯೂ, ಲೋಕಕ್ಷೇಮ, ವಿಘ್ನ, ವೈ-ಯೂ, ಕಾಂಗ್‌ಸೆಂಗ್‌ಹ್ವೈ ಎಂಬುವರು ದಕ್ಷಿಣದಲ್ಲಿಯೂ ಪರಿಶ್ರಮಮಾಡಿ ೨೫೯ ಗ್ರಂಥಗಳನ್ನು ಪರಿವರ್ತಿಸಿದರು. ಪಶ್ಚಿಮ ತ್ಸೀನ್‌ಕಾಲದಲ್ಲಿ (ಕ್ರಿ.ಶ. ೨೬೫-೩೧೬) ಧರ್ಮರಕ್ಷನು ೨೧೧, ಧರ್ಮಶಿಖನು ೧೩೩, ಅನ್-ಫ-ಕಿಯು, ಪಿಹ್‌ಫ-ಲಿ, ಪೊವ್ ಫ-ತ್ಸು ಮುಂತಾದವರು ಒಟ್ಟು ೪೪೪ ಗ್ರಂಥಗಳನ್ನು ರಚಿಸಿದರು. ನಾನ್‌ಕಿಂಗಿನ ಪೂರ್ವತ್ಸೀನ್‌ಕಾಲದಲ್ಲಿ (ಕ್ರಿ.ಶ. ೩೧೮-೪೨೦) ಶ್ರೀಮಿತ್ರ, ಧರ್ಮರತ್ನ, ಸಂಘದೇವ, ಫಾಹಿಯಾನ್ (೩೯೯-೪೧೪), ವಿಮಲಾಕ್ಷ, ಜಿತಾಮಿತ್ರ, ಸನ್ದಿ, ಧರ್ಮಪ್ರಿಯ, ಕಾಲೋದಕ, ಧರ್ಮಬಲಿ, ಧರ್ಮೋದಧಿ, ಧರ್ಮನನ್ದಿ, ಕುಮಾರಬೋಧಿ, ಗೌತಮ ಸಂಘದೇವ, ಸಂಘಭೂತಿ, ಟಾಟ್ ಆನ್, ಗುಣಭದ್ರ ಮುಂತಾದವರು ಸುಮಾರು ೬೦೦ ಗ್ರಂಥಗಳನ್ನು ಪರಿವರ್ತಿಸಿರುವರು.

ಕುಮಾರ ಜೀವನಕಾಲವು ಮುಖ್ಯವಾದುದು. ಇವನ ಗುರುವಾದ ಬುದ್ಧಯಶಸ್ ದೀರ್ಘಾಗಮ, ಆಕಾಶಗರ್ಭ ಮತ್ತು ಧರ್ಮಗುಪ್ತೀಯರ ವಿನಯ ಗ್ರಂಥಗಳನ್ನು ಪರಿವರ್ತಿಸಿದ್ದನು. ಕುಮಾರಜೀವನು ರಾಜಪುತ್ರನಾಗಿದ್ದು

ಬೌದ್ಧಮತವನ್ನು ಸ್ವೀಕರಿಸಿ ಮೊದಲು ತುರ್ಕಿಸ್ತಾನದಲ್ಲಿ ಬೌದ್ಧಮತವನ್ನು ಪ್ರಚಾರಮಾಡಿದನು. ಅನಂತರ ಕ್ರಿ.ಶ. ೪೦೧ ರಲ್ಲಿ ಚೀಣಕ್ಕೆ ಹೋಗಿ ಚಕ್ರವರ್ತಿಯಾದ ಯೋ-ಚಾಂಗನಿಗೆ ಗುರುವಾಗಿದ್ದು ಕ್ರಿ.ಶ. ೪೧೩ ರಲ್ಲಿ ಗತಿಸಿದನು. ನೂರಾರು ಗ್ರಂಥಗಳನ್ನು ಸ್ವತಃ ರಚಿಸಿರುವನು. ಇವುಗಳಲ್ಲಿ ೫೬ ಮಾತ್ರ ಈಗ ಸಿಕ್ಕಿವೆ. ಪಂಚವಿಂಶತಿ ಸಾಹಸ್ರಿಕಾ, ದಶಸಾಹಸ್ರಿಕಾ, ಪ್ರಜ್ಞಾಪಾರಮಿತ ಹೃದಯಸೂತ್ರ, ಅಶ್ವಘೋಷನಾಗಾರ್ಜುನರ ಚರಿತ್ರೆ, ನಾಗಾರ್ಜುನನ ಮಾಧ್ಯಮಿಕ ಕಾರಿಕಾ, ಆರ್ಯದೇವನ ಶತಶಾಸ್ತ್ರ, ಹರಿವರ್ಮನ ಸತ್ಯಸಿದ್ಧಿಶಾಸ್ತ್ರ, ವಸುಬನ್ಧುವಿನ ಬೋಧಿಚಿತ್ತೋತ್ಪಾದನಶಾಸ್ತ್ರ, ಕುಮಾರಲಾತನ ಬ್ರಹ್ಮಜಾಲಸೂತ್ರ, ಸೂತ್ರಾಲಂಕಾರ-ಕಲ್ಪನಾಮಣ್ಡಿತಕ, ವಿಮಲಕೀರ್ತಿ ನಿರ್ದೇಶ ಇತ್ಯಾದಿ ಅಪೂರ್ವ ಗ್ರಂಥಗಳ ಭಾಷಾಂತರಗಳಿವೆ. ಕುಮಾರಜೀವನು ೮೦೦ ಮಹಾಪಂಡಿತರಿಗೆ ಅಧ್ಯಕ್ಷನಾಗಿದ್ದು ಗ್ರಂಥಗಳನ್ನು ಬರೆಯಿಸಿದನು. ಇವನ ಶಿಷ್ಯರಾದ ಸಾನ್-ಜೋ, ಸಸ್-ಜು-ಇ-ಅ ಎಂಬವರು ಕ್ರೋಡಪತ್ರಗಳನ್ನು ಬರೆದಿರುವರು.

ಲಿಯಾಂಗ್-ಪ್ಯೆ ರಾಜರ ಕಾಲದಲ್ಲಿ ಪಿ ಚೆ ಮೊಂಗ್, ಪಿ ಫ ಷೆಂಗ್, ಬುದ್ಧವರ್ಮ, ಧರ್ಮಕ್ಷೇಮ, ಪಿ ಫ ಚ್ವಾಂಗ್ ಮುಂತಾದವರು ಸುಮಾರು ನೂರು ಗ್ರಂಥಗಳನು ಪರಿವರ್ತಿಸಿದರು. ದಕ್ಷಿಣ ಚೀಣದಲ್ಲಿ ಲಿಯು-ಸುಂಗ್‌ಕಾಲ (ಕ್ರಿ.ಶ. ೪೨೧-೪೭೯) ದಲ್ಲಿ ಬುದ್ಧಜೀವ, ಗುಣವರ್ಮ, ಗುಣಭದ್ರ, ಸಂಘವರ್ಮ, ಧರ್ಮಮಿತ್ರ, ಕಾಲಯಶಸ್ ಮುಂತಾದವರು ೪೬೩ ಗ್ರಂಥಗಳನ್ನು ಬರೆದರು. ಚಿ (೪೭೯-೫೦೨) ಮತ್ತು ಲಿಯಾಂಗ್ (೫೦೨-೫೫೭) ರಾಜರ ಆಶ್ರಯದಲ್ಲಿ ಸಂಘಭದ್ರ, ಧರ್ಮಕೃತಯಶಸ್, ಧರ್ಮಮತಿ, ಮನ್ದ್ರಸೇನ, ಸುಭೂತಿ, ಸಂಘಭರ, ಫೂ-ಹಿ, ಪಾವ್-ಚೆಂಗ್ ಎಂಬವರು ಸುಮಾರು ೪೪ ಗ್ರಂಥಗಳನ್ನು ರಚಿಸಿರುವರು.

ಪರಮಾರ್ಥನ ಕಾಲವು ಮತ್ತೊಂದು ಮುಖ್ಯಘಟ್ಟ. ಉಜ್ಜಯಿನಿಯ ಬ್ರಾಹ್ಮಣನಾದ ಕುಲನಾಥನೆಂಬುವನು ಬೌದ್ಧಮತವನ್ನು ಸ್ವೀಕರಿಸಿ ಪಾಟಲೀಪುತ್ರದಲ್ಲಿ ನೆಲಿಸಿ ಪರಮಾರ್ಥನೆಂದು ಪ್ರಸಿದ್ಧನಾದನು. ಮಗಧ ದೇಶಕ್ಕೆ ಕ್ರಿ.ಶ. ೫೩೯ ರಲ್ಲಿ ಬಂದಿದ್ದ ಚೀಣ ರಾಯಭಾರಿಗಳು ಈತನನ್ನು ತಮ್ಮ ದೇಶಕ್ಕೆ ಕರೆದುಕೊಂಡುಹೋದರು. ನಾನ್‌ಕಿಂಗಿನಲ್ಲಿ ಚೀಣ ಚಕ್ರವರ್ತಿಯಾದ ಚೆನ್ ಪಾಸೀನ್ ಈತನನ್ನು ರಾಜಮರ್ಯಾದೆಗಳಿಂದ ಗೌರವಿಸಿ ಗ್ರಂಥಗಳನ್ನು ಭಾಷಾಂತರಿಸಲು ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸಿದನು. ಪರಮಾರ್ಥನು ಎಪ್ಪತ್ತೊಂದನೆಯ ವರ್ಷದಲ್ಲಿ (ಕ್ರಿ.ಶ. ೫೬೯) ಗತಿಸುವವರೆಗೂ

೭೦ ಗ್ರಂಥಗಳನ್ನು ರಚಿಸಿದನು. ಈಗ ೩೨ ಮಾತ್ರ ಸಿಕ್ಕಿವೆ. ಇದೇ ಕಾಲದಲ್ಲಿ ಉಪಶೂನ್ಯ ಸುಭೂತಿ ಮುಂತಾದವರೂ ಗ್ರಂಥರಚನೆ ಮಾಡಿದರು.

ವೈ ಮತ್ತು ಯುವಾನ್ ಕಾಲದಲ್ಲಿ ಭಾರತೀಯ ಕಲೆಗಳು ಚೀಣ ದೇಶದಲ್ಲಿ ವಿಶೇಷವಾಗಿ ವ್ಯಾಪಿಸಿದವು. ಉತ್ತರ ಷಾನ್‌ಸಿ ಪ್ರಾಂತದಲ್ಲಿ ೩೦,೯೦೦ ದೇವಾಲಯಗಳೂ ೪೩ ಅಡಿ ಎತ್ತರವಿರುವ ಬುದ್ಧ ವಿಗ್ರಹಗಳೂ ಇರುವವು, ಸಾವಿರಾರು ಚೀಣರು ಭಿಕ್ಷುಗಳಾದರು.[10] ಧರ್ಮರುಚಿ, ರತ್ನಮತಿ, ಬುದ್ಧಶಾಂತ, ಬೋಧಿರುಚಿ, ಕಿ-ಕಿಯ, ಗೌತಮ ಪ್ರಜ್ಞಾರುಚಿ, ವಿಮೋಕ್ಷಸೇನ, ಧರ್ಮ ಬೋಧಿ ಮುಂತಾದವರು ಸುಮಾರು ನೂರು ಗ್ರಂಥಗಳನ್ನು ರಚಿಸಿದರು. ಬೋಧಿವರ್ಮನು (ಕ್ರಿ.ಶ. ೫೨೦) ಧ್ಯಾನಮಾರ್ಗ (Chán or Zen) ಪ್ರವರ್ತಕನಾದನು. ಚಕ್ರವರ್ತಿಯಾದ ವು ಇವನನ್ನು ಪ್ರಶ್ನಿಸಲು ಬೋಧಿ ಧರ್ಮನು ಎಲ್ಲವೂ ಶೂನ್ಯ, ಯಾವುದೂ ಪವಿತ್ರವೂ ಅಲ್ಲ ತುಚ್ಛವೂ ಅಲ್ಲ, ಕರ್ಮಮಾಡುವದರಿಂದ ಪುಣ್ಯಫಲವಿಲ್ಲ ಎಂದು ಬೋಧಿಸಿದನು. ಷೊ ಅಲಿನ್ ದೇವಾಲಯದ ಒಂದು ಬರಿಗೋಡೆಯನ್ನೇ ನೋಡುತ್ತ ಜೀವನವನ್ನೆಲ್ಲ ಕಳೆದ ನಂತೆ. ತನ್ನ ಅಭಿಪ್ರಾಯಗಳನ್ನು ತಿಳಿಸಲು ಯಾವ ಗ್ರಂಥವನ್ನೂ ರಚಿಸಲಿಲ್ಲ. ಆದರೂ ಈ ಪಂಥವು ಜಪಾನಿನಲ್ಲೂ ವ್ಯಾಪಿಸಿತು.

ಉತ್ತರ ತ್ಸಿ, ಚೆ-ಉ, ಸು-ಇ ರಾಜರ ಕಾಲದಲ್ಲಿ ನರೇನ್ದ್ರಯಶಸ್, ಜ್ಞಾನ ಭದ್ರ, ಜಿನಯಶಸ್, ಯಶೋಗುಪ್ತ, ಜಿನಗುಪ್ತ, ಧರ್ಮಜ್ಞಾನ, ವಾರಣಾಸಿ, ವಿನೀತರುಚಿ, ಧರ್ಮಗುಪ್ತ ಮುಂತಾದವರು ೧೨೦ ಗ್ರಂಥಗಳನ್ನು ರಚಿಸಿರು ವರು. ಕ್ರಿ.ಶ. ೫೯೪, ೫೯೭, ೬೦೨, ೬೦೫-೧೬ ರಲ್ಲಿ ೨೨೫೭ ಗ್ರಂಥಗಳ ಕ್ರೋಡಪತ್ರವು (Catalogue) ರಚಿತವಾಯಿತು. ವಾಸ್ತುಶಿಲ್ಪ, ಗಣಿತ, ಜ್ಯೋತಿಷ, ಸಾಹಿತ್ಯ, ಸಂಗೀತ, ಚಿತ್ರಕಲೆ, ನಿಘಂಟು ಗ್ರಂಥಗಳು ಚೀಣದಲ್ಲಿ ವ್ಯಾಪಿಸಿದವು.

ಟ್ಸಾಂಗ್ ವಂಶದ ಕಾಲದಲ್ಲಿ (ಕ್ರಿ.ಶ. ೬೧೮-೯೦೭) ಪ್ರಭಾಕರಮಿತ್ರ, ಯುವಾನ್‌ಚ್ವಾಂಗ್, ಯೆನ್‌ತ್ಸಾಂಗ್, ಹಿ-ಯು-ಲಿ, ಹ್ಸಿಯು ಚ್ವಾನ್ ಎಂಬುವರು ಭರತಖಂಡದಿಂದ ೬೫೭ ಗ್ರಂಥಗಳನ್ನು ತೆಗೆದುಕೊಂಡು ಹೋದರು. ಯುವಾನ್‌ಚ್ವಾಂಗನು ೭೫ ಗ್ರಂಥಗಳನ್ನು ಪರಿವರ್ತಿಸಿದನು. ಇದರಿಂದ ಯೋಗಾಚಾರಮತವು ಕೊರಿಯ ಜಪಾನ್ ದೇಶಗಳಲ್ಲಿ ಹರಡಿತು. ಯುವಾನ್ ಚ್ವಾಂಗನೇ ಫ ಹ್ಸಿಯಂಗ್ (ಧರ್ಮಲಕ್ಷಣ)ವೆಂಬ ಪಂಥವನ್ನು

---

[10] "Every household almost had been converted and the number of those who had taken the vows was so great that the labours of the field were frequently neglected for lack of workmen."

ಸ್ಥಾಪಿಸಿದನು. ಚಕ್ರವರ್ತಿನಿಯಾದ ತ್ಸೋತಿನ್ (ಕ್ರಿ.ಶ. ೬೮೨-೭೦೪) ಎಂಬವಳು ಲುಂಗ್‌ಮೆನ್ ಗುಹಾಲಯಗಳನ್ನು ಸಂಘಾರಾಮಗಳನ್ನು ಮಾಡಿಸಿದಳು. ಇವಳನ್ನು ಕ್ವಾನ್‌ಯಿನ್ (ಅವಲೋಕಿತ) ದೇವತೆಯೆಂದು ಗಣಿಸುತ್ತಿದ್ದರು. ದಿವಾಕರ, ದೇವಪ್ರಿಯ, ರತ್ನಚಿನ್ತ, ಧರ್ಮರುಚಿ, ಶಿಕ್ಷಾನನ್ದ, ಮಿತ್ರಸೇನ, ರತ್ನಮತಿ, ಪ್ರಮತಿ ಮುಂತಾದವರನೇಕರು ಗ್ರಂಥಗಳನ್ನು ಪರಿವರ್ತಿಸಿರುವರು. ಯಿತ್ಸಿಂಗ್ (೬೩೫-೭೧೩) ಭರತಖಂಡದಲ್ಲಿ ಪ್ರವಾಸಮಾಡಿ ೫೬ ಗ್ರಂಥಗಳನ್ನು ಪರಿವರ್ತಿಸಿದನು. ಸುಮಾರು ಐವತ್ತು ವರ್ಷಗಳಲ್ಲಿ ೬೩ ಚೀಣ ಭಿಕ್ಷುಗಳು ಭರತಖಂಡದ ಯಾತ್ರೆ ಮಾಡಿದರು.

ಕ್ರಿ.ಶ. ೮ ನೆಯ ಶತಾಬ್ದದಿಂದ ತಾನ್ತ್ರಿಕ ಬೌದ್ಧಮತವು ಚೀಣ ದೇಶದಲ್ಲಿ ಹೆಚ್ಚಿತು. ಶ್ರೀಮಿತ್ರ, ಶುಭಂಕರಸಿಂಹ, ವಜ್ರಬೋಧಿ, ಅಮೋಘವಜ್ರ ಮುಂತಾದವರು ವಜ್ರಯಾನವನ್ನು ಹರಡಿದರು. ಕ್ರಿ.ಶ. ೭೩೦ ರಲ್ಲಿ ತ್ರಿಪಿಟಕಗಳ ಏಳನೆಯ ಕ್ರೋಡನೆಯಾಯಿತು. ಕ್ರಿ.ಶ. ೮ ನೆಯ ಶತಾಬ್ದದಿಂದ ಭಾರತೀಯರು ಚೀಣ ದೇಶಕ್ಕೆ ಹೋಗುವದು ಕಡಿಮೆಯಾಯಿತು. ಟಾರ್ಟರ್ ಜನರ ದಾಳಿಗಳು ಹೆಚ್ಚಿ ಚೀಣದಲ್ಲಿ ಶಾಂತಿ ಇಲ್ಲದೆ ಪ್ರವಾಸಕ್ಕೆ ತೊಂದರೆಗಳುಂಟಾದವು. ಆದರೂ ಸಿಂಹಳ, ಚೋಳದೇಶಗಳ ರಾಜರು ಆಗಾಗ ರಾಯಭಾರಿಗಳನ್ನು ಕಳುಹಿಸುತ್ತಿದ್ದರು. ಯುವಾನ್-ಮಾಂಚು ವಂಶದ ಕುಬ್ಲಾಯ್ ಖಾನನು ಬೌದ್ಧಮತವನ್ನು ಪೋಷಿಸಿ ತ್ರಿಪಿಟಕಗಳ ಕ್ರೋಡನೆ ಭಾಷಾಂತರಗಳನ್ನು ಮಾಡಿಸುತ್ತಿದ್ದನು. ಮಿಂಗ್ ವಂಶದವರು (೧೩೯೮-೧೬೪೪) ಧ್ಯಾನಪಂಥಕ್ಕೆ (Zen) ಹೆಚ್ಚು ಪ್ರೋತ್ಸಾಹ ಕೊಟ್ಟರು. ಕ್ರಿ.ಶ. ೧೩೬೮-೯೬ ರಲ್ಲಿ ಬೌದ್ಧಗ್ರಂಥಗಳ ಹದಿಮೂರನೆಯ ಕ್ರೋಡನೆಯಾಯಿತು. ಹದಿನೇಳನೆಯ ಶತಾಬ್ದದಲ್ಲಿ ಈ ಗ್ರಂಥಗಳು ಅಚ್ಚಾದವು. ಚೀಣದೇಶದಲ್ಲಿದ್ದ ಟಾಓ ಮತ್ತು ಕನ್‌ಫೂಷಿಯನ್ ಮತಗಳೊಡನೆ ಬೌದ್ಧಮತವೂ ಸೌಹಾರ್ದದಿಂದಿದ್ದಿತು. ಒಂದೇ ಮನೆತನದಲ್ಲಿ ಈ ಮೂರು ಮತಗಳ ಅನುಯಾಯಿಗಳೂ ಇರುವರು.

ಕೊರಿಯ ದೇಶಕ್ಕೆ ಬೌದ್ಧಮತವು ಚೀಣದಿಂದ ವ್ಯಾಪಿಸಿತು. ಕೊರಿಯ ಭಿಕ್ಷುಗಳೂ ಭರತಖಂಡಕ್ಕೆ ಬರುತ್ತಿದ್ದರು. ಆರ್ಯವರ್ಮ, ಹ್ವೈಯೆಹ್, ಹ್ವೀನ್‌ತೈ (ಸರ್ವಜ್ಞದೇವ), ಹ್ವೀನ್‌ಕೊ, ಹ್ವೈಲುನ್ (ಪ್ರಜ್ಞಾವರ್ಮ), ಬುದ್ಧಧರ್ವ, ಸಂಘವರ್ಮ ಮುಂತಾದವರು ಕೊರಿಯಾ ಭಾಷೆಯಲ್ಲಿ ಗ್ರಂಥಗಳನ್ನು ರಚಿಸಿರುವರು. ಈಗಲೂ ಕೂಡ ಕೊರಿಯ ವಿದ್ವಾಂಸರನ್ನು ಪಂಡಿತರೆಂದು ಕರೆಯುವರು.

ಚೀಣ ಕೊರಿಯ ದೇಶಗಳಿಂದ ಬೌದ್ಧಮತವು ಜಪಾನಿಗೆ ಹೋಯಿತು. ಜಪಾನ್ ಚರಿತ್ರೆಯು ಬೌದ್ಧಮತ ಪ್ರವೇಶದೊಂದಿಗೆ ಆರಂಭವಾಯಿತೆಂದು ಹೇಳಬಹುದು. ಕ್ರಿ.ಶ. ೫೨೨ ರಿಂದ ೧೬೦೪ ವರೆಗೆ ಬೌದ್ಧಮತವೇ ಪ್ರಬಲ ವಾಗಿದ್ದಿತು. ಷಿನ್‌ಟೋ ಎಂಬ ಪಿತೃಪೂಜೆ ಭೂತಪೂಜೆಗಳನ್ನು ಶಾಂತರೀತಿ ಯಿಂದ ಬೌದ್ಧಮತವು ಮೂಲೆಗಿಟ್ಟು ಸಂಸ್ಕೃತಿಗೆ ಕಾರಣವಾಯಿತು. ಸುಇಕೊ ಎಂಬ ಚಕ್ರವರ್ತಿಯು (ಕ್ರಿ.ಶ. ೫೯೨-೬೨೧) ಬೌದ್ಧಮತವನ್ನು ಪ್ರೋತ್ಸಾಹಿಸಿದನು. ಜಪಾನ್ ಬೌದ್ಧರಲ್ಲಿ ಜೆನ್ (ಧ್ಯಾನ), ನಿಚಿರೆನ್ ಪದ್ಮ ಸಂಘ, ಸುಖಾವತೀ ಮುಂತಾದ ಪಂಗಡಗಳಿದ್ದವು.

ಷೋಗುನ್ ಆಳಿಕೆಯು ಆರಂಭವಾದ ಮೇಲೆ ಕೇವಲ ರಾಜಕೀಯವಾದ ಷಿನ್‌ಟೋ ಮತವೇ ಮುಖ್ಯವಾಯಿತು. ಆದರೆ ಬೌದ್ಧರೇ ಜಪಾನಿನ ಸ್ವದೇಶೀಯ ಕಲೆಗಳಿಗೆ ಕಾರಣರು. "ನೋ" ಎಂಬ ಪ್ರಾಚೀನ ನಾಟಕ ಗಳು ಬೌದ್ಧಕಥೆಗಳನ್ನು ಅನುಸರಿಸಿ ಹುಟ್ಟಿದವು. ವಾಸ್ತುಶಿಲ್ಪದಲ್ಲಿ ನರ ಬಳಿ ಯಲ್ಲಿರುವ ಹೊರಿಯುಜಿ ಬೌದ್ಧಾಲಯಗಳು (ಕ್ರಿ.ಶ. ೬೧೬) ಮುಖ್ಯ. ನರದಲ್ಲಿರುವ ದೊಡ್ಡ ಘಂಟೆಯನ್ನು ಕ್ರಿ.ಶ. ೭೩೨ರಲ್ಲಿ ಕಂಚನ್ನು ಎರಕ ಹೊಯ್ದು ಮಾಡಿರುವರು. ಇದರ ತೂಕ ೯ ಟನ್. ಜಪಾನಿನ ಬುದ್ಧ ಬೋಧಿಸತ್ವರ ವಿಗ್ರಹಗಳು ಭಾರತೀಯ ತತ್ವಗಳನ್ನೂ ಕೊರಿಯಾ ಕೌಶಲ್ಯ ವನ್ನೂ ಚೀಣ ಮಾತೃಕೆಗಳನ್ನೂ ಗಾನ್ಧಾರರೀತಿಯನ್ನೂ ಸೂಚಿಸುವವು. ಬೃಹದಾಕಾರದ ಬುದ್ಧವಿಗ್ರಹಗಳನ್ನು ಕ್ರಿ.ಶ. ೭೪೭ ರಿಂದ ೧೨೫೨ ವರೆಗೆ ಮಾಡುತ್ತಿದ್ದರು. ಧ್ಯಾನ (Zen) ಪಂಥವು ಕಲೆಗಳನ್ನು ಪೋಷಿಸಿತು. ಯೈಷಿನ್ ಸೋಜು (ಕ್ರಿ.ಶ. ೧೦೧೭ಲ) ಎಂಬವನು ಬೌದ್ಧಕಥೆಗಳನ್ನು ಚಿತ್ರಿಸುವದರಲ್ಲಿ ಪ್ರಸಿದ್ಧನಾಗಿದ್ದನು. ಷೋಗುನ್ ಅಧಿಕಾರ ಕೊನೆಗೊಂಡ ಮೇಲೆ ಮೆಯ್ಜಿ ಚಕ್ರಾಧಿಪತ್ಯದಲ್ಲಿ ಚಕ್ರವರ್ತಿಯನ್ನೇ ದೇವರಾಗಿ ಗಣಿಸುವ ಷಿನ್‌ಟೊ ಮತವು ರಾಷ್ಟ್ರೀಯ ಮತವಾದುದರಿಂದ ಈಗ ಬೌದ್ಧಮತವು ಕೂಡ ಅಹಿಂಸಾತತ್ವವನ್ನು ಮರೆತು ರಾಷ್ಟ್ರೀಯಭಾವದಿಂದ ಕಲುಷಿತವಾಗಿ ಸಾಮ್ರಾಜ್ಯತತ್ವಕ್ಕೆ ಬೆಂಬಲ ಕೊಡುತ್ತಿದೆ.

# ೧೨. ಸಿಂಹಾವಲೋಕನ

ಯ್ಯಾನು ಭೂತಿರಜಾಮೇಯ್ಯಾನನ್ತಾನನ್ದವಿಗ್ರಹಾ |
ಮಹದಾದಿ ಜಗನ್ಮಾಯಾಚಿತ್ರಭಿತ್ತಿಂ ನಮಾಮಿ ತಾಮ್ ||

—ಇಷ್ಟಸಿದ್ಧಿ.

ಭಾರತೀಯ ಸಂಸ್ಕೃತಿಯ ಮುಖ್ಯಲಕ್ಷಣಗಳನ್ನೂ ಸುಮಾರು ಹತ್ತು ಸಾವಿರ ವರ್ಷದ ಚರಿತ್ರೆಯಲ್ಲಿ ಈ ಸಂಸ್ಕೃತಿಯ ವಿವಿಧ ರೂಪಗಳಲ್ಲುಂಟಾದ ಮಾರ್ಪಾಟುಗಳನ್ನೂ ಚಾರಿತ್ರಕದೃಷ್ಟಿಯಿಂದ ಸಂಕ್ಷೇಪವಾಗಿ ವಿವರಿಸಿರುವೆವು. ಚರಿತ್ರೆಯೆಂಬ ಮಾಯಾಚಿತ್ರಭಿತ್ತಿಯ ಮೇಲೆ ಅನೇಕ ವರ್ಣಗಳಿಂದ ನಿರೂಪಿತವಾದ ಸಂಸ್ಕೃತಿಯ ರೂಪಲೇಖನಗಳನ್ನು ದಿಙ್ಮಾತ್ರ ಸೂಚಿಸಿದ ಮಾತ್ರಕ್ಕೆ ಭಾರತೀಯ ಸಂಸ್ಕೃತಿಯ ತಿರುಳನ್ನರಿದಂತಾಗಲಿಲ್ಲ. ನಿರ್ಗುಣ ನಿತ್ಯಶುದ್ಧ ಬುದ್ಧ ಮುಕ್ತ ಸ್ವಭಾವವಾದ ಆತ್ಮಕ್ಕೂ ಸಗುಣರೂಪ ಹೊಂದಿದ ರಾಜಕೀಯ, ಆರ್ಥಿಕ, ಕಲಾ, ಸಾಹಿತ್ಯ, ವಿಜ್ಞಾನ ಮುಂತಾದ ಸಂಸ್ಕಾರ ರೂಪಗಳಾದ ವ್ಯಾವಹಾರಿಕ ವ್ಯವಸ್ಥೆಗಳಿಗೂ ಮಹದ್ವೈಲಕ್ಷಣ್ಯವಿದೆ. ಆತ್ಮದ ನಿಜಸ್ಥಿತಿಯು ವಾಙ್ಮನೋಽತೀತವಾದ ಮೋಕ್ಷಸ್ವರೂಪ. ಬ್ರಹ್ಮಾನುಭವವು ಉತ್ಪಾದ್ಯ, ವಿಕಾರ್ಯ, ಆಪ್ಯ, ಸಂಸ್ಕಾರ್ಯಗಳೆಂಬ ಚತುರ್ವಿಧ ದ್ರವ್ಯವಿಲಕ್ಷಣ.[1] ಆದುದರಿಂದ ಆತ್ಮೈಕತ್ವ ಪ್ರತಿಪಾದನಾವಿದ್ಯೆಗೂ ಪುರುಷತನ್ತ್ರವಾದ ಚಾರಿತ್ರಕ ಪ್ರಪಂಚದ ವ್ಯವಹಾರಕ್ಕೂ ಆವರಣ ವಿಕ್ಷೇಪ ರೂಪವಾದ ಮಾಯಾಶಕ್ತಿ ಪಾತದಿಂದ ಸಂಬಂಧವನ್ನು ಕಲ್ಪಿಸಬೇಕಾಗುವದು.

ಚಿದಂಶದಲ್ಲಿ ಶಕ್ತಿಪಾತದಿಂದ ವಿಕಾಸವೂ ಅಚಿದಂಶದಲ್ಲಿ ಸಂಕೋಚವೂ ಆಗುವದರಿಂದ ವ್ಯಾವಹಾರಿಕ ಮತ್ತು ಪ್ರಾತಿಭಾಸಿಕ ಸತ್ಯತ್ವವುಳ್ಳ ಪ್ರಾಕೃತ ಪ್ರಪಂಚದ ಸಂಸ್ಕೃತಿಯು ನಿರ್ದಿಷ್ಟವಾದ ಶಕ್ತಿ ಧರ್ಮವನ್ನನುಸರಿಸಿ

---

[1] ಸಂಸ್ಕಾರೋ ಹಿನಾಮ ಸಂಸ್ಕಾರ್ಯಸ್ಯಗುಣಾಧಾನೇನ ವಾಸ್ಯಾತ್, ದೋಷಾಪನಯನೇನವಾ? ನ ತಾವದ್ಗುಣಾಧಾನೇನ ಸಂಭವತಿ-ಅನಾಧೇಯಾತಿಶಯ ಬ್ರಹ್ಮಸ್ವರೂಪತ್ವಾನ್ಮೋಕ್ಷಸ್ಯ| ನ್ಯಾಪಿದೋಷಾಪನಯನೇನ—ನಿತ್ಯಶುದ್ಧಬ್ರಹ್ಮಸ್ವರೂಪತ್ವಾನ್ಮೋಕ್ಷಸ್ಯ| ಸ್ವಾತ್ಮಧರ್ಮ ಏವ ಸಂಸ್ತಿರೋ ಭೂತೋಮೋಕ್ಷಃ ಕ್ರಿಯಯಾ ಆತ್ಮನಿ ಸಂಸ್ಕ್ರಿಯಮಾಣೇ ಅಭಿವ್ಯಜ್ಯತೇ ಯಥಾದರ್ಶೇ ನಿಘರ್ಷಣ ಕ್ರಿಯಯಾ ಸಂಸ್ಕ್ರಿಯಮಾಣೇ ಭಾಸ್ವರತ್ವಂ ಧರ್ಮ ಇತಿಚೇತ್—ನ ಕ್ರಿಯಾಶ್ರಯತ್ವಾನುಪಪತ್ತೇರಾತ್ಮನಃ||—ಶಾಂಕರ ಬ್ರಹ್ಮಸೂತ್ರ ಭಾಷ್ಯ.

(IInd Law of Thermodynamics) ಎರಡು ವಿಧವಾದ ಅಂತ ಉಳ್ಳ ಅನಂತತ್ವವನ್ನು (Finite Infinities) ಪಡೆಯುವದು. ಇಂತಹ ಅನಂತತ್ವಗಳೇ ವಿಸ್ತರಣ ಹೊಂದುತ್ತಿರುವ ಪ್ರಪಂಚದ (Expanding Universe) ಲಕ್ಷಣ,



ಭಾರತೀಯ ಸಂಸ್ಕೃತಿಯ ಶಕ್ತಿವ್ಯಾಪ್ತಿ.

ಇಂತಹ ಸಮವಾಯ ಸಂಬಂಧವುಳ್ಳ (Relativity) ದೃಶ್ಯಪ್ರಪಂಚಕ್ಕೆ ಮಾತ್ರ ಸಂಖ್ಯಾತತ್ವವು ಅನ್ವಯಿಸುತ್ತದೆ. ಆದುದರಿಂದ ಪ್ರಪಂಚದಲ್ಲಿ ಮಾನವನ ಸಂಸ್ಕೃತಿಯ ಪ್ರಗತಿಯನ್ನು ಶಕ್ತಿ-ಕಾಲ (Energy and Time) ರೂಪವಾಗಿ ತೋರಿಸಬಹುದು.

ಜಡವಾದ ಪ್ರಕೃತಿಯಲ್ಲಿ ಮೊದಲು ಶಕ್ತಿಯು ಸ್ಪಂದನೆಯನ್ನುಂಟುಮಾಡಿ ಅಸ್ತಿ, ಭಾತಿ, ಪ್ರಿಯಂ, ನಾಮ, ರೂಪಗಳೆಂಬ ಐದು ಅಂಶಗಳಲ್ಲಿ ನಾಮ ರೂಪಗಳನ್ನು ಮಾತ್ರ ಅಭಿವ್ಯಂಜಿಸಿ ಅನಾದಿ ಕರ್ಮಚೋದಿತವಾದ ಜೀವ ಚೈತನ್ಯವು ಪ್ರಥಮ ಕಾಲಘಟ್ಟವನ್ನು ಸೇರಿದಾಗ ಒಂದು ಘಟ್ಟವನ್ನು ಏರ್ಪಡಿಸುವದು. ಅನಂತರ ಪುನಃ ಶಕ್ತಿಚೋದನೆಯಿಂದ ಕಾಲಕ್ರಮೇಣ ಸಂಸ್ಕೃತಿ ಚರಿತ್ರೆಯ ಘಟ್ಟಗಳಾಗುವುವು. ಸಂಸ್ಕೃತಿಯು ಹೆಚ್ಚಾದಷ್ಟು

ಅಸ್ತಿ (ಸತ್), ಭಾತಿ (ಚಿತ್), ಪ್ರಿಯ (ಆನಂದ) ಎಂಬ ಅಂಶಗಳೂ ಅಭಿವ್ಯಕ್ತವಾಗುವವು. ಪ್ರಗತಿಸ್ತಂಭನೆ ಯುಂಟಾಯಿತೆಂದು ಹೇಳಬಹುದಾದ ಚಾರಿತ್ರಿಕ ಯುಗಗಳಲ್ಲಿಯೂ ಸಂಸ್ಕೃತಿಯು ತಿರೋಧಾನವೇ ನಾಗರಿಕತೆ. ಇಂತಹ ವ್ಯಾವಹಾರಿಕ ಮತ್ತು ಸಗುಣವಾದ ಸಂಸ್ಕೃತಿಯಲ್ಲಿ ಸಂಖ್ಯೇಯವಾದ ಅನಂತತ್ವಗಳಿದೆಯೆಂದು ತೋರಿಸಬಹುದು.[2] ಇವು ಪರಸ್ಪರ ಬಿಂಬ-ಪ್ರತಿಬಿಂಬ ಸಂಬಂಧವನ್ನನುಸರಿಸಿವೆ (One to one correspondence). ಆದುದರಿಂದ ಕಾಲ, ದೇಶ, ಸಂಖ್ಯೆ, ಮನಸ್ ಇತ್ಯಾದಿಗಳನ್ನಾಶ್ರಯಿಸಿದ ಸಂಸ್ಕೃತಿ ಚರಿತ್ರೆಯೂ ಅನಂತ ರೂಪಗಳನ್ನು ಒಳಗೊಂಡಿದೆಯೆಂದು ಹೇಳಬಹುದಾದರೂ ಪಾರಮಾರ್ಥಿಕ ಸತ್ಯವಾದ, ಅನುಭೂತಿಸ್ವರೂಪವಾದ ಅನಂತತ್ವಕ್ಕಿಂತಲೂ ಭಿನ್ನವಾದುದು. ಸಂಸ್ಕಾರಗಳು ಹೇಗೆ ದೇಹವೇ ಆತ್ಮವೆಂಬ ಭ್ರಾಂತಿಯನ್ನು ನಿರ್ಮೂಲ ಮಾಡುವದಕ್ಕಾಗಿ ಅವಿದ್ಯಾವಂತ ವಿಷಯಕಗಳಾಗಿರುವವೋ, ಹೇಗೆ ಅನ್ನ, ಪ್ರಾಣ, ಮನ, ವಿಜ್ಞಾನ, ಆನಂದಮಯ ಕೋಶಗಳನ್ನು ಚಿತ್ತಶುದ್ಧಿ ದ್ವಾರಾ ಸಂಸ್ಕರಿಸುವವೋ ಮುಕ್ತಿಗೆ ಮಾರ್ಗವನ್ನು ತೋರಿಸುವವೋ ಹಾಗೆಯೇ ಸಂಸ್ಕೃತಿಗಳೂ ಆರಾದುಪಕಾರಗಳಾಗಿವೆ.

ಈ ಸೂಕ್ಷ್ಮ ತತ್ವವನ್ನರಿಯದೆ ಷ್ವೀಟ್ಸರ್, ಸ್ಪೆಂಗ್ಲರ್, ಕ್ರೋಚೆ, ಟಾಯನ್ಬಿ ಮುಂತಾದ ಪಾಶ್ಚಾತ್ಯರು ಅವ್ಯಾಪ್ತಿ ಅತಿವ್ಯಾಪ್ತಿ ದೋಷದೂಷಿತವಾದ ಲಕ್ಷಣಗಳನ್ನು ಸಂಸ್ಕೃತಿ-ನಾಗರಿಕತೆಗಳಿಗೆ ಪ್ರತಿಪಾದಿಸಿರುವರು. ದೇವರು ಮಾನವನಾಗುವನೆಂಬ ಕ್ರೈಸ್ತ ಸಂಸ್ಕೃತಿಗೂ ಮಾನವನೇ ದೇವರಾಗಬಹುದೆಂಬ "ಪೇಗನ್" ಸಂಸ್ಕೃತಿಗೂ ಕ್ರಿಸ್ತಶಕಾರಂಭದಲ್ಲಿ ಘರ್ಷಣೆಯುಂಟಾಗಿ ದೇವರೇ ಚರಿತ್ರೆಯಲ್ಲಿ ಪ್ರವೇಶಿಸಿದುದರಿಂದ ಪ್ರಾಚೀನ ಗ್ರೀಕ್ ಮುಂತಾದ ಸಂಸ್ಕೃತಿಗಳೆಲ್ಲವೂ ಅದೃಶ್ಯವಾದುವೆಂದೂ, ಭಾರತೀಯ ಸಂಸ್ಕೃತಿಯಲ್ಲಿ ನಿರಾಶಾಭಾವವಿರುವದರಿಂದ ವ್ಯಾವಹಾರಿಕ ನೀತಿಮಾರ್ಗವೇ ಇಲ್ಲವೆಂದೂ, ವ್ಯಕ್ತಿಯ ಮುಕ್ತಿಯೇ ಧ್ಯೇಯವೆಂದೂ ಪ್ರಪಂಚ ತ್ಯಾಗವೇ ಮಾರ್ಗವೆಂದು ನಿರ್ಧರಿಸಿರುವದರಿಂದ ವಿಶ್ವದೃಷ್ಟಿಯಿಲ್ಲವೆಂದೂ ಷ್ವೀಟ್ಸರನು ಹೇಳಿರುವನು.[3] ಇದು ಭಾರತೀಯ ಸಂಸ್ಕೃತಿಯ ಅನಭಿಜ್ಞತೆಯನ್ನು

[2] ೧, ೨, ೩, ೪ . . . . ∞ ; ೨, ೪, ೬, ೮ . . . . ∞ ; ೧/೨, ೧/೩, ೧/೪, ೧/೫ . . . . ∞ ಎಂಬುದಾಗಿ ಸಂಖ್ಯೆ ಮಾಡಬಹುದಾದ ಅನಂತತ್ವ ; ಶೂನ್ಯಕ್ಕಿಂತ ಹೆಚ್ಚಾಗಿ ಒಂದಕ್ಕಿಂತ ಕಡಿಮೆಯಾಗಿ ಇರಬಹುದಾದ ಅಸಂಖ್ಯೇಯವಾದ ಅನಂತತ್ವ-ಸಗುಣಬ್ರಹ್ಮ ; ಆದರೂ ಅಂತವುಳ್ಳದ್ದು. ಶೂನ್ಯಕ್ಕೆ ಹಿಂದೆ ಇರಬಹುದಾದುದು ನಿರ್ಗುಣ.

[3] In the consistently pessimistic theory of the universal as of the Brahmins, ethics has nothing whatever to do with the objective world. It

ತೋರಿಸುವದು. ಅದ್ವೈತದಲ್ಲಿ ವಿನಾ ಮಿಕ್ಕಾವ ಪ್ರಪಂಚದ ಮತದಲ್ಲಿಯೂ ವಿಶ್ವದೃಷ್ಟಿಗೆ ಅವಕಾಶವಿಲ್ಲ. ಆಯಾ ಮತಗಳನ್ನು ಸ್ವೀಕರಿಸಿದವರು ಮಾತ್ರ ಮುಕ್ತಿಯೋಗ್ಯರು. ಇತರರು ನಾರಕಿಗಳೆಂಬ ಭಾವವು ಅನ್ಯಮತಗಳಲ್ಲಿವೆ ಯಾದುದರಿಂದ, ಕೇವಲ ನೀತಿಯಿಂದಾಗಲೀ ಸಮಾಜ ಸೇವೆ ಮಾತ್ರದಿಂದಾ ಗಲೀ ವಿಶ್ವದೃಷ್ಟಿಯು ಉಂಟಾಗಲು ಅವಕಾಶವೇ ಇಲ್ಲ. ಭಾರತೀಯ ಸಂಸ್ಕೃತಿಯಲ್ಲಿ ಅವತಾರಗಳ ಮೂಲಕ ದೇವರೂ ಪ್ರಪಂಚದಲ್ಲಿ ಅಧರ್ಮವು ಹೆಚ್ಚಿದಾಗ ಚಾರಿತ್ರಕ ಪುರುಷನಾಗಿ ದುಷ್ಟರನ್ನು ನಿಗ್ರಹಿಸಿ ಧರ್ಮ ಸಂಸ್ಥಾಪನೆ ಮಾಡುವನೆಂಬ ನಂಬಿಕೆಯೂ,[4] ಮನುಷ್ಯನೂ ಸಗುಣಬ್ರಹ್ಮ ವನ್ನಾಗಲೀ ನಿರ್ಗುಣಬ್ರಹ್ಮಸಿದ್ಧಿಯನ್ನಾಗಲೀ ಪಡೆಯಬಹುದೆಂಬ ಭಾವ ನೆಯೂ ಇರುವದರಿಂದ ನೀತಿಗೂ ಲೋಕಸಂಗ್ರಹಕ್ಕೂ ಅವಕಾಶವಿದೆ. ನಿಜವಾದ ವಿಶ್ವದೃಷ್ಟಿಯಿದೆ. ಸನ್ಯಾಸಿಗೂ ಲೋಕಸಂಗ್ರಹವು ಕರ್ತವ್ಯವಾದುದ ರಿಂದ ಪ್ರಪಂಚವನ್ನು ಬಿಡಲಾಗದು. ಕಾಲಕ್ರಮೇಣ ಪ್ರಪಂಚವೇ ಅವನನ್ನು ಬಿಡುವದು. ಮತ್ತು ಕರ್ಮವಾದವು ನಿರಾಶಾಜನಕವೆಂಬುದಕ್ಕೆ ಆಧಾರವಿಲ್ಲ. ಯಾವುದೋ ಚಾರಿತ್ರಕ ಪುರುಷನ ಮೂಲಕ ಮಾತ್ರ ಮುಕ್ತಿ ಸಿಗುವದೆಂದು ಹೇಳುವ ಮತಗಳೇ ತತ್ವತಃ ನಿರಾಶಾಜನಕವಾದುವು. ಆತ್ಮಾವಲಂಬನೆ ಯಿಂದಲೇ ಸದ್ಗತಿಯನ್ನೋ ದುರ್ಗತಿಯನ್ನೋ ಸಾಧಿಸಬಹುದೆಂಬ ಕರ್ಮ ವಾದವೇ ಎಲ್ಲ ದೃಷ್ಟಿಯಿಂದಲೂ ಸಮರ್ಪಕ.

ಸ್ಪೆಂಗ್ಲರ್ ಪ್ರಪಂಚದ ಪ್ರಾಚೀನ ಮತ್ತು ಆಧುನಿಕ ಸಂಸ್ಕೃತಿಗಳನ್ನೆಲ್ಲ ವಿಮರ್ಶಿಸಿ, ಪ್ರತಿ ಸಂಸ್ಕೃತಿಗೂ ಬಾಲ್ಯ, ಯೌವನ, ಮಧ್ಯ ವಯಸ್ಸು ಮುಪ್ಪುಗಳು ಪ್ರಕೃತಿಯಲ್ಲಿ ವಸನ್ತ ಮುಂತಾದ ಋತುಗಳಿದ್ದಂತೆ ಇರುವ ವೆಂದೂ ನಾಗರಿಕತಾವಸ್ಥೆಯನ್ನು ಹೊಂದಿದ ಮೇಲೆ ಸಂಸ್ಕೃತಿಯು ಸಂಪೂರ್ಣವಾಗಿ ನಾಶವಾಗುವದೆಂದೂ ಅದಕ್ಕೆ ಯಾವ ರೀತಿಯಲ್ಲೂ ಪುನಃ ಜನ್ಮವಿಲ್ಲವೆಂದೂ ಆ ಸಂಸ್ಕೃತಿಯ ಸ್ಥಾನವನ್ನು ಮತ್ತೊಂದು ನವ

---

aims solely at securing the self-perfection of the individual as this comes to pass in inner freedom and disconnection from the world and the spirit of the world.—Albert Schweitzer: *Philosophy of Civilisation.*

[4] ಅಸತಾಂ ನಿಗ್ರಹಾರ್ಥಾಯ ಧರ್ಮಸಂರಕ್ಷಣಾಯಚ | ಅವತೀರ್ಣೋಮನುಷ್ಯಾಣಾ ಮಜಾಯತ ಯದುಕ್ಷಯೇ || ವನಪರ್ವ. ೨೭೨-೭೧ ; ಬಹ್ವೀ : ಸಂಸರಮಾಣೋವೈಯೋ ನೀರ್ವರ್ತಾಮಿ ಸತ್ತಮ | ಧರ್ಮಸಂರಕ್ಷಣಾರ್ಥಾಯ ಧರ್ಮಸಂಸ್ಥಾಪನಾಯ ಚ || ಅಶ್ವಮೇಧಪರ್ವ : ೫೪-೧೩ ; ಗೀತಾ : IV-೭.೮. ಮನಏವ ಮನುಷ್ಯಾಣಾಂ ಕಾರಣಂ ಬನ್ಧಮೋಕ್ಷಯೋಃ | ಮನು ; ಆತ್ಮೈವ ಸಂಸರತಿ ಆತ್ಮೈವ ವಿಮುಚ್ಯತೇ.—ಇಷ್ಟಸಿದ್ಧಿ.

ಚೈತನ್ಯವುಳ್ಳ ಸಂಸ್ಕೃತಿಯು ಆಕ್ರಮಿಸುವದೆಂದೂ ಹೇಳುವನು. ಈತನ ಅಭಿಪ್ರಾಯದಂತೆ ಭಾರತೀಯಸಂಸ್ಕೃತಿಚರಿತ್ರೆಯಲ್ಲಿ ಬುದ್ಧನ ಕಾಲದಲ್ಲಿಯೇ ಸಂಸ್ಕೃತಿಯ ಬೆಳವಣಿಗೆ ನಿಂತು ನಾಗರಿಕತೆ ಆರಂಭವಾಯಿತು. ನಾಗರಿಕತಾವಸ್ಥೆಯಲ್ಲಿ ಪ್ರತಿಭೆಗೆ ಅವಕಾಶವಿಲ್ಲ. ಚರ್ವಿತಚರ್ವಣವೇ ನಾಗರೀಕತೆಯ ಲಕ್ಷಣ. ಅನ್ಧಪರಂಪರೆಯಂತೆ ಆ ಸಂಸ್ಕೃತಿಗೆ ಮೂಲಕಾರಣವಾದ ಅದೃಷ್ಟವು (Destiny-Idea) ಪ್ರಾರಬ್ಧ ಮತ್ತು ಸಂಚಿತಕರ್ಮಕ್ಷಯವಾಗುವವರೆಗೂ ಚರಿತ್ರೆಯು ಮುಂದುವರೆಯುತ್ತಿದ್ದರೂ ನಿಜವಾದ ಜೀವಸತ್ವವಿಲ್ಲ[5].

ಸ್ಪೆಂಗ್ಲರಿನ ಅಭಿಪ್ರಾಯಗಳನ್ನು ಅನ್ಯತ್ರ[6] ವಿಸ್ತಾರವಾಗಿ ವಿಮರ್ಶಿಸಿ ಖಂಡಿಸಿರುವೆವು. ಬೌದ್ಧಮತವೇ ಭಾರತೀಯ ಸಂಸ್ಕೃತಿಯ ಅಂತ್ಯಸ್ಥಿತಿಯೆಂಬುದು ಚಾರಿತ್ರಕ ದೃಷ್ಟಿಯಿಂದ ನಿರಾಧಾರವಾದುದು. ಶವದಹನ, ಪ್ರತಿಕೃತಿ ಶಿಲ್ಪದ ಅಭಾವ, ಶೂನ್ಯಸಂಖ್ಯೆ ಮುಂತಾದವುಗಳಿಂದ ಭಾರತೀಯ ಆತ್ಮವು ಸ್ಮೃತಿಯನ್ನು ನಿರಾಕರಿಸಿತೆಂದು ಊಹಿಸುವದು ಭ್ರಾಂತಿ. ಕೇವಲ ಭೌತದೃಷ್ಟಿಯಿಂದ ಶವದಹನ ಪದ್ಧತಿಯು ಸ್ಮರಣತತ್ವಕ್ಕೆ ವಿರುದ್ಧವೆಂದು ತೋರಿಬಂದರೂ ಅದೇ ಔರ್ಧ್ವದೇಹಿಕ ಸಂಸ್ಕಾರಗಳಿಂದಲೂ ದೇವಾಲಯ ಮುಂತಾದ ಸ್ಮಾರಕಚಿಹ್ನೆಗಳಿಂದಲೂ ಸ್ಮರಣೆಯು ಕೂಡ ಭಾರತೀಯ ಸಂಸ್ಕೃತಿಯ ಮುಖ್ಯಾಂಶವೆಂದು ಹೇಳಬೇಕು. ಹೀಗೆಯೇ ಶೂನ್ಯಸಂಖ್ಯೆಯನ್ನು ಸಂಬಂಧವನ್ನೂ ಸಂಬಂಧರಾಹಿತ್ಯವನ್ನೂ ಪೂರ್ಣವನ್ನೂ ಸೂಚಿಸುವದಕ್ಕಾಗಿಯೇ ಭಾರತೀಯರು ಸೃಷ್ಟಿಸಿ ಪ್ರಪಂಚಕ್ಕೆಲ್ಲ ಉಪಕಾರಮಾಡಿದರು. ಆದುದರಿಂದ ಶೂನ್ಯಚಿಹ್ನೆಯು ಪ್ರಪಂಚ ಶೂನ್ಯತೆಯನ್ನು ಸೂಚಿಸುವದಿಲ್ಲ.

---

[5] In the ethics of the West, everything is direction, claim to power, the will to affect the distant. "You shall", "the State shall", "Society shall." But not so in India. The Buddha for instance gives the pattern to take or leave and Epicurus offers counsel in the Classical world. Both undeniably are forms of high morale and neither contains the Will element. Transvaluation of Values is the fundamental characteristic of the beginnings of a Civilisation after a culture. In the case of India the transvaluation of the Brahman life was complete before the time of Aśōka (250 B.C.). The brain rules because the Soûl abdicates. In culture men live inwards; in civilisation—consciously—in space, outwards, among "Facts." Buddhism was not a puritan movement, not a Reformation, and not a Religion but a final and purely practical world-sentiment of tired megalopolitans who had a closed culture behind them and no future before them. It was the basic feeling of the Indian civilisation—Oswald Spengler: *Decline of the West*, I. *Buddhism, Stoicism and Socialism.*

[6] S Śrikaṇṭa Śāstri, *The New Era*, I. pt. 6, p. 479, 1929.

ನೈರಾತ್ಮ್ಯವಾದಕ್ಕೆ ಅವಕಾಶವಿಲ್ಲ. ಚರಿತ್ರೆಗೆ ಕೇವಲ ಭೌತಿಕಾರ್ಥವನ್ನು (Materialistic Conception of History) ಹೇಳುವದಕ್ಕೂ ಸಾಧ್ಯವಿಲ್ಲ. ಚರಿತ್ರೆಯು ಜಾತಿಯುದ್ಧ (Class Conflict) ಮತ್ತು ದುರಾಕ್ರಮಣ (Exploitation) ಗಳಿಗೆ ಮಾತ್ರ ನಿದರ್ಶನವೆಂದು ಹೇಳುವ ಕೇವಲ ಆರ್ಥಿಕ ಸಮತಾವಾದಕ್ಕೆ ಯಾವ ಭಾರತೀಯ ತತ್ವದಿಂದಲೂ ಆಧಾರವು ಸಿಕ್ಕುವದಿಲ್ಲ. ನಿಜವಾದ ಸಮತಾವಾದವು ಸರ್ವಸಂಸ್ಕೃತಿಗಳಿಗೂ ಶಿರೋಭೂಷಣವಾದ ಅದ್ವೈತದಲ್ಲಿಯೇ ಕಂಡುಬರುವದು.

ಭಾರತೀಯ ಸಂಸ್ಕೃತಿಯಲ್ಲಿ ಆಧ್ಯಾತ್ಮಿಕದೃಷ್ಟಿಯೇ ಪ್ರಧಾನವಾದರೂ ಭೌತಿಕವಿಷಯಗಳಿಗೂ ಉಚಿತಪ್ರಾಧಾನ್ಯವಿದ್ದೇ ಇರುವದು. ಜೀವದ ಸರ್ವಶಕ್ತಿವಿಕಾಸವೇ ಧ್ಯೇಯ. ಭರತಖಂಡದ ಪ್ರತಿಯೊಂದು ಚಾರಿತ್ರಕ ಯುಗದಲ್ಲಿಯೂ ತ್ಯಾಗಿಯೋಗಿಗಳಲ್ಲದೆ ಭೋಗಿಗಳೂ ಇದ್ದರು. ಸ್ವದೇಶಾಭಿಮಾನ, ರಾಷ್ಟ್ರೀಯ ಭಾವ, ಐಕಮತ್ಯಾಕಾಂಕ್ಷೆ, ಸ್ವಾತನ್ತ್ರ್ಯಾಭಿಲಾಷೆ, ಸಮಾಜಸೇವೆಗಳೊಡನೆ ಸ್ಥೂಲದೃಷ್ಟಿಗೆ ವಿರೋಧವಾಗಿ ಕಂಡುಬರುವ ವಿಶ್ವದೃಷ್ಟಿ, ಪರದೇಶೀಯರೊಡನೆ ಸೌಹಾರ್ದ, ಸಮಾಜದಲ್ಲಿ ವರ್ಣಾಶ್ರಮವಿಧಾನ, ವ್ಯಕ್ತಿಸ್ವಾತಂತ್ರ್ಯಗಳೆಂಬ ಭಾವಗಳೂ ಸಾಮರಸ್ಯದಿಂದಿದ್ದವು. ಆದುದರಿಂದ ಸಂಸ್ಕೃತಿಯು ಸ್ಥೈರ್ಯವನ್ನು ಹೊಂದಿದ್ದಿತು. ಭಾರತೀಯರೆಂದಿಗೂ ಕೂಪಕೂರ್ಮಗಳಂತಿರಲಿಲ್ಲ. ವಿದೇಶೀಯ ಮತ್ತು ವಿಜಾತೀಯ ಸಂಸ್ಕೃತಿಗಳಲ್ಲಿರುವ ನಿಸ್ಸಾರವಾದ ಅಂಶಗಳನ್ನು ನಿರಾಕರಿಸಿ ಸದ್ಗುಣಗಳನ್ನು ಗ್ರಹಿಸಲು ಹಿಂತೆಗೆಯಲಿಲ್ಲ. ಇಂತಹ ಗುಣಗ್ರಹಣೆಯಿಂದ ತಮ್ಮ ವ್ಯಕ್ತಿತ್ವವನ್ನು ಕಳೆದುಕೊಂಡು ಆತ್ಮಹಾನಿಯನ್ನೂ ಮಾಡಿಕೊಳ್ಳಲಿಲ್ಲ. ತಮ್ಮ ನೈಸರ್ಗಿಕ ಪ್ರತಿಭೆಯಿಂದ ಮಾರ್ಪಡಿಸಿ ಜೀರ್ಣಿಸಿಕೊಂಡು ವ್ಯತ್ಯಾಸವೇ ಕಂಡುಬರದಂತೆ ತಮ್ಮದನ್ನಾಗಿಯೇ ಮಾಡಿಕೊಂಡರು. ಇದರಿಂದ ಭಾರತೀಯ ವ್ಯಕ್ತಿತ್ವವು ವಿಕಾಸಹೊಂದಿತೇ ಹೊರತು ವಿನಾಶಹೊಂದಲಿಲ್ಲ. ಇಂತಹ ಅಪೂರ್ವ ಚೈತನ್ಯವು ಭಾರತೀಯ ಸಂಸ್ಕೃತಿಯಲ್ಲಿರುವದರಿಂದಲೇ ಆಧುನಿಕ ಪಾಶ್ಚಾತ್ಯ ಸಂಸ್ಕೃತಿಯ ಸಾಮ್ರಾಜ್ಯಾಕಾಂಕ್ಷೆ, ನಿರಂಕುಶಪ್ರಭುತ್ವ, ಬಂಡವಾಳಶಾಹಿ, ಘೋರಯುದ್ಧಗಳು, ಆಧ್ಯಾತ್ಮಿಕ ವಿಷಯದಲ್ಲಿ ಪರಾಙ್ಮುಖತೆ, ಆರ್ಥಿಕ ವ್ಯವಸ್ಥೆಯಲ್ಲಿ ಉಚ್ಚನೀಚಭಾವ, ಜಾತಿಯೆಂಬ ದುರಹಂಕಾರ, ಕಲಾಸಾಹಿತ್ಯಗಳಲ್ಲಿ ಬಂಜೆತನ, ವಿಜ್ಞಾನದ ದುರುಪಯೋಗ ಮುಂತಾದ ಕಾರಣಗಳಿಂದ ನಾಶವಾಗುತ್ತಿದ್ದರೂ ಭಾರತೀಯ ಸಂಸ್ಕೃತಿಯು ರೂಪಭೇದ ಹೊಂದಿದರೂ ವಸ್ತುತಃ ಅಚ್ಚಳಿಯದೆ ನಿಂತಿದೆ.

ವೇದಯುಗದಲ್ಲಿಯೇ ಭಾರತೀಯರು ತಮ್ಮ ಸಂಸ್ಕೃತಿಯ ವಿಶಿಷ್ಟಗುಣವಾದ ವಿಶ್ವದೃಷ್ಟಿ (Weltanschauung) ಯನ್ನು ಹೊಂದಿದ್ದರು. ಅನಂತರ ಹರಪ್ಪ ಸಂಸ್ಕೃತಿಯ ಕಾಲದಲ್ಲಿ ಈ ದೃಷ್ಟಿಯು ಪರದೇಶಗಳಲ್ಲಿ ಹರಡಲಾರಂಭವಾಯಿತು. ಉಪನಿಷದ್ಯುಗದಲ್ಲಿ ಆತ್ಮಬ್ರಹ್ಮೈಕ್ಯ ತತ್ವದಲ್ಲಿ ಈ ದೃಷ್ಟಿಯು ಗರ್ಭಿತವಾಯಿತು. ಪುರಾಣ ಮತ್ತು ಬೌದ್ಧಯುಗಗಳಲ್ಲಿ ಜಾತೀಯತೆಯೂ ಸ್ವದೇಶಾಭಿಮಾನವೂ ಸಮಸ್ತ ಮಾನವ ಜಾತ್ಯುದ್ಧಾರವಾಗಬೇಕೆಂಬ ಅಭಿಲಾಷೆಯೂ ಅಶೋಕನ ಧರ್ಮಪ್ರಚಾರಕಾರ್ಯ ಬೃಹದ್ಭಾರತ ಸ್ಥಾಪನಾಕಾರ್ಯಗಳಲ್ಲಿ ಮೂರ್ತಿಮತ್ತಾದವು. ಅನಂತರ ಅನ್ಯಮತೀಯರ ದಾಳಿಗಳಿಗೆ ಕೊಂಚ ಮುಂದೆ ಶ್ರೀ ಶಂಕರಾಚಾರ್ಯರ ಆತ್ಮೈಕತ್ವವಿದ್ಯಾ ಬೋಧನೆಯಲ್ಲಿ ಭಾರತೀಯ ಸಂಸ್ಕೃತಿಯ ಪರಾಕಾಷ್ಠರೂಪವು ಕಂಡು ಬರುವದು. ಆದುದರಿಂದ ವೇದಯುಗದಿಂದ ಆರಂಭಿಸಿ ಕ್ರಿಸ್ತ ಶಕ ೯ ನೆಯ ಶತಾಬ್ದದವರೆಗೂ ಭರತಖಂಡದ ಚರಿತ್ರೆಯಲ್ಲಿ ಸಂಸ್ಕೃತಿ ದಶೆಯೆಂದು ಹೇಳಬಹುದು. ಅನಂತರ ರಾಜಕೀಯ ಪಾರತಂತ್ರ್ಯದಿಂದ ಆತ್ಮವೂ ಸಂಕುಚಿತವಾಗುತ್ತ ಬಂದಿತು. ತಾರತಮ್ಯ ಭಾವವು ಬೆಳೆಯಿತು. ಅದುವರೆಗೂ ಒಂದೇ ಕುಟುಂಬದಲ್ಲಿ ಪ್ರತಿಯೊಬ್ಬರೂ ತಮಗೆ ರುಚಿಸಿದ ಜೈನ, ಬೌದ್ಧ, ಶೈವ, ವೈಷ್ಣವ, ಶಾಕ್ತ ಮುಂತಾದ ಮತಗಳಲ್ಲಾವುದನ್ನಾದರೂ ಅನುಸರಿಸಲು ಸ್ವಾತಂತ್ರ್ಯ ಪಡೆದಿದ್ದರು. ನಾಗರೀಕತೆಯ ದಶೆಯು ಆರಂಭವಾದಮೇಲೆ ಜಾತಿವೈಷಮ್ಯ ಮತವೈಷಮ್ಯಗಳು ಹೆಚ್ಚಾದವು. ವರ್ಣವ್ಯವಸ್ಥೆಯು ವ್ಯಕ್ತಿಗೆ ಶೃಂಖಲೆಯಾಯಿತು. ಸ್ತ್ರೀಯರ ಸ್ಥಾನಮಾನಗಳು ಕಡಮೆಯಾದವು. ಅಲ್ಪಾಯುಗಳೂ, ಅಲ್ಪಜ್ಞಾನಿಗಳೂ ದುರಹಂಕಾರ ಅಜ್ಞಾನ ಆಲಸ್ಯಗಳಿಂದ ಪ್ರೇರಿತರಾಗಿ ಸಮಾಜದ ಸ್ವಾತಂತ್ರ್ಯವನ್ನೂ ವ್ಯಕ್ತಿಸ್ವಾತಂತ್ರ್ಯವನ್ನೂ ದೇಶದ ಸ್ವಾತಂತ್ರ್ಯವನ್ನೂ ನಾಶಮಾಡಲು ತೊಡಗಿದರು. ವೈಷಮ್ಯ ಸ್ಪರ್ಧೆಗಳು ಹೀಗೆ ಹೆಚ್ಚಿದರೂ ಭಾರತೀಯ ಸಂಸ್ಕೃತಿಗೆ ತಳಹದಿಯಾದ ಆತ್ಮೈಕತ್ವಭಾವವನ್ನು ಕೆಲವರು ಮಹಾಪುರುಷರು ಪೋಷಿಸಿಕೊಂಡು ಕಾಪಾಡಿಕೊಂಡು ಬಂದುದರಿಂದ ಪುನಃ ೧೯ ನೆಯ ಶತಾಬ್ದದಲ್ಲಿ ನವಚೈತನ್ಯವು ವ್ಯಕ್ತವಾಗಿ ಭಾರತೀಯ ಸಂಸ್ಕೃತಿಯು ಈಗ ವಿಶ್ವಸಂಸ್ಕೃತಿಯಾಗುತ್ತಿದೆ.

ಸಂಸ್ಕೃತಿಯ ಒರೆಗಲ್ಲು ಜೀವನ. ಸಾಮಾನ್ಯಜನ ಜೀವನದಲ್ಲಿ ವಿಶೇಷ ಪ್ರೇರಣೆಯಿಲ್ಲದೆ ಸಹಜವಾಗಿ ಕಂಡು ಬರುವ ಗುಣಾವಗುಣಗಳಿಂದ ಸಂಸ್ಕೃತಿಯ ಅಸ್ತಿತ್ವವನ್ನು ನಿರ್ಧರಿಸಬೇಕು, ಕಾರ್ಯರೂಪದಲ್ಲಿ ಸಂಕುಚಿತ

ವಾಗಿಯೂ ಕಾರಣರೂಪದಲ್ಲಿ ವಿಶೇಷವಾಗಿಯೂ ಸಂಸ್ಕೃತಿಯು ಕಂಡು ಬಂದರೂ ಇತರ ಸಂಸ್ಕೃತಿಗಳನ್ನೂ ಆಯಾ ದೇಶಗಳ ಜನರ ನಿತ್ಯ ಜೀವನ ತತ್ವಗಳನ್ನೂ ನಿಷ್ಪಕ್ಷಪಾತವಾಗಿ ಸ್ಥಾಲೀಪುಲಾಕನ್ಯಾಯದಂತೆ ಪರೀಕ್ಷಿಸಿದರೆ ಭರತಖಂಡದ ನಿರಕ್ಷರ ಕುಕ್ಷಿಗಳೂ ಕೂಡ ಉತ್ತಮಸಂಸ್ಕೃತಿ ಹೊಂದಿರುವ ರೆಂದು ಹೇಳಬೇಕು. ದಯಾ, ದಾಕ್ಷಿಣ್ಯ, ಧರ್ಮಬುದ್ಧಿ, ತಾಳ್ಮೆ, ಪಾಪ ಭೀತಿ, ತುಷ್ಟಿ, ಆಧ್ಯಾತ್ಮಿಕಚಿನ್ತೆ ಮುಂತಾದ ಸಂಸ್ಕೃತಿ ಲಕ್ಷಣಗಳು ವಿದೇಶೀ ಯರಲ್ಲಿ ಕೂಡ ಕೆಲವರಲ್ಲಿ ಕಂಡುಬರುವದು. ಆದರೆ ಒಟ್ಟಿನಲ್ಲಿ ಪ್ರಪಂಚದ ಐದನೆಯ ಒಂದು ಭಾಗವಾದ ಭಾರತೀಯ ಜನರಲ್ಲಿಯೇ ಈ ಗುಣಗಳು ಅಧಿಕ ವಾಗಿವೆಯೆಂದು ನಿರ್ಧರಿಸಬೇಕು. ಇದು ಕೇವಲ ಆತ್ಮಪ್ರಶಂಸಾವಾಕ್ಯವಲ್ಲ. ಅನುಭವಪೂರ್ವಕವಾದುದು. ವೇದಯುಗದಿಂದಲೂ ಭಾರತೀಯರ ಅಭಿಲಾಷೆ ಯೇನೆಂಬುದು ಈ ರಾಷ್ಟ್ರಗೀತೆಯುಲ್ಲಿ ಕಂಡು ಬರುವದು.

ಆ ಬ್ರಹ್ಮನ್ ಬ್ರಾಹ್ಮಣೋ ಬ್ರಹ್ಮವರ್ಚಸೀ ಜಾಯತಾಮ್ | ಆಸ್ಮಿನ್ರಾಷ್ಟ್ರೇ ರಾಜನ್ಯ ಇಷವ್ಯಶ್ಶೂರೋ ಮಹಾರಥೋ ಜಾಯತಾಮ್ | ದೋಗ್ಧ್ರೀ ಧೇನುರ್ವೋಢಾನಡ್ವಾ-ನಾಶುಸ್ಸಪ್ತಿಃ ಪುರನ್ಧ್ರಿರ್ಯೋಷಾ ಜಿಷ್ಣೂ ರಥೇಷ್ಠಾಸ್ಸಭೇಯೋ ಯುವಾಸ್ಯ ಯಜಮಾನಸ್ಯವೀರೋ ಜಾಯತಾಮ್ | ನಿಕಾಮೇ ನಿಕಾಮೇ ನಃ ಪರ್ಜನ್ಯೋ ವರ್ಷತು ಫಲಿನ್ಯೋ ಓಷಧಯಃ ಪಚ್ಯನ್ತಾಮ್ | ಯೋಗಕ್ಷೇಮೋ ನಃ ಕಲ್ಪತಾಮ್ ||

(ತೈತ್ತಿರೀಯಸಂಹಿತಾ : VII, ೫-೧೮-೪೪).

ನಮ್ಮ ರಾಷ್ಟ್ರದಲ್ಲಿ ಆಧ್ಯಾತ್ಮಿಕ ಚಿನ್ತನಾಪರರಾದವರು ಬ್ರಹ್ಮಸಿದ್ಧಿಯನ್ನು ಪಡೆಯಲಿ. ರಾಜಕೀಯ ಪದ್ಧತಿಗಳು ಯಾವಾಗಲೂ ಧರ್ಮರಕ್ಷಣೆ ಮಾಡಲು ಎಚ್ಚರಿಕೆಯಿಂದಿರಲಿ. ಸಸ್ಯಸಂಪತ್ತು ಪಶುಸಂಪತ್ತು ಇತೋಪ್ಯಧಿಕವಾಗಲಿ. ನಮ್ಮ ದೇಶದ ಯುವತಿಯರು ಉತ್ತಮ ಗೃಹಿಣಿಯಾಗಿರಲಿ. ನಮ್ಮ ವೀರ ಯುವಕರು ಸಭೆಗಳಲ್ಲಿ ಬುದ್ಧಿಶಕ್ತಿಯನ್ನೂ ಯುದ್ಧದಲ್ಲಿ ದೇಹಶಕ್ತಿಯನ್ನೂ ಪ್ರದರ್ಶಿಸುವ ರಾಗಲಿ. ಕ್ಷಾಮಡಾಮರಗಳಿಲ್ಲದಂತೆ ದೇಶದಲ್ಲಿ ಸುಭಿಕ್ಷವುಂಟಾಗಲಿ. ನಮ್ಮಲ್ಲಿ ಯೋಗ (ಐಕಮತ್ಯ) ಕ್ಷೇಮಗಳುಂಟಾಗಲಿ.''

ಭಾರತೀಯರು ನವಶಿಲಾಯುಗ ವೇದಯುಗಗಳಲ್ಲಿಯೇ ಆರಂಭವಾದ ಹತ್ತುಸಾವಿರ ವರ್ಷಗಳ ಚರಿತ್ರೆಯಲ್ಲಿ ಸಂಸ್ಕೃತಿಯನ್ನು ಕಾಪಾಡುವದಕ್ಕಾಗಿ, ಧರ್ಮವನ್ನು ಪ್ರಚಾರಮಾಡುವದಕ್ಕಾಗಿ, ಅತ್ಯುತ್ತಮ ರೀತಿಯ ಸಮಾಜ ವ್ಯವಸ್ಥೆ ಮತ್ತು ಸೇವೆಗಾಗಿ, ಕಲಾವಿಜ್ಞಾನ ಪೋಷಣೆಗಾಗಿ, ಆರ್ಥಿಕಸ್ಥಿತಿ ಯನ್ನು ಉತ್ತಮಗೊಳಿಸುವದಕ್ಕಾಗಿ ಅನೇಕ ಪ್ರಯತ್ನಗಳನ್ನು ಮಾಡಿ ಅನ್ಯಾಯ, ಅಸಮರ್ಪಕ, ಆತ್ಮಘಾತಕವೆಂದು ತೋರಿಬಂದ ವ್ಯವಸ್ಥೆಗಳನ್ನು

ನಿರ್ದಾಕ್ಷಿಣ್ಯವಾಗಿ ನಿರಾಕರಿಸಿ ಕೊನೆಗೆ ಸತ್ಯ ಮತ್ತು ಅಹಿಂಸಾತತ್ವಗಳೇ ವ್ಯಕ್ತಿ, ಸಮಾಜ ಮತ್ತು ದೇಶದ ಕ್ಷೇಮಕ್ಕೂ ವಿಶ್ವಶಾನ್ತಿಗೂ ಗತಿಯೆಂದು ನಿರ್ಧರಿಸಿರುವರು. ಈ ರಹಸ್ಯ ಪಾಶ್ಚಾತ್ಯರು ಗ್ರಹಿಸದಿರುವದರಿಂದಲೇ ಪ್ರಕೃತದಲ್ಲಿ ಹೃದಯವಿದ್ರಾವಕವಾದ ಕರುಣಾಜನಕವಾದ ಅವಸ್ಥೆಯು ಪ್ರಪಂಚಕ್ಕೆ ಉಂಟಾಗಿದೆ. ಮೂರುಸಾವಿರ ವರ್ಷ ಹಿಂದೆಯೇ ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಧರ್ಮಾಧರ್ಮಗಳಿಗೆ ಸ್ಪರ್ಧೆಯುಂಟಾದಾಗ, ಸಂಸ್ಕೃತಿಯ ಸತ್ವಪರೀಕ್ಷೆ ನಡೆದಾಗ, ಮಹಾಜ್ಞಾನಿಗಳೂ, ಭಕ್ತಾಗ್ರೇಸರರೂ, ಆಜನ್ಮ ಬ್ರಹ್ಮಚರ್ಯೆಯಿಂದ ಮೃತ್ಯುವನ್ನು ತಡೆಗಟ್ಟಿ ಇಚ್ಛಾಮರಣವುಳ್ಳವರೂ ಆದ ಭೀಷ್ಮಾಚಾರ್ಯರು ಶರಪಂಜರದಲ್ಲಿ ಪವಡಿಸಿ ಭಗವಾನ್ ಸಹಸ್ರರಶ್ಮಿಯು ಉತ್ತರಾಭಿಮುಖನಾಗಲು, ಪಕ್ಕದಲ್ಲಿದ್ದ ಶ್ರೀಕೃಷ್ಣ ಪರಮಾತ್ಮನನ್ನು ಸ್ತೋತ್ರಮಾಡಿ, ತಮ್ಮ ನಿರ್ಯಾಣಕ್ಕೆ ಅನುಜ್ಞೆಪಡೆದು, ತಮ್ಮ ಸುತ್ತಮುತ್ತಲೂ ಇದ್ದ ಕೌರವಪಾಣ್ಡವಾದಿ ಭರತವಂಶೀಯರಿಗೇ ಅಲ್ಲದೆ ಭಾವೀಭಾರತೀಯರಿಗೂ ತಮ್ಮ ಜೀವನ, ಜ್ಞಾನ, ಭಕ್ತಿ, ಯೋಗಾನುಭವ ಸಿದ್ಧವಾದ ಸತ್ಯ ಮತ್ತ ಅಹಿಂಸೆಯೆಂಬ ತತ್ವವನ್ನೇ ಅಂತ್ಯಸಂದೇಶವಾಗಿ ಅನುಗ್ರಹಿಸಿ ಪರಮಪದವಿಯ್ನು ಹೊಂದಿದರು.

ಸತ್ಯೇಷು ಯತಿತವ್ಯಂವಃ ಸತ್ಯಂಹಿ ಪರಮಂಬಲಮ್ |
ಆನೃಶಂಸಸ್ಯಪರೈರ್ಭಾವ್ಯಂ ಸದೈವನಿಯತಾತ್ಮಭಿಃ ||

ತಸ್ಮಾಜ್ಜಾಗೃತ ! ಜಾಗೃತ ! !

ಇತಿ ಸರ್ವಂಶಿವಮ್

# ಆಧಾರ ಗ್ರಂಥಗಳು

ಅಧ್ಯಾಯ

೧. Oswald Spengler: *The Decline of the West*, 2 Vols.
,, *The Hour of the Decision.*
Hermann Keyserling: *The Travel Diary of a Philosopher.*
Albert Schweitzer: *The Philosophy of Civilisation.*
,, *Unsterblichkeit.*
,, *Problems of Personal Life*, 1934.
Croce: *History as the Story of Liberty*, 1939.
Thorndike: *History of Civilisation.*
Toynbee: *Study of History*, 6 Vols.
Will Durant: *History of Civilisation*, Vol. I, Our Oriental Heritage.
R. K. Mukherji: *Hindu Civilisation.*
C. E. M. Joad: *Indian Civilisation.*
S. V. Venkatesvara: *Indian Culture Through the Ages*, 2 Vols.
S. Srikantha Sastri: *Oswald Spengler on Indian Culture*, New. Era. 1929
*Cultural Heritage of India*, 3 Vols., 1936.

೨. Ball: *Economic Geology of India.*
Wadia: *Geology of India.*
M. S. Krishnan: *Geology of India and Burma*, 1949. *The Ethnographic Survey of India.*
Anantakrishna Iyer: *Mysore Castes and Tribes*, Vol. I.
Panchanan Mitra: *Prehistoric India.*
Grierson: *The Linguistic Survey of India.*
S. K. Chatterji: *Indian Languages.*
P. W. Schmidt: *Sprachfamillen und Sprachen Kreise der Erde*, 2 Vols. 1929.
*All India Census Reports*, 1931, 1941.
*Cambridge History of India*, Vol. I.

ಅಧ್ಯಾಯ

೩. P. T. Srinivasa Iyengar: *The Stone Age in India.*
T. C. Hodson: *On Indian Primitive Culture.*
Oppert: *The Original Inhabitants of Bharata Varsha.*
Von Heine-Geldern: *Urheimat und früheste Wanderungen der Austronesier*, 1932.
Marshall: *Mohenjodaro and Indus Civilisation*, 1932.
Mackay: *Further Excavations at Mohenjodaro*, 1940.
„ *Indus Civilisation.*
M. S. Vats: *Excavations at Harappa*, 1940.
Stuart Piggott: *Prehistoric India to 1000 B.C.*, 1950.
S. Srikantha Sastri: *Proto-Indic Religion*, 1940.
„ ಸೈನ್ಧವ ಸಂಸ್ಕೃತಿ. ಕ. ಸಾ. ಪ. ಪ., ೧೯೩೪
„ ಪ್ರಾಚೀನ ಭಾರತೀಯ ಸಂಸ್ಕೃತಿ. ಪ್ರಬುದ್ಧ ಕರ್ಣಾಟಕ, ೧೯೩೮.
„ Proto-Indian Ceramics, *I.H.Q.*, 1940
„ ಚಾನ್ಹು ದಾರೊ. ವಿಚಾರವಾಹಿನಿ I, ೧, ೧೯೩೯.
„ Hiero-glyphic Hittite and Proto-Indic Scripts: *Bhāratīya Vidyā*, IV–I, Nov. 1942.
„ Hydro-Selenic Culture: *Man in India*, 1941.
„ Studies in Indus Scripts. *Q. J.M.S.*, 1934.

೪. Winternitz: *History of Indian Literature*, 3 Vols.
P. V. Kane: *History of the Dharma Śāstra*, Vol. I, 1930; Vol. II, 1941.
Macdonell and Keith: *Vedic Index.*
Hume: *The Ten Principal Upaniṣads.*
Muirs: *Original Saṁskṛt Texts.*
Rangacharya: *Pre-Mussalmān India*, Vol. I
Sukthankar: *Prolegomena to the Mahābhārata.*
„ *Bhandarkar Institute Ed. Mahābhārata.*
Jacobi: *Das Rāmāyaṇa.*

ಅಧ್ಯಾಯ

Farquhar: *An Outline of the Religious Literature of India*, 1920.
Sri Charles Eliot: *Hinduism and Buddhism*, 3 Vols., 1921.
M. M. Ananthakrishna Sastri: *Bhagavad Gītā*, 1942.

೫. S. Radhakrishnan: *Indian Philosophy*, II Vols., 1923, 1927.
Dasgupta: *Indian Philosophy*, 6 Vols.
M. Hiriyanna: *An Outline of Indian Philosophy*, 1932.
" *Essentials of Indian Philosophy*, 1950.
P. S. Sivaswami Iyer: *Evolution of Hindu Moral Ideals*, 1935.
R. G. Bhandarkar: *Vaishnavism, Śaivism*, 1913.
Max Muller: *Six Systems of Indian Philosophy*, 1899.
Keith: *Indian Logic and Atomism*, 1921.
" *The Sankhya System*, 1918.
" *Karma Mīmāmsa*, 1921.
Ganganatha Jha: *Pūrva Mīmāmsa in its Sources*, 1942.
" *Śaṁkarācārya's Work for the Upliftment of Humanity*.
Cowell and Gough: *Sarva Darśana Saṁgraha Tr.*, 1908.
Avalon: *Śakti and Śākta*, 1929.
" *Serpent Power*, 1919.
" *Principles of Tantra*, 2 Vols.
" *Ed. Tāntrik Texts*.
Dvivedi: *Yoga Sūtras of Patanjali*, 1930.
Viresvarananda: *Brahma Sūtras*, 1936.
Thibaut: *Vēdānta Sūtras, S.B.E.*, 1896, 1904.
Tcherbatsky: *Buddhist Logic*, 2 Vols.
D. Bannerji: *The Nyāya Theory of Knowledge*, 1940.
Mrs. Sinclair: *Outlines of Jainism*.
Jaini: *Jainism*.
S. Srikantha Sastri: *Jaina Epistemology. Jaina Vidyā*, 1941.
" *Introduction to Śrī Bhāgavata* (Kannada), 1933.

ಅಧ್ಯಾಯ

S. Srikantha Sastri: *The Viśēśābhēda Theory.* Thomas Fest Schrift, 1938.
„ *Logical System of Madhvacārya*, Kane Festschrift, 1941.
„ *The Age of Saṁkara*, VIII. Or. Conference, 1935.
„ Sri Samkara in Cambodia, *I.H.Q.* June, 1942.
S. Suryanarayana Sastri: *Śrī Saṁkarācarya*, 1943.
„ *Śivādvaita of Śrīkaṇṭha.*
„ *Tr. Vivaraṇa Pramēya Saṁgraha*, 1943.
Jung and Wilhelm: *Psychology of the Maṇḍala.*
Jung: *Psychology and Religion*, 1936.
Hooker: *Hymns of the Alwars*, 1929.
Kingsbury and Phillips: *Hymns of the Tamil Śaivite Saints*, 1921.
Rajagopalacarya: *Vaiṣṇavite Reformers of India.*
Govindacarya Svami: *Life of Rāmānuja*, 1900.
C. R. Srinivasa Iyengar: *Life of Rāmānujācarya.*
P. N. Srinivasacarya: *Philosophy of Viśiṣṭādvaita*, 1943.
„ *Philosophy of Bhēdābheda.*
„ *The Gita.*
Padmanabhacarya: *Life and Teachings of Śrī Madhva.*
Nagaraja Sarma: *Reign of Realism in Indian Philosophy.*
L. Srinivasacarya: ಹಿಂದೂದರ್ಶನ ಸಾರ.
Nalla Svami Pillai: *Studies in Śaiva Siddhānta*, 1911.
Violet Paranjyoti: *Śaiva Siddhānta in Meykanda Śāstra.*
Ananthakrsna Sastri: *Pāśupata Sūtras*, Tr. S. S. 1940.
Sripati Pandita: *Śrīkara Bhāsya. ed. Hayavadana Rao.*
Nandimath: *Vīra Śaivism.*
S. Srikantha Sastri: ಬಸವೇಶ್ವರ. ಕ. ಸಾ. ಪ. ಪ. ೧೯೩೮.
„ ಬಿಜ್ಜಳ, ಶಿವಾನುಭವ *Oct.* 1939.

ಅಧ್ಯಾಯ

S. Srikantha Sastri: *The Date of Śrīkara Bhāṣya, An. B.O.R.I.*, 1938.
,, *Advaitācāryas of 12th and 13th Centuries—I.H.Q.* 1938.
Mahadevan: *Philosophy of Advāita according to Vidyāraṇya.*
S. K. Das: *History of Vaiṣṇava Movement in Bengal.*
Parekh: *Vallabhācārya and his Teachings.*
Keay: *Kabir and His Followers.*
Macnicol: *Psalms of the Marātha Saints*, 1919.
Keay: *Hindi Literature.*
Sen: *History of the Bengāli Literature.*
Thompson and Spencer: *Bangāli Religious Relics—Śākta.*
Payne: *The Śāktas of Bengal*, 1933.
Jogendra Singh: *Guru Nānak.*
Shustery: *Outlines of Islamic Culture.* 2 Vols.
Ram Mohan Roy: *Centenary Volume*, 1933.
Sivanatha Sastri: *History of Brahmo Samaj*, 1911-12.
Karve: *Ranade—The Prophet of Liberated India*, 1942.
Kelkar: *The Life and Times of Tilak*, 1928.
Dayananda: *Commemoration Volume*, 1933.
Lajpat Rai: *Ārya Samaj*, 1915.
Jina Raja Das: *Golden Book of the Theosophical Society*, 1925.
Max Muller: *Rāmakrishna, His Life and Sayings*, 1910.
,, *Gospel of Śrī Rāmakṛṣṇa*, 1944.
Romain Rolland: *Prophets of New India*, 1930.
Aurobindo: *Life Divine*, 2 Vols., 1939-40
Romain Rolland: *Mahātma Gāndhi*, 1932.
P. Sita Ramayya: *Gāndhi and Gandhism*, 2 Vols., 1942.
Joad: *The Counter Attack from the East*, 1933.
S. Radhakrishnan: *Eastern Religions and Western Philosophy.*

P. V. Kane: *History of Dharma Śastra.*
O. Malley: *Indian Social Heritage.*

ಅಧ್ಯಾಯ

Ketkar: *The Caste System.*
B. N. Datta: *Studies in Indian Social Polity*, 1942,
Jacobi: *Recht und Sitte.*

೭. P. N. Bannerji: *Economic History of India.*
S. K. Das: ,, ,, ,,
Appadorai: *Economic Condition of South India.*

೮. K. P. Jayaswal: *Hindu Polity.*
U. N. Ghoshal: *Hindu Political Thoeries.*
S. V. Venkatesvara: *Indian Culture Through the Ages*, Vol. II.
R. Shama Sastri: *Kautilya's Artha Śāstra.*
J. J. Meyer: *Kautiliya.*

೯. Keith: *History of Sanskrit Literature.*
,, *Sanskrit Drama.*
Krishnamacharya: *Classical Sanskrit Literature.*
Krishna Sastri, A. R.: ಸಂಸ್ಕೃತ ನಾಟಕಗಳು.
,, ಭಾಸ
*Heritage of India Series.*
*Indian P. E. N. Publications.*
S. Srikantha Sastri: *Sanskrit Literature Under Vijayanagara.* Vijayanagara Sex-Centenary Volume.
,, *Some Forgotten Samskrit poets of Karnātaka.* Bhandarkar Or. Inst Silver Jubilee Volume.
,, *XVth Century Kannada—Telugu Literature*, *Bhārati*, 1931-32.
,, *Introduction to Karnātāka Mudrā Rākṣasa.* 1932, *I.H.Q.* 1931.
,, *Mukundānanda Bhāna*, 1935.
,, *Evolution of Karnātaka Music* Hindu Lit. Suppt., 1926.
,, *The Art of Eating*, *Hindu Ill. Weekly*, Ap. 19, 1936.

ಅಧ್ಯಾಯ

S. Srikantha Sastri: *Campanology in India* ,, Sep. 15, 1935.
,, *The Glories of Karṇāṭaka*. United Karnataka, 1938.

೧೦. Vincent Smith: *History of the Fine Arts in India and Ceylon.*
Havell: *Ideals of Indian Art.*
,, *Indian Architecture.*
Fergusson; *History of Indian Architecture.*
Anand Coomara Swami: *Indian and Indonesian Art.*
,, *Abhinaya Darpaṇa.*
Percy Brown: *Indian Architecture.*
,, *Indian Painting.*
P. K. Acharya: *Māna Sāra*, 12 Vols.
Gopinatha Rao: *Indian Iconography.*
S. Srikantha Sastri: *Iconography of Sri Vidyārnava Tantra.*
,, *The Goṇḍali Dance*, Bh. Iti. Sam Mandal, 1939.
,, *Mimetic Arts in Mysore*, 1938.
,, *Evolution of Karnātaka Music. Hindu*, 1926.
Hauer: *Symbole und Erfahrung des Selbstes in der Indo-Arischen Mystik*, 1935.
H. Krishna Sastri: *South Indian Gods and Goddesses.*
Stella Kramrisch: *Indian Sculpture.*
B. Venkoba Rao: ಮೈಸೂರು ವಾಸ್ತುಶಿಲ್ಪ.
Fox Strangways: *Music of Hindustan.*
Popley: *Indian Music.*
Projesh Bannerjea: *Dances of India.*
,, *Folk Dance of India.*
B. N. Seal: *Positive Sciences of the Hindus.*
P. C. Roy: *History of Hindu Chemistry.*
Datta: *History of Indian Mathematics.*

ಅಧ್ಯಾಯ

P. N. Basu : *Kāma Sūtras of Vātsyāyāna.*
,, *The Art of Love.*
Chakaldar: *Studies in the Kāma Sūtras of Vatsyāyana.*
Ramakrishna Commemoration Volumes.
Zimmer: *Kunstform und yoga in Indischen Kultbild*, 1926.

೧೧. S. Radhakrishnan: *Eastern Religions and Western Philosophy.*
Pavel Poucha: *Indian Literature in Central Asia. Ar. Or.* II, p. 27-
Moens: *Tjidschrift van het Konihklijk Bataviasch Genootschaap*, Vol. 78, p. 317.
U. N. Ghoshal: *Bibliography of Greater India*, 1942.
,, *Ancient Indian Culture in Afghanistan*
R. C. Majumdar: *Indian colonies in the far East, Champa.*
,, *Suvarṇa Dvipa.*
,, *Greater India.*
P. N. Bose: *Indian Colony of Siam.*
P. K. Mukherji: *Indian Literature in China and the far East.*
B. R. Chatterji: *Indian Culture in Java, Bali and Sumātra.*
H. B. Sarkar: *Indian Influence on the Literature of Java, and Bali.*
Divan Chaman Lal: *Hindu America.*
Krom and Van Erp: *Barabudur.*

೧೨. S. Srikantha Sastri: *Culture History, Hindu*, Ap. 3, 1935.
S. Srikantha Sastri: *The Hindu View of History*, Twentieth Century, 1936.

# ತಪ್ಪು—ಒಪ್ಪು

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೧ | ೩ | ಭೂಮಿ | ಭೂಮಿ |
| | ೪ | ಸುರತ್ಪ್ರಾತ್ | ಸುರತ್ವ್ರಾತ್ |
| ೨ | ೧೮ | ಅಧಕ್ಷ | ಅಧ್ಯಕ್ಷ |
| ೯ | ೨೬ | ಮ್ಲೇಚ್ಛತ್ವ | ಮ್ಲೇಚ್ಛತ್ವ |
| ೧೦ | ೧ | ಅಗ್ರೀಧ್ರ | ಅಗ್ನೀಧ್ರ |
| | ಕೊನೆ | ಚತುಷ್ಪ್ರಾದೋ | ಚತುಷ್ಪಾದೋ |
| ೧೧ | ೮ | ಸಹಸ್ರಾರು | ಸಹಸ್ರಾರ |
| | ೨೬ | ಎತಿನೋ | ಎಕಿನೋ |
| | ೨೭ | ಡೆರ್ಮೆೀಟಿ | ಡೆರ್ಮೆೀಟಿ |
| ೧೨ | ೧೬ | ಪ್ಲೀಸ್ಟೊಸಿನ್ | ಪ್ಲೀಸ್ಟೋಸೀನ್ |
| ೧೩ | ೨೧ | ಸಿಕ್ಕಿಲ್ಲ, | ಸಿಕ್ಕಿಲ್ಲ. |
| ೧೬ | ೧೨ | ಪ್ರಾತ್ರ | ಪಾತ್ರ |
| ೧೮ | ೭ | ಖೇರ್ಪ್ರಾರಿ | ಖೇರ್ವಾರಿ |
| | ೩೦ | ಒರವಸ್ | ಒರವನ್ |
| ೧೯ | ೯ | ಕಾಲ್ಡ್ಪೆಲ್ | ಕಾಲ್ಡ್ವೆಲ್ |
| | ೨೩ | ಪುಟಿವ | ಪಟಿವ |
| ೨೦ | ೬ | ಸ್ಪರ್ಣ | ಸ್ವರ್ಣ |
| | ೨೫ | ಸ್ಪಲ್ಪ | ಸ್ವಲ್ಪ |
| ೨೩ | ೨ | ಮರುದ್ಪೃಧಾ | ಮರುದ್ವೃಧಾ |
| ೨೪ | ೮ | ಬಹಳ | ಬಹುಳ |
| ೨೮ | ೧೩ | ಅಸ್ತುವತುಮುಜಿಸ್ | ಅಸ್ತುವತುಮುಜಸ್ |
| | ೧೫ | ಹರ್ಪ | ಹರ್ವ |
| | ೨೧ | ಹ್ಪೆಕ್ | ಹ್ವೆಕ್ |
| | ೨೭ | ಹೆಟ್ಟೈಟ್ | ಹಿಟ್ಟೈಟ್ |
| ೩೦ | ೬ | ಊಹಿಸುವರ. | ಊಹಿಸುವರು. |
| | ೧೩ | ತೌರುವನೆ | ತೌರುಮನೆ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೩೧ | ೩೦ | *O. R.* | *Or.* |
| ೩೩ | ೧೧ | similarly. | similarly, |
| ೩೫ | ೫ | ಕ್ಪಾ | ಕ್ವಾ |
| ೩೬ | ೨ | ಗುಡ್ಡಗಳಿಲ್ಲಿ | ಗುಡ್ಡಗಳಲ್ಲಿ |
| ೩೭ | ೨ | ಹಿಡಿಯುತ್ತಿರುವರು | ಹಿಡಿಯುತ್ತಿರುವರು. |
| ೩೯ | ೨೪ | ಅಗ್ರಾಟ್ | ಅಗ್ರಾಬ್ |
| ೪೦ | ೧೬ | ಬಹಳ | ಬಹುಳ |
| ೫೧ | ೪ | ಪುರಾಣಾ | ಪುರಾಣಾ |
| | ೨೫ | ವಾಙ್ಮ್ರಯ | ವಾಙ್ಮಯ |
| ೫೩ | ೧೦ | ಸಿಮೋಲಿಯ | ಸಿಮೋಲಿಯ |
| ೬೦ | ೮ | ಯಜ್ಪನ್ | ಯಜ್ವನ್ |
| ೬೧ | ೪ | ನಡವೇ | ನಡುವೇ |
| ೬೪ | ೧೮ | ಕಾಷೀತಕೀ | ಕೌಷೀತಕೀ |
| ೬೫ | ೨೮ | ನಾಥೆ | ನಾಥಿ |
| ೬೬ | ೧೬ | ದ್ಬವತಿ | ದ್ಭವತಿ |
| ೬೭ | ೧೮ | ಧರ್ಮೇ | ಧರ್ಮೇ |
| ೬೮ | ೪ | ಮನುಷ್ಯರು, ಪಿತೃಗಳು, ಮತ್ತು ದೇವತೆಗಳ | ದೇವತೆಗಳು ಪಿತೃಗಳು ಮತ್ತು ಮನುಷ್ಯರ |
| ,, | ೧೪ | ಧರಿಸಿಸುತ್ತಿದ್ದರು. | ಧರಿಸುತ್ತಿದ್ದರು. |
| ೭೪ | ೧೨ | ಉತ್ತಮಕರ | ಉತ್ತಮತರ |
| ,, | ೨೮ | ಪೃಥ್ವೀಂ | ಪೃಥ್ವೀಂ |
| ,, | ೨೯ | ಆಪೋ | ಆಪೋ |
| ೭೬ | ೯ | ಕ್ರೋಧೀ | ಕ್ರೋಡೀ |
| ,, | ೨೭ | ದ್ದರ್ಮಂ | ದ್ಧರ್ಮಂ |
| ೭೭ | ೨೩ | ಅಶ್ಪ | ಅಶ್ವ |
| ೭೮ | ೨೬ | ತ್ಪಗ | ತ್ವಗ |
| ,, | ೨೯ | ಗಂಗಾ | ಗಂಗಾಂ |
| ೭೯ | ೨೪ | ಕಣಾಟಕ | ಕರ್ಣಾಟಕ |
| ೮೦ | ೨೨ | ಸರ್ಗಗಳಲ್ಲಿ | ಸರ್ಗಗಳಲ್ಲ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೮೩ | ೧೯ | ತ್ಪಂ | ತ್ವಂ |
| ೮೪ | ೧೨ | ಸಿಲ್ಪೈನ್ | ಸಿಲ್ವೈನ್ |
| ೮೫ | ೧೩ | ಬೌದ್ದರೂ | ಬೌದ್ಧರೂ |
| ,, | ೨೫ | threatencd | threatened |
| ೮೭ | ೨೪ | ಅಧರ್ಮಣ | ಅಧಮರ್ಣ |
| ೯೨ | ೨೯ | ಸ್ತ್ಪಹ | ಸ್ತ್ವಹ |
| ,, | ೩೦ | ಕ್ಪಚಿತ್ | ಕ್ವಚಿತ್ |
| ೯೩ | ೪ | *HL.* | *Hl.* |
| ೯೪ | ೧೨ | ಕ್ರೋಧೀ | ಕ್ರೋಡೀ |
| ,, | ೧೬ | ಸಂಘವನ್ನನುಕರಿಸಿ | ಸಂಘವನ್ನು ಕರಿಸಿ |
| ೯೫ | ೧೧ | ಅಟ್ಟ | ಅಟ್ರ |
| ೯೭ | ೨೬ | ತ್ರತ್ವ್ರ | ತ್ರತ್ಪ್ರ |
| ೧೦೦ | ೧೭ | ಬೌಧ | ಬೌದ್ಧ |
| ,, | ೨೯ | ದ್ವೀಷೇಷು | ದ್ವೀಪೇಷು |
| ೧೦೧ | ೨೬-೨೮ (ಬದಲು) | | ಋಷಭ, ಅಜಿತ, ಶಂಭವ, ಅಭಿನನ್ದನ, ಸುಮತಿ, ಪದ್ಮಪ್ರಭ, ಸುಪಾರ್ಶ್ವ, ಚಂದ್ರಪ್ರಭ, ಪುಷ್ಪದಂತ, ಶೀತಲ, ಶ್ರೇಯಾಂಸ, ವಾಸುಪೂಜ್ಯ, ವಿಮಲ, ಅನಂತ, ಧರ್ಮ, ಶಾಂತಿ, ಕುಂಥು, ಅರ, ಮಲ್ಲಿ, ನಮಿ, ನೇಮಿ, ಪಾರ್ಶ್ವ, ಮಹಾವೀರ. |
| ೧೦೨ | ೨೩ | ಸಮುದ್ಬವ : | ಸಮುದ್ಭವ : |
| ,, | ೨೭ | ಸಿದ್ದ ; | ಸಿದ್ಧ : |
| ೧೦೩ | ೨೦ | ೩ ಧೀಪರ್ಯಯಜ್ಞ, | ಧೀಪರ್ಯಯಜ್ಞ. ೩ |
| ೧೦೪ | ೨೯ | ಪಂಥ್ಯ | ಪಂಥ |
| ,, | ೩೦ | ಧವಳ | " ಜಯಧವಳ ಮಹಾಧವಳ "—Omit. |
| ೧೦೫ | ೨೭ | ಜಯಸಿಂಹರಜ | ಜಯಸಿಂಹರಾಜ |
| ೧೧೧ | ೧೩ | ಬಹಳ | ಬಹುಳ |
| ,, | ೨೫ | ನಿಯಮ, ಪ್ರಾಣಾಯಾಮ, | ನಿಯಮ, ಆಸನ, ಪ್ರಾಣಾಯಾಮ, |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೧೧೭ | ೨೬ | ವಾಸನಾಪ್ | ವಾಸನಾಮ್ |
| ,, | ೨೭ | ಪರಮಾನ್ಣೂನ್ | ಪರಮಾಣೂನ್ |
| ೧೧೯ | ೩೭ | 67 | 37 |
| ೧೨೧ | ೨೪ | ಪ್ರಕಾಶತ್ಪಂ | ಪ್ರಕಾಶತ್ವಂ |
| ,, | ೨೮ | ಮನ್ದ್ರಕಾರಸ್ಯ | ಮನ್ಧ್ರಕಾರಸ್ಯ |
| ೧೨೨ | ೨೬ | ಅಭಿಪ್ರಾಯಗಳು | ಅಭಿಪ್ರಾಯಗಳನ್ನು |
| ೧೨೭ | ೨೫ | ಮಣ್ಡರ | ಮಣ್ಡನರ |
| ,, | ೩೦ | ಹರ್ಷ | ಶ್ರೀಹರ್ಷ |
| ೧೨೯ | ೨೩ | ತ್ಪಮಗ್ನೇ | ತ್ವಮಗ್ನೇ |
| ೧೪೫ | ೫ | ಆನ್ದ್ರ | ಆನ್ಧ್ರ |
| ೧೫೫ | ೭ | ಉಚ್ಚಿಷ್ಟ | ಉಚ್ಛಿಷ್ಟ |
| ೧೫೭ | ೧೯ | Reserrection | Resurrection |
| ೧೬೨ | ೧೭ | *O* | *of* |
| ೧೮೦ | ೨೭ | ಸ್ಯೇಶ: | ಸ್ಯೇಶ ! |
| ೧೮೨ | ೪ | ಸ್ತಾ | ಸ್ಥಾ |
| ,, | ೨೪ | ಚೌ | ಬೌ |
| ೧೯೭ | ೨೫ | ಯಾಜ. | ಯಾಜ್ಞ. |
| ೨೦೦ | ೨೭ | ಗಿರಿಜೆಯು | ಗಿರಿಜೆಯ |
| ,, | ೩೧ | ಶ್ರೀ "ಚಾಮುಂಡೇಶ್ವರೀ" | "ಶ್ರೀ ಚಾಮುಂಡೇಶ್ವರೀ" |
| ೨೦೨ | ೧೨ | ಅವಿಚ್ಛಿನ್ನನಾಗಿ | ಅವಿಚ್ಛಿನ್ನವಾಗಿ |
| ,, | ೧೬ | ಉತ್ತರಾ | ಉತ್ತರ |
| ,, | ೨೭ | ಭ್ರಾಜತೇನ | ಭ್ರಾಜತೇ ನ |
| ೨೦೩ | ೨೯ | ಯೋರ್ೀರರಣಿ | ಯೋರ್ೀರಣಿ |
| ೨೦೪ | ೧೪ | ಗೃ | ಗೃ |
| ,, | ೨೦ | ಪ್ರಮುದಃ > | ಪ್ರಮುದಃ. |
| ೨೦೫ | ೩೧ | ಶ್ಲಾನ್ಯೈಃ | ಶ್ಲಾನ್ಯೈಃ |
| ೨೦೯ | ೨೦ | ತ್ರಿದ್ದರು, | ತ್ರಿದ್ದರು. |
| ೨೧೦ | ೨೨ | ಯನಾ | ಯನ್ |
| ೨೧೫ | ೧ | ಕ್ಷಾಮ | ಕ್ಷಾಮ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ,, | ೭ | ಅದ್ಬುತ | ಅದ್ಭುತ |
| ೨೧೭ | ೮ | ಕಲ್ಸಾಣ | ಕಲ್ಯಾಣ |
| ,, | ೧೯ | ಹಿಪ್ಪಾಲಿಸ್ | ಹಿಪ್ಪಾಲಸ್ |
| ,, | ೨೨ | ಕ್ಯಾರ್‌ಕೆಲ್ಲ | ಕ್ಯಾರಕೆಲ್ಲ |
| ೨೨೦ | ೩೧ | E. C. VII ? | *E. C.* VIII. |
| ೨೨೧ | ೧೮ | ನಱೆದು | ನಱಿದು |
| ೨೨೪ | ೨೦ | ಬಹಳ | ಬಹುಳ |
| ೨೨೯ | ೨೫ | ತ್ಪಾತ್ | ತ್ವಾತ್ |
| ೨೩೧ | ೨೦ | ದ್ಬವಾನ್ | ದ್ಭವಾನ್ |
| ೨೩೭ | ೨೨ | ಬೇಕು, | ಬೇಕು. |
| ,, | ೨೮ | ಬೇಕು, | ಬೇಕು. |
| ೨೪೧ | ೧೧ | ಲಿಲ್ಲ, | ಲಿಲ್ಲ. |
| ,, | ೧೭ | ತರು, | ತರು. |
| ೨೪೫ | ೧೨ | ರಾಘುವನನ್ನೂ | ರಾಘವವನ್ನೂ |
| ೨೪೮ | ೮ | ಡಬೀರ್‌ನಿಕವಿ | ಡಬೀರ್ ಕವಿ |
| ೨೪೯ | ೨೪ | ನಿರ್ಧರಿಸಿದೆ, | ನಿರ್ಧರಿಸಿದೆ. |
| ೨೫೩ | ೩ | ಶ್ರೀನಾಧ | ಶ್ರೀನಾಥ |
| ೨೫೪ | ೧ | ವಾಹರ್ನವಮಿ | ಮಹರ್ನವಮಿ |
| ೨೫೫ | ೧೦ | ಲಕಾರ | ಲ (ಳ)ಕಾರ |
| ,, | ೧೧ | ಕ-ಲ | ಕ-ಲ (ಳ) |
| ೨೫೭ | ೬-೮ | (ಬದಲು) | C D E F G A B C<br>ಸ ರಿ ಗ ಮ ಪ ಧ ನಿ ಸ = ಖರಹರಪ್ರಿಯ<br>೩ ೨ ೪ ೪ ೩ ೨ ೪ (ಅಹೋಬಲ)<br>ಸ ರಿ ಗ ಮ ಪ ಧ ನಿ ಸ = ಶಂಕರಾಭರಣ<br>೪ ೩ ೨ ೪ ೪ ೩ ೨ |
| ೨೬೨ | ೨೨ | ದಾನಿ | ಧಾನಿ |
| ೨೬೪ | ೧೯ | ಮೂಲ | ಮಾಲ |
| ೨೬೭ | ೨ | ಗುಲುಬಿ | ಗುಲಾಬಿ |
| ೨೬೯ | ೨೦ | ತಮಿಳ | ತಮಿಳು |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೨೭೧ | ೧೦ | ೨೪೪೩೨,೪೨ | ೨೪೪೩,೨೪೩ |
| ,, | ೨೫ | ಮುಟಿವಂ, | ಮುಟಿವು, |
| ೨೭೨ | ೨೨ | ಕಥ್ಥಕ್ಕಟಿ | ಕಥಕ್ಕಟಿ |
| ೨೭೮ | ೯ | '' ಕಡಿತ | " ಕಡಿತ " |
| ೨೭೯ | ೧ | ಗದುಗು | ಗದಗು |
| ,, | ೧೮ | ಫಟ್ಟಿತ | ಘಟ್ಟಿತ |
| ೨೮೨ | ೧೦ | ಉದ್ದೇಶ. | ಉದ್ದೇಶ |
| ೨೮೫ | ೧೪ | ನಾಗರೀತಿ | ನಾಗರೀ ರೀತಿ |
| ,, | ೨೪ | ತಶ್ರ | ತಾಶ್ರ |
| ೩೨೪ | ೧೧ | ಪ್ರಾ | ಪಾ |
| ೩೩೧ | ೭ | ನಿಚಿರೆನ್ಪದ್ಮ | ನಿಚಿರೆನ್, ಪದ್ಮ |